ಹೊಸ ಅಭ್ಯಾಸಪತ್ರಿಕೆಗನುಸಾರವಾಗಿ ಬರೆದುದು

# ಭಾರತದ
# ಇತಿಹಾಸ ಬೋಧಿನಿ

ಕೈ ಶಿವರುದ್ರಪ್ಪ ಸೋಮಪ್ಪ ಕುಲಕರಣಿ
(ಗೌರಿಶಂ) ಶಾಲಾಗುರು
ಇವರ ಗ್ರಂಥಪ್ರಕಟನಾಲಯದಿಂದ ಪ್ರಕಟವಾದುದು

ಲೇಖಕರು
ಎಚ್ ನಾರಾಯಣ ಶರ್ಮ,
ಧಾರವಾಡ

ಪರಿಷ್ಕರಿಸಿದವರು
ನಾ. ಕಸ್ತೂರಿ, ಎಂ ಎ, ಬಿ ಎಲ್
ನಿವೃತ್ತ ಇತಿಹಾಸ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾಲಯ.

ರೋಹಿಡೇಕರ ಶಾಮರಾಯರು, ಬಿ ಎ. (ಆನರ್ಸ್), ಬಿ ಟಿ, ಡಿ ಬಿ ಈ
ಲೆಕ್ಚರರ್, ಎಸ್. ಟಿ ಕಾಲೇಜ್, ಬೆಳಗಾಂವ

ಪ್ರಕಾಶಕರು
ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ,
ಧಾರವಾಡ

೧೯೫೫

ಬೆಲೆ: ರೂ. ೩ ಆಣೆ ೧೨.

Revised First Edition—1955

Paper used 36 lbs Double Demy M F



Printed by Mr B Heri at the Basel Mission Press, Mangalore
and published by Mr S S Kulkarni, Dharwar

# ಮೊದಲ ಮಾತು

ಭಾರತಕ್ಕೆ ಸ್ವಾತಂತ್ರ್ಯಸಿಗುವ ಮೊದಲು ನಾವು ಇತಿಹಾಸವನ್ನು ಅಭ್ಯಾಸ ಮಾಡುವ ರೀತಿಯೆ ಬೇರೆಯಾಗಿತ್ತು ಆಗಿನ ಇತಿಹಾಸದ ಅಭ್ಯಾಸಪತ್ರಿಕೆಯಲ್ಲಿ ಕೇವಲ ರಾಜ-ಮಹಾರಾಜರುಗಳ ವಂಶಾವಳಿ, ಯುದ್ಧಗಳ ಅನಾವಶ್ಯಕ ದೀರ್ಘವರ್ಣನೆಗಳು ಮತ್ತು ಇಸವಿಗಳ ನೆನಪು ಇವುಗಳಿಗೆ ಮಹತ್ತ್ವವಿದ್ದಿತು ಈಗ ನಮ್ಮ ಇತಿಹಾಸಾಭ್ಯಾಸದ ಬಗೆಯಲ್ಲಿ ತುಂಬ ಬದಲಾವಣೆ ಆಗಬೇಕಾಗಿದೆ

ಇತಿಹಾಸವೆಂಬುದು ನಡೆದುಹೋದ ಘಟನೆಗಳ ನಿರೂಪಣೆ ಈ ಘಟನೆಗಳನ್ನು ನಿರೂಪಿಸುವಾಗ, ನಾವು ಇಲ್ಲಿ ಕೆಲವು ಸಾಮಾನ್ಯ ಉದ್ದೇಶಗಳನ್ನು ಇಟ್ಟುಕೊಂಡಿದ್ದೇವೆ ಒಂದು ಹಿರಿದಾದ ಸಾಮಾಜಿಕ ಪರಂಪರೆಯು ನಮಗೆ ಇದೆ ಎಂಬುದನ್ನು ತಿಳಿದುಕೊಳ್ಳಲು ಬಾಲಕರಿಗೆ ನೆರವಾಗುವುದು, ನಮ್ಮ ದೇಶದ ನಾಗರಿಕತೆಯ ಏರಿಳಿತಗಳ ಬಗೆಗೆ ತಿಳಿವಳಿಕೆ ಮಾಡಿಕೊಡುವುದು, ಆಯ್ದುಕೊಂಡ ಮಹತ್ತ್ವದ ಘಟನೆಗಳಲ್ಲಿಯ ಮಹಾಪುರುಷರ ವ್ಯಕ್ತಿತ್ವದ ಪ್ರಭಾವ ಮತ್ತು ಅವರು ಸಾಧಿಸಿದ ಮಹತ್ಕಾರ್ಯಗಳ ಕಲ್ಪನೆಗಳನ್ನು ಮಾಡಿಕೊಡುವುದು, ಒಕ್ಕಟ್ಟಿನಿಂದ ಒಂದು ಧ್ಯೇಯಕ್ಕಾಗಿ ಕೆಲಸಮಾಡುವ ಜನತೆಯು ಸಾಧಿಸಿದ ಸಾಧಿಸಬಹುದಾದ ಪ್ರಗತಿಯನ್ನು ನಿವೇದಿಸುವುದು, ಇತಿಹಾಸವಾಚನದಲ್ಲಿ ಸಾಮಾನ್ಯವಾಗಿ ಅಭಿರುಚಿಯನ್ನು ಹುಟ್ಟಿಸುವುದು

ಈ ಉದ್ದೇಶಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೊಸ ಅಭ್ಯಾಸಪತ್ರಿಕೆಯನ್ನನುಸರಿಸಿ ೫, ೬, ಮತ್ತು ೭ನೆಯ ವರ್ಗಗಳ ವಿದ್ಯಾರ್ಥಿಗಳಿಗಾಗಿ ಈಗ 'ಭಾರತದ ಇತಿಹಾಸ ಬೋಧಿನಿ' ಭಾಗ ೧, ೨, ೩ ಎಂಬ ಮೂರು ಹೊತ್ತಿಗೆಗಳನ್ನು ಬರೆದಿದ್ದೇವೆ

ವಿಷಯನಿರೂಪಣೆಯಲ್ಲಿಯ ಕಾಲಾನುಕ್ರಮದ ಸಂಬಂಧವು ತಿಳಿಯುವಂತೆ, ಪ್ರತಿಯೊಂದು ವಿಷಯವಿಭಾಗದ ಕೊನೆಗೆ, ಕ್ರಮಗೊಳಿಸಿದ ಕಾಲರೇಷೆಯನ್ನು ಹಾಕಿದ್ದೇವೆ. ಇದರಿಂದ ಆನುಷಂಗಿಕವಾಗಿ ಮಕ್ಕಳಿಗೆ ಮಹತ್ತ್ವದ ಇಸವಿಗಳ ಪರಿಚಯ ತಾನಾಗಿಯೇ ಆಗುವುದು ಆವಶ್ಯಕ ಸಂದರ್ಭಗಳಲ್ಲಿ ಅವುಗಳಿಗೆ ಸಂಬಂಧಿಸಿದ ನಕಾಶೆ ಹಾಗೂ ಚಿತ್ರಗಳನ್ನು ಸಾಕಷ್ಟು ಸೇರಿಸಲಾಗಿದೆ ಐತಿಹಾಸಿಕ ಸತ್ಯಕ್ಕೆ ಚ್ಯುತಿಬಾರದಂತೆಯೂ ನಿರೂಪಣೆಯು ಏಕಸೂತ್ರವಾಗುವಂತೆಯೂ ದಕ್ಷತೆ ವಹಿಸಿದೆ ಬರವಣಿಗೆಯ ಭಾಷೆಯು ಸರಳ ಹಾಗೂ ಸುಲಲಿತವಾಗುವಂತೆ ಯತ್ನವನ್ನು ಮಾಡಿದ್ದೇವೆ

ಈ ಹೊತ್ತಿಗೆಗಳ ಉಪಯುಕ್ತತೆಯನ್ನು ಹೆಚ್ಚಿಸಲು, ಬೇರೆ ಪ್ರಕರಣಗಳ ಕೊನೆಗೆ ಬಾಲಕರ ವಿಚಾರವಿಸ್ತಾರ, ವಿಷಯಸಂಗ್ರಹ, ಶೀಲನಿರ್ಮಾಣಗಳಿಗೆ ಸಹಾಯಕವಾಗುವ ಅಭ್ಯಾಸನಗಳನ್ನು ಕೊಟ್ಟಿದ್ದೇವೆ.

ಆವಶ್ಯಕ ವಿಷಯಗಳನ್ನು ಸಂಗ್ರಹಿಸುವುದಕ್ಕೆ ನಾವು ಉಪಯೋಗಿಸಿದ ಬೇರೆಬೇರೆ ಗ್ರಂಥಗಳ ಲೇಖಕರಿಗೂ ಮತ್ತು ಈ ಹೊತ್ತಿಗೆಗಳನ್ನು ಪ್ರಕಾಶಿಸುವ ಹೊಣೆ ಹೊತ್ತ ಶ್ರೀ. ಎಸ್ ಎಸ್. ಕುಲಕರಣಿಯವರಿಗೂ ನಾವು ಕೃತಜ್ಞರಾಗಿದ್ದೇವೆ.

ಧಾರವಾಡ
ತಾ ೧೪-೧೧-೫೪ }

ಗ್ರಂಥಕರ್ತರು

# ಪರಿವಿಡಿ

## ಒಂದನೆಯ ಭಾಗ



## ಎರಡನೆಯ ಭಾಗ

## ಮೂರನೆಯ ಭಾಗ

# ಭಾರತದ ಇತಿಹಾಸ ಬೋಧಿನಿ

## ಒಂದನೆಯ ಭಾಗ

### (ಪ್ರಾಚೀನಕಾಲ)

### ೧ ನಮ್ಮ ದೇಶ

ವಿದ್ಯಾರ್ಥಿಗಳಿರಾ! ನೀವು ನಾಲ್ಕನೆಯ ಇಯತ್ತೆಯಲ್ಲಿ ಭಾರತದ ಸತ್ಪುರುಷರ, ವೀರರ ಚರಿತ್ರೆಗಳನ್ನು ಒದಿದಿರಿ ಇನ್ನು ನೀವು ಭಾರತದ ಇತಿಹಾಸವನ್ನು ಓದಬೇಕಾಗಿದೆ ಹಿಂದಕ್ಕೆ ಭರತನೆಂಬ ಚಕ್ರವರ್ತಿಯು ಈ ದೇಶವನ್ನು ಆಳಿದನು, ಆದುದರಿಂದ ನಮ್ಮ ದೇಶಕ್ಕೆ ಭರತವರ್ಷ, ಭಾರತ ಎಂದು ಹೆಸರು, ಇವಲ್ಲದೆ ಜಂಬುದ್ವೀಪ, ಭರತಖಂಡ, ಆರ್ಯದೇಶ ಎಂಬ ಹೆಸರುಗಳೂ ಇರುವವು

ಆದರೆ ಪರದೇಶದ ದಾಳಿಗಾರರು ನಮ್ಮ ದೇಶಕ್ಕೆ ಬರಹತ್ತಿದಂದಿನಿಂದ ಅದಕ್ಕೆ ಬೇರೆ ಹೆಸರು ಬಂದಿತು ಈಗ ನಮ್ಮ ದೇಶಕ್ಕಿರುವ ಹಿಂದುಸ್ತಾನ ಎಂಬ ಹೆಸರು ಗ್ರೀಸ ದೇಶದ ಸಿಕಂದರಬಾದಶಹನು ಬಂದಾಗಿನಿಂದ ರೂಢವಾಯಿತು ಅವನು ಸಿಂಧಪ್ರಾಂತದ ಮಾರ್ಗವಾಗಿ ನಮ್ಮ ದೇಶಕ್ಕೆ ಬಂದುದರಿಂದ ಸಿಂಧು ಎಂಬದಕ್ಕೆ 'ಹಿಂದು' ಎಂದನು ಅದನ್ನೇ ಕೆಲವರು ಬದಲಾಯಿಸಿ 'ಇಂಡಿಯಾ' ಎಂದೂ ಕರೆದರು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಮೇಲೆ, ಹಿಂದುಸ್ತಾನಕ್ಕೆ ಭಾರತವೆಂತಲೂ, ಇಂಗ್ಲಿಷದಲ್ಲಿ 'ಇಂಡಿಯಾ' ಎಂದೂ ಕರೆಯಬೇಕೆಂದು ಹೊಸ ರಾಜ್ಯಶಾಸನವನ್ನು ಮಾಡುವವರು ಗೊತ್ತು ಮಾಡಿದರು ಅವೆರಡೂ ಈಗ ಬಳಕೆಯಲ್ಲಿವೆ

**ಇತಿಹಾಸವೆಂದರೇನು?**—ಇತಿಹಾಸ ಎಂಬ ಶಬ್ದವು ಇತಿ+ಹ+ಆಸ ಈ ಶಬ್ದಗಳಿಂದ ಆಗಿದೆ ಇದರ ಅರ್ಥವು ಹೀಗೆ ಇತ್ತು, ಎಂದಾಗುವದು ಒಟ್ಟಾರೆ ಇತಿಹಾಸವು ಹಿಂದಕ್ಕೆ ನಡೆದ ಸಂಗತಿಗಳನ್ನೆಲ್ಲ ತಿಳಿಸುವದೆಂದರ್ಥ. ನಮ್ಮ ಹಿರಿಯರು, ಅಜ್ಜ ಮುತ್ತಂದಿರು, ಪೂರ್ವಕಾಲದಲ್ಲಿ ಹೇಗೆ ಇದ್ದರು? ಅವರ ಊಟವೇನು? ಉಡಿಗೆ ಏನು? ನಡೆನುಡಿಯ ಕ್ರಮವೇನು? ಅವರ ಉದ್ಯೋಗಗಳೇನು? ಅವರು ತಮ್ಮ ಕಾಲದಲ್ಲಿ ಯಾವ ಯಾವ ಮಹತ್ಕಾರ್ಯಗಳನ್ನು ಮಾಡಿದರು? ಯಾವ ಗ್ರಂಥಗಳನ್ನು ಬರೆದರು? ಅವರ ಜೀವನದ ರೀತಿ ಹೇಗಿತ್ತು? ಇವೆಲ್ಲವುಗಳನ್ನು ತಿಳಿದುಕೊಳ್ಳುವದೇ ಇತಿಹಾಸದ ಉಪ

ಯೋಗ ಈ ಬಗೆಯ ಇತಿಹಾಸಕ್ಕೆ 'ಜನಜೀವನ' ಎಂಬ ಹೆಸರು ಇದರಿಂದ, ಜಗತ್ತಿನ ಆಯಾ ದೇಶಗಳಲ್ಲಿ ಮಾನವನು ಪ್ರಾಚೀನಕಾಲದಿಂದ ಇದುವರೆಗೆ ನಡೆದ ಮತ್ತು ಸಾಧಿಸಿರುವ ಸಾಹಸಗಳ ನಿರೂಪಣೆಯೇ ಆ ದೇಶದ ಚರಿತ್ರೆ ಎಂದು ಸ್ಪಷ್ಟವಾಗುತ್ತದೆ

ನಮ್ಮ ಪೂರ್ವಜರು ನಗರಗಳನ್ನು ನಿರ್ಮಿಸಿದರು, ಗುಡಿಗೋಪುರಗಳನ್ನು ಕಟ್ಟಿದರು, ಅವುಗಳಲ್ಲಿ ತಮ್ಮ ಬುದ್ಧಿವೈಭವವನ್ನು ತೋರಿಸುವ ಶಿಲ್ಪಕಲಾಕೃತಿಗಳನ್ನು ಕೆತ್ತಿದರು ತಮ್ಮ ಜೀವನಕ್ಕೆ ಬೇಕಾದ ಹಲವು ಬಗೆಯ ಸಾಮಾನುಗಳನ್ನೂ ಆಯುಧಗಳನ್ನೂ ಅಳವಡಿಸಿಕೊಂಡರು ಹಾಡುಗಳನ್ನು ಹಾಡಿದರು ಗ್ರಂಥಗಳನ್ನು ರಚಿಸಿದರು ತಮ್ಮ ಹೆಸರಿನಿಂದ ಶಿಲಾ ಮತ್ತು ತಾಮ್ರಶಾಸನಗಳನ್ನು ಕೆತ್ತಿಸಿದರು ಇವೆಲ್ಲವುಗಳು ಈಗಲೂ ಅಲ್ಲಲ್ಲಿ ದೊರೆಯುತ್ತವೆ, ಮತ್ತು ಇವುಗಳ ಅವಶೇಷಗಳಿಂದಲೇ ನಮಗೆ ಅಂದಿನವರ ಜೀವನದ ನಾನಾ ಮುಖಗಳ ಪರಿಚಯವಾಗುತ್ತದೆ




ಭಾರತದ ಭಾಗ್ಯ — ಇಲ್ಲಿ ಕೊಟ್ಟ ಭಾರತದ ನಕಾಶವನ್ನು ನೋಡಿರಿ. ಉತ್ತರಕ್ಕೆ ೧೫೦೦ ಮೈಲು ಉದ್ದ, ೧೫೦ ಮೈಲು ಅಗಲ, ಹಾಗೂ ನಾಲ್ಕೈದು

ಮೈಲುಗಳಷ್ಟು ಎತ್ತರವಿರುವ ಹಿಮಾಲಯ ಪರ್ವತಾವಳಿಯು ಕೋಟೆಯಂತೆ ಅದರಾಚೆಯಲ್ಲಿರುವ ದಾಳಿಗಾರರಿಂದಲೂ, ಕೆಟ್ಟಗಾಳಿಗಳಿಂದಲೂ, ನಮ್ಮನ್ನು ಕಾಪಾಡುತ್ತಿದೆ, ಮೇಲಾಗಿ ದೇಶದ ಆಯಾ ದಿಕ್ಕುಗಳಲ್ಲಿ ಅಂದರೆ ವಾಯವ್ಯ ದಿಕ್ಕಿನಲ್ಲಿ ಹಿಮಾಲಯದ ಮರಿಗಳಂತಿರುವ ಹಿಂದೂಕುಶ್, ಕಾರಾಕೋರಂ ಪರ್ವತಗಳಿವೆ ಈ ಪರ್ವತಗಳಲ್ಲಿರುವ ಕಿಂಡಿಗಳಿಂದಲೇ ಪರದೇಶದಿಂದ ನಮ್ಮ ದೇಶಕ್ಕೆ ದಾಳಿಗಾರರು ಬಂದರು ದಕ್ಷಿಣದಲ್ಲಿ ಹಬ್ಬಿರುವ ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಆಯಾ ದೇಶದವರಿಗೆ ಆಸರವಾಗಿವೆ ಮೂರೂ ದಿಕ್ಕುಗಳಲ್ಲಿರುವ ಸಮುದ್ರಗಳಿಂದ ನಮಗೆ ಬೇಕಾದಷ್ಟು ರಕ್ಷಣೆ ದೊರೆತಿದೆ ಇಲ್ಲಿಯ ಭೂಮಿಯೂ ಫಲವತ್ತಾಗಿದೆ ಉತ್ತರದಲ್ಲಿ ಗಂಗಾ-ಯಮುನೆಗಳ ಬಯಲುಗಳು ಜಗತ್ತಿನಲ್ಲಿಯೇ ಫಲವತ್ತಾದ ಪ್ರದೇಶಗಳೆಂದು ಹೆಸರಾಗಿವೆ ದಕ್ಷಿಣದಲ್ಲಿಯೂ ಗೋದಾವರಿ, ಕೃಷ್ಣಾ, ತುಂಗಭದ್ರಾ, ಕಾವೇರಿ ಮೊದಲಾದ ಹೊಳೆಗಳಿವೆ

ಈ ನಮ್ಮ ಭಾರತ ಮಾತೆಯ ಹೊಟ್ಟೆಯಲ್ಲಿಯೇ ಚಂದ್ರಗುಪ್ತ, ಅಶೋಕ, ಪುಲಿಕೇಶಿಯಂಥ ವೀರರು, ಬುದ್ಧ, ಮಹಾವೀರ, ಶಂಕರಾಚಾರ್ಯ, ಬಸವಣ್ಣನವರಂಥ ಮಹಾನುಭಾವರು, ಕಾಲಿದಾಸ, ಭವಭೂತಿ, ಬಾಣಭಟ್ಟ ರಂಥ ಕವಿಪುಂಗವರು, ಝಾಂಶಿ ಲಕ್ಷ್ಮೀಬಾಯಿ, ಕಿತ್ತೂರ ಚನ್ನಮ್ಮನವರಂಥ ನಾರೀ ರತ್ನಗಳು, ಲೋಕಮಾನ್ಯ ಟಿಳಕ, ಮಹಾತ್ಮಾಗಾಂಧಿಯವರಂಥ ದೇಶ ಭಕ್ತ ಶಿರೋಮಣಿಗಳು ಹುಟ್ಟಿ ನಮ್ಮ ದೇಶವನ್ನು ಬೆಳಗಿದರು ಇದೆಲ್ಲ ಭಾರತದ ಭಾಗ್ಯವಲ್ಲವೇ?

**ನಮ್ಮ ವೈಶಿಷ್ಟ್ಯ** — ಪರದೇಶದವರು ಆಗಾಗ ನಮ್ಮ ದೇಶದೊಳಗೆ ನುಗ್ಗುತ್ತ ಬಂದರು ಇಲ್ಲಿರುವ ಅನುಕೂಲತೆಗಳನ್ನು ಕಂಡು ಇಲ್ಲಿಯೇ ನೆಲಸಿ ದರು ಅದರಿಂದ ನಮ್ಮ ಈ ಭಾರತದಲ್ಲಿ ಬೇರೆ ಬೇರೆ ಬುಡಕಟ್ಟಿಗೆ ಸೇರಿದ ಹಲವು ಮತಧರ್ಮಗಳಿವೆ ಭಿನ್ನ ಭಿನ್ನ ಭಾಷೆಗಳನ್ನಾಡುವ ಜನಾಂಗಗಳು ಕಾಣಬರುತ್ತವ ಅವರವರ ರೀತಿ ನಡತೆಗಳು ಭಿನ್ನವಾಗಿವ ಇಷ್ಟು ವೈವಿಧ್ಯ ವಿದ್ದರೂ ಭಾರತೀಯರೆಲ್ಲರೂ ಸಾವಿರಾರು ವರ್ಷಗಳಿಂದ ಬಾಳಿರುವದರಿಂದ ನಮ್ಮಗಳ ರೀತಿ ನೀತಿಗಳಲ್ಲಿ, ಆಚಾರ ವಿಚಾರಗಳಲ್ಲಿ, ಲೌಕಿಕ ಪಾರಮಾರ್ಥಿಕ ದೃಷ್ಟಿಗಳಲ್ಲಿ ಒಂದು ಬಗೆಯ ಏಕರೂಪತೆಯಿದೆ. ನಾವೆಲ್ಲರೂ ಭಾರತೀಯ ಸಂತತಿಯವರೇ ಇದೇ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ

**ನಮ್ಮ ನಾಗರಿಕತೆಯ ನೆಲೆ** – ಈ ನಮ್ಮ ನಾಗರಿಕತೆಯ ಅಥವಾ ಸಂಸ್ಕೃತಿಯ ನೆಲೆ ಯಾವುದು? ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಜನಾಂಗಗಳು ನೆಲಸಿ ಬಾಳಿಕೊಂಡಿವೆ ಮೊಟ್ಟಮೊದಲು ಜನರು ಕಾಡು

ಸ್ಥಿತಿಯಲ್ಲಿದ್ದರು ಬರುಬರುತ್ತ ಹೊಸ ಹೊಸ ಶೋಧಗಳನ್ನು ಮಾಡಿ ಆಯುಧ, ಉಪಕರಣ, ಮತ್ತು ಪಾತ್ರೆಗಳನ್ನು ತಯಾರಿಸಿಕೊಂಡರು ಮುಂದೆ ತಮ್ಮ ಉಪಜೀವನಕ್ಕಾಗಿ, ಪಶುಪಾಲನೆ, ಒಕ್ಕಲತನ, ನೇಕಾರಿಕೆ ಮೊದಲಾದುವುಗಳನ್ನು ಕಲಿತುಕೊಂಡರು ಒಬ್ಬರಿಗೊಬ್ಬರು ಸಹಾಯಕರಾಗಬೇಕೆಂದು ಒಂದೆಡೆಯಲ್ಲಿ ಮನೆಗಳನ್ನು ಕಟ್ಟಿಕೊಂಡು ನಾಗರಿಕರಾದರು, ಹೀಗೆ ಒಂದೆಡೆಯಲ್ಲಿ ನೆಲಸಲು ನದೀತೀರಗಳು ಬಹಳ ಉಪಯುಕ್ತವಾಗಿದ್ದುದರಿಂದ ಭಾರತದಲ್ಲಿ ಹೊಳೆಯ ದಂಡೆಗಳಲ್ಲಿಯೇ ನಾಗರಿಕತೆಗಳು ಬೆಳೆದವೆಂದು ಗೊತ್ತಾಗುತ್ತದೆ ಇಂಥ ನದೀತೀರದ ನಾಗರಿಕತೆಗಳಲ್ಲಿ ಸಿಂಧು ಹೊಳೆಯ ನಾಗರಿಕತೆಯು ಅತ್ಯಂತ ಪ್ರಾಚೀನವಾದುದೆಂದು ಇತ್ತೀಚೆಗೆ ನಡೆದ ಶೋಧಗಳಿಂದ ನಮಗೆ ತಿಳಿಯುತ್ತದೆ ಅದೇ ನಮ್ಮ ನಾಗರಿಕತೆಯ ನೆಲೆ, ಆದುದರಿಂದ ಅಲ್ಲಿಂದಲೇ ನಮ್ಮ ಇತಿಹಾಸದ ಅಭ್ಯಾಸವನ್ನು ಆರಂಭಿಸುವಾ!

## ಅಭ್ಯಸನಗಳು

೧ ನಮ್ಮ ದೇಶಕ್ಕೆ ಇದ್ದ ಬೇರೆ ಬೇರೆ ಹೆಸರುಗಳು ಯಾವವು?

೨ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವು ಏತರಲ್ಲಿದೆ?

೩ ಇತಿಹಾಸ ವಿಷಯಗಳನ್ನು ತಿಳಿಸುವ ನಿದರ್ಶನಗಳು ಯಾವವು?

# ೨. ಸಿಂಧು ನದೀತೀರದ ಸಂಸ್ಕೃತಿ

**ಭಾರತದ ಮೂಲ ನಿವಾಸಿಗಳು** — ನಮ್ಮ ಪುರಾತನದ ಪುರಾಣಗಳಲ್ಲಿ ಭಾರತದ ಆದಿಮಾನವನು ‹ಮನು' ಎಂದು ಹೇಳಲಾಗಿದೆ, ಆದರೆ, ಮನುವಿನ ಇತಿಹಾಸವನ್ನಾಗಲೀ, ಅನಂತರ ಆದ ಬೆಳವಣಿಗೆಯನ್ನಾಗಲಿ, ಕಂಡುಹಿಡಿಯುವದು ಕಠಿಣವಾಗಿದೆ, ತೀರ ಪ್ರಾಚೀನ ಕಾಲದಲ್ಲಿ, ಇನ್ನೂ ನಾಗರಿಕತೆಯು ಬೆಳೆಯದಿರುವಾಗ ಹಿಮಾಲಯದ ಕೆಳಗಡೆ ಗಾಗ-ಕುರೆ ಜನರೂ, ಬಂಗಾಲದಲ್ಲಿ ಸಂತಾಳರೂ, ಒಡಿಸಾದಲ್ಲಿ ಗೊಂಡರೂ, ಸಾತಪುಡಾ ಬೆಟ್ಟದಲ್ಲಿ ಭಿಲ್ಲರೂ ಇದ್ದರು, ಮತ್ತು ಇವರೇ ಭಾರತದ ಮೂಲನಿವಾಸಿಗಳೆಂದು ತಿಳಿಯುತ್ತದೆ, ಮುಂದ, ಎಷ್ಟೋ ಕಾಲವಾದ ಮೇಲೆ, ದಕ್ಷಿಣದಲ್ಲಿದ್ದ ದ್ರಾವಿಡರಿಗೂ ಮೇಲಿನ ಮೂಲ ನಿವಾಸಿಗಳಿಗೂ ಸಂಬಂಧ ಉಂಟಾಯಿತು

**ದ್ರಾವಿಡರು** — ಈ ದ್ರಾವಿಡರು ಕಪ್ಪು ಬಣ್ಣದವರು ಇವರ ಮೈತುಂಬ ದಟ್ಟವಾದ ಕಪ್ಪು ಕೂದಲು ಇದ್ದವು ಇವರ ಮೈ ಹುರಿಕಟ್ಟಾಗಿದ್ದರೂ ಮೂಗು ಚಪ್ಪಟೆ ಮತ್ತು ಅಗಲವಾಗಿತ್ತು, ಇದರಿಂದ ನೋಟಕ್ಕೆ ಅವರು ಅಂದವಾಗಿರದಿದ್ದರೂ ಬಹಳ ಶೂರರು, ಸಾಹಸಿಗಳಿದ್ದರು ಇವರು ಮೂಲನಿವಾಸಿಗಳನ್ನು ಮದುವೆಯಾಗಿ, ಅವರೊಡನೆ ಬೆರತು, ಅವರನ್ನು ಸುಧಾರಿಸಿದರು ಈ ಮೇರೆಗೆ, ಒಂದು ಕಾಲಕ್ಕೆ ದ್ರಾವಿಡ ಜನಾಂಗದ ಸಂಸ್ಕೃತಿ ಅಂದರೆ ರೀತಿನಡತೆಗಳು ಭಾರತದಲ್ಲೆಲ್ಲ ಹರಡಿದವು ದ್ರಾವಿಡರು ಒಕ್ಕಲತನ ಮತ್ತು ವ್ಯಾಪಾರವನ್ನು ಬೆಳೆಸಿದರು. ಹಡಗುಗಳನ್ನು ಕಟ್ಟಿದರು ಭಾರತದ ಪಶ್ಚಿಮದಲ್ಲಿದ್ದ ಇರಾಣ, ಮೆಸೊಪೊಟೇಮಿಯಾ, ಮತ್ತು ಬಾಬಿಲನ್ನ, ಇಜಿಪ್ತ ದೇಶಗಳ ಕೂಡ ವ್ಯಾಪಾರ ಮಾಡಹತ್ತಿದರು ಇಲ್ಲಿಂದ ಆ ದೇಶಗಳಿಗೆ ಅಕ್ಕಿ, ಚಂದನ ಕಟ್ಟಿಗ, ಅಂದವಾದ ಅರಿವೆ, ಮಸಾಲೆಯ ಸಾಮಾನು ಇವುಗಳನ್ನು ಕಳಿಸುತ್ತಿದ್ದರು ಈ ಬಗೆಯ ವ್ಯಾಪಾರಸಂಪರ್ಕದಿಂದ ಪರದೇಶಗಳ ಭಾಷೆಗಳಲ್ಲಿಯ ಹಲವು ಶಬ್ದಗಳು ದ್ರಾವಿಡ ಭಾಷೆಯಲ್ಲಿ, ದ್ರಾವಿಡರ ಹಲವು ಮಾತುಗಳು ಪರಭಾಷೆಗಳಲ್ಲಿ ಕೂಡಿಹೋದವು ದ್ರಾವಿಡರು ಧರ್ಮಬುದ್ಧಿಯುಳ್ಳವರು ಅವರು ಗಿಡ, ಹಾವು, ಕಲ್ಲು ಮುಂತಾದವುಗಳನ್ನು ಪೂಜಿಸುತ್ತಿದ್ದರು. ಅವುಗಳ ಮುಂದೆ ಪ್ರಾಣಿಗಳನ್ನು ಬಲಿ ಕೊಡುತ್ತಿದ್ದರು

**ಸೈಂಧವಿ ಅಥವಾ ಸಿಂಧು ಹೊಳೆಯ ಸಂಸ್ಕೃತಿ.** — ಮನುಷ್ಯನ ದೇಹದ ಸ್ವಚ್ಛತೆಗೂ ಇತರ ಅನೇಕ ಕೆಲಸಗಳಿಗೂ ನೀರು ಅತ್ಯವಶ್ಯ, ಆದುದರಿಂದ ಮನುಷ್ಯನು ನೀರಿನ ಅನುಕೂಲವಿರುವ ನದಿಯ ದಂಡೆಗಳಲ್ಲಿಯೇ ಮನೆಕಟ್ಟಿ

ಕೊಂಡು, ಅಲ್ಲಿಯೇ ತನ್ನದೊಂದು ವಿಶಿಷ್ಟ ಬಾಳಿನ ರೀತಿಯನ್ನು ಬೆಳೆಸಿ ಕೊಂಡನು ಈ ಬಗೆಯಾಗಿ, ನದಿಯ ದಂಡೆಗಳಲ್ಲಿಯೇ ಮಾನವನ ಮನೆತನಗಳು ಬೆಳೆದುದರಿಂದ ಅವೇ ಸಂಸ್ಕೃತಿಗಳ ಬೀಡಾದವು ಆಫ್ರಿಕದೊಳಗಿನ ನೈಲನದಿ, ಏಸಿಯದಲ್ಲಿಯ ಯುಪ್ರೆಟಿಸ್ ಮತ್ತು ಟೈಗ್ರೀಸ, ಚೀನದಲ್ಲಿಯ ಹೊಆಂಗಹೋ ಈ ಹೊಳೆಗಳ ದಂಡೆಗಳಲ್ಲಿ ಬೇರೆ ಬೇರೆ ಸಂಸ್ಕೃತಿಗಳು ಬೆಳೆದಂತೆ, ನಮ್ಮ ಭಾರತದಲ್ಲಿಯೂ ಸಿಂಧುನದಿಯ ದಂಡೆಯಲ್ಲಿ ದ್ರಾವಿಡ ನಾಗರಿಕತೆಯು ಬೆಳೆಯಿತು ಅದರ ಕುರುಹುಗಳು ಈಗ ದೊರೆತಿವೆ ಭಾರತದ ಪುರಾಣ(ಹಳೆಯಕಾಲ)ವಸ್ತು ಸಂಶೋಧನ ಶಾಖೆಯುವರು ಕ್ರಿ ಶ ೧೯೨೨ರಲ್ಲಿ ಪಶ್ಚಿಮ ಪಂಜಾಬದಲ್ಲಿ ಹರಪ್ಪಾ, ಮತ್ತು ಸಿಂಧ ಪ್ರಾಂತದ ಲಾರಖಾನಾ ಜಿಲ್ಹೆಯಲ್ಲಿ ಮೊಹೆಂಜೋದಾರೂ ಇವೆರಡು ಅತ್ಯಂತ ಪ್ರಾಚೀನ ಪಟ್ಟಣಗಳನ್ನು ಅಗಿದು ತೆಗೆದರು ಕ್ರಿಸ್ತಪೂರ್ವ ೫೦೦೦ ವರ್ಷಗಳ ಹಿಂದೆಯೇ ಈ ಪಟ್ಟಣಗಳು ಹಾಳಾಗಿ ಭೂಮಿಯಲ್ಲಿ ಹುಗಿದುಹೋಗಿರಬೇಕೆಂದು ಸಂಶೋಧಕರ ತರ್ಕವಿದೆ ಇವೆರಡೂ ಪಟ್ಟಣಗಳ ಸಂಸ್ಕೃತಿಯು ದ್ರಾವಿಡ ಸಂಸ್ಕೃತಿಗೆ ಸಂಬಂಧಿಸಿದ್ದೆಂದು ತಜ್ಞರ ಅಭಿಪ್ರಾಯ ಈ ಪಟ್ಟಣಗಳು ಸಿಂಧುನದಿಯ ದಂಡೆಯನ್ನಾಶ್ರಯಿಸಿ ಬೆಳೆದುದರಿಂದ ಇವುಗಳಿಗೆ 'ಸಿಂಧುನದಿಯ ಸಂಸ್ಕೃತಿ' ಎಂದು ಹೆಸರು.

**ಹರಪ್ಪಾ** — ಇದೊಂದು ಹೂತುಹೋದ ಪಟ್ಟಣವೇ ಇದರಲ್ಲಿ ಎಷ್ಟೋ ಮನೆಗಳು, ಪಾತ್ರೆಗಳು, ಆಭರಣಗಳು, ಲಿಪಿಗಳು ಸಿಕ್ಕಿರುವವು. ಇಲ್ಲಿ ಚನ್ಹುದಾರೋ ಎಂಬ ಪಟ್ಟಣವಿದ್ದು, ಅಲ್ಲಿ ಆಟದ ಸಾಮಾನು ಮತ್ತು ಮಣಿಗಳನ್ನು ಮಾಡುವ ದೊಡ್ಡ ಕಾರಖಾನೆ ಇತ್ತು, ಆದುದರಿಂದ, ಅಲ್ಲಿ ತಾಮ್ರದ ಉಳಿ, ಚಾಕು, ಕ್ಷೌರದ ಕತ್ತಿ, ಮಣ್ಣಿನ ಗಿಲಿಕೆ, ಪೀಪಿ, ಪಾರಿವಾಳ, ಎತ್ತು ಮುಂತಾದ ಆಟದ ಸಾಮಾನುಗಳು, ತೂಕ ಮತ್ತು ಅಳತೆಯ ಕಲ್ಲುಗಳು, ಮಣ್ಣಿನ ಹೆಣ್ಣು ಗೊಂಬೆಗಳು ಸಿಕ್ಕಿವೆ ಹರಪ್ಪದಲ್ಲಿ ಆ ಕಾಲದ ಮನೆಗಳಿಗೆ ಉಪಯೋಗಿಸಿದ ೧೦ ೩/೪ × ೫ ೧/೪ × ೨ ೩/೪ ಅಳತೆಯ ಇಟ್ಟಿಗೆಗಳು ದೊರೆತಿವೆ, ಅಲ್ಲದೆ ೪ ೧/೨ ಅಂಗುಲದಷ್ಟು ಉದ್ದವಿದ್ದ ಮಣಿಗಳು ಕಂಡುಬರುತ್ತವೆ ಆ ಕಾಲದ ಲಿಪಿಗಳಲ್ಲಿ ಕನ್ನಡ ಪದಗಳನ್ನು ಹೋಲುವ ಕೆಲವು ಶಬ್ದಗಳೂ ತೋರುತ್ತವೆ.

**ಮೊಹೆಂಜೋದಾರೊ** — ಸಿಂಧೀ ಭಾಷೆಯಲ್ಲಿ ಮೊಹೆಂಜೋದಾರೊ ಅಂದರೆ, 'ಸತ್ತವರ ಊರು' ಎಂಬರ್ಥ. ಒಂದರ ಮೇಲೊಂದರಂತೆ ಏಳು ಸಾರೆ ಕಟ್ಟಿದ್ದರೂ ಮತ್ತೆ ಮತ್ತೆ ಹಾಳಾದ ಗುರುತುಗಳು ಇಲ್ಲಿ ಸಿಗುತ್ತವೆ, ಅದರಿಂದ ಅದಕ್ಕೆ ಈ ಹೆಸರು ಬಂದಿರಬೇಕು. ಐದಾರು ಪಟ್ಟಣಗಳಲ್ಲಿ

ಈಗ ಮೂರನ್ನು ಮಾತ್ರ ಅಗೆದು ತೆಗೆದಿರುವರು. ಇವುಗಳಲ್ಲಿ ಎಲ್ಲಕ್ಕೂ ಕೆಳಗಿನದು ಅತಿ ಪುರಾತನ ಪಟ್ಟಣ ಅದು ಬಲು ಚೆಂದಾಗಿದೆ. ಐದು ಸಾವಿರ ವರ್ಷಗಳಾಚೆ ಆ ಊರಿಗೆ ಯಾವ ಹೆಸರಿತ್ತೆಂಬುದು ತಿಳಿಯದು, ಆದರೆ, ಆಗಿನ ಕಾಲಕ್ಕೆ ಆ ಊರು ಎಷ್ಟು ವಿಶಾಲ, ಎಷ್ಟು ಜನದಟ್ಟಣೆಯಿಂದ ತುಂಬಿತ್ತು? ಅದರ ಆರ್ಥಿಕ ಪರಿಸ್ಥಿತಿ, ಆಡಳಿತದ ವ್ಯವಸ್ಥೆ ಹೇಗಿದ್ದವು? ಊರಿನ ಕಟ್ಟಡವು ಎಷ್ಟು ಚೆನ್ನಾಗಿತ್ತು? ಎಂಬೀ ಮುಂತಾದ ಸಂಗತಿಗಳು ತಿಳಿಯುವಂತಿವೆ



ಮೊಹೆಂಜೋದಾರೊ

**ಕಟ್ಟಡಗಳು** — ಅಗಿದು ತೆಗೆದಿರುವ ಆ ಮೂರೂ ಪಟ್ಟಣಗಳಲ್ಲಿ ಸುಟ್ಟ ಇಟ್ಟಂಗಿಗಳಿಂದ ಕಟ್ಟಿದ ಅಂದಚೆಂದವಾದ ಕಟ್ಟಡಗಳು ಹಲವು ಇವೆ. ಮನೆಗಳಿಗೆ ಅಟ್ಟಗಳಿವೆ ದೊಡ್ಡ ದೊಡ್ಡ ಪಡಸಾಲೆಗಳಿವೆ ಊರಲ್ಲಿ ಕೊರೆದಂಥ ಅಗಲವಾದ ಬೀದಿಗಳು, ಸೇದುವ ಬಾವಿಗಳು, ಹೊಂಡಗಳು, ನೀರು ಹರಿದುಹೋಗುವ ಕಾಲುವೆಗಳು ಇವೆ.

**ಸಂಶೋಧನೆಯಲ್ಲಿ ಸಿಕ್ಕ ಸಾಮಾನುಗಳು** — ಮಣ್ಣು, ತಾಮ್ರ, ಹಾಗೂ ಕಂಚಿನ ಪಾತ್ರೆಗಳು, ಬೆಳ್ಳಿಬಂಗಾರ, ಮುತ್ತುರತ್ನಗಳ ಆಭರಣಗಳು, ಕೊರಳಲ್ಲಿ ಹಾಕಿಕೊಳ್ಳುವ ಒಗೆಬಗೆಯ ಹಾರಗಳು, ಮೂರ್ತಿಗಳು, ಲಿಂಗಗಳು, ಮತ್ತು ಪ್ರಾಣಿಗಳ ಪ್ರತಿಮೆಗಳು ದೊರೆತಿವೆ, ಇವಲ್ಲದೆ, ಆಗಿನ ಜನರ ನಾಗರಿಕತೆಯನ್ನು ತೋರಿಸುವ ನಾಣ್ಯ, ವಿಗ್ರಹ ಮೊದಲಾದ ಒಡವೆಗಳು, ಮನುಷ್ಯ ಪ್ರಾಣಿ ಮೊದಲಾದವುಗಳ ಎಲುಬಿನ ಹಂದರಗಳು, ಮತ್ತು ಬೇರೆ

ಬೇರೆ ಆಕಾರದ ಸಮಾಧಿಗಳು ಕಂಡಿವೆ  ತಾಮ್ರದ ಕತ್ತಿಗಳೂ, ಚಿತ್ರವಿಚಿತ್ರ ಸುಳಿಗಳುಳ್ಳ ಪದಕಗಳೂ ಸಿಕ್ಕಿವೆ





**ಆಹಾರ** — ಅಲ್ಲಿಯ ಜನರು ಜವೆಗೋಧಿ, ಗೋಧಿಗಳಿಂದಲೇ ವಿವಿಧ ಆಹಾರಗಳನ್ನು ಮಾಡಿ ಉಣ್ಣುತ್ತಿರಬೇಕು  ಗೋಧಿಯನ್ನು ಹಾಕಿಡುವ ದೊಡ್ಡ ದೊಡ್ಡ ಹಗೆಗಳು ಹೊರಟಿರುವವು, ಮೇಲಾಗಿ, ದನಕುರಿಗಳ ಮಾಂಸ ಮತ್ತು ಮೀನಗಳನ್ನು ತಿನ್ನುತ್ತಿದ್ದರು

**ಕಲಾಕೌಶಲ್ಯ** — ಕಲೆಗಳಲ್ಲಿ ಬಣ್ಣಕೊಡುವದು, ಕುಸುರಿನ ಕೆಲಸ, ಹಡಗುಗಳನ್ನು ಕಟ್ಟುವದು, ಇವು ಅವರಿಗೆ ಗೊತ್ತಿದ್ದವು  ಹೆಂಗಸರು ರಾಟಿಯಿಂದ ಹತ್ತಿ ಮತ್ತು ಉಣ್ಣೆ ನೂಲುತ್ತಿದ್ದರು  ಪಾತ್ರಗಳ ಮೇಲೆ, ಗಡಿಗೆಗಳ ಮೇಲೆ ತರತರದ ಹೂಗಳನ್ನು ಕೊರೆಯುತ್ತಿದ್ದರು  ಬೆಳ್ಳಿ, ಬಂಗಾರ, ತಾಮ್ರ, ಕಂಚು, ಆನೆಯಕೋರ ಮೊದಲಾದವುಗಳಿಂದ ಹಲವು ಚೆಂದವಾದ ಆಭರಣಗಳನ್ನೂ ಪಾತ್ರೆಗಳನ್ನೂ ಮಾಡುತ್ತಿದ್ದರು  ಮುತ್ತಿನ ಸರ ಪೋಣಿಸಿದ್ದೊಂದು ಸರವು ದಾರ ಸಹಿತವಾಗಿ ಅಚ್ಚಳಿಯದ ಈಗಲೂ ಇದ್ದುದು ಸಿಕ್ಕಿದೆ  ಎತ್ತಿನ ಮುದ್ರೆ ಇದ್ದ ಕೆಲವು ಮುದ್ರಿಕಗಳು ದೊರಕಿವ  ಈ ಚಿತ್ರಗಳ ಮೇಲಿನ ಸುಳುವು ಹೊಳವುಗಳಿಂದ ಅವರ ಚಿತ್ರಕಲೆಯ ನೈಪುಣ್ಯ ವ್ಯಕ್ತವಾಗುತ್ತದೆ, ಅಲ್ಲದ ಇವರದೊಂದು ಬಗೆಯ ಚಿತ್ರಲಿಪಿ ಇರುವಂತೆಯೂ ತೋರುತ್ತದ



ಚಿತ್ರಲಿಪಿ

**ಧರ್ಮ-ದೇವರು** — ಪ್ರಪಂಚದಲ್ಲಿಯೇ ಮೊತ್ತಮೊದಲು ಇಲ್ಲಿಯ ಜನರು ಗಾಲಿಯ ಚಕ್ಕಡಿ, ಬಂಡಿಗಳನ್ನು ಬಳಕೆಯಲ್ಲಿ ತಂದಂತೆ ಕಾಣುತ್ತದೆ ಇವರು ನಾಗ ಹಾಗೂ ಈಶ್ವರನ ಪೂಜಕರಿದ್ದರು ಯೋಗಾಸನದಲ್ಲಿ ಕುಳಿತಿರುವ ಪಶುಪತಿಯ ಚಿತ್ರ, ಮೂರುಮುಖದ ಚಿತ್ರ ಇವು ಸಿಕ್ಕಿವೆ ಅರಳಿ ಮರವನ್ನು, ಶಿವಲಿಂಗವನ್ನು, ಬಸವಣ್ಣನನ್ನು, ಶಕ್ತಿದೇವಿಯಂತಿರುವ ಮೂರ್ತಿಯನ್ನು ಪೂಜಿಸುತ್ತಿರುವಂತೆ ಕಾಣುತ್ತದೆ ದೇವಾಲಯಗಳು ಮಾತ್ರ ಇರಲಿಲ್ಲ

**ಶಾಸ್ತ್ರಪ್ರಗತಿ** — ಈ ಜನರಿಗೆ ಜ್ಯೋತಿಷಶಾಸ್ತ್ರ, ಖಗೋಲ, ಭೂಗೋಲ ಶಾಸ್ತ್ರಗಳ ಜ್ಞಾನವಿತ್ತೆಂಬುದಕ್ಕೆ ಆಧಾರಗಳಿವೆ ಒಟ್ಟಾರೆ, ಆಗಿನ ಕಾಲಕ್ಕೆ ಸಿಂಧುಹೊಳೆಯ ದಂಡೆಯ ನಾಗರಿಕತೆಯಷ್ಟು ಬೆಳೆದ ಯಾವ ಜನಾಂಗಗಳೂ ನಮ್ಮಲ್ಲಿ ಇರಲಿಲ್ಲವೆಂದು ಕಾಣುತ್ತದೆ

## ಅಭ್ಯಸನಗಳು

೧ ಇತಿಹಾಸದ ದೃಷ್ಟಿಯಿಂದ ಸತ್ಯವಾಗುವಂತೆ ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳಗಳನ್ನು ತುಂಬಿರಿ

(ಅ) ಪುರಾಣ ವಸ್ತುಸಂಶೋಧನ ಶಾಖೆಯವರು ಪಶ್ಚಿಮ ಪಂಜಾಬದಲ್ಲಿ ______ ಮತ್ತು ಸಿಂಧ ಪ್ರಾಂತದಲ್ಲಿ ______ ಎಂಬ ಎರಡು ಹಳೆಯ ಪಟ್ಟಣಗಳನ್ನು ಅಗೆದು ತೆಗೆದರು

(ಆ) ಮೊಹೆಂಜೋದಾರೊ ಎಂದರೆ ಸಿಂಧಿ ಭಾಷೆಯಲ್ಲಿ ______ ಎಂದು ಹೆಸರು

(ಇ) ______ ಮೇಲಿನ ಸುಳುವು ಹೊಳವುಗಳಿಂದ ಅವರ ______ ವ್ಯಕ್ತವಾಗುತ್ತದೆ, ಅಲ್ಲದೆ ಒಂದು ಬಗೆಯ ______ ಇರುವಂತೆ ಗೊತ್ತಾಗುತ್ತದೆ

೨ ಮೊಹೆಂಜೋದಾರೋದ ಕೆಳಗಿನ ಅಂಶಗಳ ಬಗೆಗೆ ನಿಮಗೆ ಗೊತ್ತಿದ್ದ ಒಂದೊಂದು ಮುಖ್ಯ ಮಾತನ್ನು ಬರೆಯಿರಿ

(ಅ) ಕಟ್ಟಡಗಳು. (ಆ) ದೊರೆತ ಒಡವೆಗಳು (ಇ) ಆಹಾರ (ಈ) ಕಲೆ. (ಉ) ದೇವರು.

# ೩. ಆರ್ಯರ ಆಗಮನ

(ಕ್ರಿ ಪೂ ೨೫೦೦–ಕ್ರಿ ಪೂ ೧೫೦೦)

**ಆರ್ಯರ ಆಗಮನ** – ಸಿಂಧುನದೀತೀರದ ಸಂಸ್ಕೃತಿ ಬೆಳೆದು ಅಳಿದ ನಂತರ, ಅಲ್ಲಿ ಮತ್ತು ಗಂಗಾನದೀ ತಟದಲ್ಲಿ ಬೆಳೆದು ಬಹಳ ಪ್ರಖ್ಯಾತಿ ಹೊಂದಿ ಇಂದಿಗೂ ನಮ್ಮ ಭಾರತ ಸಂಸ್ಕೃತಿಯ ಅಡಿಗಲ್ಲಾಗಿರುವ ಸಂಸ್ಕೃತಿ ಎಂದರೆ, ಆರ್ಯಸಂಸ್ಕೃತಿ ಇದಕ್ಕೆ ಕಾರಣರಾದ ಆರ್ಯರು ಮೂಲತಃ ಭಾರತದ ನಿವಾಸಿಗಳಲ್ಲ, ಅವರು ಹೊರಗಿನಿಂದಲೇ ಬಂದವರು, ಆದರೆ, ಎಲ್ಲಿಂದ ಬಂದವರು ಎಂಬ ಬಗೆಗೆ ಭಿನ್ನ ಭಿನ್ನ ಅಭಿಪ್ರಾಯಗಳಿವೆ

**ಆರ್ಯರು ವಾಯವ್ಯದಿಕ್ಕಿನಿಂದ ಭಾರತವನ್ನು ಹೊಕ್ಕರು** – ಆರ್ಯರು **ಮಧ್ಯ ಏಶಿಯಾ**ದಿಂದಾಗಲಿ ಆಗ್ನೇಯ ಯುರೋಪಿನಿಂದಾಗಲಿ ಹೊರಗೆ ಗುಂಪು ಕಟ್ಟಿಕೊಂಡು ಹರಿಬಿದ್ದರು ಕ್ರಿ ಪೂ ನಾಲ್ಕೈದು ಸಾವಿರ ವರುಷಗಳ ಹಿಂದೆ ಹಾಗೆಯೇ ಸಂಚರಿಸುವ ಒಂದು ಗುಂಪು ಕ್ರಿ ಪೂ ಮೂರುಸಾವಿರ ವರುಷಗಳ ಹಿಂದೆ ಇರಾಣದ ಉತ್ತರಕ್ಕೆ ಹೊರಟಿತು ಅಲ್ಲಿ ಮತ್ತೆ ಇಬ್ಬಣಗಳಾದವು ಒಂದು ಬಣ ಆಗ್ನೇಯ ದಿಕ್ಕಿನಿಂದ **ಅಫಗಾನಿಸ್ಥಾನ** ಮಾರ್ಗವಾಗಿ ಭಾರತಕ್ಕೆ ಬಂದಿರಬೇಕು. ಮತ್ತೊಂದು ಪಂಗಡ **ಕಾಕೇಸಸ್** ಪರ್ವತವನ್ನು ದಾಟಿ ಇರಾಣದ ವಾಯವ್ಯಕ್ಕಿದ್ದ **ಮಿಡಿಯಾ** ಪ್ರದೇಶದಲ್ಲಿ ನೆಲಸಿರಬೇಕು ಕೆಲ ಕಾಲದ ಮೇಲೆ ಅವರೂ ಭಾರತದ ವಾಯವ್ಯ ಮಾರ್ಗವಾಗಿಯೇ ಒಳಗೆ ಬಂದಂತೆ ತಿಳಿಯುತ್ತಿದೆ

**ಆರ್ಯರ ಆಗಮನಕಾಲದ ನಿರ್ಣಯ** – ಹರಪ್ಪಾ, ಮೊಹೆಂಜೋದಾರೋಗಳಲ್ಲಿಯ ಸಂಶೋಧನೆಗಳಿಂದ ತಿಳಿದುಬರುವುದೇನೆಂದರೆ, ಆ ಪಟ್ಟಣಗಳಲ್ಲಿ ಕಂಡುಬರುವ ಸಂಸ್ಕೃತಿ, ಆರ್ಯ ಸಂಸ್ಕೃತಿಗಿಂತ ತೀರ ಭಿನ್ನವಾಗಿದೆ ಅದರಲ್ಲಿ ಆರ್ಯರ ಸಂಪರ್ಕವೇನೂ ಕಾಣುವದಿಲ್ಲ ಆರ್ಯರು ಮೊದಮೊದಲು ಗ್ರಾಮವಾಸಿಗಳು, ಆದರೆ, ಸಿಂಧುನದೀಸಂಸ್ಕೃತಿಯ ಜನರು ಪಟ್ಟಣವಾಸಿಗಳು ಆರ್ಯರು ಗೋಪೂಜಕರು, ಸಿಂಧು ತೀರದವರು ವೃಷಭಪೂಜಕರು ಆರ್ಯರ ದೇವತೆಗಳೇ ಬೇರೆ, ದ್ರಾವಿಡರ ದೇವತೆಗಳೇ ಬೇರೆ ಹರಪ್ಪ ಮೊಹೆಂಜೋದಾರೋಗಳಲ್ಲಿ ಕಬ್ಬಿಣ ದೊರೆತಿಲ್ಲ, ಆದರೆ, ಆರ್ಯರಿಗೆ ಕಬ್ಬಿಣ ಚಿರಪರಿಚಿತ ಹಾಗೆಯೇ ಆ ಪಟ್ಟಣಗಳ ಅವಶೇಷಗಳಿಂದ ದ್ರಾವಿಡರು ಕುದುರೆಗಳನ್ನು ಸಾಕುತ್ತಿದ್ದಂತೆ ತೋರುವುದಿಲ್ಲ. ಆದರೆ, ಆರ್ಯರು ಕುದುರೆಯನ್ನು ಪಳಗಿಸಿ ಪೋಷಿಸುತ್ತಿದ್ದರು ಅಂದಮೇಲೆ, ದ್ರಾವಿಡ ಸಭ್ಯತೆಯು ತರುವಾಯವೇ,

ಎಂದರೆ ಕ್ರಿ. ಪೂ. ಎರಡೂವರೆ ಸಾವಿರ ವರುಷಗಳ ಸುಮಾರಿಗೆ ಆರ್ಯರು ಭರತ ಖಂಡಕ್ಕೆ ಬಂದರೆಂದು ಅನ್ನಬಹುದು.

**ಆರ್ಯ-ದ್ರಾವಿಡರ ತಿಕ್ಕಾಟ** — ಆರ್ಯರು ಬರುವ ವಾಯುವ್ಯ ಮಾರ್ಗದಲ್ಲಿಯೇ ದ್ರಾವಿಡರು ಪ್ರಬಲವಾದ ರಾಷ್ಟ್ರವನ್ನು ಕಟ್ಟಿಕೊಂಡಿದ್ದರೆಂದು ಮೇಲೆ ಹೇಳಿದೆ. ಅವರನ್ನು ಹಿಂದೆ ಸರಿಸದೆ ಆರ್ಯರು ಭಾರತದೊಳಗೆ ಕಾಲಿಡುವಂತಿರಲಿಲ್ಲ. ಎರಡೂ ಶೂರ ಜನಾಂಗಗಳೇ ಆದುದರಿಂದ, ಆರ್ಯ-ದ್ರಾವಿಡರ ನಡುವೆ ಎಷ್ಟೋ ವರುಷಗಳವರೆಗೆ ತಿಕ್ಕಾಟಗಳು ನಡೆದೇ ಇದ್ದವು ಈ ಯುದ್ಧಗಳೇ ಮುಂದೆ ಸುರಾಸುರ ಯುದ್ಧಗಳೆಂದು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿವೆ. ದ್ರಾವಿಡರ ಉಕ್ಕಿನ ಮೈಕಟ್ಟು, ಕಾಳಗದ ಕಲಿತನ, ಕೌಶಲ್ಯಗಳನ್ನು ಕಂಡು ಆರ್ಯರು ಅವರನ್ನು ರಾಕ್ಷಸರೆಂದು ಕರೆದರು ಈ ರಾಕ್ಷಸರ ಕಾಟದಿಂದ ಮೊದಲಿನ ಆರ್ಯರು ಬಹಳ ನುಗ್ಗಾದರು

ಆದರೆ, ಮತ್ತೆ ಮತ್ತೆ ಆರ್ಯರ ತಂಡಗಳು ಭಾರತಕ್ಕೆ ನುಗ್ಗುತ್ತಲೇ ಇದ್ದವು ಇವರ ಸಂಖ್ಯೆ ಬೆಳೆದಂತೆ ದ್ರಾವಿಡರ ಕಸುವು ಕಡಿಮೆಯಾಯಿತು ಅವರು ಮೆಲ್ಲಮೆಲ್ಲನೆ ದಕ್ಷಿಣಕ್ಕೆ ಸರಿದರು ಉತ್ತರದಲ್ಲೆಲ್ಲ ಆರ್ಯರು ಹರಿ-ಬಿದ್ದರು

**ಆರ್ಯರೂ ಮೂಲನಿವಾಸಿಗಳೂ** — ದ್ರಾವಿಡರು ಹಿಂಜರಿದ ಮೇಲೆ ಆರ್ಯರು ಕೆಲಕಾಲ ಸಿಂಧುತೀರದಲ್ಲಿ ಸುಖವಾಗಿದ್ದರು. ಬೆಳೆಯುತ್ತಿರುವ ಜನಸಂಖ್ಯೆಗೆ ಆ ಪ್ರದೇಶ ಸಾಲದಾಯಿತು ಅದರಿಂದ ಅವರು ಗಂಗಾ ಯಮುನಾ ಬೈಲಿನತ್ತ ಸಾಗಿದರು ಕೆಲವರು ವಿಂಧ್ಯ ಸಾತಪುಡಾಗಳ ಕಡೆಗೆ ನಡೆದರು. ಈ ಪ್ರದೇಶಗಳಲ್ಲಿ ಆರ್ಯರು ಮೂಲನಿವಾಸಿಗಳನ್ನು ಎದುರಿಸ ಬೇಕಾಯಿತು.

ಈ ಮೂಲನಿವಾಸಿಗಳು ತೀರ ಕಾಡುಜನರು ಅವರಿಗೆ ಆರ್ಯರ ಪೆಟ್ಟು-ಗಳನ್ನು ತಡೆಯಲಾಗಲಿಲ್ಲ ಅದರಿಂದ ತೀವ್ರವೇ ಸೋತು ಶರಣಾಗತರಾದರು. ಅವರನ್ನು ಆರ್ಯರು ದಸ್ಯುಗಳೆಂದು ಕರೆದು ತಮ್ಮ ಸೇವೆಗಿಟ್ಟುಕೊಂಡರು.

**ಆರ್ಯ-ದ್ರಾವಿಡ ಸಂಪರ್ಕ** — ದ್ರಾವಿಡರು ಸೋತು ದಕ್ಷಿಣಕ್ಕೆ ತೆರಳಿದರಷ್ಟೆ! ಆದರೆ ಅವರ ಕುನುಸು ಕಡಿಮೆಯಾಗಿರಲಿಲ್ಲ. ಸಮಯವನ್ನು ಸಾಧಿಸಿ ಆರ್ಯರ ಮೇಲೆ ಏರಿಬರುತ್ತಲೇ ಇದ್ದರು ಆದರೆ ಹೀಗೆಯೇ ಎಷ್ಟು ದಿನ ಕಾದಾಡುವದು? ಅಲ್ಲದೆ ದ್ರಾವಿಡರ ಸಂಸ್ಕೃತಿ ಆರ್ಯರ ಮನಸ್ಸನ್ನೂ ಆರ್ಯರ ರೀತಿ-ನೀತಿಗಳು ದ್ರಾವಿಡರ ಮನಸ್ಸನ್ನೂ ಸೆಳೆದಿದ್ದವು ಈ ಕಾರಣಗಳಿಂದಾಗಿ ಇಬ್ಬರೂ ಸ್ನೇಹಸಂಬಂಧಗಳನ್ನು ಬಳೆಸಿಕೊಂಡರು ಹೀಗೆ ಆರ್ಯ-ದ್ರಾವಿಡ ಮಿಶ್ರ ಸಂಸ್ಕೃತಿಯೊಂದು ಉಂಟಾಯಿತು.

**ಆರ್ಯರ ರಾಜಕೀಯ ಪದ್ಧತಿ** — ಆರ್ಯರ ಒಂದೊಂದು ಬುಡಕಟ್ಟಿನ ಜನಕ್ಕೂ ಸಾಮಾನ್ಯವಾಗಿ ಒಬ್ಬೊಬ್ಬ ರಾಜನಿದ್ದನು ರಾಜನೇ ಇಲ್ಲದ ಜನಾಂಗದ ಜ್ಯೇಷ್ಠರಿಂದಲೇ ಆಡಳಿತ ನಡೆಸಲ್ಪಟ್ಟ "ಗಣ"ಗಳೂ ಹಲವು ಇದ್ದವು ರಾಜರು ನಿರಂಕುಶಪ್ರಭುಗಳಾಗಿರಲಿಲ್ಲ ಎಲ್ಲ ನಾಗರಿಕರನ್ನೂ ಒಳಗೊಂಡ "ಸಮಿತಿ"ಯೂ, ಸೇನಾನಿ, ಪುರೋಹಿತ ಮುಂತಾದ ಮುಖ್ಯಸ್ಥರನ್ನೊಳಗೊಂಡ 'ಸಭೆ'ಯೂ ರಾಜನಿಗೆ ನಲಹೆಗಳನ್ನು ಕೊಟ್ಟು, ಅವನು ಧರ್ಮಮಾರ್ಗದಲ್ಲಿ ನಡೆಯುವಂತೆ ಮಾಡುತ್ತಿದ್ದವು 'ಸಭೆ'ಯೇ ಮುಖ್ಯ ನ್ಯಾಯಾಸ್ಥಾನವಾಗಿತ್ತು

**ಆರ್ಯರ ಸಾಮಾಜಿಕ ಜೀವನ– (ಅ) ವರ್ಣವ್ಯವಸ್ಥೆ** — ಕಾದಾಟ ಕಡಿಮೆಯಾಗಿ, ಆರ್ಯರೂ ದ್ರಾವಿಡರೂ ಒಟ್ಟಾಗಿ ಬಾಳತೊಡಗಿ, ಶಾಂತಿ ನೆಲೆಸಿದಾಗ ಸಮಾಜದಲ್ಲಿ ಸಂಘಟನೆಯನ್ನು ಮಾಡುವುದು ಅವಶ್ಯವೆನಿಸಿತು ಆ ಕಾರಣದಿಂದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು ಹುಟ್ಟಿದವು ಇವೆಲ್ಲವೂ ಗುಣ-ಕರ್ಮಗಳಿಗ ತಕ್ಕಂತೆಯೇ ಆದವು ಹೊರತಾಗಿ ಕೀಳು-ಮೇಲುಗಳ ಕಲ್ಪನೆಯಿಂದ ಹುಟ್ಟಲಿಲ್ಲ, ಅಲ್ಲದೆ ತನ್ನ ಯೋಗ್ಯತೆಯ ಬಲದಿಂದ ಬೇಕಾದವರು ಬೇಕಾದ ವರ್ಣದಲ್ಲಿಯೂ ಸೇರಬಹುದಾಗಿದ್ದಿತು ವಿಶ್ವಾಮಿತ್ರನು ಮೊದಲು ಕ್ಷತ್ರಿಯನಿದ್ದು ಬಳಿಕ ಬ್ರಾಹ್ಮಣನಾದ ಕಥೆಯೇ ಇದಕ್ಕೆ ಸಾಕ್ಷಿ

ಈ ಸಮಾಜರಚನಯಲ್ಲಿ ಕ್ಷತ್ರಿಯ ಗುಂಪಿನ ಮುಖ್ಯಸ್ಥನೇ ಆ ಜನಾಂಗಕ್ಕೆ ಅರಸನಾಗುತ್ತಿದ್ದನು ಆತನಿಗೆ ಯೋಗ್ಯ ಸಲಹೆ-ಸೂಚನೆಗಳನ್ನು ಕೊಡುವದು ಬ್ರಾಹ್ಮಣವರ್ಗದ ಕೆಲಸವಾಗಿದ್ದಿತು

**(ಆ) ಸಾಮಾಜಿಕ ಸಂಘಟನೆ** — ವರ್ಣವ್ಯವಸ್ಥೆಯಿಂದ ಆರ್ಯ ಜನಾಂಗದಲ್ಲಿ ಒಬ್ಬರೊಬ್ಬರು ಪ್ರೀತಿಯಿಂದ ಬಾಳುವಂತಾಯಿತು ಮಾನವರೆಲ್ಲರೂ ಸಮಾನರು ಎಂಬ ತಿಳುವಳಿಕೆಯುಂಟಾಯಿತು "ಎಲ್ಲರೂ ಕೂಡಿಯೇ ಇರೋಣ, ಒಮ್ಮನಸ್ಸಿನಿಂದ ಬಾಳೋಣ, ಒಂದಾಗಿ ಕೆಲಸ ಮಾಡೋಣ, ಒಟ್ಟಾಗಿಯೇ ಊಟಉಡಿಗೆಗಳನ್ನು ನರವೇರಿಸೋಣ" ಎಂಬ ಮಂತ್ರಗಳನ್ನು ರಚಿಸಿ ಆರ್ಯರು ಹೇಳಿದ್ದು ಇದೇ ಉದ್ದೇಶದಿಂದ ಇದರಿಂದ ಸಾಮಾಜಿಕ ಸಂಘಟನೆ ದಿನದಿನಕ್ಕೆ ಬಲವತ್ತರವಾಯಿತು ಹೆಣ್ಣುಮಕ್ಕಳನ್ನು ಆ ಜನಾಂಗದವರು ಹೀನವಾಗಿ ತಿಳಿದಿರಲಿಲ್ಲ. ಅವರನ್ನೆಂದೂ ದಾಸ್ಯದಲ್ಲಿ ಮುಚ್ಚುಮರೆಯಲ್ಲಿಟ್ಟಂತೆ ಉಲ್ಲೇಖಗಳಿಲ್ಲ ಅನೇಕ ವೇದಮಂತ್ರಗಳನ್ನೂ ಸ್ತೋತ್ರಗಳನ್ನೂ ಹೆಂಗಸರೇ ರಚಿಸಿರುವರು

**ಧಾರ್ಮಿಕ ಜೀವನ** — ಆರ್ಯರ ಧಾರ್ಮಿಕ ಜೀವನವು ಬಳ್ಳೇ ಸುಂದರವಾಗಿದೆ. ಸೃಷ್ಟಿಯ ಪಂಚಮಹಾಭೂತಗಳ ಉಪಯೋಗವನ್ನು ಅವರು ಚೆನ್ನಾಗಿ

ತಿಳಿದಿದ್ದರು ಇದರಿಂದಲೇ ಇಂದ್ರ, ಅಗ್ನಿ, ವರುಣ, ಸೂರ್ಯ, ಚಂದ್ರ ಮೊದಲಾದ ದೇವತೆಗಳನ್ನು ಭಕ್ತಿಭಾವದಿಂದ ಪೂಜಿಸುತ್ತಿದ್ದರು ಅವುಗಳ ಪ್ರೀತಿಯನ್ನು ಸಂಪಾದಿಸುವದಕ್ಕೆ ಯಜ್ಞಯಾಗಗಳನ್ನು ಆರಂಭಮಾಡಿದರು ಆದರೆ, ಅವೆಲ್ಲವುಗಳ ಹಿಂದಿನ 'ದೇವನೊಬ್ಬ, ನಾಮ ಹಲವು,' ಎಂಬ ಸತ್ಯವನ್ನು ಅರಿತಿದ್ದರು ಪಾಪ-ಪುಣ್ಯ, ಪೂರ್ವಜನ್ಮ-ಪುನರ್ಜನ್ಮ, ಕರ್ಮ, ಧರ್ಮ, ತ್ಯಾಗ, ತಪಸ್ಸು ಮೊದಲಾದವುಗಳ ಬಗೆಗೂ ಎಷ್ಟೋ ವಿಮರ್ಶೆಗಳನ್ನು ನಡೆಸಿ ಸಿದ್ಧಾಂತಗಳನ್ನು ಕಂಡುಹಿಡಿದಿದ್ದರು

**ಉಪಜೀವನ-ಉದ್ಯೋಗಗಳು** — ಆರ್ಯ ಎಂದರೆ ಸುಧಾರಣೆ ಹೊಂದಿದವ—ಎಂಬ ಅರ್ಥವಿದೆ ಒಕ್ಕಲುತನವನ್ನು ಮಾಡುವವ ಎಂಬ ಅರ್ಥವನ್ನೂ ಕೆಲವರು ಮಾಡುತ್ತಾರೆ ಏಕೆಂದರೆ ಅವರು ಭಾರತದಲ್ಲಿ ಮೊತ್ತಮೊದಲು ಕೈಕೊಂಡದ್ದು ಒಕ್ಕಲುತನವೇ ಸರಿಯಾದ ಸಲಕರಣೆಗಳಿಂದ ಉತ್ತು ಬಿತ್ತಿ ಬೆಳೆಯುವ ಹಂಚಿಕೆ ಹೊರಟುದು ಆರ್ಯರಿಂದಲೇ ಎಂದು ಹೇಳಬಹುದು, ತಮ್ಮ ಹೊಲಗಳಲ್ಲಿ ಹೆಚ್ಚು ಧಾನ್ಯ ಬೆಳೆಯಬೇಕೆಂದು ಒಡ್ಡು ಒಡಕಲುಗಳನ್ನು ಮಾಡಿಕೊಳ್ಳುತ್ತಿದ್ದರು, ಕೆರೆಬಾವಿಗಳಿಂದ ನೀರನ್ನು ಪೂರೈಸಿಕೊಳ್ಳುತ್ತಿದ್ದರು. ಅವರ ಬೆಳೆಗಳಲ್ಲಿ ಗೋದಿ, ಸೆಜ್ಜೆಗಳು ಮುಖ್ಯವಾಗಿದ್ದವು ಬತ್ತವನ್ನು ಬೆಳೆಯುತ್ತಿರಲಿಲ್ಲವೆಂದು ತಿಳಿಯುತ್ತದೆ ನೂಲುವ ನೇಯುವ ಕಲೆಗಳೂ ಅವರಿಗೆ ಗೊತ್ತಿದ್ದವು

**ಬೇರೆ ಉದ್ಯೋಗಗಳು** — ಆರ್ಯರು ಸಾಗಾಟಕ್ಕೆ ಚಕ್ಕಡಿ-ರಥಗಳನ್ನೂ, ಕಾಳಗದಲ್ಲಿ ಉಪಯೋಗಿಸುವದಕ್ಕೆ ಬಿಲ್ಲು, ಬಾಣ, ಕತ್ತಿ, ಢಾಲುಗಳನ್ನೂ ಮಾಡಿಕೊಳ್ಳುತ್ತಿದ್ದರು ಬೆಳ್ಳಿ ಬಂಗಾರಗಳಿಂದ ಆಭರಣಗಳನ್ನು ಮಾಡುತ್ತಿದ್ದರು. ಕೊಡುಕೊಳ್ಳುವ ಸಲುವಾಗಿ ನಿಷ್ಕ ಎಂಬ ಚಿನ್ನದ ನಾಣ್ಯವನ್ನು ಮಾಡಿಕೊಂಡಿದ್ದರು

**ಸಾಹಿತ್ಯ ಮತ್ತು ಲಲಿತಕಲೆ** — ಆರ್ಯರ ಸಾಹಿತ್ಯದಲ್ಲಿ **ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳು** ಅತಿ ಮುಖ್ಯವಾದವು. ಅವೆಲ್ಲ, ಮಹರ್ಷಿಗಳು ತಮ್ಮ ಅನುಭೂತಿಯಿಂದ ಉಸುರಿದ ಕಾವ್ಯಗಳು ಹಾಗೂ ಉಪದೇಶಗಳು ಸಾಮವೇದವು ಸಂಗೀತಪ್ರಧಾನವಾಗಿದೆ ಋಕ್ ಮತ್ತು ಅಥರ್ವ ವೇದಗಳಿಂದ ಆ ಕಾಲದ ಸಾಮಾಜಿಕ ಸ್ಥಿತಿಯನ್ನು ನಾವು ತಿಳಿಯಬಹುದು ಅಥರ್ವವೇದದಲ್ಲಿ ಮದ್ದು-ಮಾಟಗಳ ವಿಚಾರವೂ ಅದೆ. ಈ ಮಂತ್ರಗಳನ್ನೆಲ್ಲ ಬರೆದಿಡುವ ಪದ್ಧತಿ ವಾಡಿಕೆಯಲ್ಲಿರಲಿಲ್ಲ. ಕೇವಲ ಕೇಳಿಕೆಯಿಂದಲೇ ಒಬ್ಬರಿಂದೊಬ್ಬರಿಗೆ ಸಾಗುತ್ತಿದ್ದವು. ಆದುದರಿಂದ ಇವುಗಳನ್ನು **ಶ್ರುತಿ** ಎಂದು ಹೇಳಿದರು.

ಚಿತ್ರಕಲೆ, ಸಂಗೀತಗಳಲ್ಲಿಯೂ ಆರ್ಯರಿಗೆ ಚೆನ್ನಾದ ಅಭ್ಯಾಸವಿತ್ತು. ಗಣಿತ, ಭೂಗೋಳ-ಖಗೋಳ ಹಾಗೂ ಭೂಮಿತಿ ಶಾಸ್ತ್ರಗಳಲ್ಲಿಯೂ ಅವರು ಮುಂದುವರಿದಿದ್ದರು

**ಮುಗಿತಾಯ** — ಕ್ರಿ ಪೂ ೨೦೦೦ ವರುಷಗಳ ಕೆಳಗೆ ಆರ್ಯರು ಭಾರತಕ್ಕೆ ಬಂದ ಮೇಲೆ ಇಲ್ಲಿಯೇ ನೆಲೆಸಿದರು, ಭಾರತೀಯ ಜೀವನವನ್ನು ಒಳ್ಳೇ ಮೇಲ್ಮಟ್ಟಕ್ಕೆ ಏರಿಸಿದರು. ಆಗ ಅವರು ರಚಿಸಿದ ವೇದೋಪನಿಷತ್ತು ಮೊದಲಾದ ಧರ್ಮಗ್ರಂಥಗಳು ಈಗಿನ ವಿದ್ವಾಂಸರಿಗೂ, ಇತಿಹಾಸ ಸಂಶೋಧಕರಿಗೂ ಹೊಸಹೊಸ ಸಾಮಗ್ರಿಯನ್ನು ಒದಗಿಸುತ್ತಲಿವೆ, ಇಂದಿನ ಜನ-ಜೀವನಕ್ಕೆ ಬೆಳಕನ್ನು ಕೊಡುತ್ತಲಿವೆ

## ಅಭ್ಯಸನಗಳು

೧. (ಅ) ನಾಲ್ಕು ವರ್ಣಗಳು ಯಾವವು?

(ಆ) ನಾಲ್ಕು ವೇದಗಳು ಯಾವವು? ಅವುಗಳಿಗೆ ಶ್ರುತಿಗಳಂಬ ಹೆಸರು ಯಾಕ ಬಂದಿತು?

(ಇ) ಯಾವ ಯಾವ ಕಲೆ ಹಾಗೂ ಶಾಸ್ತ್ರಗಳಲ್ಲಿ ಆರ್ಯರಿಗ ಚೆನ್ನಾದ ಅಭ್ಯಾಸವಿತ್ತು?

(ಈ) ಆರ್ಯರ ಉಪಜೀವನದ ಉದ್ಯೋಗಗಳು ಯಾವವು?

೨ ಕಂಸದಲ್ಲಿದ್ದ ಶಬ್ದಗಳಲ್ಲಿ ಸರಿಯಾದ ಶಬ್ದವನ್ನು ಎತ್ತಿಕೊಂಡು ವಾಕ್ಯಗಳನ್ನು ಪೂರ್ಣ ಮಾಡಿರಿ

(ಅ) ಆರ್ಯರು (ಆಗ್ನೇಯ, ವಾಯವ್ಯ, ಈಶಾನ್ಯ) ದಿಕ್ಕಿನಿಂದ ಭಾರತವನ್ನು ಹೊಕ್ಕರು

(ಆ) ಆರ್ಯ-ದ್ರಾವಿಡ ಯುದ್ಧಗಳೇ ಮುಂದೆ (ದೇವ-ಮಾನವ, ಸ್ಪೃಶ್ಯಾಸ್ಪೃಶ್ಯ, ಸುರಾಸುರ) ಯುದ್ಧಗಳೆಂದು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿವೆ

(ಇ) ಸಮಾಜದಲ್ಲಿ ನಾಲ್ಕು ವರ್ಣಗಳು ಹುಟ್ಟಿದವು ಇವು (ಗುಣಕರ್ಮ, ಜನ್ಮ, ಬಣ್ಣ)ಗಳಿಗೆ ತಕ್ಕಂತೆಯೇ ಆದವು

(ಈ) ಪಂಚಮಹಾಭೂತಗಳ ಪ್ರೀತಿಯನ್ನು ಸಂಪಾದಿಸುವದಕ್ಕೆ ಅವರು (ಉದ್ಯೋಗ, ಕುಣಿತ ಯಜ್ಞ-ಯಾಗ)ಗಳನ್ನು ಪ್ರಾರಂಭಿಸಿದರು.

(ಉ) ಕ್ರಿ ಶ ಪೂ (ಐದು ಸಾವಿರ, ಎರಡೂವರೆ ಸಾವಿರ, ಒಂದು ಸಾವಿರ) ವರ್ಷಗಳ ಸುಮಾರಿಗೆ ಆರ್ಯರು ಭರತಖಂಡಕ್ಕ ಬಂದರು.

# ೪ ಆರ್ಯರ ಅಭ್ಯುದಯ

(ಕ್ರಿ ಪೂ ೧೪೦೦—ಕ್ರಿ. ಪೂ. ೬೦೦)

**ರಾಜ್ಯ ನಿರ್ಮಾಣ** —ಆರ್ಯರು ಗಂಗಾ ಯಮುನೆಗಳ ಬೈಲಿನಲ್ಲಿ ನೆಲೆಸಿದ ಮೇಲೆ ಸುಖವಾಗಿಯೇ ಕಾಲವನ್ನು ಕಳೆಯುವಂತಾಯಿತು ಅವರಿಗೆ ತಮ್ಮ ಜನಸಂಖ್ಯೆಯ ಬೆಂಬಲವು ಹೆಚ್ಚಾಗಿದ್ದಿತು, ಶೂರರೆನಿಸಿದ ದ್ರಾವಿಡರು ಮಿತ್ರರಾಗಿದ್ದರು, ದಸ್ಯುಗಳಂತೂ ಇದಿರಾಗುವಂತಿರಲಿಲ್ಲ! ಎಂದಮೇಲ ಮುಂದೆ ಸಾಗಲಿಕ್ಕೆ ಮತ್ತೆ ಹೊಸ ಏರ್ಪಾಡುಗಳನ್ನು ಮಾಡಿಕೊಂಡರು.

ಈ ಹೊತ್ತಿಗ ಆರ್ಯರಲ್ಲಿಯೇ ಅನೇಕ ಗುಂಪುಗಳಾಗಿದ್ದವು, ಅವು ಬೇರೆ ಬೇರೆ ಕಡೆಗಳಲ್ಲಿ ನೆಲೆಸಿದ್ದವು ಆಯಾ ಗುಂಪಿನವರು ತಮ್ಮದೇ ಆದ ಪ್ರದೇಶವನ್ನು ಗೊತ್ತುಮಾಡಿಕೊಂಡರು, ಅದನ್ನು ತಮ್ಮ ಮುಖ್ಯಸ್ಥನ ಹೆಸರಿನ ರಾಜ್ಯವಂದು ಕರೆಯಹತ್ತಿದರು! ಹೀಗೆ ಹಲವು ರಾಜ್ಯಗಳು ನಿರ್ಮಾಣವಾದವು, ಹಸ್ತಿನಾಪುರದಲ್ಲಿ **ಕುರುರಾಜ್ಯ,** ಕಾಂಪಿಲ್ಯದಲ್ಲಿ **ಪಾಂಚಾಲ ರಾಜ್ಯ,** ಅಯೋಧ್ಯದಲ್ಲಿ **ಕೋಸಲರಾಜ್ಯ,** ಬಿಹಾರದಲ್ಲಿ **ವಿದೇಹರಾಜ್ಯ** ಮುಂತಾದವೇ ಈ ರಾಜ್ಯಗಳು ಇವುಗಳಲ್ಲಿ ಕೋಸಲ ಮತ್ತು ಕುರುರಾಜ್ಯಗಳು ದೊಡ್ಡವು ಅವುಗಳನ್ನು ಹೊಂದಿಕೊಂಡೇ ಉಳಿದ ರಾಜ್ಯಗಳು ಬಾಳುತ್ತಿದ್ದವು.

**ಗ್ರಂಥರಚನೆ** —ಬರಬರುತ್ತ ವೇದಗಳಲ್ಲಿ ಪ್ರತಿಪಾದಿತವಾದ ವಿಷಯಗಳನ್ನು ಕುರಿತು, ಹೆಚ್ಚು ವಿಚಾರ ಮಾಡತೊಡಗಿದರು ದಿನದಿನದ ಗೊಂದಲವನ್ನು ತ್ಯಜಿಸಿ, ತತ್ತ್ವಚಿಂತನೆಯಲ್ಲಿಯೇ ತೊಡಗಿದ ಜ್ಞಾನಿಗಳು ಆರಣ್ಯಕ-ಉಪನಿಷತ್ತು ಮುಂತಾದ ಉದ್ಗ್ರಂಥಗಳನ್ನು ರಚಿಸಿದರು ಸೂತ್ರರೂಪವಾಗಿ ಧರ್ಮ-ನ್ಯಾಯ-ಗೃಹಸ್ಥಜೀವನ ಮುಂತಾದವನ್ನು ಕುರಿತ ಗ್ರಂಥಗಳೂ ಉಂಟಾದವು

**ಪುರಾಣಗಳು** —ರಾಜ್ಯಗಳು ನಿರ್ಮಾಣವಾದ ಮೇಲೆ ಅವುಗಳ ಚರಿತ್ರೆಯನ್ನೊಳಗೊಂಡ ಕತೆಗಳು ಹುಟ್ಟಿದವು ಅವೇ ಪುರಾಣಗಳು. ಈ ಪುರಾಣಗಳಲ್ಲಿ ಕೋಸಲದೇಶದ ಕತೆಯಾದ ರಾಮಾಯಣವೂ, ಕುರುದೇಶದ ಕತೆಯಾದ ಮಹಾಭಾರತವೂ ಪ್ರಸಿದ್ಧವಾಗಿವೆ ಇವೆರಡರಿಂದಲೇ ಉಳಿದೆಲ್ಲ ರಾಜ್ಯಗಳ ಆಗುಹೋಗುಗಳು ನಮಗೆ ತಿಳಿಯುತ್ತಿವೆ

**ರಾಮಾಯಣ** —ಕೋಸಲರಾಜ್ಯದಲ್ಲಿ ಹಲವು ಜನ ಅರಸುಗಳಾದರು ಅವರಲ್ಲಿ ಶ್ರೀರಾಮಚಂದ್ರನೇ ಶ್ರೇಷ್ಠನಾದ ದೊರೆ, ಅಲ್ಲದೆ, ಆತನು ವಿಷ್ಣುವಿನ ಅವತಾರವೆಂದೂ ಕಲ್ಪನೆಯಿದೆ ಅದಕ್ಕಾಗಿಯೇ ವಾಲ್ಮೀಕಿ ಋಷಿಗಳು ಆತನ ಹೆಸರಿನಿಂದಲೇ ಕೋಸಲದೇಶದ ಚರಿತ್ರವನ್ನು ರಾಮಾಯಣವೆಂದು ಬರೆದಿದ್ದಾರೆ. ರಾಮಾಯಣವೆಂದರೆ ಶ್ರೀರಾಮನ ಜೀವನಚರಿತ್ರೆ.

**ರಾಮಾಯಣದ ಕತೆ** — ಕೋಸಲವಂಶದ ದಶರಥನೆಂಬ ರಾಜನಿಗ ನಾಲ್ವರು ಮಕ್ಕಳು ಹಿರಿಯ ಮಗ ಶ್ರೀರಾಮಚಂದ್ರ ಈತನಿಗೆ ಮಿಥಿಲಾ ದೇಶದ ದೊರೆಯ ಮಗಳು ಸೀತಾದೇವಿ ಹೆಂಡತಿ ರಾಮನಿಗೆ ಪಟ್ಟಾಭಿಷೇಕದ ಸಮಯದಲ್ಲಿ ಮಲತಾಯಿ ಆತಂಕವನ್ನು ತರುತ್ತಾಳ ಅದರಿಂದ ಅವನು ಹೆಂಡತಿ ಮತ್ತು ತಮ್ಮ ಲಕ್ಷ್ಮಣನೊಡನ ಕಾಡಿಗೆ ಹೋಗುತ್ತಾನೆ ಅಲ್ಲಿ ಸಿಂಹಳ ದ್ವೀಪದ ದೊರೆಯಾದ ರಾವಣನು ಸೀತಯನ್ನು ಕದ್ದೊಯ್ಯುತ್ತಾನ ಮುಂದೆ ರಾಮಚಂದ್ರನು ಕಿಷ್ಕಿಂಧಯ ದೊರೆಯಾದ ಸುಗ್ರೀವನ ಗೆಳೆತನವನ್ನು ಮಾಡುತ್ತಾನ ಶೂರ ಸೇನಾನಾಯಕ ಹನುಮಂತನು ಸೀತೆಯನ್ನು ಹುಡುಕಿ ಸುದ್ದಿಯನ್ನು ತರುತ್ತಾನೆ ಇವರ ಸಹಾಯದಿಂದ ರಾಮಚಂದ್ರನು ರಾವಣನನ್ನು ಕೊಂದು ಸೀತೆಯನ್ನು ತರುತ್ತಾನೆ ಆ ಮೇಲೆ ರಾಮನಿಗೆ ಪಟ್ಟಾಭಿಷೇಕವಾಗುತ್ತದೆ ಇದೇ ಮುಖ್ಯ ಕತೆ



ರಾಮನು ಲಕ್ಷ್ಮಣಸೀತೆಯೊಡನೆ ಯಮುನಾನದಿಯನ್ನು ದಾಟುವುದು

**ರಾಮಾಯಣ ಕಾಲದ ಸ್ಥಿತಿಗತಿ** — ರಾಮಾಯಣವನ್ನು ಬರೆದವನು ಕವಿ ವಾಲ್ಮೀಕಿ. ಅವನು 'ಆದಿಕವಿ' ಎಂತಲೂ ಪ್ರಸಿದ್ಧನಿದ್ದಾನ ಈ ಮಹಾ ಕಾವ್ಯವು ತುಂಬಾ ರಮಣೀಯವಾಗಿದೆಯಲ್ಲದೆ, ಅದರಲ್ಲಿಯ ಶೋಕರಸದ ಪ್ರಸಂಗಗಳು ಓದುಗರ ಮನಸ್ಸನ್ನು ಕರಗಿಸುತ್ತವೆ ರಾಮನನ್ನು ಅವತಾರಿ ಪುರುಷನೆಂದೂ, ಆದರ್ಶಪುತ್ರ, ಆದರ್ಶಪತಿ, ಆದರ್ಶರಾಜನೆಂದೂ ಬಣ್ಣಿಸಲಾಗಿದೆ ರಾಮರಾಜ್ಯವು ಸುಖ-ಸಮೃದ್ಧಿಗಳ ಬೀಡಾಗಿದ್ದಿತು. ಅದಕ್ಕಾಗಿಯೇ 'ರಾಮರಾಜ್ಯ' ಎಂಬುದು ಗಾದಯ ಮಾತಿನಂತೆ ಬಳಕೆಯಲ್ಲಿದೆ ಆ ಕಾಲದಲ್ಲಿ ಪ್ರಜೆಗಳಿಗೆ ಹೊಟ್ಟೆ-ಬಟ್ಟೆಗಳ ಚಿಂತೆಯಿರಲಿಲ್ಲ, ಜನರಲ್ಲಿ ದ್ವೇಷ ಅಸೂಯೆಗಳು ಇರಲಿಲ್ಲ ಸ್ನೇಹ-ಬಂಧುಪ್ರೇಮಗಳು ಮನೆಮನೆಗೆ ಕಾಣು

ತ್ತಿದ್ದವು, ನೀತಿ-ನಡೆವಳಿಕೆಗಳು ಉತ್ತಮತರಗತಿಯವು ಇದ್ದವು, ರಾಜ-ಪ್ರಜೆಗಳಲ್ಲಿ ತಂದೆ-ಮಕ್ಕಳಂತೆ ವಾತ್ಸಲ್ಯದ ಸಂಬಂಧವಿದ್ದಿತು, ತಮ್ಮ ತಮ್ಮ ಉಪಜೀವನದ ಉದ್ಯೋಗಗಳನ್ನು ಎಲ್ಲರೂ ಮನಮುಟ್ಟಿ ಮಾಡುತ್ತಿದ್ದರು, ಉದ್ಯೋಗಗಳಲ್ಲಿ ಕೀಳು-ಮೇಲುಗಳಿರಲಿಲ್ಲ, ಎಲ್ಲರೂ ಪಾಪಕ್ಕೆ ಹೆದರಿ ತಮ್ಮ ತಮ್ಮ ಧರ್ಮಾಚರಣೆಯಲ್ಲಿ ನಿರತರಾಗಿದ್ದರು, ಯಜ್ಞಯಾಗಾದಿಗಳು ಬಹಳ ಬಳಕೆಯಲ್ಲಿದ್ದವು ಏಕಪತ್ನೀವ್ರತದ ಆಚರಣೆಗ ತುಂಬಾ ಮಹತ್ವವಿದ್ದಿತು

**ರಾಜಕೀಯ ಜೀವನ** — ರಾಜನಿಗ ಬುದ್ಧಿವಂತರಾದ ಮಂತ್ರಿಗಳಿರುತ್ತಿದ್ದರು ಇವರೆಲ್ಲರ ನೆರನಿನಿಂದಲೇ ರಾಜನು ಎಲ್ಲ ನ್ಯಾಯಾನ್ಯಾಯಗಳನ್ನು ನಿರ್ಣಯಿಸುತ್ತಿದ್ದನು ರಾಜನಲ್ಲಿ ಚತುರಂಗಸೇನೆಯಿರುತ್ತಿದ್ದಿತು ಸ್ವತಃ ರಾಜನೇ ರಥದಲ್ಲಿ ಕುಳಿತು ಯುದ್ಧಕ್ಕ ಹೊರಡುತ್ತಿದ್ದನು ಬಿಲ್ಲು, ಬಾಣ, ಖಡ್ಗ, ಢಾಲುಗಳೇ ಅವರ ಮುಖ್ಯ ಆಯುಧಗಳು ಸುವರ್ಣನಾಣ್ಯಗಳು ಕೊಡು-ಕೊಳ್ಳುವ ಸಾಧನಗಳಾಗಿದ್ದವು

**ಉಪಜೀವನ** — ಆ ಕಾಲಕ್ಕ ಒಕ್ಕಲುತನ ಒಳ್ಳೇ ಊರ್ಜಿತವಾಗಿದ್ದಿತು ಬೇರೆ ಕಲೆ-ಕೈಗಾರಿಕಗಳೂ ಬಳೆದಿದ್ದವು ನೃತ್ಯ-ಸಂಗೀತಾದಿಗಳೂ ಹೆಚ್ಚಾಗಿ ರೂಢಿಯಲ್ಲಿದ್ದವು ಕವಿಗಳಿಗ ರಾಜಾಶ್ರಯವು ಸಿಗುತ್ತಿದ್ದಿತು

**ಮಹಾಭಾರತ** — ಕುರುದೇಶದ ದೊರೆಗಳಾದ ಕೌರವ-ಪಾಂಡವರ ಚರಿತ್ರೆಯೇ ಮಹಾಭಾರತ ವ್ಯಾಸಮಹರ್ಷಿಗಳು ಈ ಚಂದ್ರವಂಶದ ಅರಸರ ಚರಿತ್ರೆಯನ್ನು ಸುಂದರವಾಗಿ ಹೇಳಿದಿದ್ದಾರೆ ಮನುಷ್ಯನ ದಿನದ ಜೀವನಕ್ಕೂ ದೇಹಾನಂತರದ ಗತಿಗೂ ಬೇಕಾಗುವ ಎಲ್ಲ ವಿಷಯಗಳನ್ನೂ ಈ ಗ್ರಂಥದಲ್ಲಿ ಕಂಡುಕೊಳ್ಳಬಹುದು.

**ಮಹಾಭಾರತದ ಕತೆ** — ಕುರುಸಂತಾನದಲ್ಲಿ ಧೃತರಾಷ್ಟ್ರ ಮತ್ತು ಪಂಡು ಎಂಬ ಇಬ್ಬರು ರಾಜಕುಮಾರರು. ಧೃತರಾಷ್ಟ್ರನು ಕುರುಡನಿದ್ದುದರಿಂದ ತಮ್ಮನಾದ ಪಂಡುವು ಪಟ್ಟವೇರಿದನು ಧೃತರಾಷ್ಟ್ರನಿಗೆ ನೂರಾಬಂದು ಮಕ್ಕಳು ಇವರೇ ಕೌರವರು. ಪಂಡುವಿಗ ಐವರು ಮಕ್ಕಳು, ಇವರೇ ಪಾಂಡವರು ಕೌರವ ಮತ್ತು ಪಾಂಡವರಲ್ಲಿ ದ್ವೇಷವು ದಿನದಿನಕ್ಕ ಬೆಳೆಯ ಹತ್ತಿತು. ಕಡೆಗ ಕೌರವರು ಜೂಜಾಟದಲ್ಲಿ ಪಾಂಡವರನ್ನು ಸೋಲಿಸಿ ಅವರನ್ನು ವನಕ್ಕೆ ಅಟ್ಟಿದರು. ವನವಾಸವನ್ನು ಮುಗಿಸಿದ ಮೇಲೆ ಪಾಂಡವರು ತಮ್ಮ ಅರ್ಧರಾಜ್ಯವನ್ನು ಬೇಡಿದರು ಕೌರವರು ಕೊಡಲಿಲ್ಲ ಅದರಿಂದ ಕುರುಕ್ಷೇತ್ರದಲ್ಲಿ ಭಾರತಯುದ್ಧವು ಆರಂಭವಾಯಿತು ಅದರಲ್ಲಿ ಕೌರವರೆಲ್ಲರು ಸತ್ತರು ಪಾಂಡವರಿಗೆ ಗೆಲವಾಯಿತು. ಧರ್ಮರಾಜನು ಪಟ್ಟಕ್ಕೆ ಕುಳಿತನು.

ಇದರಲ್ಲಿಯೇ ಯಾದವರ ದೊರೆಯಾದ ಶ್ರೀಕೃಷ್ಣನ ಚರಿತ್ರೆಯೂ ಬರುತ್ತದೆ ಧರ್ಮವನ್ನೇ ಅವಲಂಬಿಸಿದ್ದ ಪಾಂಡವರಿಗೆ ಹೆಜ್ಜೆಹೆಜ್ಜೆಗೂ ಕೃಷ್ಣನ ಸಾಹಾಯ್ಯವು ಇದ್ದೇ ಇದ್ದಿತು

**ಮಹಾಭಾರತದ ಮಹತ್ವ**—ಮಹಾಭಾರತದ ಒಂದೊಂದು ಪಾತ್ರವು ಒಂದೊಂದು ಗುಣಕ್ಕೆ ಆದರ್ಶವಾಗಿದೆ ಶ್ರೀಕೃಷ್ಣನ ರಾಜಕಾರಣಪಟುತ್ವ, ಧರ್ಮರಾಜನ ಶಾಂತಿ-ಅಹಿಂಸಾನಿಷ್ಠೆಗಳು, ಭೀಮನ ವ್ಯವಹಾರನಿಷ್ಠುರತೆ, ಅರ್ಜುನನ ಧನುರ್ವಿದ್ಯಾಕೌಶಲ್ಯ, ಭೀಷ್ಮರ ಬ್ರಹ್ಮಚರ್ಯ, ದ್ರೋಣಾಚಾರ್ಯರ ಗುರುಗೌರವ, ದ್ರೌಪದಿಯ ವಾದಚಾತುರ್ಯ ಕರ್ಣನ ದಾನ, ದುರ್ಯೋಧನನ ಛಲ, ಅಭಿಮನ್ಯುವಿನ ಕ್ಷಾತ್ರತೇಜ, ಶಕುನಿಯ ಸ್ವಾರ್ಥ-ಸಾಧಕತೆ ಇವು ಮಹಾಭಾರತದ ಕಾವ್ಯರಸವನ್ನು ಹೆಚ್ಚಿಸಿವೆ

**ಭಗವದ್ಗೀತೆ**—ಮಹಾಭಾರತದಲ್ಲಿ ಭಗವದ್ಗೀತೆ ಒಂದು ಒಳಭಾಗವಾಗಿದೆ ಭಾರತಯುದ್ಧದ ಆರಂಭದಲ್ಲಿ ಶ್ರೀಕೃಷ್ಣನು ಅರ್ಜುನನ ರಥವನ್ನು ಕುರುಕ್ಷೇತ್ರದ ಮಧ್ಯದಲ್ಲಿ ನಿಲ್ಲಿಸುತ್ತಾನೆ ಅರ್ಜುನನು ಎರಡೂ ಪಕ್ಷಗಳಲ್ಲಿಯ ಬಂಧುಬಾಂಧವರನ್ನು ನೋಡಿ, ಅವರನ್ನು ಕೊಲ್ಲಲಾರದೆ ಶಸ್ತ್ರಾಸ್ತ್ರಗಳನ್ನು ಚೆಲ್ಲಿಬಿಡುತ್ತಾನೆ ಆಗ ಶ್ರೀಕೃಷ್ಣನು—ಯಾವ ಫಲಾಪೇಕ್ಷೆಯೂ ಇಲ್ಲದೆ ತನ್ನ ಕರ್ತವ್ಯಗಳನ್ನು ನೆರವೇರಿಸುವದು ಪುಣ್ಯಸಾಧನವೇ ಆಗಿದೆ ನೀನು ಕ್ಷತ್ರಿಯನು, ಇದಿರಿಸಿದವರನ್ನು ಇರಿದು ಹಾಕಬೇಕಾದುದು ಕ್ಷತ್ರಿಯನ ಕರ್ತವ್ಯವು ಕ್ಷಾತ್ರಧರ್ಮಕ್ಕೆ ತಕ್ಕಂತೆ ಯುದ್ಧವನ್ನು ಮಾಡು ಇದರಲ್ಲಿ ಪಾಪಕ್ಕ ಅವಕಾಶವಿಲ್ಲ—ಎಂದು ಹೇಳಿ, ಅರ್ಜುನನನ್ನು ಯುದ್ಧಕ್ಕೆ ತೊಡಗಿಸುತ್ತಾನೆ ಇದೇ ಭಗವದ್ಗೀತೆಯ ಸಾರವು ಇದಲ್ಲದೆ, ಅದರಲ್ಲಿ ಹಿಂದೂ ಧರ್ಮದ ನಾನಾ ದರ್ಶನಗಳ ಚರ್ಚೆಯೂ ವಿಮರ್ಶೆಯೂ ಬಹಳ ಸರಳ ರೀತಿಯಲ್ಲಿ ವಿವರಿಸಲ್ಪಟ್ಟಿವೆ

**ರಾಜಕೀಯ ಜೀವನ**—ಆಗಿನ ರಾಜನನ್ನು, ರಾಜಮನೆತನಕ್ಕೆ ಸೇರಿದ ರಾಜಕುಮಾರರೊಳಗಿಂದ ಪ್ರಜೆಗಳೇ ಆರಿಸುತ್ತಿದ್ದರು ರಾಜಸಭೆಯಲ್ಲಿ ಅರಸನ ಆಲೋಚನಾ ಮಂಡಲವು ಇರುತ್ತಿದ್ದಿತು ಅದರಲ್ಲಿ ನಾಲ್ವರು ಬ್ರಾಹ್ಮಣರು, ಎಂಟು ಜನ ವೀರ ಕ್ಷತ್ರಿಯರು, ಇಪ್ಪತ್ತೊಂದು ಜನ ಸಿರಿವಂತ ವೈಶ್ಯರು, ಮೂವರು ಸದಾಚಾರಿಗಳಾದ ಶೂದ್ರರು ಇರುತ್ತಿದ್ದರು ರೈತರ ಹುಟ್ಟುವಳಿಯ ಆರನೆಯ ಅಂಶವೇ ರಾಜ್ಯದ ಆದಾಯವಾಗಿದ್ದಿತು ವರ್ತಕರ ಮೇಲೆ ಉತ್ಪನ್ನದ ಕರವನ್ನು ಹಾಕುತ್ತಿದ್ದರು

**ಸಾಮಾಜಿಕ ಜೀವನ**—ಆ ಕಾಲಕ್ಕೆ ಅಲ್ಲಲ್ಲಿ ದೊಡ್ಡ ಪಟ್ಟಣಗಳು ಹುಟ್ಟಿದವು ಅವುಗಳ ಸುತ್ತಲೂ ಕೋಟೆ-ಕಂದಕಗಳಿರುತ್ತಿದ್ದವು ಜನರಲ್ಲಿ

ಚಾತುರ್ವರ್ಣ್ಯದ ಬಳಕೆ ಬಲವಾಗಿತ್ತು ಆಕಳುಗಳೇ ಆಗಿನ ಜನರ ಹೆಚ್ಚಿನ ಸಂಪತ್ತಾಗಿದ್ದವು. ಮಹಾಭಾರತದಲ್ಲಿ ಉಕ್ತವಾಗಿರುವ **ಗೋಗ್ರಹಣ** ದಿಂದಾದ ಯುದ್ಧವೇ ಈ ಮಾತಿಗೆ ಬೆಂಬಲವಾಗಿದೆ ಮದುವೆಯ ಪದ್ಧತಿಗಳು ಮಾತ್ರ ಬಗೆಬಗೆಯಾಗಿದ್ದವು

**ಧಾರ್ಮಿಕ ಜೀವನ** -- ವಾಜಪೇಯ, ರಾಜಸೂಯ, ಅಶ್ವಮೇಧ ಮುಂತಾದ **ಯಜ್ಞಯಾಗಾದಿಗಳು** ಈ ಕಾಲದಲ್ಲಿ ಹೆಚ್ಚಾಗಿಯೇ ಬಳಕೆಯಲ್ಲಿದ್ದವೆಂದು ತೋರುತ್ತಿದೆ ದೇವತೆಗಳ ಪ್ರೀತಿಗಾಗಿ ಅಲ್ಲದೆ ತಮ್ಮ ಇಚ್ಛೆಯನ್ನು ನೆರವೇರಿಸಿಕೊಳ್ಳುವುದಕ್ಕೂ ಬಗಬಗೆಯ ಯಜ್ಞಗಳು ಬಳಕೆಯಲ್ಲಿದ್ದವು

**ಲಲಿತ-ಕಲಾಕೌಶಲ್ಯ** — ಕಲೆ-ಕೈಗಾರಿಕೆಗಳು ಉತ್ತಮ ಸ್ಥಿತಿಯಲ್ಲಿಯೆ ಇದ್ದಿರಬೇಕು ಮಹಾಭಾರತದಲ್ಲಿ ವಿವರಿಸಲಾಗಿರುವ ಮಯಸಭೆಯ ರಚನೆ, ಅರಗಿನ ಮನೆಯ ಕಟ್ಟಡ ಇವು ಉತ್ತಮ ಕಲಾಕೃತಿಗಳೆಂದು ಹೇಳಬಹುದು ಕ್ಷಾತ್ರವಿದ್ಯೆ, ಜ್ಯೋತಿಷ ಮುಂತಾದ ಶಾಸ್ತ್ರಗಳೂ ಉಚ್ಚ ಸ್ಥಿತಿಯಲ್ಲಿದ್ದವು

## ಅಭ್ಯಾಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ವಾಕ್ಯದಲ್ಲಿ ಉತ್ತರ ಬರೆಯಿರಿ

(ಅ) ಯಾವ ಪುರಾಣಗಳು ಪ್ರಸಿದ್ಧವಾಗಿವೆ?

(ಆ) ರಾವಣನನ್ನು ಕೊಂದು ಸೀತೆಯನ್ನು ತಿರುಗಿ ತರುವ ಕೆಲಸದಲ್ಲಿ ರಾಮಚಂದ್ರನಿಗೆ ಯಾರ ಯಾರ ಸಹಾಯ ಸಿಕ್ಕಿತು?

(ಇ) ಭಗವದ್ಗೀತೆಯ ಸಾರ ಯಾವ ಮಾತಿನಲ್ಲಿ ಅಡಕವಾಗಿದೆ?

(ಈ) ಮಹಾಭಾರತ ಯುದ್ಧದಲ್ಲಿ ಪ್ರಮುಖ ಪಾತ್ರ ಯಾರದು?

೨ ಕೆಳಗೆ ಎರಡು ಭಾಗಗಳಿವೆ ಒಂದರಲ್ಲಿ ವ್ಯಕ್ತಿಗಳ ಹೆಸರುಗಳಿವೆ, ಇನ್ನೊಂದರಲ್ಲಿ ಕೆಲವು ಮಾತುಗಳಿವೆ ಐತಿಹಾಸಿಕ ದೃಷ್ಟಿಯಿಂದ ಸರಿಯಾಗುವಂತೆ ವ್ಯಕ್ತಿಯ ಹೆಸರನ್ನೂ ಆ ವ್ಯಕ್ತಿಗೆ ಸಂಬಂಧಿಸಿದ ಮಾತನ್ನೂ ಜೋಡಿಸಿ ಬರೆಯಿರಿ

| | |
|---|---|
| ವಾಲ್ಮೀಕಿ ಋಷಿಯು | ಸುಗ್ರೀವನ ಗೆಳೆತನವನ್ನು ಮಾಡುತ್ತಾನೆ |
| ಧೃತರಾಷ್ಟ್ರನು | ಅರ್ಜುನನನ್ನು ಯುದ್ಧಕ್ಕೆ ತೊಡಗಿಸುತ್ತಾನೆ |
| ಕರ್ಣನು | ನೂರಾಒಂದು ಮಕ್ಕಳ ತಂದೆ |
| ಶ್ರೀ ಕೃಷ್ಣನು | ರಾಮಾಯಣವನ್ನು ಬರೆದಿದ್ದಾನೆ |
| ರಾಮಚಂದ್ರನು | ದಾನಶೂರನು. |

೩ ಬಿಟ್ಟ ಸ್ಥಳದಲ್ಲಿ ಸರಿಯಾದ ಶಬ್ದಗಳನ್ನು ತುಂಬಿ ಬರೆಯಿರಿ.

ಮಹಾಭಾರತದ ಒಂದೊಂದು ಪಾತ್ರವು ಒಂದೊಂದು——ಕ್ಕೆ ಆದರ್ಶ. ಧರ್ಮರಾಜನ——, ಭೀಷ್ಮರ——, ಶ್ರೀಕೃಷ್ಣನ——, ದುರ್ಯೋಧನನ——, ಅರ್ಜುನನ—— ಮೊದಲಾದವು ಪ್ರಸಿದ್ಧವಾಗಿವೆ.

## ಪ್ರಾಚೀನ ಭಾರತ


ಪ್ರಮಾಣ = ೧೦೦ ವರ್ಷಗಳು
ಕ್ರಿಸ್ತಪೂರ್ವ
೩೫೦೦
೩೨೫೦
ಸಿಂದೂನದೀ ಸಂಸ್ಕೃತಿ
೩೦೦೦
೨೭೫೦
೨೫೦೦
೨೦೦೦
೧೫೦೦
೧೨೦೦
ಭಾರತಕ್ಕೆ ಆರ್ಯರ ಆಗಮನ
ಋಗ್ವೇದ ರಚನೆ
೧೦೦೦
ವೈದಿಕ ಸಾಹಿತ್ಯ ರಚನೆ
೮೦೦
ರಾಮಾಯಣ - ಮಹಾಭಾರತ ರಚನ
೬೦೦
೫೦೦
೫೦೦
ಮಹಾಜನ ಪದಗಳು

# ೫ ಹೊಸ ಧರ್ಮಗಳ ಹುಟ್ಟುವಿಕೆ

**ತತ್ತ್ವವಿಮರ್ಶೆ** — ಆರ್ಯಸಂಸ್ಕೃತಿ ಬೆಳೆಬೆಳೆದಂತೆ ಅದರಲ್ಲಿ ತತ್ತ್ವಕ್ಕಿಂತ ತಂತ್ರಗಳ ತೊಡಕು ಹೆಚ್ಚಾಗಹತ್ತಿತು ಮನುಷ್ಯನು ತನ್ನ ಜೀವನದ ಆಗು ಹೋಗುಗಳ ವಿಚಾರಗಳಿಗೆ ಅವಕಾಶ ಕೊಡುತ್ತಿರಲಿಲ್ಲ ಬರಿಯ ಯಜ್ಞ ಯಾಗಾದಿಗಳ ಮಹತ್ತ್ವವೇ ದಿನದಿನಕ್ಕೆ ಬೆಳೆಯಿತು ಇವುಗಳ ಹೊರತು ಮೋಕ್ಷವು ಸಾಧ್ಯವಿಲ್ಲೆಂದು ಹಲವು ಪ್ರತಿಭಾವಂತರು ಪ್ರತಿಪಾದಿಸಹತ್ತಿದರು ಇದರಿಂದ ಪ್ರತಿದಿನವೂ ಪ್ರಾಣಿಗಳ ಹಿಂಸೆಯಾಗಹತ್ತಿತು ಇದು ಕೆಲವು ಕೋಮಲ ಮನಸ್ಸಿನವರನ್ನು ನೋಯಿಸುವದು ಸ್ವಾಭಾವಿಕವಾಯಿತು, ಅಲ್ಲದೆ, ಯಜ್ಞಯಾಗಾದಿಗಳಿಂದ ಸಿಗುವ ಸ್ವರ್ಗಕ್ಕಿಂತ, ಜನನ-ಮರಣದ ಚಕ್ರದಿಂದ ಪಾರಾಗಲು ಮೋಕ್ಷಸಾಧನೆಯೇ ಮುಖ್ಯವೆನಿಸಿತು ಅದಕ್ಕಾಗಿ ಅವರು ಹೊಸ ದಾರಿಯನ್ನು ಹುಡುಕಹತ್ತಿದರು ಇಂತಹರಲ್ಲಿ **ಬುದ್ಧ** ಮತ್ತು **ಮಹಾವೀರರು** ಪ್ರಮುಖರು. ಇವರು ಆರ್ಯಸಂಸ್ಕೃತಿಯ ಮಥನ ಮಾಡಿ ಹೊಸ ಧರ್ಮಗಳನ್ನು ರೂಪಿಸಿದರು

## ಬೌದ್ಧಧರ್ಮ

**ಬುದ್ಧದೇವನ ಚರಿತ್ರೆ** — ಹಿಮಾಲಯ ಪರ್ವತದ ದಕ್ಷಿಣದ ಅಡಿಯಲಿ ನೇಪಾಳ ಎಂಬ ದೇಶವಿದೆ ಅದರ ದಕ್ಷಿಣಸೀಮೆಯಲ್ಲಿ **ಶಾಕ್ಯ** ರಾಜ್ಯ. ಅಲ್ಲಿಯ ದೊರೆ **ಶುದ್ಧೋದನ** ಆತನ ಹೆಂಡತಿ **ಮಾಯಾದೇವಿ** ಅವರ ಹೊಟ್ಟೆಯಲ್ಲಿ ಕ್ರಿ ಪೂ ೬೦೩ರಲ್ಲಿ ಒಬ್ಬ ಮಗನು ಹುಟ್ಟಿದನು ಈತನ ಹೆಸರು ಸಿದ್ಧಾರ್ಥ ಈತನ ಜನ್ಮಕುಂಡಲಿಯನ್ನು ನೋಡಿ, "ಈತನು ಆದರೆ ಚಕ್ರವರ್ತಿಯಾಗುವನು, ಇಲ್ಲವೆ ದೊಡ್ಡ ಯೋಗಿಯಾಗುವನು" ಎಂದು ಜ್ಯೋತಿಷಿಗಳು ಹೇಳಿದ್ದರು. ಅದರಿಂದ, ತಂದೆ ಮಗನನ್ನು ಅರಮನೆಯ ಆವಾರದೊಳಗೇ ಒಳ್ಳೇ ಮಮತೆಯಿಂದ ಜೋಪಾನ ಮಾಡುತ್ತಿದ್ದನು ಅಲ್ಲಿಯೇ ವೈದಿಕ ವಿದ್ಯೆಯ ಹಾಗೂ ಕ್ಷಾತ್ರ ವಿದ್ಯೆಯ ಶಿಕ್ಷಣಕೊಡಿಸಿದನು.


ಗೌತಮ ಬುದ್ಧ

ಆದರೆ ಯಜ್ಞಯಾಗಾದಿಗಳ ಹಿಂಸಾತಂತ್ರದಿಂದ ಸಿದ್ಧಾರ್ಥನ ಮನಸ್ಸು ಹೊಯ್ದಾಡಹತ್ತಿತು ದೇವರನ್ನು ಕಾಣಲು ಹಿಂಸೆಯ ಹೊರತು ಬೇರ ಹಾದಿಯೇ ಇಲ್ಲವೇ, ಎಂದು ತನ್ನೊಳಗ ತಿಳಿದುನೋಡಹತ್ತಿದನು. ಈ ವಿಚಾರದ ಗೊಂದಲದಲ್ಲಿ ಆತನಿಗೆ ರಾಜ್ಯೈಶ್ವರ್ಯವು ಬೇಡವಾಯಿತು, ಏಕಾಂತವಾಸ ಬೇಕೆನಿಸಹತ್ತಿತು. ಮಗನ ಈ ಉದಾಸೀನ ವೃತ್ತಿಯು ತಂದೆಗೆ ತಿಳಿಯಿತು ಕೂಡಲೆ ಆತನು **ಯಶೋಧರೆ** ಎಂಬ ಚೆಲುವಯಾದ ಕನ್ನಿಕೆಯೊಡನೆ ಸಿದ್ಧಾರ್ಥನ ಮದುವೆಮಾಡಿದನು ವರುಷ ಒಪ್ಪೊತ್ತಿನಲ್ಲಿ **ರಾಹುಲ** ಎಂಬ ಗಂಡುಮಗುವೂ ಹುಟ್ಟಿತು ಇಷ್ಟಾದರೂ ಸಿದ್ಧಾರ್ಥನ ಮನಸ್ಸು ಏಕಾಂತವಾಸವನ್ನೇ ಬಯಸುತ್ತಿತ್ತು

ಒಮ್ಮೆ ಸಿದ್ಧಾರ್ಥನು ಅಕಸ್ಮಾತ್ತಾಗಿ ಬೀದಿಯಲ್ಲಿ ಒಬ್ಬ ಮುಪ್ಪಿನ ಮುದುಕನನ್ನೂ ಒಬ್ಬ ರೋಗಿಯನ್ನೂ ಒಂದು ಹೆಣವನ್ನೂ ಕಂಡನಂತೆ! 'ಇದೇ ಅಲ್ಲವೇ ಸಂಸಾರದ ಸುಖ!' ಎಂದು ಅಂದೇ ರಾತ್ರಿ ಅರಮನೆಯನ್ನು



ಬುದ್ಧನು ಮನೆಬಿಡುವ ದೃಶ್ಯ

ಬಿಟ್ಟು ಹೊರಟನು ಮಡದಿ-ಮಕ್ಕಳ ಮರುಕವಾಗಲಿ, ಅರಸೊತ್ತಿಗೆಯ ಆಸೆಯಾಗಲಿ ಅವನಲ್ಲಿ ಉಂಟಾಗಲಿಲ್ಲ

**ದಿವ್ಯಜ್ಞಾನ** – ಯಜ್ಞಯಾಗಾದಿಗಳ ಹೊರತಾಗಿ ಸೌಮ್ಯರೀತಿಯಿಂದ ದೇವರನ್ನು ಕಾಣುವುದೇ ಆತನ ವೈರಾಗ್ಯಜೀವನದ ವಿಚಾರವಾಯಿತು. ಅದಕ್ಕಾಗಿ ಎಲ್ಲೆಲ್ಲಿಯೋ ತಿರುಗಾಡಿದನು. ಯಾರಾರನ್ನೋ ಕಂಡನು,

ಎಲ್ಲಿಯೂ ಸಮಾಧಾನದ ಉತ್ತರ ಸಿಕ್ಕಲಿಲ್ಲ ಕಡೆಗೆ ಒಂದು ದಿನ ಗಯೆಯ ಹತ್ತಿರ ನಿರಂಜನಾನದೀತೀರದಲ್ಲಿ, ಒಂದು **ಅಶ್ವತ್ಥವೃಕ್ಷದ** ಕೆಳಗೆ ಕುಳಿತು ವಿಚಾರಮಾಡುತ್ತಿದ್ದಾಗ, ಒಮ್ಮಿಂದೊಮ್ಮೆಲೆ ಅವನಿಗೊಂದು ಬೆಳಕು ಕಂಡಿತು ದಿವ್ಯಜ್ಞಾನದ ಉದಯವಾಯಿತು! ಹುಡುಕುತ್ತಿದ್ದ ದಾರಿ ಸಿಕ್ಕಿತು! ಅಂದಿನಿಂದಲೇ ಆತನು ಬುದ್ಧನಾದನು! ಆ ಅಶ್ವತ್ಥವೃಕ್ಷಕ್ಕೆ **ಬೋಧೀವೃಕ್ಷ** ಎಂದು ಹೆಸರು ಉಂಟಾಯಿತು ಮುಂದೆ, ಸಿಂಹಳದ್ವೀಪದಲ್ಲಿ ಬುದ್ಧನ ಮತವನ್ನು ಪ್ರಚಾರ ಮಾಡಲು ಹೋದಾಗ, ಆ ಮರದ ಒಂದು ಹರಿಯನ್ನು ಅಶೋಕನ ಮಗಳು **ಸಂಘಮಿತ್ರೆಯು** ಸಿಂಹಳದ್ವೀಪದ **ಅನುರಾಧಾಪುರದಲ್ಲಿ** ನಟ್ಟಂತೆ ಕತೆಯಿದೆ

**ಬುದ್ಧದೇವನ ಉಪದೇಶ** — ಬುದ್ಧದೇವನಿಗ ದಿವ್ಯತತ್ತ್ವ ಹೊಳೆದ ಮೇಲೆ, ಅವನು ಅದನ್ನು ಜನಸಾಮಾನ್ಯರಿಗೆ ತಿಳಿಸಿ ಹೇಳಹತ್ತಿದನು ಮೋಕ್ಷ ಅಥವಾ ನಿರ್ವಾಣಕ್ಕ ಯಜ್ಞಾದಿ ಹಿಂಸಾಕಾರ್ಯಗಳ ಅಗತ್ಯವಿಲ್ಲ, ಶುದ್ಧಾಚರಣ, ದಯೆ, ಪ್ರೇಮ, ಪರೋಪಕಾರ ಮತ್ತು ಅಹಿಂಸೆಗಳೇ ಕರ್ಮಬಂಧವನ್ನು ಕಡಿದುಹಾಕುತ್ತವೆ ಜೀವನವು ದುಃಖಮಯ ಆಸೆಯೇ ದುಃಖದ ಮೂಲವು ದುಃಖವನ್ನು ನಿವಾರಣೆ ಮಾಡುವುದೇ ಜೀವನದ ಗುರಿಯು ಆಸೆಯನ್ನು ನಿರ್ಮೂಲ ಮಾಡಲು ಅಷ್ಟಾಂಗಮಾರ್ಗವೇ ಸಾಧನ ಅಷ್ಟಾಂಗ-ಮಾರ್ಗವೆಂದರೆ ಒಳ್ಳೆಯ ದೃಷ್ಟಿ, ಒಳ್ಳೆಯ ಗುರಿ, ಒಳ್ಳೆಯ ನುಡಿ, ಒಳ್ಳೆಯ ನಡತೆ, ಒಳ್ಳೆಯ ಉಪಜೀವನ, ಒಳ್ಳೆಯ ಪ್ರಯತ್ನ, ಒಳ್ಳೆಯ ಬುದ್ಧಿ, ಒಳ್ಳೆಯ ಧ್ಯಾನ

ಈ ಉಪದೇಶಕ್ಕ ತಕ್ಕಂತೆ ಆತನ ನಡೆ-ನುಡಿಗಳಲ್ಲಿಯೂ ಸಾತ್ತ್ವಿಕತನ ಎದ್ದುಕಾಣುತ್ತಿತ್ತು ಅದರಿಂದ ಆತನನ್ನು ಎಲ್ಲರೂ ಮನ್ನಿಸಹತ್ತಿದರು ಬುದ್ಧ(ಜ್ಞಾನಿ)ದೇವನೆಂದು ಕರೆಯತೊಡಗಿದರು, ಆತನಿಂದ ದೀಕ್ಷೆಯನ್ನು ಪಡೆದು, ಜಾತಿ-ಮತಭೇದವಿಲ್ಲದೆ, ಬಡವ-ಶ್ರೀಮಂತ, ಸ್ತ್ರೀ-ಪುರುಷ ಎಂಬ ವ್ಯತ್ಯಾಸಗಳನ್ನು ಎಣಿಸದೆ ಎಲ್ಲರೂ ಆತನ ಸಂಘಕ್ಕ ಸೇರಿದರು

**ದೀಕ್ಷಾಕ್ರಮ** — ಆರ್ಯರ ಆಶ್ರಮಪದ್ಧತಿಯಂತೆ ಬುದ್ಧದೇವನೂ ದೀಕ್ಷಾಕ್ರಮದಲ್ಲಿ ಮೂರು ಭಾಗಗಳನ್ನು ಮಾಡಿದನು. (೧) ಮೊದಲು ಗೃಹಸ್ಥಾಶ್ರಮಿಯಾಗಿ "ಉಪಾಸಕ" ವೃತ್ತಿಯಲ್ಲಿರುವದು. (೨) ತರುವಾಯ ಭಿಕ್ಷುಗತಿಕನಾಗಿ ಕೆಲಕಾಲ ಕಳೆಯಬೇಕು, ಬಳಿಕ ಸಂನ್ಯಾಸವೃತ್ತಿಯನ್ನು ಸ್ವೀಕರಿಸಬೇಕು (೩) "ಅರ್ಹತ್" ಅವಸ್ಥೆಯೇ ನಿರ್ವಾಣಸಾಧನೆಯ ಮೆಟ್ಟಿಲು.

ಈ ಉಪದೇಶಗಳೂ ದೀಕ್ಷೆಗಳೂ ಜನಸಾಮಾನ್ಯರಿಗೆಲ್ಲ ಸುಲಭವಾದುದರಿಂದ ಎಲ್ಲರೂ ಶಿಷ್ಯವರ್ಗದಲ್ಲಿ ಸೇರಿದರು.

**ಬೌದ್ಧಧರ್ಮ ಪ್ರಸಾರ** —ಬುದ್ಧದೇವನ ಧರ್ಮಕ್ಕೆ ಬೌದ್ಧಧರ್ಮ ಎಂದು ಹೆಸರು ದೇವರು, ಪರಮಾತ್ಮ ಬ್ರಹ್ಮ ಮುಂತಾದವುಗಳ ಚರ್ಚೆಯ ಗೊಡವೆಗೆ ಬುದ್ಧನು ಹೋಗಲಿಲ್ಲವಾದ್ದರಿಂದ, ಬೌದ್ಧಧರ್ಮವನ್ನು ಅನೇಕರು ನಿರೀಶ್ವರ ಎಂದು ಹೇಳುತ್ತಾರೆ

ಈ ಧರ್ಮಪ್ರಸಾರದಲ್ಲಿ ಮೂರು ಮಾತುಗಳಿಗೆ ಹೆಚ್ಚು ಮಹತ್ತ್ವವನ್ನು ಕೊಡಲಾಗಿದೆ (೧) ಸ್ತ್ರೀಯರಿಗೆ ದೀಕ್ಷೆಕೊಟ್ಟು ಭಿಕ್ಷುಣಿಯರನ್ನು ಮಾಡಿಕೊಂಡು ಸಂಘದಲ್ಲಿ ಸೇರಿಸಿಕೊಳ್ಳುವದು, ಅವರಿಗೆ ಆಜನ್ಮ ಸಂನ್ಯಾಸವನ್ನು ಸ್ವೀಕರಿಸುವದಕ್ಕೆ ಮತ್ತು ಸ್ವತಂತ್ರವಾಗಿ ಜೀವಿಸುವದಕ್ಕ ಅಪ್ಪಣೆ-ಒಪ್ಪಿಗೆಗಳನ್ನು ಕೊಡುವದು (೨) ಬೌದ್ಧಧರ್ಮಾನುಯಾಯಿಗಳಿಲ್ಲ ಕೀಳುಮೇಲುಗಳಿಲ್ಲದೆ ಸಮಾನರೆಂದು ತಿಳಿಯುವದು (೩) ಬೌದ್ಧಧರ್ಮದ ತತ್ತ್ವಗಳನ್ನೆಲ್ಲ ಜನಸಾಮಾನ್ಯರು ಬಲ್ಲ "ಪಾಲೀ" ಭಾಷೆಯಲ್ಲಯೇ ಬರೆಯುವದು

ಈ ಹಾದಿಗಳು ಎಲ್ಲರಿಗೂ ಸುಗಮವಾಗಿ ತೋರಿದವು ಬುದ್ಧ, ಧರ್ಮ ಸಂಘ ಇವೇ ಅವರ ತ್ರಿಮೂರ್ತಿಗಳಾದವು ಅದರಿಂದ ಬೌದ್ಧರ ಸಂಖ್ಯೆ ದಿನ-ದಿನಕ್ಕೆ ಬೆಳೆಯತೊಡಗಿತು

**ಅಂತ್ಯಕಾಲ** —ಬುದ್ಧದೇವನು ತನ್ನ ಧರ್ಮೋಪದೇಶವನ್ನು ಎಲ್ಲ ಕಡೆಗೂ ಪಸರಿಸುತ್ತ, ಭಿಕ್ಷಾಟನ ಮಾಡುತ್ತ ಜನ್ಮಭೂಮಿಯಾದ ಕಪಿಲವಸ್ತುವಿಗೆ ಬಂದನು. ಅಲ್ಲಿ ಆತನ ತಂದ, ಹೆಂಡತಿ, ಮಗ ಮೂವರೂ ಬೌದ್ಧಧರ್ಮವನ್ನು ಸ್ವೀಕರಿಸಿದರು ಈ ಹೊತ್ತಿಗೆ ಆತನಿಗೆ ಅನೇಕ ಜನ ಬುದ್ಧಿವಂತರು ಶಿಷ್ಯರಾಗಿದ್ದರು ಅವರು ಗುರುವಿನ ಅಪ್ಪಣೆಯಂತೆ ದೂರ ದೂರದ ವರೆಗೆ ಧರ್ಮೋಪದೇಶ ಮಾಡುವದಕ್ಕೆ ಹೋದರು. ಬುದ್ಧದೇವನ ಉಪದೇಶದ ಗುಟ್ಟು ಎಂದರೆ, ಕಥೆಯ ರೂಪದಿಂದಲೇ ಕಠಿನ ವಿಷಯಗಳನ್ನು ತಿಳಿಸಿಕೊಡುವದು ಆ ಪದ್ಧತಿಯಿಂದ ಎಲ್ಲರಿಗೂ ತತ್ತ್ವಗಳು ತೀವ್ರವೇ ತಿಳಿಯುತ್ತಿದ್ದವು, ಮನದಟ್ಟಾಗುತ್ತಿದ್ದವು

ಈ ರೀತಿಯಾಗಿ ಭಗವಾನ್ ಬುದ್ಧದೇವನು ಧರ್ಮಪ್ರಸಾರ ಮಾಡುತ್ತ, ತನ್ನ ವಯಸ್ಸಿನ ೮೦ನೆಯ ವರುಷದಲ್ಲಿ ಕ್ರಿ ಪೂ ೪೮೩ರಲ್ಲಿ ದೇಹವನ್ನು ಬಿಟ್ಟನು ಮುಂದೆ ಬುದ್ಧನ ಶಿಷ್ಯರು 'ರಾಜಗೃಹ' ಎಂಬ ನಗರದಲ್ಲಿ ಸಭೆಸೇರಿ ಆತನ ಉಪದೇಶಗಳನ್ನೆಲ್ಲ ಶೇಖರಿಸಿ, ಧರ್ಮ, ಅಭಿಧರ್ಮ, ವಿನಯ ಎಂದು ಅವುಗಳನ್ನು ಮೂರು ವಿಭಾಗಗಳಲ್ಲಿ ಸಂಗ್ರಹಿಸಿ ಎಲ್ಲೆಡೆಯಲ್ಲೂ ಅವುಗಳ ಪ್ರಚಾರ ಮಾಡಿದರು

## ಜೈನಧರ್ಮ

ಯಜ್ಞ-ಯಾಗಾದಿಗಳೆಂಬ ಕಟ್ಟುನಿಟ್ಟುಗಳಿಗೆ ಬೇಸತ್ತು ಹೊಸ ಹೊಸ ಧರ್ಮಗಳು ಹುಟ್ಟಹತ್ತಿದುವಷ್ಟೇ! ಬುದ್ಧದೇವನ ಕಾಲದಲ್ಲಿಯೇ **ಬಿಹಾರ**ದಲ್ಲಿ ಮತ್ತೊಬ್ಬ ಮಹಾಪುರುಷನು ಹುಟ್ಟಿದನು, ಮತ್ತು ಜೈನಧರ್ಮವನ್ನು ಬಳಗಿಸಿದನು ಆತನ ಹೆಸರು **ಮಹಾವೀರ ವರ್ಧಮಾನ**ಸ್ವಾಮಿ ಮಹಾವೀರ ಸ್ವಾಮಿಗಿಂತ ಮೊದಲು ಜೈನಧರ್ಮವಿದ್ದಿತೆಂದೂ ಆ ಪರಂಪರೆಯಲ್ಲಿ ಇಪ್ಪತ್ತುಮೂರು ಜನ ತೀರ್ಥಂಕರರು ಜೈನಮತವನ್ನು ಪ್ರಸಾರ ಮಾಡಿ ಹೋದರೆಂದೂ ಮಹಾವೀರ ವರ್ಧಮಾನನು ೨೪ನೆಯ **ತೀರ್ಥಂಕರ**ನೆಂದೂ ತಿಳಿಯುತ್ತಾರೆ ಆ ಇಪ್ಪತ್ತುಮೂರು ಜನರ ಇತಿಹಾಸ ಮಾತ್ರ ನಮಗೆ ಸರಿಯಾಗಿ ಸಿಗುವದಿಲ್ಲ **ಋಷಭದೇವ**ನೇ ಮೊದಲನೆಯ ತೀರ್ಥಂಕರನೆಂದು ಹೇಳಲಾಗುತ್ತದೆ ಆದರೆ, ಜೈನಧರ್ಮವು ಪ್ರಬಲವಾದ ಸ್ವರೂಪದಲ್ಲಿ ಬಳಕೆಯಲ್ಲಿ ಬಂದುದು ಮಹಾವೀರ ವರ್ಧಮಾನ ಸ್ವಾಮಿಯಿಂದಲೇ



ವರ್ಧಮಾನ ಮಹಾವೀರ

**ಮಹಾವೀರಸ್ವಾಮಿಯ ಜನ್ಮ** — ಮಹಾವೀರಸ್ವಾಮಿ ಕ್ರಿ. ಪೂ ೫೪೦ನೆಯ ವರುಷದಲ್ಲಿ **ವೈಶಾಲಿಯ ಲಿಚ್ಛವೀ** ಸರದಾರರ ಮನೆತನದಲ್ಲಿ ಹುಟ್ಟಿದನು ಇವನ ತಂದೆಯ ಹೆಸರು **ಸಿದ್ಧಾರ್ಥ**, ತಾಯಿ **ತ್ರಿಶಲಾದೇವಿ** ಚಿಕ್ಕಂದಿನಲ್ಲಿಯೆ ಈತನ ಒಲವು ವೈರಾಗ್ಯದ ಕಡೆಗಿದ್ದಿತು ಈ ವೃತ್ತಿಯನ್ನು ತಪ್ಪಿಸಬೇಕೆಂದು ತಂದೆ ತೀವ್ರವೇ ಯಶೋದೆ ಎಂಬ ಕನ್ನೆಯೊಡನೆ ಈತನ ಲಗ್ನವನ್ನು ಮಾಡಿದನು ಆದರೂ ಈತನ ನಿಷ್ಠೆಯಲ್ಲಿ ಬದಲಾಗಲಿಲ್ಲ, ಮುಂದೆ **ಪಾರ್ಶ್ವನಾಥ**ನೆಂಬ ಸತ್ಪುರುಷನ ಶಿಷ್ಯನಾದನು ಆತನ ಸಂಪ್ರದಾಯದಂತೆ ಅಭ್ಯಾಸಮಾಡಿ ಜೈನ ದೀಕ್ಷೆಯನ್ನು ಪಡೆದು ಸಂನ್ಯಾಸಿಯಾದನು ಆ ಮೇಲೆ ಘೋರ ತಪಶ್ಚರ್ಯೆಯನ್ನು ಮಾಡಿ, ಜೈನತತ್ತ್ವಗಳ ತಿರುಳನ್ನು ತಿಳಿದುಕೊಂಡನು. ಅವುಗಳಿಗೆ ಸರಿಯಾಗಿ ಹೊಸದೊಂದು ಸಂಘವನ್ನೇ ಸ್ಥಾಪನೆಮಾಡಿದನು ಆಗ ಈತನಿಗೆ ನಾಲ್ವತ್ತೆರಡು ವರುಷಗಳಾಗಿದ್ದುವು. ಇಲ್ಲಿಂದಲೇ 'ಮಹಾವೀರಸ್ವಾಮಿ' ಎಂಬ ಹೆಸರು ಬಳಕೆಯಲ್ಲಿ ಬಂದಿತು.

**ಜೈನಧರ್ಮದ ತತ್ತ್ವಗಳು**—ವೈದಿಕಕಾಲದ ಯಜ್ಞ-ಯಾಗಾದಿಗಳ ಕರ್ಮರವನ್ನು ಕಡಮೆಮಾಡುವದು, ವರ್ಣವ್ಯವಸ್ಥೆಯ ಸುಧಾರಣ, ಮಾನವನ ಚಾರಿತ್ರ್ಯವನ್ನು ಶುದ್ಧೀಕರಿಸಿ ಅವನನ್ನು ದೈವತ್ವದ ಕಡೆ ಏರಿಸುವುದು, ಇವೇ ಮಹಾವೀರನ ಮುಖ್ಯ ಉದ್ದೇಶಗಳು. ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹಗಳಿಗೆ ಈತನ ಧರ್ಮದಲ್ಲಿ ಅಗ್ರಸ್ಥಾನವಿದ್ದಿತು

ಜೈನರು ಸಾಕಾರ ದೇವರ ಅಸ್ತಿತ್ವವನ್ನು ಒಪ್ಪುವದಿಲ್ಲ ಸೃಷ್ಟಿಯ ಎಲ್ಲ ವಸ್ತುಗಳಲ್ಲಿಯೂ ಜೀವವದೆ ಯಾವುದನ್ನೂ ಕೊಲ್ಲಬಾರದು, ಹಿಂಸಿಸಬಾರದು ಎಲ್ಲರೂ ಎಲ್ಲ ವಿಧದಿಂದಲೂ ಅಹಿಂಸೆಯನ್ನು ಆಚರಿಸಬೇಕು ಮಾನವನ ಶರೀರ ಪಾಪಮಯವಾಗಿದ್ದು, ಉಪವಾಸ ಮೊದಲಾದ ನಿಯಮಗಳಿಂದ ಅದನ್ನು ಶುದ್ಧಮಾಡಬೇಕು ಗುರುಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ನಂಬಿಗೆಯನ್ನಿಟ್ಟು ಭೂತಾತ್ಮಗಳ ಜ್ಞಾನವನ್ನು ಪಡೆದ ಮೇಲೆ ಮುಕ್ತಿಯಾಗುವುದು ಮನುಷ್ಯನು ಸದಾಚಾರಿಯಾಗಿದ್ದು ಸ್ವಪ್ರಯತ್ನದಿಂದಲೇ ಮುಕ್ತಿಯನ್ನು ದೊರಕಿಸಬಲ್ಲನು—ಎಂಬಿವೇ ಮುಂತಾದುವು ಜೈನತತ್ತ್ವಗಳಲ್ಲಿ ಮುಖ್ಯ

**ಜಿನ** ಎಂದರೆ ಸಂಸಾರವನ್ನು ಗೆದ್ದವ, ಇಂತಹ ಮಹಾತ್ಮರೇ ತೀರ್ಥಂಕರರು—ಸ್ವಾಮಿಗಳು ಎಂದು ಜೈನರು ನಂಬುತ್ತಾರೆ. ಜೈನರಲ್ಲಿ **ಶ್ವೇತಾಂಬರರು, ದಿಗಂಬರರು** ಎಂದು ಎರಡು ಪಂಗಡಗಳಿವೆ

**ಧರ್ಮಪ್ರಸಾರ**—ಜೈನಧರ್ಮ ತಾತ್ತ್ವಿಕದೃಷ್ಟಿಯಿಂದ ಒಳ್ಳೆಯದೇ ಸರಿ ಇವುಗಳ ಒಳ್ಳೆಯತನದಿಂದಲೂ ಮಹಾವೀರಸ್ವಾಮಿಗೆ **ವಿದೇಹ, ಅಂಗ, ಮಗಧ** ಮೊದಲಾದ ರಾಜವಂಶಗಳ ಸಂಬಂಧ ಲಭಿಸಿದುದರಿಂದಲೂ ಈ ಧರ್ಮದ ಪ್ರಸಾರಕ್ಕೆ ಒಳ್ಳೇ ಅನುಕೂಲವಾಯಿತು ಅದರಿಂದ ಸಿರಿವಂತರೂ ಬಡವರೂ ಈ ಧರ್ಮದಲ್ಲಿ ಸೇರಿದರು ಕನ್ನಡನಾಡಿನಲ್ಲಿ **ಕಾರ್ಕಳ, ಶ್ರವಣಬೆಳುಗೊಳ**ಗಳಲ್ಲಿ ಭವ್ಯವಾದ ಮೂರ್ತಿಗಳು, ಜೈನಧರ್ಮದ ಹೆಚ್ಚಳವನ್ನು ತೋರಿಸುವಂತೆ ಈಗಲೂ ನಿಂತಿವೆ. ಅದರಂತೆ ಉತ್ತರದಲ್ಲಿ **ಪಾಲಿಟಾಣಾ, ಗಿರನಾರ, ಅಬೂ** ಗುಡ್ಡಗಳಲ್ಲಿಯೂ ಜೈನರ ಸುಂದರವಾದ ಬಸ್ತಿಗಳಿವೆ

ಜೈನಧರ್ಮವನ್ನು ಬೆಳಗಿಸಿದ ಮಹಾವೀರ ವರ್ಧಮಾನಸ್ವಾಮಿಯು ಮೂವತ್ತೆರಡು ವರುಷ ಧರ್ಮಪ್ರಸಾರಮಾಡಿ ತನ್ನ ವಯಸ್ಸಿನ ೭೨ನೆಯ ವರುಷದಲ್ಲಿ ಪಾಟಣಾ ಜಿಲ್ಲೆಯ **'ಪಾವಾ'** ಎಂಬಲ್ಲಿ ನಿರ್ವಾಣಹೊಂದಿದನು

## ಅಭ್ಯಾಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಸಂಕ್ಷೇಪವಾಗಿ ಉತ್ತರಗಳನ್ನು ಬರೆಯಿರಿ

(ಅ) ಜ್ಯೋತಿಷಿಗಳು ಸಿದ್ಧಾರ್ಥನ ಬಗೆಗೆ ಹೇಳಿದ ಯಾವ ಮಾತು ಸತ್ಯವಾಯಿತು?

(ಆ) ಸಿದ್ಧಾರ್ಥನು ಅರಮನೆಯನ್ನು ಬಿಟ್ಟು ಹೋಗಲು ಕಾರಣವೇನು?

(ಇ) ಅಶ್ವತ್ಥವೃಕ್ಷಕ್ಕೆ "ಬೋಧಿವೃಕ್ಷ" ಎಂಬ ಹೆಸರು ಯಾಕೆ ಬಂದಿತು?

(ಈ) ಅಷ್ಟಾಂಗ ಮಾರ್ಗವೆಂದರೆ ಯಾವದು?

(ಉ) ಬೌದ್ಧಧರ್ಮವನ್ನು ಅನೇಕರು ನಿರೀಶ್ವರಧರ್ಮ ಎಂದು ಹೇಳಲು ಕಾರಣವೇನು?

(ಊ) ಮಹಾವೀರನು ಏತಕ್ಕಾಗಿ ತಪಶ್ಚರ್ಯೆಯನ್ನು ಮಾಡಿದನು?

(ಎ) ಜೈನಧರ್ಮದಲ್ಲಿ ಯಾವ ಯಾವ ಸಂಗತಿಗಳಿಗೆ ಅಗ್ರಸ್ಥಾನವಿದ್ದಿತು?

೨ ಬಿಟ್ಟ ಸ್ಥಳಗಳನ್ನು ಸರಿಯಾದ ಶಬ್ದಗಳಿಂದ ತುಂಬಿರಿ

(ಅ) ಜಿನ ಎಂದರ      ಗೆದ್ದವ

(ಆ)      ಗಳಲ್ಲಿ ಭವ್ಯವಾದ ಮೂರ್ತಿಗಳು      ಧರ್ಮದ ಹಚ್ಚಳವನ್ನು ತೋರಿಸುವಂತೆ ಈಗಲೂ ನಿಂತಿವ

(ಇ) ಮಹಾವೀರನು      ಎಂಬ ಸತ್ಪುರುಷನ ಶಿಷ್ಯನಾದನು.

(ಈ) ಮಹಾವೀರನು      ನೆಯ ತೀರ್ಥಂಕರನೆಂದು ತಿಳಿಯುತ್ತಾರೆ

(ಉ) ಬೌದ್ಧಧರ್ಮದ ತತ್ತ್ವಗಳನ್ನೆಲ್ಲ ಮೊದಲು      ಭಾಷಯಲ್ಲಿ ಬರೆದರು

(ಊ) ಭಗವಾನ್ ಬುದ್ಧನು ಕ್ರಿ ಶ ಪೂ      ರಲ್ಲಿ ಹುಟ್ಟಿ ಕ್ರಿ ಶ ಪೂ      ರಲ್ಲಿ ದೇಹವನ್ನು ಬಿಟ್ಟನು, ಮಹಾವೀರ ವರ್ಧಮಾನನು ಕ್ರಿ. ಶ ಪೂ      ರಲ್ಲಿ ಹುಟ್ಟಿ ತನ್ನ ವಯಸ್ಸಿನ      ನೆಯ ವರ್ಷದಲ್ಲಿ ನಿರ್ವಾಣಹೊಂದಿದನು.

# ೬ ಅಲೆಕ್ಝಾಂಡರನ ದಂಡಯಾತ್ರೆ

**ರಾಜಕೀಯ ಸ್ಥಿತಿ** — ಬೌದ್ಧಕಾಲದಲ್ಲಿ ಉತ್ತರ ಭಾರತದೊಳಗೆ ಹದಿನಾರು ಜನಪದ"ಗಳಿದ್ದವಂತೆ ಅವುಗಳಲ್ಲಿ ಮಗಧರಾಜ್ಯವು ಒಳ್ಳೇ ಪ್ರಬಲವಾಗಿದ್ದಿತು ಅದಕ್ಕೆ ಒಳಪಟ್ಟು **ಕೋಸಲ, ವತ್ಸ, ಅವಂತಿ, ಗಾಂಧಾರ, ಕಾಶಿ, ಚೇದಿ, ಪಾಂಚಾಲ, ಕುರು** ಮೊದಲಾದ ರಾಜ್ಯಗಳಿದ್ದವು ಮಗಧರಾಜರು ತೀವ್ರದಲ್ಲಿಯೇ **ಅಂಗ, ಕೌಶಾಂಬಿ, ಮಾಳವ** ರಾಷ್ಟ್ರಗಳನ್ನು ವಶಪಡಿಸಿಕೊಂಡರು

**ನವನಂದರು** — ಮಗಧರಾಜರಾದ **ಬಿಂಬಿಸಾರ** ಮತ್ತು ಆತನ ಮಗ **ಅಜಾತಶತ್ರು** ಇವರಿಬ್ಬರೂ ಮಹಾವೀರ, ಬುದ್ಧ ಇವರ ಸಮಕಾಲೀನರಾಗಿದ್ದರು ಅವರು ಮಗಧ ಸಾಮ್ರಾಜ್ಯವನ್ನು ಗಂಗಾತೀರದುದ್ದಕ್ಕೂ ಹಬ್ಬಿಸಿದರು ಆದರೆ ಅವರ ತರುವಾಯ ನಂದವಂಶದವರು ಮಗಧ ಸಿಂಹಾಸನವನ್ನಾಕ್ರಮಿಸಿದರು

**ನಂದರ ನಾಶ** — ನಂದವಂಶದ ಮೊದಲನೆಯ ಅರಸು **ಮಹಾಪದ್ಮನಂದ,** ಇವನಿಗೆ ಉಗ್ರಸೇನ ಎಂಬ ಬಿರುದು ಇತ್ತು ಇವನು ಬಹು ಬಲಾಢ್ಯನಾಗಿದ್ದನು ಇವನು ಕ್ಷತ್ರಿಯರನ್ನೆಲ್ಲ ಕೈವಶ ಮಾಡಿಕೊಂಡಿದ್ದನು ಉತ್ತರ ಭಾರತವೆಲ್ಲ ಇವನಿಗೆ ಅಂಕಿತವಾಗಿದ್ದಿತು

ನಂದರಾಜರು ಗುಣಿಗಳಿರಲಿಲ್ಲ, ಆದುದರಿಂದ ಅವರಿಗ ಸಾಮ್ರಾಜ್ಯದಲ್ಲಿ ಮಾನಮರ್ಯಾದೆ ಸಿಕ್ಕುತ್ತಿರಲಿಲ್ಲ ಅದಕ್ಕಾಗಿ ಅವರು ಖಡ್ಗಬಲದ ಕ್ರೂರ ಆಳಿಕೆಯನ್ನೇ ನಡೆಸಿದರು ಆದರೂ ಶೂರತನದಿಂದ ಐಶ್ವರ್ಯವನ್ನು ಸಂಪಾದಿಸಿದರು ನಂದ ಅರಸರ ವಶದಲ್ಲಿ ೮೦ ಸಾವಿರ ರಾವುತರೂ, ೨ ಲಕ್ಷ ಕಾಲಾಳುಗಳೂ, ೮ ಸಾವಿರ (ನಾಲ್ಕು ನಾಲ್ಕು ಕುದುರೆಗಳ) ರಥಗಳೂ, ೬ ಸಾವಿರ ಆನೆಗಳೂ ಇದ್ದವು ಇದರಂತೆ ಅವರ ಸಂಪತ್ತೂ ಅಪಾರವಾಗಿದ್ದಿತು

**ಇರಾಣದ ಚಕ್ರವರ್ತಿಯ ದಾಳಿ** — ನಂದರು ಭಾರತದಲ್ಲಿ ಮಾತ್ರ ಬಲಿಷ್ಠರಾಗಿದ್ದರು ಗಡಿಪ್ರದೇಶಗಳಲ್ಲಿದ್ದ ದೊರೆಗಳ ಪ್ರೀತಿ-ವಿಶ್ವಾಸಗಳನ್ನು ಅವರು ಗಳಿಸಿರಲಿಲ್ಲ ಇದು ಹೊರನಾಡಿನವರಿಗೆ ತಿಳಿಯುತ್ತಲೇ ಅವರ ದಾಳಿಗಳಿಗ ಆರಂಭವಾಯಿತು ಇರಾಣದ ಚಕ್ರವರ್ತಿ, ಸೈರಸ್ಸನು ಸಿಂಧುನದಿಯ ಪಶ್ಚಿಮದಲ್ಲಿದ್ದ ಗಾಂಧಾರದ ರಾಜರನ್ನು ಸೋಲಿಸಿ, ಆ ರಾಜ್ಯವನ್ನು ಕವಳಿಸಿದನು. ಸೈರಸ್ಸನ ಮಗ ಡರಾಯಸ್ಸನೂ **ಸೈಲಾಕ್ಸ** ಎಂಬ ತನ್ನ ನೌಕಾಧ್ಯಕ್ಷನನ್ನು ಒಂದು ನೌಕೆಯೊಂದಿಗೆ ಭಾರತಕ್ಕೆ ಕಳುಹಿಸಿ, ಸಿಂಧುನದಿಯು

ಸಮುದ್ರವನ್ನು ಸೇರುವ ಪ್ರಾಂತದ ಸ್ಥಿತಿಗತಿಗಳನ್ನರಿತನು ಬಳಿಕ ಸೈನ್ಯವನ್ನು ಕಳುಹಿಸಿ ಪಂಜಾಬದ ದಕ್ಷಿಣ ಭಾಗವನ್ನು ಗೆದ್ದುಕೊಂಡನು ಹೀಗೆ ಪಶ್ಚಿಮ ಭಾರತದ ಒಂದು ದೊಡ್ಡ ಭಾಗವು ಇರಾಣದ ವಶವಾಯಿತು. "ಹಿಂದು ಪ್ರಾಂತ" ಎಂಬ ಹೆಸರಿನ ಈ ಪ್ರದೇಶವು, ಸುಮಾರು ಒಂದು ಕೋಟಿಗಿಂತ ಹೆಚ್ಚು ರೂಪಾಯಿ ಕಪ್ಪಕಾಣಿಕೆಯಾಗಿ ಇರಾಣಿ ರಾಜರಿಗೆ ಪ್ರತಿವರ್ಷ ಕೊಡುತ್ತ ಬಂದಿತ್ತು ಭಾರತದ ಬಿಲ್ಲಾಳುಗಳು ಇರಾಣಿ ಸೈನ್ಯದಲ್ಲಿ ಸೇರಿದ್ದರು ಅಲ್ಲಿಯ ಇರಾಣದ ಅರಸನಾದ ಕ್ಷಯಾರ್ಷನ ಕಾಲದಲ್ಲಿ ಹಿಂದೂ ಸೈನಿಕರು, ಇತರ ಇರಾಣಿ ಪ್ರಾಂತದವರೊಂದಿಗೆ ಗ್ರೀಸ ದೇಶವನ್ನು ಮುತ್ತಿದರು ಆದರೆ, ಅದರಲ್ಲಿ ಅಪಜಯ ಹೊಂದಿದರು ಕೆಲವು ಕಾಲದ ನಂತರ ಅಲ್ಲಿಯ ದೊರೆಯಾದ ಅಲೆಕ್ಝಾಂಡರನು ಇರಾಣದ ಮೇಲೆ ದಾಳಿಯಿಟ್ಟನು ಮೂರನೆಯ **ಡರಾಯಸನು ಅರಬೆಲಾ** ಎಂಬಲ್ಲಿ ಅಲೆಕ್ಝಾಂಡರನಿಗ ಇದಿರಾದನು, ಯುದ್ಧದಲ್ಲಿ ಸೋತನು ಆ ಮೇಲೆ ಅಲೆಕ್ಝಾಂಡರನ ದೃಷ್ಟಿ ಭಾರತದ ಕಡೆಗ ಹೊರಳಿತು



ಅಲೆಕ್ಝಾಂಡರನು ಹುಡುಗನಿದ್ದಾಗ ಯಾರಿಗೂ ಙಣಿಯದಿದ್ದ ಕುದುರೆಯನ್ನು ಹತ್ತಿ ಸಾಧುಮಾಡಿದನಂತೆ

**ಅಲೆಕ್ಝಾಂಡರನ ದಂಡಯಾತ್ರೆ** — ಅಲೆಕ್ಝಾಂಡರನು ಗ್ರೀಸದೇಶದ ದೊರೆ. ಆತನನ್ನು ಮಹಾನುಭಾವ **ಸಿಕಂದರ**—**ಶೂರ ಸಿಕಂದರ**—ಮುಂತಾಗಿ ಇತಿಹಾಸಕಾರರು ಹೊಗಳಿದ್ದಾರೆ ಆತನು ಬದುಕಿದುದು ೩೦ ವರುಷ ಮಾತ್ರವಾದರೂ ಅಷ್ಟು ಅಲ್ಪಾವಧಿಯಲ್ಲಿಯೇ ಆತನ ಶೌರ್ಯ ಕೋಲ್ಮಿಂಚಿ

ನಂತೆ ಜಗತ್ತಿನ ಕಣ್ಣನ್ನು ಕುಕ್ಕಿಸಿತು, ಜಗತ್ತಿನ ಶೂರರಲ್ಲಿ ಆತನ ಹಸರು ಅಗ್ರಸ್ಥಾನ ಪಡೆದಿದೆ

ಮಹಾನುಭಾವ ಸಿಕಂದರನು ಇರಾಣವನ್ನು ಗೆದ್ದನಲ್ಲದೆ **ಮಿಸರ, ಸಿರಿಯಾ** ದೇಶಗಳನ್ನೂ ಕೈವಶಮಾಡಿಕೊಂಡ ಅಷ್ಟು ಹೊತ್ತಿಗ ಭಾರತದ ಭಾಗ್ಯದ ಬೆಡಗು ಆ ಜಗಜಟ್ಟಿಯ ಮನಸ್ಸನ್ನು ಸಳೆಯಿತು. ಭಾರತದ ಒಂದು ಪ್ರಾಂತ ಇರಾಣಿ ಚಕ್ರಾಧಿಪತ್ಯಕ್ಕೆ ಸೇರಿತ್ತಾದ್ದರಿಂದ, ಅದನ್ನೂ ಗಲ್ಲುವದರಿಂದಲೇ ತನ್ನ ವಿಜಯಯಾತ್ರೆ ಸಂಪೂರ್ಣವಾಗುವದೆಂದು ಅವನು ನಂಬಿದ್ದನು ಈ ಪ್ರದೇಶದಲ್ಲಿ ಕಾಲಿಡುವದಕ್ಕೆ ಭಾರತೀಯರೊಬ್ಬರ ಸಂಚು ನೆರವಾಯಿತು

**ಹಿಂದುಗಳಲ್ಲಿಯೇ ಹಿತಶತ್ರುಗಳು** — ಇರಾಣವು ಬಲಗುಂದುತ್ತಲೇ ಉತ್ತರ ಭಾರತದ ಅರಸುಗಳಲ್ಲಿ ಅನಾಯಕತ ಆರಂಭವಾಯಿತು ಅವರಲ್ಲ ಒಟ್ಟಾಗುವದಕ್ಕೆ ಬದಲಾಗಿ ಭಾರತದ ಹಿತಶತ್ರುಗಳಾದರು, ಹಲವರು ಅಲಕ್ಝಾಂಡರನಿಗ ಆಮಂತ್ರಣ ಕೊಟ್ಟರು ಆತ ಮೆಲ್ಲಮೆಲ್ಲನ ಅನುವು ನೋಡಿಕೊಂಡು, **ಕಾಬೂಲ ಕಂದಹಾರ** ಕಣಿವೆಗಳ ಮಾರ್ಗವಾಗಿ ಭಾರತಕ್ಕ ಹೊರಳಿದನು ಪುಷ್ಕಲಾವತಿ ನಗರವನ್ನು ಆಕ್ರಮಿಸಿ, ಸಿಂಧೂನದಿಯನ್ನು ದಾಟಿದನು

ಈ ಕಾಲಕ್ಕೆ ಭಾರತದಲ್ಲಿ ಪ್ರಬಲವಾದ ಎರಡು ರಾಜ್ಯಗಳಿದ್ದವು ಪಶ್ಚಿಮ ಪಂಜಾಬದಲ್ಲಿ **ತಕ್ಷಶಿಲೆಯ** ಅರಸು ಮತ್ತು ಪುರುವಂಶದ ಅರಸು ಇವರೊಳಗೆ ಪರಸ್ಪರ ಹಗೆತನವಿದ್ದಿತು ತಕ್ಷಶಿಲೆಯ ರಾಜ್ಯವು ಸಿಂಧದ ಪೂರ್ವದಂಡೆಯಿಂದ **ಜೆಹಲಮ್** ನದಿಯ ಪಶ್ಚಿಮದಂಡೆಯ ವರೆಗೂ ಪುರುರಾಜ್ಯ **ಕಾಶ್ಮೀರ** ಮತ್ತು ಜೆಹಲಮ್‌ದ ಪೂರ್ವದಲ್ಲಿಯೂ ಹಬ್ಬಿದ್ದುವು ಪುರುರಾಜನನ್ನು ಇದಿರಿಸುವದು ಯಾರಿಗೂ ಸಾಧ್ಯವಿರಲಿಲ್ಲ ತಕ್ಷಶಿಲೆಯ ದೊರೆ ಪೌರವನನ್ನು ದ್ವೇಷಿಸುತ್ತಿದ್ದರೂ ಗ್ರೀಕರ ಆಗಮನಕ್ಕ ಒಪ್ಪುತ್ತಿರಲಿಲ್ಲ, ಆದರೆ ಆತನ ಮಗ ಅಂಭಿರಾಜನು ದೇಶದ್ರೋಹಿಯಾಗಿ ಅಲಕ್ಝಾಂಡರನಿಗೆ ಆಮಂತ್ರಣ ಕೊಟ್ಟು, ತಾನು ಸೈನ್ಯದೊಡನ ನೆರವಾಗುವದಾಗಿ ತಿಳಿಸಿದನು

**ದಂಡಯಾತ್ರೆಗೆ ಆತಂಕ** —ಅಲಕ್ಝಾಂಡರನು ತನ್ನ ಸೈನ್ಯವನ್ನು ಎರಡು ಭಾಗ ಮಾಡಿ ಭಾರತವನ್ನು ಹೊಕ್ಕನು ದಾರಿಯಲ್ಲಿ ಸಿಕ್ಕ ಅರಸುಗಳನ್ನೆಲ್ಲ ಅಡಗಿಸುತ್ತ ಮುನ್ನಡೆಯಹತ್ತಿದನು. ಇದು ಪುರುವಂಶದ ದೊರೆಗೆ ಸಹನವಾಗಲಿಲ್ಲ ತನ್ನ ವೈರಿಯು ಆ ಸೈನ್ಯದಲ್ಲಿ ಸೇರಿರುವನೆಂದು ತಿಳಿದಾಗಲಂತೂ ಆತನ ಕೋಪ ಹೆಚ್ಚಿತು ಭಾರತದ ಹಿರಿಮೆಯನ್ನು ಕಾಯುವದರಲ್ಲಿ ತನ್ನ ಪ್ರಾಣ ಹೋದರೂ ಅಡ್ಡಿಯಿಲ್ಲ ಎಂದು **ಈ ಶೂರ ದೊರೆಯು,**

ಕ್ರಿ ಪೂ ೩೨೬ರ ವಸಂತಕಾಲದಲ್ಲಿ ಜೆಹಲಮ್ ನದಿಯ ನೆರೆಯಲ್ಲಿ ಅಲೆಕ್ಸಾಂಡರನಿಗೆ ಇದಿರಾದನು

**ದಂಡಯಾತ್ರೆಯ ಅಬ್ಬರ** — ಸಿಕಂದರನ ಸಂಗಡ **ಅಂಭಿರಾಜನು** ಐದು ಸಾವಿರ ಸೈನ್ಯವನ್ನು ಕಟ್ಟಿಕೊಂಡು ಪೋರಸನಿಗೆ ಇದಿರಾಗಿ ಹೊರಟನು ಅವರು ನಾವೆಗಳಿಂದ ಜೆಹಲಮ್ ನದಿಯನ್ನು ದಾಟಿ ಯುದ್ಧವನ್ನು ಆರಂಭಿಸಿದರು ಅಷ್ಟರಲ್ಲಿ ಸಿಕಂದರನು, ದೊಡ್ಡ ಸೈನ್ಯದೊಡನೆ ಗುಟ್ಟಾಗಿ ಜೆಹಲಮ್ ನದಿಯನ್ನು ದಾಟಿಬಂದನು ಮುಂದೆ ಒಮ್ಮೆಲೆ ಯುದ್ಧಕ್ಕೆ ಆರಂಭವಾಯಿತು ಗ್ರೀಕರ ನುರಿತ ಸೈನಿಕರ ಹೊಡೆತಗಳಿಂದ ಹಿಂದುಗಳು ಹಣ್ಣಾದರು ಅನೇಕರು ರಣಭೂಮಿಯಲ್ಲಿ ಮಡಿದರು ಪೋರಸನ ಕಡೆಯ ಎಷ್ಟೋ ರಾಜರು ಕಾಲ್ಕಿತ್ತರು, ಕೆಲವರು ಸಿಕಂದರನಿಗೆ ಶರಣಾಗತರಾದರು! ಕೊನೆಗೆ ಸ್ವತಃ ಪೋರಸನೇ ಸಿಕಂದರನಿಗೆ ಇದಿರಾದನು ಆದರೆ ಏಕಾಕಿಯಾಗಿ ಎಷ್ಟು ಹೊತ್ತು ತಡೆದಾನು? ಕಡೆಗೆ, ಗಾಯಹೊಂದಿ ಗ್ರೀಕರ ಸೆರೆಯಲ್ಲಿ ಸಿಕ್ಕನು ಈ ಸುದ್ದಿ ತಿಳಿಯುತ್ತಲೇ ಸಿಕಂದರನು ಕುದುರೆಯನ್ನೋಡಿಸುತ್ತ ಪೋರಸನಿದ್ದಲ್ಲಿಗೆ ಬಂದನು

**ಪೋರಸನ ಪೌರುಷ** — ಸಿಕಂದರ ಮತ್ತು ಪೋರಸರಿಗೆ ಒಬ್ಬರೊಬ್ಬರ ಭಾಷೆ ತಿಳಿಯುತ್ತಿರಲಿಲ್ಲ ಅದರಿಂದ ಸಿಕಂದರನು ಮಧ್ಯಸ್ಥ ಭಾಷೆಯವನ ಮುಖಾಂತರ ಪೋರಸನನ್ನು ಕೇಳಿದನು — ಈ ಪ್ರಸಂಗದಲ್ಲಿ ನಾನು ನಿನ್ನನ್ನು ಹೇಗೆ ನಡೆಸಿಕೊಳ್ಳಬೇಕು? — ಎಂದು ಪೋರಸ ದೊರತನದ ದರ್ಪದಿಂದಲೇ ಉತ್ತರ ಕೊಟ್ಟ — ದೊರೆಯೊಡನೆ ದೊರೆಯಂತೆ — ಎಂದು ಸಿಕಂದರನಿಗೆ ಸ್ಪಷ್ಟವಾಗಲಿಲ್ಲ ಮತ್ತೆ ಕೇಳಿದ — ನಿನ್ನ ಉತ್ತರವನ್ನು ಸ್ಪಷ್ಟಮಾಡಬೇಕು! ಪೋರಸ ಹೇಳಿದ — ದೊರೆಯೊಡನೆ ದೊರೆಯಂತೆ - ಎಂಬುದರಲ್ಲಿ ಎಲ್ಲವೂ ಅಡಕವಾಗಿದೆ ಹೆಚ್ಚಿಗೇನನ್ನೂ ಹೇಳುವದಿಲ್ಲ! — ಪೋರಸನ ಪೌರುಷವನ್ನು ಕಂಡು ಸಿಕಂದರನಿಗೆ ಸಂತೋಷವಾಯಿತು ಆತನ ರಾಜ್ಯವನ್ನು ಆತನಿಗೇ ಕೊಟ್ಟು ದೊರೆಯನ್ನು ಮಾಡಿದನು

**ತಡೆಯಿಲ್ಲದ ವಿಜಯಯಾತ್ರೆ** — ಪೋರಸನ ತರುವಾಯ ಅಲೆಕ್ಸಾಂಡರನನ್ನು ಇದಿರಿಸುವವರು ಯಾರೂ ಉಳಿಯಲಿಲ್ಲ ಎಂದಮೇಲೆ ಆತನ ಮುನ್ನಡೆಗೆ ತಡೆಯೇ ಇಲ್ಲದಾಯಿತು ಆಮೇಲೆ **ಅಭಿಸಾರವನ್ನು** ಗೆದ್ದನು. **ರಾವೀನದೀ** ತೀರದ **ರಾಜ್ಯಗಳನ್ನೂ ಕಾಶ್ಮೀರ** ಕಣಿವೆಯನ್ನೂ ಕೈವಶಮಾಡಿಕೊಂಡನು. ಆಗ ವಿಜಯಯಾತ್ರೆಯನ್ನು ಇನ್ನೂ ಮುಂದುವರಿಸಬೇಕೆಂಬ ಆಸೆ ಆಯಿತು, ಅವನಿಗೆ. ಗಂಗಾನದಿಯ ಉದ್ದಕ್ಕೂ ನಂದರಾಜರು ಆಳುತ್ತಿರುವರೆಂದೂ, ಅಲ್ಲಿ ಅಪಾರವಾದ ಸಂಪತ್ತಿನ ರಾಶಿ ಸಿಗುವದೆಂದೂ

ವಾರ್ತೆ ಬಂತು ಆದರೆ, ಆತನ ಸೈನ್ಯ ಅದಕ್ಕೆ ಒಪ್ಪಲಿಲ್ಲ ಅವರು ತಮ್ಮ ಊರು-ಕೇರಿ ಬಿಟ್ಟು ಆಗಲೇ ಹತ್ತಾರು ವರ್ಷಗಳಾಗಿದ್ದವು ಅದರಿಂದ ಸಿಕಂದರನು ಗ್ರೀಸಕ್ಕೆ ಹಿಂತಿರುಗಬೇಕಾಯಿತು ಆದರೆ ತನ್ನ ದೇಶವನ್ನು ಮುಟ್ಟುವ ಮೊದಲೇ ಕ್ರಿ ಪೂ ೩೨೩ರಲ್ಲಿ ಏಶಿಯಾಮೈನರ ಪ್ರಾಂತದ ಬ್ಯಾಬಿಲೋನ ಪಟ್ಟಣದಲ್ಲಿ ಆತನ ಅಂತ್ಯವಾಯಿತು

**ಮೂವರ ಆಳಿಕೆ** — ಸಿಕಂದರ ತಿರುಗಿ ಹೋಗುವಾಗ, ತಾನು ಗದ್ದ ರಾಜ್ಯವನ್ನು ಮೂರು ಭಾಗ ಮಾಡಿದನು ಮೊದಲನೆಯ ಭಾಗ **ಫಿಲಿಪ್** ಎಂಬ ಒಬ್ಬ ಸೇನಾನಿಯ ಆಡಳಿತೆಯಲ್ಲಿ ಸೇರಿತು, **ತಕ್ಷಶಿಲೆ** ಅದರ ರಾಜಧಾನಿಯಾಯಿತು ಎರಡನೆಯ ಭಾಗ **ಸಿಂಧ**ಪ್ರಾಂತವನ್ನೊಳಗೂಂಡು ಮತ್ತೊಬ್ಬ ಯವನ ದಂಡನಾಯಕ **ಪೈಥನನ** ಆಳಿಕೆಗೆ ಒಳಪಟ್ಟಿತು ಮೂರನೆಯ ಭಾಗ ದೂರ ಪೂರ್ವದಲ್ಲಿ **ಜಿಹಲಮ್ ಬಿಯಾಸ** ನದಿಗಳ ನಡುವೆ ಪೌರವ ಅರಸನ ಆಳಿಕೆಗೆ ಹೊಂದಿಕೊಂಡಿತು **ಸೆಲ್ಯುಕ್ಯೂಸ್** ಎಂಬ ಸೇನಾನಿಯು ಆತನ ಪ್ರತಿನಿಧಿಯಾಗಿ ಉಳಿದನು

**ದಂಡಯಾತ್ರೆಯ ಪರಿಣಾಮಗಳು** — ಸಿಕಂದರನ ದಾಳಿಯಿಂದ ಭಾರತದ ಮೇಲೆ ಇರಾಣದ ಅರಸುಗಳ ಆಳಿಕೆ ಅಳಿಯಿತು ಸಿಕಂದರನು ಸ್ವಲ್ಪೇ ದಿನಗಳಲ್ಲಿ ಸತ್ತುದರಿಂದ, ಮತ್ತೆ ಕ್ಷತ್ರಿಯ ರಾಜರು ಸ್ವತಂತ್ರರಾಗಿ ತಲೆಯೆತ್ತಿದರು ಭಾರತೀಯ ಸೈನಿಕರಿಗೆ ಸುಸಜ್ಜಿತವಾದ ಸೈನಿಕ ಶಿಕ್ಷಣ ದೊರೆತುದರಿಂದ, ಯುದ್ಧಕಲೆಯಲ್ಲಿಯೂ ಪ್ರಗತಿಯಾಯಿತು, ಮತ್ತು ಭಾರತೀಯ ಗ್ರೀಕ ಸಂಸ್ಕೃತಿಗಳ ಬೆರಕೆಯಿಂದ ಎಷ್ಟೋ ಸುಧಾರಣೆಯಾಯಿತು ತಾನು ಗದ್ದ ಪ್ರದೇಶಗಳಲ್ಲೆಲ್ಲ ಸಿಕಂದರನು ಹೂಸ ಹೊಸ ನಗರಗಳನ್ನು ನಿರ್ಮಿಸಿ, ಅಲ್ಲಲ್ಲ ಯವನರ ಸೇನೆಯನ್ನು ಇರಿಸಿ ಹೋಗಿದ್ದನು ಆದ್ದರಿಂದ, ಗ್ರೀಸ-ಭಾರತಗಳಲ್ಲಿ ಸಂಬಂಧ ಬೆಳೆಯಿತು ಭಾರತದಿಂದ ಸಿಕಂದರನು ಕಲವು ವಿದ್ವಾಂಸರನ್ನು ಗ್ರೀಸಕ್ಕೆ ಕರೆದುಕೊಂಡು ಹೋಗಿ, ಭಾರತೀಯರ ಮಹತ್ತ್ವದ ಸಾಹಿತ್ಯವನ್ನು ತನ್ನ ದೇಶದಲ್ಲಿ ಹಬ್ಬಿಸಿದನು ಆರ್ಯರ ವೈದ್ಯಶಾಸ್ತ್ರದ ಮಹತ್ತ್ವವನ್ನು ತಿಳಿದುಕೊಂಡು ತನ್ನ ದಂಡಿನಲ್ಲಿ ಆರೋಗ್ಯದ ಮೇಲ್ವಿಚಾರಣೆಯ ಕೆಲಸವನ್ನು ಅವರಿಗೆ ಒಪ್ಪಿಸಿದನು ಹೀಗೆ ಸಾಹಿತ್ಯ, ಕಲೆ, ಕೈಗಾರಿಕೆ ಯುದ್ಧವಿದ್ಯೆ-ವ್ಯಾಪಾರ ಮೊದಲಾದವುಗಳಲ್ಲಿ ಭಾರತ ಮತ್ತು ಗ್ರೀಸ ದೇಶಗಳ ಸಂಬಂಧವು ಬೆಳೆಯಿತು.

**ಸಿಕಂದರನ ಹಿರಿಮೆ** — ಮೂರ್ತಿ ಕಿರಿದು, ಆದರೆ ಕೀರ್ತಿ ದೊಡ್ಡದು ಎಂದು ಹೇಳುವಂತೆ ಸಿಕಂದರನು ಅತ್ಯಲ್ಪ ಕಾಲವೇ ಬದುಕಿದ್ದರೂ ಜಯಲಕ್ಷ್ಮಿಯ ಚಿರಂತನ ಸಹವಾಸವನ್ನು ಪಡೆದಿದ್ದನು

## ಅಲೆಕ್ಸಾಂಡರನ ದಂಡಯಾತ್ರೆ

### ಅಭ್ಯಾಸಗಳು

೧. ಭಾರತದ ಬಾಹ್ಯರೇಷೆಯ ನಕಾಶೆಯನ್ನು ತೆಗೆದು ಅದರಲ್ಲಿ ಸಿಂಧು ಹಾಗು ಪಂಜಾಬದ ಐದು ನದಿಗಳನ್ನು ಕಾಣಿಸಿರಿ ಆ ಮೇಲೆ ಅಲೆಕ್ಝಾಂಡರನ ದಂಡಯಾತ್ರೆಯ ದಿಕ್ಕನ್ನು ಬಾಣದ ಚಿಹ್ನದಿಂದ ಸೂಚಿಸಿ ಸಂಬಂಧಿಸಿದ ಸ್ಥಳಗಳ ಹೆಸರುಗಳನ್ನು ಗುರುತಿಸಿ ಬರೆಯಿರಿ

೨ ಕೆಳಗೆ ಕೆಲವು ಹಸರುಗಳನ್ನು ಕೊಟ್ಟಿದೆ ಒಬ್ಬೊಬ್ಬನ ಬಗೆಗೆ ನೀವು ಇತಿಹಾಸದಲ್ಲಿ ಓದಿದ ಒಂದು ಮಹತ್ತ್ವದ ಮಾತನ್ನು ಒಂದೊಂದು ವಾಕ್ಯದಲ್ಲ ಬರೆಯಿರಿ ಬಿಂಬಿಸಾರ, ಮಹಾಪದ್ಮನಂದ, ಸೈಲಾಕ್ಸ, ಅಂಭಿರಾಜ, ಪೋರಸ, ಪೈಥನ್

೩ ಪೋರಸ ಮತ್ತು ಅಲೆಕ್ಝಾಂಡರ್ ಇವರಲ್ಲಿ ನಡೆದಿರಬಹುದಾದ ಸಂಭಾಷಣೆ ಯಾವುದು?

೪ (ಅ) ಅಲೆಕ್ಝಾಂಡರನ ಎರಡನೆಯ ಹೆಸರು ಯಾವುದು?

(ಆ) ಆತನ ಹೆಸರು ಜಗತ್ತಿನ ಶೂರರಲ್ಲಿ ಏಕೆ ಅಗ್ರಸ್ಥಾನವನ್ನು ಪಡೆದಿದೆ?

(ಇ) ಆ ಕಾಲದ ಹಿಂದುಸ್ಥಾನದ ಹಿತಶತ್ರುಗಳು ಯಾರು?

---

# ೭ ಮೌರ್ಯ ಚಂದ್ರಗುಪ್ತ

**ಕೌಟಿಲ್ಯ** — ಪ್ರಾಚೀನ ರಾಜ್ಯಗಳಲ್ಲಿ ಕ್ಷತ್ರಿಯ ಅರಸುಗಳಿಗೆ ಬ್ರಾಹ್ಮಣ ಮಂತ್ರಿಗಳು ಸೂಕ್ತ ಸಲಹೆಗಳನ್ನು ಕೊಡುತ್ತಿದ್ದರೆಂದು ಹೇಳಿದೆಯಷ್ಟೇ! ಅದರಂತೆ ನಂದವಂಶದ ರಾಜರಿಗೆ ಚಾಣಕ್ಯ ಎಂಬ ಬ್ರಾಹ್ಮಣನು ಮುಖ್ಯ ಮಂತ್ರಿಯಾಗಿದ್ದನು ಈತನ ಮೂಲ ಹೆಸರು **ವಿಷ್ಣುಗುಪ್ತ** ಈತನು ಕುಟಿಲ ಗೋತ್ರಕ್ಕೆ ಸಂಬಂಧಿಸಿದವನೆಂದೋ, ಕುಟಿಲಾ ಎಂಬ ನದೀತೀರದವನಾದ್ದರಿಂದಲೋ '**ಕೌಟಿಲ್ಯ**' ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ

**ನಂದ ಚಾಣಕ್ಯರ ಚಕಮಕಿ** — ಒಮ್ಮೆ ನಂದ ಅರಸನಾದ **ಮಹಾಪದ್ಮನು** ತುಂಬಿದ ಸಭೆಯಲ್ಲಿಯೇ **ಚಾಣಕ್ಯ**ಮಂತ್ರಿಯ ಅಪಮಾನಮಾಡಿದನು ಅದರಿಂದ ಆ ಅಭಿಮಾನಿಯಾದ ಬ್ರಾಹ್ಮಣನಿಗೆ ಬಹಳ ಸಿಟ್ಟು ಬಂದಿತು ಅದೇ ಭರದಲ್ಲಿಯೇ ಅವನು ಪ್ರತಿಜ್ಞೆ ಮಾಡಿದನು—ನಂದವಂಶವನ್ನು ನಿರ್ಮೂಲ ಮಾಡದಿದ್ದರೆ ನನ್ನ ಹೆಸರು ಆರ್ಯಚಾಣಕ್ಯನೇ ಅಲ್ಲ!—ಎಂದು ಅಂದೇ ಅವನು ನಂದರಾಜನ ಸಭೆಯನ್ನು ಬಿಟ್ಟು ಹೊರಬಿದ್ದನು ಪ್ರತಿಜ್ಞಾಪೂರ್ತಿಗಾಗಿ ಸಮಯವನ್ನು ಕಾಯಹತ್ತಿದನು

**ಮೌರ್ಯ ಮನೆತನ** — ಅಲೆಕ್ಝಾಂಡರನು ದಂಡಯಾತ್ರೆ ಕೈಕೊಂಡು ಒಮ್ಮೆ ಪೂರ್ವಪಂಜಾಬಿನಲ್ಲಿ ತಳವೂರಿದ್ದನು ಆಗ ತೇಜಸ್ವಿ ತರುಣನೊಬ್ಬ ಆತನ ಇದಿರಿಗೆ ಬಂದು "ಮಗಧಸಾಮ್ರಾಜ್ಯವನ್ನು ಮಣ್ಣುಗೂಡಿಸಬೇಕೆಂದಿರುವೆ, ನೀವು ನನಗೆ ಸಾಹಾಯ್ಯ ಮಾಡಬೇಕು"—ಎಂದು ಕೇಳಿದನು ಆಗ ಒಂದು ಮಹದಾಸೆ ಮೂಡಿತು ಅವನು ನಂದರಾಜರ ಸೈನ್ಯದ ಶಕ್ತಿಯ ವಿಷಯವನ್ನೆಲ್ಲ ವಿಚಾರಿಸಿ ತಿಳಿದುಕೊಂಡನು ಆದರೆ ಅವನ ಸೈನಿಕರೂ ದಂಡನಾಯಕರೂ ಆತನ ಅಭಿಮತವನ್ನು ಈಡೇರಿಸಲು ಒಪ್ಪಲಿಲ್ಲ ಇದರಿಂದ ಬೇಸತ್ತ ಆ ತರುಣನು ನೇರವಾಗಿ ಗುಡ್ಡಗಾಡನ್ನು ಸೇರಿಕೊಂಡನು ಆಗ ಪಂಜಾಬ-ಸಿಂಧಗಳ ನಡುವಿನ ಪರ್ವತಪ್ರದೇಶದಲ್ಲಿ, ಶೂರರಾದ ಕಾಡು ಜನರಿದ್ದರು ಅವರೊಡನೆಯೇ ಆ ತರುಣನು ಸ್ನೇಹವನ್ನು ಸಂಪಾದಿಸಿದನು, ಆ ಪರ್ವತಪ್ರದೇಶದ ಅರಸನ ಸಹಾಯದಿಂದಲೇ ಸುಸಜ್ಜಿತವಾದ ಸೈನ್ಯವನ್ನು ಕಟ್ಟಿಕೊಂಡು ಮಗಧರಾಜ್ಯದ ಮೇಲೆ ಏರಿಹೋಗುವುದಕ್ಕೆ ಸಮಯವನ್ನು ನಿರೀಕ್ಷಿಸಹತ್ತಿದನು. ಈ ತೇಜಸ್ವಿ ತರುಣನೇ ಚಂದ್ರಗುಪ್ತ ಮೌರ್ಯನು.

**ದಾಸೀಪುತ್ರನು ಮರೆಯಾದದ್ದು** — ನಂದವಂಶದ ಕೊನೆಯ ಅರಸನಾದ ಮಹಾಪದ್ಮನಂದನಿಗೆ ಎಂಟು ಜನ ಮಕ್ಕಳಿದ್ದರು, ಒಂಬತ್ತನೆಯವನೇ ದಾಸೀಪುತ್ರನಾದ ಚಂದ್ರಗುಪ್ತ ಈತನು ಶೂರನಾಗಿದ್ದರೂ ದಾಸೀಪುತ್ರ

ನೆಂದು ನಂದರು ಬಹಳ ಕಾಟವನ್ನು ಕೊಡುತ್ತಿದ್ದರು ತಂದೆಯಿರುವಾಗ ಚಂದ್ರಗುಪ್ತನು ತನ್ನ ಶೌರ್ಯಬಲದಿಂದ ಸೇನಾಪತಿಯಾಗಿದ್ದನು, ಆದರೆ ತನ್ನ ಹುಟ್ಟುಮೆಟ್ಟಿನ ತಿರಸ್ಕಾರವನ್ನು ಮೇಲಿಂದ ಮೇಲೆ ಕೇಳಿ ತಡೆದುಕೊಳ್ಳುವುದಾಗಲಿಲ್ಲ ಅದರಿಂದ ಅಧಿಕಾರವನ್ನು ಬಿಟ್ಟು ನಂದರ ನಿರ್ಮೂಲನ ಮಾಡಲು ಸಿದ್ಧತೆಯನ್ನು ನಡೆಸಿದನು

ಚಂದ್ರಗುಪ್ತನು ಸೈನ್ಯವನ್ನು ಸಿದ್ಧಗೊಳಿಸುವ ಹೊತ್ತಿಗೆ ಆತನಿಗ ಕಾಲವೂ ಅನುಕೂಲವಾಗಿತ್ತು ಸಿಕಂದರನು ತನ್ನ ದಾಳಿಯನ್ನು ಮುಗಿಸಿ ಹೋಗಿದ್ದನು ಸೆಲ್ಯೂಕ್ಯೂಸನು ಸಿಕಂದರನ ಪ್ರತಿನಿಧಿಯಾಗಿ ಆ ಭಾಗದಲ್ಲಿ ಆಳುತ್ತಿದ್ದನು ಆತನಿಗಾಗಿ ಚಂದ್ರಗುಪ್ತನು ಅಷ್ಟೊಂದು ಬೆದರಬೇಕಾಗಿರಲಿಲ್ಲ ಏಕೆಂದರೆ, ಸಿಕಂದರನ ಇತರ ಮಹಾದಂಡನಾಯಕರು ಅವನನ್ನು ನುಮ್ಮನಿರಗೊಡುತ್ತಿರಲಿಲ್ಲ, ಅವನನ್ನು ಕಾಡುತ್ತಲೇ ಇದ್ದರು ಇದೇ ಹೊತ್ತಿಗೆ ಆರ್ಯಚಾಣಕ್ಯನೂ ಚಂದ್ರಗುಪ್ತನಿಗೆ ನೆರವು ನೀಡಲು ಮುಂದೆ ಬಂದನು ಈ ಬ್ರಾಹ್ಮಣನ ಬುದ್ಧಿಚಾತುರ್ಯದಿಂದ **ಪೌರವ** ಮೊದಲಾದ ಬಲಾಢ್ಯ ಅರಸರು ಚಂದ್ರಗುಪ್ತನ ಬೆಂಬಲಿಗರಾದರು ಆ ಮೇಲೆ ಅವನು ನಂದರ ಮೇಲೆ ದಂಡೆತ್ತಿ ಹೋಗಿ, ನಂದರನ್ನೆಲ್ಲ ನಿರ್ಮೂಲಮಾಡಿ, ಆ ಸಿಂಹಾಸನವನ್ನು ಆಕ್ರಮಿಸಿ, ಪಾಟಲೀಪುತ್ರದಲ್ಲಿ ಪಟ್ಟಕ್ಕೆ ಕುಳಿತನು ತನ್ನ ತಾಯಿ ಮುರಾದೇವಿಯ ಗೌರವವನ್ನು ಕಾಯುವುದಕ್ಕಾಗಿ ಆಕೆಯ ಹೆಸರಿನಿಂದಲೇ ಮೌರ್ಯ ಮನೆತನವನ್ನು ಸ್ಥಾಪಿಸಿದನು. ಇಲ್ಲಿಂದ ಮುಂದೆ ಎಲ್ಲರಿಗೂ ಮೌರ್ಯ ಅರಸರೆಂದೇ ಹೆಸರಾಯಿತು ಈ ವಿವರಗಳನ್ನೆಲ್ಲ ವಿಶಾಖದತ್ತನು ಬರೆದ 'ಮುದ್ರಾರಾಕ್ಷಸ' ಎಂಬ ಸಂಸ್ಕೃತನಾಟಕದಲ್ಲಿ ನೀವು ಓದಬಹುದು

**ಮೌರ್ಯ ಸಾಮ್ರಾಜ್ಯ** — ಚಂದ್ರಗುಪ್ತನು ಸಿಂಹಾಸನವನ್ನೇರಿದ ಮೇಲೆ ಚಾಣಕ್ಯನೇ ಮುಖ್ಯ ಮಂತ್ರಿಯಾದನು ಪಂಜಾಬ, ಸಿಂಧ ಮುಂತಾದ ಪ್ರದೇಶಗಳಲ್ಲಿ ಆಳುವ ಮ್ಲೇಂಛ ರಾಜರನ್ನೆಲ್ಲ ಅವನು ಹೊರದೂಡಿದನು. ಈ ಶಕ್ತಿ-ಯುಕ್ತಿಗಳ ಸಂಯೋಗದಿಂದ ಮೌರ್ಯ ಸಾಮ್ರಾಜ್ಯವು ದಿನದಿನಕ್ಕೆ ಬಲಿಷ್ಠವಾಯಿತು ಚಂದ್ರಗುಪ್ತನ ಅವಗಾಹನಗಾಗಿಯೇ ಚಾಣಕ್ಯನು 'ಅರ್ಥಶಾಸ್ತ್ರ' ಎಂಬ ಉದ್ಗ್ರಂಥವನ್ನು ರಚಿಸಿದನು ಚಂದ್ರಗುಪ್ತನಿಗೆ ತನ್ನ ರಾಜ್ಯವನ್ನು ಮತ್ತಿಷ್ಟು ವಿಸ್ತರಿಸಬೇಕೆಂಬ ಹಂಬಲ ಬೆಳೆಯಿತು ಅವನ ಶೌರ್ಯಕ್ಕೆ ಆ ಕಾಲದ ರಾಜರಾರೂ ಇದಿರಾಗುವಂತಿರಲಿಲ್ಲ. ಹೀಗಾಗಿ ಅತ್ಯಲ್ಪ ಕಾಲದೊಳಗೇ ಸಿಂಧದಿಂದ ಪೂರ್ವಬಂಗಾಲದ ವರೆಗೂ ಎಲ್ಲ ರಾಜ್ಯಗಳು ಅವನ ಅಧೀನವಾದುವು

**ಚಕ್ರವರ್ತಿ ಚಂದ್ರಗುಪ್ತ** – ಈ ಕಾಲಕ್ಕೆ ಆತನಿಗಿದ್ದ ಪ್ರಬಲ ಶತ್ರುವೆಂದರೆ ಸಿಕಂದರನ ಸೇನಾಪತಿ **ಸೆಲ್ಯೂಕ್ಯೂಸನೊಬ್ಬನೇ** ಈತನು ಯಾವ ಕಾಲಕ್ಕೆ ಚಂದ್ರಗುಪ್ತನ ಮೇಲೆ ದಾಳಿಯನ್ನು ಮಾಡಬಹುದೆಂಬ ನಿಯಮವಿರಲಿಲ್ಲ ಇಷ್ಟರಲ್ಲಿಯೇ ಅವನು ಇಜಿಪ್ತದ ವರಗೂ ರಾಜ್ಯವನ್ನು ಬೆಳೆಸಿ **ನಿಕೇಟಾರ** (ವಿಜಯಿ) ಪದವಿಯನ್ನು ಗಳಿಸಿದ್ದನು **ಶಾಮು** (ಸಿರಿಯಾದಲ್ಲಿ) ಆತನ ರಾಜಧಾನಿಯಿದ್ದಿತು ಇನ್ನು ಪೂರ್ವದ ಕಡೆಗೆ ದಿಗ್ವಿಜಯ ಮಾಡಬೇಕೆಂಬ ಆತನ ಬಯಕೆ ಚಂದ್ರಗುಪ್ತನಿಗ ತಿಳಿದಿತ್ತು ಅದರಿಂದ ಈತನು ಸೆಲ್ಯೂಕ್ಯೂಸನ ಮೇಲೆ ಯುದ್ಧಕ್ಕೆ ಹೊರಟೇಬಿಟ್ಟನು, ಶೂರ ಚಂದ್ರಗುಪ್ತನಿದಿರಿಗ ಸೆಲ್ಯೂಕ್ಯೂಸನ ಆಟ ಸಾಗಲಿಲ್ಲ ಅವನು ಸೋತು ಶರಣಾಗತನಾದನು, ಮೌರ್ಯನಿಗೆ ಕಾಬೂಲ, ಕಂದಹಾರ, ಬಲೂಚಿಸ್ತಾನಗಳು ಸಿಕ್ಕವು! ಸೆಲ್ಯೂಕ್ಯೂಸನಿಗ, ಅವನ ಯವನ ಶತ್ರುಗಳನ್ನೆದುರಿಸುವ ಸಲುವಾಗಿ, ಚಂದ್ರಗುಪ್ತನು ೫೦೦ ಆನೆಗಳನ್ನು ಕೊಟ್ಟು, ಅವನನ್ನು ಸಿರಿಯಾದ ಕಡೆಗೆ ಸಾಗಿಸಿದನು ಅಂತೂ ಚಂದ್ರಗುಪ್ತನು ಆ ಯುದ್ಧದಲ್ಲಿ ಜಯಶಾಲಿಯಾದನು, ಸೆಲ್ಯೂಕ್ಯೂಸನಿಗೂ ಚಂದ್ರಗುಪ್ತನಿಗೂ ಎಷ್ಟು ಮೈತ್ರಿ ಬೆಳೆಯಿತೆಂದರೆ, ಸೆಲ್ಯೂಕ್ಯೂಸನ ಮಗಳು ಪಾಟಲೀಪುತ್ರದ ಅರಮನೆಯ ಅಂತಃಪುರವನ್ನು ಸೇರಿದಳು ಎಂದು ಹಲವು ಚರಿತ್ರಕಾರರು ಬರೆಯುತ್ತಾರೆ ಹೀಗೆ, ಸಾಮಾನ್ಯ ರಾಜನಾಗಿದ್ದವನು ಸಮ್ರಾಟನಾದನು! ಅಲ್ಲಿಂದ **ಮಾಳವ, ಗುಜರಾಥ, ಬಂಗಾಲ** ಮೊದಲಾದುವುಗಳನ್ನು ಗದ್ದು, ವಿಂಧ್ಯ ಪರ್ವತದ ವರೆಗೂ ಮೌರ್ಯ ಸಾಮ್ರಾಜ್ಯವನ್ನು ಪಸರಿಸಿದನು ಭಾರತದ ಇತಿಹಾಸದಲ್ಲಿ ಒಕ್ಕೊಡೆಯಿಂದ ಆಳಿದ ಮೊದಲನಯ ಚಕ್ರವರ್ತಿ ಚಂದ್ರಗುಪ್ತನೇ ಎಂದು ಹೇಳಬಹುದು ಮೈಸೂರು ಸಂಸ್ಥಾನದ ಶಿಕಾರಿಪುರ ತಾಲೂಕಿನಲ್ಲಿ ದೊರೆತ ಶಿಲಾಲೇಖದಲ್ಲಿ, ಆ ಪ್ರಾಂತ ಕೂಡ ಚಂದ್ರಗುಪ್ತನ ರಾಜ್ಯಕ್ಕೆ ಒಳಪಟ್ಟಿತ್ತೆಂದು ಉಲ್ಲೇಖವಿದೆ

**ಮೌರ್ಯ ಸಾಮ್ರಾಜ್ಯದ ಮಹತ್ತ್ವ** —ಮೌರ್ಯರ ವರೆಗಿನ ಕಾಲವನ್ನು ಪ್ರಾಚೀನಕಾಲವೆಂದೇ ಹೇಳಬಹುದು ಸಿಕಂದರ, ಅಲ್ಲಿಯ ವರೆಗಿನ ಯಾವ ಸಂಗತಿಯನ್ನೂ ಹೀಗೆಯೇ ಎಂದು ಗಟ್ಟಿಯಾಗಿ ಹೇಳುವುದು ಕಷ್ಟ ವೇದಗಳ ಕಾಲ, ರಾಮಾಯಣ ಮಹಾಭಾರತಗಳ ಕಾಲ, ಜೈನ-ಬೌದ್ಧ ಧರ್ಮಗಳ ಕಾಲಗಳಲ್ಲಿಯ ಇತಿಹಾಸವನ್ನು ತಿಳಿದುಕೊಳ್ಳಲು ನಾವು ಬಹು ಮಟ್ಟಿಗೆ ಊಹೆಯನ್ನೇ ಆಶ್ರಯಿಸಬೇಕಾಗುತ್ತದೆ ಆದರೆ, ಮೌರ್ಯ ಸಾಮ್ರಾಜ್ಯದಿಂದ ಐತಿಹಾಸಿಕ ಕಾಲದ ಆರಂಭವಾಗುತ್ತದೆ. ಸೆಲ್ಯೂಕ್ಯೂಸನು ತನ್ನ ರಾಯಭಾರಿಯಾದ **ಮೆಗ್ಯಾಸ್ಥಿನೀಸ್**‌ನನ್ನು ಚಂದ್ರಗುಪ್ತನ ಆಸ್ಥಾನದಲ್ಲಿಟ್ಟನು ಆ ರಾಯಭಾರಿಯ ಬರೆಹಗಳು ಆಗಿನ ಕಾಲದ ನಿಜವಾದ ಇತಿಹಾಸವನ್ನು

ತಿಳಿಸುತ್ತವೆ, ಅಲ್ಲಿಂದ ಮುಂದೆ ಶಿಲಾಲೇಖಗಳೂ ಆರಂಭವಾಗಿವೆ ಚರಿತ್ರೆಯನ್ನು ತಿಳಿಸುವುದಕ್ಕೆ ಇವೆಲ್ಲವು ಸಾಧನಗಳಾಗಿವೆ ಅದರಂತೆ ನಾಣ್ಯ ಮೊದಲಾದ ಆಧಾರಗಳೂ ಇವೆ, ಅಲ್ಲದೆ, ಚಾಣಕ್ಯನು ಬರೆದ ಅರ್ಥಶಾಸ್ತ್ರ-ನೀತಿಶಾಸ್ತ್ರಗಳು ಇಂದಿಗೂ ಮಾದರಿಯಾಗಿವೆ ಈ ಎಲ್ಲ ಕಾರಣಗಳಿಂದಾಗಿ, ಐತಿಹಾಸಿಕ ದೃಷ್ಟಿಯಿಂದ ಮೌರ್ಯ ಸಾಮ್ರಾಜ್ಯವು ಮಹತ್ತ್ವವುಳ್ಳದ್ದೆಂದು ಹೇಳಬಹುದಾಗಿದೆ

**ಸಾಮ್ರಾಜ್ಯದ ಸುವ್ಯವಸ್ಥೆ** — ಮೌರ್ಯಸಾಮ್ರಾಜ್ಯದ ಇತಿಹಾಸವನ್ನು **ಮೆಗ್ಯಾಸ್ಥೆನೀಸನ** ಬರೆಹಗಳಿಂದಲೇ ತಿಳಿಯಬೇಕಾಗಿದೆ ಆತನ ಮೂಲ ಬರೆಹಗಳು ಪೂರ್ಣ ಸಿಕ್ಕಿಲ್ಲ ಅಲ್ಲೊಂದು ಇಲ್ಲೊಂದು ಸಿಕ್ಕ ಅವತರಣಿಕೆಗಳಿಂದಲೇ **ಸ್ಟ್ರಾಬೋ, ಏರಿಯನ್** ಮೊದಲಾದ ಯವನರು ಮೌರ್ಯ ಸಾಮ್ರಾಜ್ಯದ ರೂಪರೇಷೆಯನ್ನು ನಿರ್ಮಿಸಿದ್ದಾರೆ ಮೆಗ್ಯಾಸ್ಥನೀಸನ 'ಇಂಡಿಕಾ' ಎಂಬ ಗ್ರಂಥದಲ್ಲಿ ಅತಿಶಯೋಕ್ತಿಯ ಹೇಳಿಕೆ ಬಹಳ ಉಂಟು ಪರರಾಷ್ಟ್ರದವರು ನಮ್ಮ ರೀತಿ-ನೀತಿಗಳನ್ನು ಆಂತರಿಕವಾಗಿ ಅರ್ಥಮಾಡಿಕೊಳ್ಳಲಾರರು, ಆದ್ದರಿಂದ, ಅವನ ಗ್ರಂಥವನ್ನು ನಾವು ಕೌಟಿಲ್ಯನ 'ಅರ್ಥಶಾಸ್ತ್ರ'ದೊಂದಿಗೆ ತುಲನಮಾಡಿ ಓದಿಕೊಳ್ಳಬೇಕಾಗುತ್ತದೆ ಆ ಬರೆಹಗಳಿಂದ ತಿಳಿಯುವ ಸಂಗತಿಗಳೆಂದರೆ —

(ಅ) **ರಾಜ್ಯವ್ಯವಸ್ಥೆ** — ರಾಜಧಾನಿಯಾದ **ಪಾಟಲೀಪುತ್ರನಗರವು, ಗಂಗಾ** ಮತ್ತು **ಸೋಣಾ** ನದಿಗಳ ನಡುವ ಒಂಬತ್ತು ಮೈಲು ಉದ್ದ, ಒಂದೂವರೆ ಮೈಲು ಅಗಲವಾಗಿದ್ದಿತು ಬಹುಶಃ ಭಾರತದಲ್ಲಿ ಅದೇ ಇತಿಹಾಸದ ಕಾಲದ ಮೊದಲನೆಯ ದೊಡ್ಡ ಪಟ್ಟಣ ಪಟ್ಟಣದ ಸುತ್ತಲೂ ಆರುನೂರು ಅಡಿ ಅಗಲ ಮತ್ತು ಮೂವತ್ತು ಅಡಿ ಆಳವಾದ ಕಂದಕ. ಅದಕ್ಕೆ ನದಿಯಿಂದ ನೀರಿನ ಪೂರೈಕೆಯಾಗುತ್ತಿತ್ತು ಪಟ್ಟಣದ ಕೋಟೆಯಲ್ಲಿ ಅರುವತ್ತುನಾಲ್ಕು ಹೆಬ್ಬಾಗಿಲುಗಳು, ಮೇಲ ಐನೂರರ ಎಪ್ಪತ್ತು ಬುರುಜುಗಳು, ಪಟ್ಟಣದ ವ್ಯವಸ್ಥೆ ನೋಡುವುದಕ್ಕೆ ಮೂವತ್ತು ಜನರ ಸಮಿತಿಯಿದ್ದು, ಅದರಲ್ಲಿ ಬೇರೆ ಬೇರೆ ಕಾರ್ಯಗಳಿಗಾಗಿ ಅಯ್ದಯ್ದು ಜನರುಳ್ಳ ಆರು ಉಪಸಮಿತಿಗಳಿದ್ದುವು. ಅಳತೆ-ತೂಕಗಳ ಪರೀಕ್ಷೆ, ಪ್ರವಾಸಿಗರ ಮೇಲ್ವಿಚಾರಣೆ, ಕರ, ಜನನ-ಮರಣಗಳ ಲೆಕ್ಕ, ಉದ್ಯೋಗಗಳ ನಿಯಂತ್ರಣ, ಸಂರಕ್ಷಣ ಮೊದಲಾದ ಕೆಲಸಗಳಿಗೆಲ್ಲ ಅವರೇ ಹೊಣೆಗಾರರು ನಗರಾಧ್ಯಕ್ಷ ಅಥವಾ ನಗರ ಮಹಾಮಾತ್ರ ಎಂಬ ಅಧಿಕಾರಿ, ಇಡೀ ಆಡಳಿತದ ಸೂತ್ರವನ್ನು ಹಿಡಿಸುತ್ತಿದ್ದನು

ಪ್ರತಿಯೊಂದು ಹಳ್ಳಿಯಲ್ಲಿ ಹಿರಿಯರ ಪಂಚಾಯತಿಗಳಿದ್ದುವು. ಅಯ್ದು ಹಳ್ಳಿಗಳ ಮೇಲ್ವಿಚಾರಕನಿಗೆ **'ಗೋಪ'** ಎಂದು ಹೆಸರು. ಅವನ ಮೇಲೆ

'ಸ್ಥಾನಿಕ' ಎಂಬ ಅಧಿಕಾರಿಯು ಹೊಲ-ಗದ್ದೆಗಳನ್ನು ಅಳೆದು ಅವುಗಳ ವಿಷಯದ ಪತ್ರಗಳನ್ನು ಸಿದ್ಧಪಡಿಸುತ್ತಿದ್ದವರು 'ರಜ್ಜುಕರು' ಇವರೆಲ್ಲರೂ 'ಸಮಾಹರ್ತೃ' ಎಂಬ ರಾಜನ ಆಪ್ತ ಅಧಿಕಾರಿಗೆ ಅಂಕಿತರಾಗಿರುತ್ತಿದ್ದರು ಈ ಆಪ್ತ ಅಧಿಕಾರಿಯ ಕಡೆಗ ಮಂತ್ರಿಯ ಮತ್ತು ಮುಖ್ಯ ಕಾರ್ಯದರ್ಶಿಯ ಕೆಲಸಗಳಿದ್ದುವು ಪಾಟಲೀಪುತ್ರದಲ್ಲಿ ರಾಜ್ಯವ್ಯವಸ್ಥೆಗಾಗಿ ಮಂತ್ರಿಮಂಡಲವಿದ್ದಿತು, ಆದರೂ ಕೊನೆಯ ನಿರ್ಣಯ ರಾಜನದೇ ಎಂದರೆ, ರಾಜನು ನಿರಂಕುಶವಾಗಿ ಆಳಬಹುದೆಂದಲ್ಲ ಧರ್ಮ ಎಂಬುದೇ ರಾಜನ ಅಂಕುಶವಾಗಿತ್ತು ಧರ್ಮಕ್ಕೆ ತಪ್ಪಿ ನಡೆದರೆ, ಮಂತ್ರಿಗಳೂ ಪ್ರಜೆಗಳೂ ರಾಜನನ್ನು ಕ್ಷಮಿಸುತ್ತಿರಲಿಲ್ಲ ತಲಿಗ, ರಾಜ ಮಾರ್ಗ, ಕೆರೆ, ಹಡಗುಪಡೆ, ಸುಂಕ, ನ್ಯಾಯ, ಗುಪ್ತಚಾರ, ಸೈನ್ಯ, ಹಣ-ಕಾಸು ಮತ್ತು ವ್ಯವಸಾಯ ಇವೆಲ್ಲ ಆಡಳಿತದ ಸ್ವತಂತ್ರ ವಿಭಾಗಗಳಾಗಿ ದ್ದುವು ಅವುಗಳನ್ನು ಅಯ್ದು ಜನ ಸದಸ್ಯರೂ ಒಬ್ಬ ಅಧ್ಯಕ್ಷನೂ ಕೂಡಿ ನಡೆಸುತ್ತಿದ್ದರು.


ಚಂದ್ರಗುಪ್ತನ ನಾಣ್ಯಗಳು

ಹೊಲದ ಹುಟ್ಟುವಳಿಯ ನಾಲ್ಕನೆಯ ಪಾಲು ಹಣವನ್ನು ರಾಜನಿಗೆ ಕೊಡಬೇಕಾಗುತ್ತಿತ್ತು ಇವಲ್ಲದೆ ಆಯಾತ-ನಿರ್ಯಾತ ಸರಕುಗಳ ಮೇಲಿನ ಸುಂಕ, ವ್ಯಾಪಾರ-ಉದ್ದಿಮೆಗಳ ಅಪ್ಪಣೆ (ಲೈಸನ್ಸ) ಕೊಡುವಾಗ ತೆಗೆದು ಕೊಂಡ ಪ್ರತಿಫಲ, ಮಾರ್ಗವಟ್ಟಿ, ಅನಾಥರ ಆಸ್ತಿ ಇವೆಲ್ಲ ರಾಜ್ಯದ ಉತ್ಪನ್ನದ ಹಾದಿಗಳು ಆ ಹಣವನ್ನು ಸೈನ್ಯ, ರಾಜಸಭೆ, ಮಾರ್ಗ, ಕಾಲುವೆ-ಗಳಿಗಾಗಿ ವೆಚ್ಚ ಮಾಡಲಾಗುತ್ತಿತ್ತು

(ಆ) **ಸೈನ್ಯವ್ಯವಸ್ಥೆ** — ಸೈನ್ಯಶಾಖೆಯಲ್ಲಿ ಬುದ್ಧಿವಂತರಾದವರನ್ನು ಗುಪ್ತ-ಚಾರರೆಂದು ನಿಯಮಿಸುತ್ತಿದ್ದರು ಏಕೆಂದರೆ, ನಂದವಂಶದ ನಿರ್ಮೂಲನ ವಾಗಿದ್ದರೂ ಅವರ ಪರವಾಗಿ ಹೋರಾಡಿದ **ಅಮಾತ್ಯರಾಕ್ಷಸನು** ಇನ್ನೂ ಚಂದ್ರಗುಪ್ತನನ್ನು ಗತಿಗಾಣಿಸುವ ಹಂಚಿಕೆಯನ್ನು ಹಾಕುತ್ತಲೇ ಇದ್ದನು ಒಳಸಂಚುಗಳು ನಡೆಯದಂತೆ ನೋಡಿಕೊಳ್ಳುವುದೂ, ರಾಜ್ಯದಲ್ಲಿಯ ಅಂತರಂಗದ ಆಗು-ಹೋಗುಗಳನ್ನು ರಾಜನಿಗೆ ತಿಳಿಸುವುದೂ, ಗುಪ್ತಚಾರರ ಕೆಲಸವಾಗಿತ್ತು

ಸೈನ್ಯವಿಭಾಗದಲ್ಲಿ ಆನೆ-ಕುದುರೆ-ಕಾಲಾಳು-ದಳಗಳು ಮುಖ್ಯವಾಗಿ ದ್ದುವು ಅವರಲ್ಲಿ ಮುಂದಳ, ಹಿಂದಳ, ಮಧ್ಯದಳಗಳೆಂದೂ ಗೊತ್ತಾಗಿತ್ತು ಆ ಸೈನ್ಯದಲ್ಲಿ ೮ ಸಾವಿರ ರಥ, ೯ ಸಾವಿರ ಆನೆ, ೩೦ ಸಾವಿರ ರಾಹುತರು,

೬ ಲಕ್ಷ ಕಾಲಾಳುಗಳಿದ್ದರು ಎಂದು ಪ್ಲಿನಿ ಎಂಬ ಯವನನು ಹೇಳುತ್ತಾನೆ ಈ ಚತುರಂಗಬಲದ ಎಣಿಕೆಯಿಂದಲೇ ಚಂದ್ರಗುಪ್ತನ ಶೌರ್ಯ-ಸಾಮರ್ಥ್ಯಗಳ ಸಾಮಾನ್ಯ ಕಲ್ಪನೆಯಾಗುವಂತಿದೆ

ಕಾಲಾಳುಗಳು ಆಳೆತ್ತರದ ಬಿಲ್ಲು-ಬಾಣಗಳನ್ನೂ ಕತ್ತಿ-ಢಾಲುಗಳನ್ನೂ ಉಪಯೋಗಿಸುತ್ತಿದ್ದರು ಅದರಂತೆ ಇಮ್ಮೈ ಅಲಗಿನ ಕಿರುಗತ್ತಿಗಳೂ ಬಳಕೆಯಲ್ಲಿದ್ದುವು ಕೊಡಲಿ-ಚಪ್ಪಗೊಡಲಿಗಳೂ ಅವರ ಆಯುಧಗಳಿದ್ದವು

ಹೀಗೆ ಚತುರಂಗ ಸೈನ್ಯವಲ್ಲದೆ ಹಡಗುಪಡೆಯೂ ಮೌರ್ಯರಲ್ಲಿದ್ದಿತು ಅದಕ್ಕೊಬ್ಬ ಸ್ವತಂತ್ರ ಅಧಿಕಾರಿ ಇದ್ದನು

(ಇ) **ನ್ಯಾಯಶಾಖೆ** – ಚಂದ್ರಗುಪ್ತನ ರಾಜ್ಯದಲ್ಲಿ ಮುಖ್ಯವಾಗಿ ಕೌಟಿಲ್ಯನ **ನ್ಯಾಯಶಾಸ್ತ್ರ**ದಂತೆಯೇ **ದಂಡನೀತಿಯು** ನಡೆವಳಿಕೆಯಲ್ಲಿದ್ದಿತು ಇದರಂತ **ಮಂತ್ರಿಪರಿಷತ್ತು** ಕಾಲಕಾಲಕ್ಕೆ ಯೋಗ್ಯ ಶಾಸನಗಳನ್ನು ರಚಿಸುತ್ತಿತ್ತು ಕಳವು, ಮೋಸ, ಕೊಲೆಗಳಿಗೆ ದಯಾ-ದಾಕ್ಷಿಣ್ಯಗಳನ್ನು ತೋರಿಸುತ್ತಿರಲಿಲ್ಲ ಆದುದರಿಂದ ಜನರು ಸಹಸಾ ಕಟ್ಟ ಕಲಸಗಳಿಗ ಮನಸ್ಸು ಮಾಡುತ್ತಿರಲಿಲ್ಲ

(ಈ) **ವ್ಯಾಪಾರಶಾಖೆ** — ವ್ಯಾಪಾರಶಾಖೆಯ ಅಧಿಕಾರಿಗಳು ವ್ಯಾಪಾರವೆಲ್ಲ ಪ್ರಾಮಾಣಿಕರೀತಿಯಿಂದ ನಡೆಯುವಂತೆ ನೋಡಿಕೊಳ್ಳುತ್ತಿದ್ದರು ಹಳೆಯ ಮತ್ತು ಹೊಸ ಸರಕುಗಳನ್ನು ಬೆರಕೆಮಾಡಗೊಡುತ್ತಿರಲಿಲ್ಲ ಮತ್ತು ದೇಶವಿದೇಶಗಳಿಗ ಹಡಗುಗಳ ಮುಖಾಂತರ ವ್ಯಾಪಾರಕ್ಕೆ ಅನುಕೂಲತೆಗಳನ್ನೂ ಒದಗಿಸಿಕೊಡುತ್ತಿದ್ದರು ಭೂಮಾರ್ಗದ ವ್ಯಾಪಾರಕ್ಕಂತೂ ವಿಶೇಷ ಸೌಕರ್ಯಗಳನ್ನಿಟ್ಟಿದ್ದರು

(ಉ) **ರಾಜಮಾರ್ಗ** — ವ್ಯಾಪಾರದ ಸರಕುಗಳ ಸಾಗಾಟಕ್ಕೂ ಜನರ ಓಡಾಟಕ್ಕೂ ಸೈನ್ಯದ ಸಂಚಲನೆಗೂ ರಾಜಮಾರ್ಗಗಳ ಆವಶ್ಯಕತೆ ಬಹಳವಾಗಿದ್ದಿತು ಅದರಿಂದ, ಆ ಶಾಖೆಯ ಅಧಿಕಾರಿಗಳು ಮಾರ್ಗಸೌಕರ್ಯಗಳನ್ನು ಹೆಚ್ಚಾಗಿಯೇ ಒದಗಿಸಿದ್ದರು **ತಕ್ಷಶಿಲೆಯಿಂದ ಪಾಟಲೀಪುತ್ರಕ್ಕೂ** ಪಾಟಲೀಪುತ್ರದಿಂದ **ಕಾಶಿ ಭಡೋಚಗಳ** ವರೆಗೂ ರಾಜಮಾರ್ಗಗಳಿದ್ದುವು ಮಾರ್ಗದ ಎರಡೂ ಬದಿಗಳಲ್ಲಿ ದಟ್ಟ ನೆರಳಿನ ಗಿಡಗಳನ್ನು ಹಚ್ಚಿಸಿದ್ದರು ಅಲ್ಲಲ್ಲಿ ಧರ್ಮಶಾಲೆಗಳ, ಬಾವಿಗಳ ಅನುಕೂಲತೆ ಮಾಡಿದ್ದರಿಂದ, ಹಾದಿಕಾರರಿಗೆ ಹೆಚ್ಚಿನ ಸೌಕರ್ಯ ಸಿಕ್ಕಿದ್ದಿತು ಹಾದಿಯ ಅಳತೆಯನ್ನು ತಿಳಿಸುವುದಕ್ಕೆ ಮೈಲುಗಲ್ಲುಗಳನ್ನು ನೆಡಿಸಿದ್ದರು.

(ಊ) **ಕಲೆ-ಕೈಗಾರಿಕೆಗಳು** – ಅಧಿಕಾರಿಗಳು ಕಲೆ-ಕೈಗಾರಿಕೆಗಳ ಮೇಲ್ವಿಚಾರಣೆ ಮಾಡುತ್ತಿದ್ದರು, ಅದಕ್ಕೆ ಬೇಕಾಗುವ ಸಾಹಾಯ್ಯ-ಸಲಕರಣೆ

ಗಳನ್ನು ಒದಗಿಸುತ್ತಿದ್ದರು ಅನಾಥ ಮಹಿಳೆಯರು ತಮ್ಮ ಮನೆಗಳಲ್ಲಿ ಇದ್ದುಕೊಂಡು ರಾಟೆಯಿಂದ ನೂಲು ತೆಗೆದು ಸರಕಾರದ ಅಧಿಕಾರಿಗಳಿಗೆ ನೂಲನ್ನು ಒಪ್ಪಿಸುತ್ತಿದ್ದರೆಂದೂ ಅದನ್ನೆಲ್ಲ ಅವರು ಶೇಖರಿಸಿ, ಮಗ್ಗಗಳಲ್ಲಿ ನೆಯಿಸಿ, ಅರಿವೆ ತಯಾರಿಸಿ ಮಾರುತ್ತಿದ್ದರೆಂದೂ ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿದುಬರುತ್ತದೆ ಒಕ್ಕಲುತನಕ್ಕೆ ಸಂಬಂಧಿಸಿದ ಉದ್ಯೋಗಗಳು ಗಣಿಕೆಲಸಗಳು, ಅರಣ್ಯ ಸಂಪದಭಿವೃದ್ಧಿ ಮತ್ತು ನೀರಾವರಿಗಳ ಕಡೆ ಹೆಚ್ಚಾಗಿ ಗಮನಕೊಟ್ಟಿದ್ದರು ಇದರಂತೆ ಉಳಿದ ಕೈಗಾರಿಕೆಗಳೂ ಊರ್ಜಿತದಲ್ಲಿರುವಂತೆ ವ್ಯವಸ್ಥೆ ಮಾಡಿದ್ದರು

(ಎ) **ಮನೋರಂಜನೆಯ ಸಾಧನಗಳು** — ಊರ ಉಪವನಗಳಲ್ಲಿಯೂ ಅರಮನೆಯ ಉದ್ಯಾನಗಳಲ್ಲಿಯೂ ನವಿಲು ಪಾರಿವಾಳಗಳನ್ನು ಸಾಕುತ್ತಿದ್ದರು ಅರಗಿಳಿಗಳು ಮನೆಮನೆಗೂ ಕಂಡುಬರುತ್ತಿದ್ದುವು ಅರಮನೆಯಲ್ಲಿ ಆಳವಾದ ಹೊಂಡಗಳನ್ನು ಮಾಡಿ ಅವುಗಳಲ್ಲಿ ಬಗಬಗೆಯ ಬಣ್ಣದ ಮೀನುಗಳನ್ನು ಇರಿಸುತ್ತಿದ್ದರೆಂದು ಮೆಗ್ಯಾಸ್ತನೀಸನು ಹೇಳುತ್ತಾನೆ ರಾಜೋದ್ಯಾನಗಳಲ್ಲಿ ದೇಶ-ವಿದೇಶಗಳ ಚಲುವಾದ ಗಿಡಬಳ್ಳಿಗಳಿರುತ್ತಿದ್ದುವು ಹುಲ್ಲುಬೇಲಿಯನ್ನು ಅಂದಚೆಂದವಾಗಿ ಕತ್ತರಿಸುವ, ಬಗಬಗೆಯ ಆಕೃತಿಗಳನ್ನು ಮಾಡುವ ಕಲೆಯು ಅವರಿಗೆ ತಿಳಿದಿತ್ತು

(ಏ) **ಜನಜೀವನ** — ಜನರು ಸರಳಜೀವಿಗಳಾಗಿ ಸುಖದಿಂದ ಬಾಳುತ್ತಿದ್ದರು ಅಸೂಯೆ-ಮೇಲಾಟಗಳೂ ತಂಟೆ-ಜಗಳಗಳೂ ಕಡಿಮೆ. ಸಾಕ್ಷಿಗಳ ಆವಶ್ಯಕತೆಯೇ ಇರಲಿಲ್ಲ ಎಲ್ಲರೂ ನಂಬಿಗೆಯಿಂದ ಹಣದ ವ್ಯವಹಾರ ಮಾಡುವರು ಸತ್ಯ ಸದ್ಗುಣಗಳು ಜನರಿಗೆಲ್ಲ ಪ್ರಾಣಕ್ಕಿಂತ ಪ್ರಿಯವಾಗಿದ್ದುವು ಜನರು ಮನೆಗಳಿಗೆ ಬೀಗ ಹಾಕುತ್ತಿರಲಿಲ್ಲ, ಏಕೆಂದರೆ ಅವರಿಗೆ ಕಳ್ಳಕಾಕರ ಭಯವೇ ಇರಲಿಲ್ಲವೆಂದು ಮೆಗ್ಯಾಸ್ತನೀಸನು ಹೇಳುತ್ತಾನೆ. ಸ್ತ್ರೀಯರಿಗೂ ಯೋಗ್ಯ ಮಾನ-ಮನ್ನಣೆ ದೊರೆಯುತ್ತಿದ್ದುವು

ಒಕ್ಕಲಿಗರು ವರುಷದಲ್ಲಿ ಎರಡು ಬೆಳೆಗಳನ್ನು ತೆಗೆದುಕೊಳ್ಳುತ್ತಿದ್ದರು ಆದುದರಿಂದ ಬರಗಾಲದ ಭೀತಿಯೇ ಇರಲಿಲ್ಲ ಭತ್ತ, ಬೇಳೆ, ಕಾಳುಕಡಿಗಳು ಎಲ್ಲರಲ್ಲಿಯೂ ಸಮೃದ್ಧವಾಗಿರುತ್ತಿದ್ದುವು

**ಕೌಟಿಲ್ಯನ ಅರ್ಥಶಾಸ್ತ್ರ** — ಈ ವರೆಗೆ ಹೇಳಿದ ವಿಚಾರಗಳಿಂದ ಚಂದ್ರಗುಪ್ತನ ರಾಜ್ಯವು ಅಥವಾ ಮೌರ್ಯಸಾಮ್ರಾಜ್ಯವು ಶಾಂತಿ-ಸಮೃದ್ಧಿಗಳಿಂದ ಪೂರ್ಣವಾಗಿದ್ದಿತೆಂದು ತಿಳಿಯುತ್ತಿದೆ. ಈ ಉತ್ತಮ ಆಡಳಿತಕ್ಕೆ ಕೌಟಿಲ್ಯ ಅಥವಾ ಆರ್ಯ ಚಾಣಕ್ಯಮಂತ್ರಿಯ **ಅರ್ಥಶಾಸ್ತ್ರ-ನ್ಯಾಯಶಾಸ್ತ್ರ**ಗಳೇ ಕಾರಣವೆಂದು ಇತಿಹಾಸಕಾರರು ಹೇಳುತ್ತಾರೆ ಕೌಟಿಲ್ಯನ ಕಾರಸ್ಥಾನದ ಬಗೆಗೆ

**ಮುದ್ರಾರಾಕ್ಷಸ** ನಾಟಕವು ಒಳ್ಳೆಯ ಉದಾಹರಣವಾಗಿದೆ ಈ ಅರ್ಥಶಾಸ್ತ್ರದಲ್ಲಿ ಜನರಿಗೆ ಸುಖ ಸೌಕರ್ಯಗಳು ಹೆಚ್ಚಾಗಿ ದೊರೆಯುವ ಹೇತುವಿನಿಂದಲೇ ನಿಯಮಗಳನ್ನು ರಚಿಸಿರುವರು ಅವುಗಳ ಮಾದರಿಯು ಕೆಳಗಿನಂತೆ ಇದೆ.

"ಎಲ್ಲ ವಿಭಾಗಗಳ ಅಧಿಕಾರಿಗಳೂ ತಾವು ಮಾಡತಕ್ಕ ಕೆಲಸ, ಮಾಡಿದ ಕೆಲಸ, ಉಳಿದ ಕೆಲಸ, ಆ ಬಗೆಗೆ ಆದ ಜಮಾಖರ್ಚು, ಉಳಿತಾಯ, ಕೆಲಸದ ವೇಳೆ, ಕೂಲಿಯ ದರ, ಬಿಡುವು ಮೊದಲಾದುವುಗಳನ್ನೆಲ್ಲ ಬರೆದಿಡಬೇಕು, ಕೆಲಸದ ಮೇಲ್ವಿಚಾರಣೆಗ ತಕ್ಕ ಅಧಿಕಾರಿಗಳನ್ನು ಸಂಬಳದಂತೆ ನಿಯಮಿಸಬೇಕು, ಸಣ್ಣಪುಟ್ಟ ತಪ್ಪುಗಳನ್ನು ಕ್ಷಮಿಸಿಬಿಡಬೇಕು, ಹೆಚ್ಚು ಹಿತಕಾರಿಗಳಾದವರಿಗೆ ಮೇಲಿನ ಸ್ಥಾನಗಳನ್ನು ಕೊಡಬೇಕು"

"ಗುಪ್ತಚಾರರು ಅರಸರ ಹತ್ತಿರ ಇರುವಾಗ ರಾಜವೈಭವಗಳನ್ನು ಮರೆಸುವ ಕಾರ್ಯಗಳಲ್ಲಿ ಸೇವೆಯನ್ನು ಸಲ್ಲಿಸಬೇಕು ಗುಪ್ತಚಾರರಿಗೆ ಒಬ್ಬರೊಬ್ಬರಲ್ಲಿ ವಿಶೇಷ ಸಂಬಂಧವಿರಬಾರದು ಜನರು ಒಮ್ಮತದಿಂದ ಹೇಳಿದ ಸಂಗತಿಗಳನ್ನೇ ರಾಜರು ನಿಜವೆಂದು ನಂಬಬೇಕು"

"ವಸತಿಯಿಲ್ಲದ ಸ್ಥಳಗಳಲ್ಲಿ ಇಲ್ಲವೆ ಹೊಸ ಹೊಸ ಫಲವತ್ತಾದ ಪ್ರದೇಶದಲ್ಲಿ ಸರಕಾರದವರು ಊರುಗಳನ್ನು ಕಟ್ಟಬೇಕು ಅಲ್ಲಿ ವಸತಿ ಮಾಡುವುದಕ್ಕೆ ದಟ್ಟ ವಸತಿಯೊಳಗಿನ ನಿರುದ್ಯೋಗಿಗಳನ್ನೇ ಕಳಿಸಬೇಕು. ಊರಲ್ಲಿ ಮನೆಗಳು ೧೦೦ರಿಂದ ೫೦೦ರ ವರೆಗೆ ಇರಬೇಕು ಅದರಲ್ಲಿ ಒಕ್ಕಲಿಗರ ಮತ್ತು ಕೈಗಾರಿಕೆಯವರ ಮನೆಗಳೇ ಹೆಚ್ಚಾಗಿರಬೇಕು ಸಂಕಟ ಕಾಲದಲ್ಲಿ ಒಬ್ಬರೊಬ್ಬರಿಗೆ ಸಹಾಯ್ಯವಾಗುವಂತ ಊರುಗಳನ್ನು ತುಸುತುಸು ಅಂತರದಲ್ಲಿಯೇ ಕಟ್ಟಿ, ಊರಲ್ಲಿಯೂ ಊರ ಸುತ್ತಲೂ ಗಿಡ-ಮರಗಳನ್ನು ಹೆಚ್ಚಾಗಿ ಹಚ್ಚಬೇಕು"

ಇದೇ ರೀತಿಯಾಗಿ ಹಲವಾರು ವಿಧಾಯಕ ನೀತಿ-ನಿಯಮಗಳನ್ನು ಆರ್ಯಚಾಣಕ್ಯನು ಹಾಕಿಕೊಟ್ಟಿದ್ದನು ರಾಜನೂ ಮಂತ್ರಿಯೂ ಮಂತ್ರಿಪರಿಷತ್ತೂ ಐಕಮತ್ಯದಿಂದ ಸಾಮ್ರಾಜ್ಯದ ಏಳಿಗಯನ್ನು ಇಚ್ಛಿಸುತ್ತಿದ್ದರು ಅದರಿಂದ ಮೌರ್ಯಸಾಮ್ರಾಜ್ಯವು ದಿನದಿನಕ್ಕೂ ಬೆಳೆಯುತ್ತ, ಅದರ ಕೀರ್ತಿಯು ದೂರದೂರದ ದೇಶಗಳಲ್ಲಿ ಹಬ್ಬಿದ್ದಿತು

**ಚಂದ್ರಗುಪ್ತನ ಅಂತ್ಯ** – ಹೀಗ ಸುಮಾರು ಕಾಲು ಶತಮಾನದ ವರೆಗೆ ವೈಭವದಿಂದ ರಾಜ್ಯವಾಳಿದ ಚಂದ್ರಗುಪ್ತನು, ಮುಂದಿನ ರಾಜರಿಗಲ್ಲ ಆದರ್ಶ ದೊರೆಯಾಗಿದ್ದನು ಆರ್ಯಚಾಣಕ್ಯನ ಪ್ರತಿಜ್ಞೆ ಪೂರಯಿಸಿತು ಚಂದ್ರಗುಪ್ತನಿಗೆ ಇನ್ನು ಶಾಂತಿಜೀವನ ಬೇಕಾಯಿತು ಅದರಿಂದ, ಚಂದ್ರಗುಪ್ತ ಚಕ್ರವರ್ತಿಯು ತನ್ನ ಮಗನಾದ **ಬಿಂದುಸಾರನಿಗೆ** ರಾಜ್ಯವನ್ನೊಪ್ಪಿಸಿ, ತಾನು ಜೈನಧರ್ಮವನ್ನು

ಸ್ವೀಕರಿಸಿದನು ಆ ಮೇಲೆ **ಭದ್ರಬಾಹು** ಮುನಿಗಳೊಡನೆ ದಕ್ಷಿಣಕ್ಕೆ ಹೊರಟು **ಶ್ರವಣಬೆಳುಗೊಳಕ್ಕೆ** ಬಂದನು ಅಲ್ಲಿ ಹದಿನೈದು ವರುಷ ತಪಸ್ಸು ಮಾಡಿ, **ಸಲ್ಲೇಖನವ್ರತದಿಂದ** ಮಡಿದನು (ಕ್ರಿ ಪೂ ೨೯೮)

## ಅಭ್ಯಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ವಾಕ್ಯದಲ್ಲಿ ಉತ್ತರ ಬರೆಯಿರಿ

(ಅ) ನಂದರ ನಿರ್ಮೂಲನಕ್ಕೆ ಕಾರಣವಾದ ಶಕ್ತಿ-ಯುಕ್ತಿಗಳ ಸಂಯೋಗ ಯಾರ-ಯಾರದು?

(ಆ) ಚಾಣಕ್ಯನು ನಂದರಾಜನ ಸಭೆಯನ್ನು ಬಿಟ್ಟು ಏಕೆ ಹೊರಟನು?

(ಇ) ಚಂದ್ರಗುಪ್ತನು ನಂದರಾಜನ ಸೇನಾಪತಿಯಾಗಿದ್ದವನು, ಆ ಅಧಿಕಾರವನ್ನು ಏಕೆ ಬಿಟ್ಟನು?

(ಈ) ಚಂದ್ರಗುಪ್ತನ ವಂಶಕ್ಕೆ 'ಮೌರ್ಯವಂಶ' ಎಂಬ ಹೆಸರು ಏಕೆ ಬಂದಿತು?

(ಉ) ಮೌರ್ಯ ಸಾಮ್ರಾಜ್ಯದಿಂದಲೇ ಭಾರತದ ನಿಜವಾದ ಐತಿಹಾಸಿಕ ಕಾಲವು ಆರಂಭವಾಯಿತೆಂದು ನಾವು ಏಕೆ ಅನ್ನಬಹುದು?

೨ ಕೆಳಗೆ ಕೊಟ್ಟ ವಾಕ್ಯಗಳಲ್ಲಿ, ಬಿಟ್ಟ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ —

(ಅ) —ನು ತನ್ನ ರಾಯಭಾರಿ —ನನ್ನು ಚಂದ್ರಗುಪ್ತನ ಆಸ್ಥಾನದಲ್ಲಿಟ್ಟಿದ್ದನು

(ಆ) ರಾಜಧಾನಿಯಾದ — ನಗರವು — ಮತ್ತು — — ನದಿಗಳ ನಡುವ — ಮೈಲು ಉದ್ದ — ಮೈಲು ಅಗಲವಾಗಿದ್ದಿತು ಪಟ್ಟಣದ ಸುತ್ತಲು — ಅಡಿ ಅಗಲ — ಅಡಿ ಆಳವಾದ ಕಂದಕ ಅದಕ್ಕೆ — ಯಿಂದ ನೀರಿನ ಪೂರೈಕೆಯಾಗುತ್ತಿತ್ತು ಪಟ್ಟಣದ ವ್ಯವಸ್ಥೆ ನೋಡುವುದಕ್ಕೆ — ಜನರ — ಯಿದ್ದು, ಅದರಲ್ಲಿ ಬೇರೆ ಬೇರೆ ಕಾರ್ಯಗಳಿಗಾಗಿ — — ಜನರುಳ್ಳ ಆರು — — ಗಳಿದ್ದುವು. — ಅಥವಾ — ಎಂಬ ಅಧಿಕಾರಿ ಇಡೀ ಆಡಳಿತದ ಸೂತ್ರವನ್ನು ವಹಿಸುತ್ತಿದ್ದನು
ಹುಟ್ಟುವಳಿಯ — ನಯ ಪಾಲು ರಾಜ್ಯಾದಾಯಕ್ಕೆ ಸೇರುತ್ತಿತ್ತು
ಈ ಉತ್ತಮ ಆಡಳಿತಕ್ಕೆ — ರು ಬರೆದ — ಗಳೇ ಕಾರಣವೆಂದು ಇತಿಹಾಸಕಾರರು ಹೇಳುತ್ತಾರೆ

೩ ಕೆಳಗಿನ ಅಧಿಕಾರಿಗಳ ಕೆಲಸಗಳೇನು?
ಗೋಪ, ಸ್ಥಾನಿಕ, ರಜ್ಜುಕ, ಸಾಮಾಹರ್ತೃ, ಗುಪ್ತಚಾರ

೪ ಚಂದ್ರಗುಪ್ತನು ಶ್ರವಣಬೆಳುಗೊಳಕ್ಕೆ ಯಾರ ಸಂಗಡ ಹೋದನು? ಮತ್ತು ಏಕೆ?

೫ ಚಂದ್ರಗುಪ್ತನ ಕಾಲದ ಜನಜೀವನ, ವಿಲಾಸಸಾಧನ, ವ್ಯಾಪಾರ, ಕಲೆ-ಕೈಗಾರಿಕೆಗಳ ಬಗೆಗೆ ಮೂರು ಮೂರು ವಾಕ್ಯಗಳನ್ನು ಬರೆಯಿರಿ?

# ಮೌರ್ಯ ಸಾಮ್ರಾಜ್ಯ

ಪ್ರಮಾಣ □ = ೧೦ ವರ್ಷಗಳು



# ೮ ಅಶೋಕ ಚಕ್ರವರ್ತಿ

**ಬಿಂದುಸಾರ** — ಕ್ರಿ ಪೂ ೨೯೮ರಲ್ಲಿ ಚಂದ್ರಗುಪ್ತ ಚಕ್ರವರ್ತಿಯು ಕಾಲವಾದನು ಆತನ ತರುವಾಯ, ಮಗನಾದ ಬಿಂದುಸಾರ ಪಟ್ಟಕ್ಕೆ ಬಂದನು ಈತನು ಸುಮಾರು ೨೫ ವರುಷ ಸಾಮ್ರಾಜ್ಯವನ್ನಾಳಿ ತಂದೆಯ ರಾಜ್ಯವನ್ನು ಕಾಯ್ದುಕೊಂಡು ಹೋದುದಲ್ಲದೆ, ದಕ್ಷಿಣದೇಶದಲ್ಲೆಲ್ಲ ತನ್ನ ಆಡಳಿತವನ್ನು ಭದ್ರವಾಗಿ ಸ್ಥಾಪಿಸಿದನು ಈತನ ಕಾಲಕ್ಕೆ ತುಂಗಭದ್ರೆಯ ವರೆಗೂ ಮೌರ್ಯ ಸಾಮ್ರಾಜ್ಯವು ಹಬ್ಬಿತ್ತು

**ಅಮಿತ್ರಘಾತ**ನೆಂಬ ಹೆಸರಿನಿಂದ ಬಿಂದುಸಾರನು ಇತಿಹಾಸದಲ್ಲಿ ಪ್ರಸಿದ್ಧನಾಗಿದ್ದಾನೆ ಇದರಿಂದ ಈತನ ಶೂರತನದ ಕಲ್ಪನೆ ಚೆನ್ನಾಗಿ ಆಗುವುದು ಹದಿನಾರು ರಾಜಧಾನಿಗಳನ್ನು ಆಕ್ರಮಿಸಿ ಈತನು ತನ್ನ ವಿಜಯಪತಾಕೆಯನ್ನು ಮೆರೆಸಿದನು, ಎಂದು ಹಲವು ಇತಿಹಾಸ ಸಂಶೋಧಕರು ಹೇಳುತ್ತಾರೆ ಈತನ ತರುವಾಯ ಕ್ರಿ ಪೂ ೨೭೩ರಲ್ಲಿ ಈತನ ಮಗನಾದ **ಅಶೋಕ**ನು ಪಟ್ಟವನ್ನೇರಿದನು



ಅಶೋಕನ ಸಿಂಹಸ್ತಂಭ

**ಪ್ರಿಯದರ್ಶಿ ಅಶೋಕಸಮ್ರಾಟ** — ಭಾರತದ ಇತಿಹಾಸದಲ್ಲಿ ಬಂಗಾರದ ಅಕ್ಷರಗಳಿಂದ ಬರೆಯಬಹುದಾದ ರಾಜ ಮಹಾರಾಜರ ಹೆಸರುಗಳು ಎರಡೋ ಮೂರೋ! ಮೊದಲನೆಯದಾಗಿ **ಜನಕರಾಜನ** ಹೆಸರನ್ನು ಹೇಳಬಹುದು ಆತನ ದಯಾ-ದಾಕ್ಷಿಣ್ಯ, ಸತ್ಯ-ಪ್ರೇಮ, ಪರೋಪಕಾರಗಳೂ ಬುದ್ಧಿವಂತಿಕೆಯೂ ಪುರಾಣಪ್ರಸಿದ್ಧವಾಗಿವೆ ಆದರೆ, ಅವು ಪುರಾಣಕಾಲದ ಪ್ರಸಂಗಗಳು, ಅದರಿಂದ ಐತಿಹಾಸಿಕ ಕಾಲಕ್ಕೆ ಆಧಾರವಾಗಲಾರವು ಎರಡನೆಯದಾಗಿ, **ಅಶೋಕ** ಸಮ್ರಾಟನ ಹೆಸರನ್ನೇ ಹೇಳಬೇಕಾಗುತ್ತದೆ ಈತನ ಕಾಲದ ಸಂಗತಿಗಳಿಗೆಲ್ಲ ಐತಿಹಾಸಿಕ ಆಧಾರಗಳಿವೆ ಆದುದರಿಂದ ಈತ **ರಾಜರ್ಷಿ**ಯೆಂಬುದನ್ನು ಎಲ್ಲ ಇತಿಹಾಸಜ್ಞರೂ ಒಪ್ಪಿದ್ದಾರೆ ಮೂರನೆಯದಾಗಿ **ಅಕಬರ** ಚಕ್ರವರ್ತಿಯ ಹೆಸರನ್ನು ಹೇಳಬಹುದು, ಆದರೆ, ರಾಜ್ಯವಿಸ್ತಾರ, ನಿಷ್ಪಕ್ಷ-ಪಾತವಾದ ಧರ್ಮಪ್ರವೃತ್ತಿ, ಸ್ವಂತದ ಪವಿತ್ರಾಚರಣೆ, ಧರ್ಮಪ್ರಸಾರ ಈ

ಕಾರ್ಯಗಳಿಂದ ಅಶೋಕ ಚಕ್ರವರ್ತಿಗೆ ಈತನು ಸರಿಯಾಗಲಾರನು! ಆದುದರಿಂದ, **ರಾಜರ್ಷಿ** ಎಂಬ ಪದವಿಗೆ ಅಶೋಕ ಚಕ್ರವರ್ತಿಯೇ ತಕ್ಕವನೆಂದು ಹೇಳಬಹುದು

ಈ ಕಾರಣದಿಂದಲೇ, ಅಶೋಕಚಕ್ರವರ್ತಿ ನೆಟ್ಟ ಧರ್ಮಸ್ತಂಭವೊಂದರ ಮೇಲೆ ವಿರಾಜಮಾನವಾಗಿರುವ ಚಕ್ರವನ್ನು, ಸ್ವತಂತ್ರ ಭಾರತದ **ತ್ರಿವರ್ಣ ರಾಷ್ಟ್ರಧ್ವಜದಲ್ಲಿ ಮೂಡಿಸಲಾಗಿದೆ** ಇದು ಭಾರತದ ಶ್ರೇಷ್ಠ ಸಂಸ್ಕೃತಿ ಮತ್ತು ಸಕಲ ಸದ್ಗುಣಗಳ ಪ್ರತೀಕವಾಗಿದೆ ಆದುದರಿಂದ ಈಗಿನ ಭಾರತ ಸರಕಾರವು ಈ ಚಕ್ರವನ್ನೊಳಗೊಂಡ ಅಶೋಕನ ಸಿಂಹಚಿಹ್ನವನ್ನು ತನ್ನ ಮುದ್ರೆಯನ್ನಾಗಿ ಅಂಗೀಕರಿಸಿದೆ ಅಂಚೆಚೀಟಿ, ನಾಣ್ಯಗಳ ಮೇಲೆಯೂ ಇದನ್ನು ಕಾಣುತ್ತೇವೆ ಎರಡು ಸಾವಿರದ ಇನ್ನೂರಕ್ಕಿಂತ ಹೆಚ್ಚು ವರುಷಗಳ ಮೇಲೆಯೂ ಪ್ರಭಾವವನ್ನು ಬೀರಬಹುದಾದ ಪ್ರಿಯದರ್ಶಿ ಅಶೋಕ ಸಮ್ರಾಟನ ಆಳಿಕೆ, ಎಷ್ಟು ಆದರ್ಶವಾಗಿರಬಹುದೆಂಬುದನ್ನು ಇದೊಂದೇ ಉದಾಹರಣದಿಂದ ತರ್ಕಿಸಬಹುದು

**ಸಿಂಹಾಸನಾರೋಹಣ** — ಬಿಂದುಸಾರನಿಗ ಮೂವರು ಮಕ್ಕಳು ಸುಷೀಮ, **ಅಶೋಕ,** ವೀತಶೋಕ ಹಿರಿಯ ಮಗನು ಅಷ್ಟು ಸಮರ್ಥನಾಗಿರಲಿಲ್ಲ ಆತ ತಕ್ಷಶಿಲಾ ಪ್ರಾಂತದ ಮುಖ್ಯಾಧಿಕಾರಿಯಾಗಿದ್ದಾಗ, ಅಲ್ಲಿಯ ಜನರು ಮೌರ್ಯರ ಆಧಿಪತ್ಯ ಬೇಡವೆಂದು ದಂಗೆ ಎದ್ದರು ಆಗ, ಅಶೋಕನೇ ಉಜ್ಜಯಿನಿಯಿಂದ ಅಲ್ಲಿಗೆ ಹೋಗಿ ಆ ದಂಗೆಯನ್ನಡಗಿಸಿದ್ದನು ಆದುದರಿಂದ, ತಂದೆಯ ತರುವಾಯ ಈತನನ್ನೇ ಸಿಂಹಾಸನಕ್ಕೆ ಏರಿಸಿದರು

**ಕಲಿಂಗ ಕಾಳಗ** — ಅಶೋಕ ಪಟ್ಟಕ್ಕೆ ಬಂದಾಗ ಮೌರ್ಯ ಸಾಮ್ರಾಜ್ಯ ಸಂಪೂರ್ಣ ಉತ್ತರ ಭಾರತವನ್ನು ವ್ಯಾಪಿಸಿತ್ತು ಮತ್ತು ದಕ್ಷಿಣಕ್ಕೆ **ಪೆನ್ನಾರ** ನದೀತೀರದಲ್ಲಿ **ನೆಲ್ಲೂರು, ಕೊಂಕಣಪಟ್ಟಿ, ದಕ್ಷಿಣತಪ್ಪಲು**ಗಳನ್ನು ಒಳಗೊಂಡಿತ್ತು ಆದರೆ ಪೂರ್ವಭಾಗದಲ್ಲಿ **ಒರಿಸಾದ** ಕಡೆಗೆ ಕೆಲವು ಸ್ವತಂತ್ರ ರಾಜ್ಯಗಳಿದ್ದುವು ಅವುಗಳಲ್ಲಿ **ಕಲಿಂಗದೇಶ** ಬಲು ಪ್ರಬಲವಾಗಿತ್ತು

ಕಲಿಂಗ ದೇಶದಲ್ಲಿ ಜೈನಧರ್ಮ ಬಳಕೆಯಲ್ಲಿತ್ತು ಜನರು ಬಹಳ ಶೂರರು, ಸ್ವಾತಂತ್ರ್ಯಪ್ರಿಯರು, ಸಮುದ್ರವ್ಯಾಪಾರದ ಮೂಲಕ ಸಿರಿವಂತರಾಗಿದ್ದರು ಇಂತಹ ಸಿರಿವಂತ ಬಲಾಢ್ಯರಾಷ್ಟ್ರ ನೆರೆಯಲ್ಲಿಯೇ ಸ್ವತಂತ್ರವಾಗಿರುವುದು ಅಶೋಕನಿಗೆ ಒಪ್ಪಿಗೆಯಾಗಲಿಲ್ಲ ಅದರಿಂದ ಅವನು ಬಲವಾದ ಸೈನ್ಯದೊಡನೆ ಕಲಿಂಗದ ಮೇಲೆ ದಾಳಿಮಾಡಿದನು. ಎರಡೂ ದಳಗಳಲ್ಲಿ ತುಮುಲಯುದ್ಧ ನಡೆಯಿತು ಲಕ್ಷಾನುಲಕ್ಷ ಸೈನಿಕರ ದೇಹಗಳು ತುಂಡು-ತುಂಡಾದವು! ರಕ್ತದ ಕಾಲುವೆ ಹರಿಯಿತು ಒಂದೂವರೆ ಲಕ್ಷ ಸೈನಿಕರು

ಗಾಯಾಳುಗಳಾಗಿ ಸೆರೆಸಿಕ್ಕರು! ಆ ಮೇಲೆ ಕೂಡ ಲಕ್ಷಗಟ್ಟಲೆ ನಿರಪರಾಧಿಗಳಾದ ನಾಗರಿಕರು ರೋಗರುಜನಗಳಿಂದ ಸಾವಿಗೆ ತುತ್ತಾದರು! ಅಶೋಕ ಚಕ್ರವರ್ತಿಗೆ ಜಯವಾದುದೇನೋ ನಿಜ! ಆದರೆ, ಈ ಕಲಿಂಗ ಕಾಳಗದ ಕೋಲಾಹಲ ಅವನ ಕರುಳನ್ನು ಕಿವುಚಿತು! ನಿರಪರಾಧಿಗಳ ನ[illegible]ವುಗಳು ಅವನ ಅಂತರಂಗಕ್ಕೆ ಚುಚ್ಚಿದುವು! ಈ ಹಿಂಸಾಪ್ರವೃತ್ತಿಗಳಿಂದ ಆತನ




ಕಲಿಂಗದ ಕಾಳಗ

ಮನಸ್ಸಿನಲ್ಲಿ ಹೇಸಿಕೆ ಹುಟ್ಟಿತು! ಅದರಿಂದ, ಆತನು ಅಲ್ಲಿ ತನ್ನ ಪ್ರತಿನಿಧಿಯನ್ನೂ ಇಬ್ಬರು ಆಡಳಿತಗಾರರನ್ನೂ ನಿಯಮಿಸಿ ಆ ಜನರನ್ನು ಬಹು ಪ್ರೀತಿಯಿಂದ ಆಳಬೇಕೆಂದೂ ಅವರ ಒಲವನ್ನು ಸಂಪಾದಿಸಬೇಕೆಂದೂ ಆಜ್ಞೆ ಮಾಡಿ, ತಾನು ಪಾಟಲೀಪುತ್ರಕ್ಕೆ ತಿರುಗಿದನು

**ಹೃದಯಪರಿವರ್ತನೆ** — ಕಲಿಂಗದ ಕಾಳಗವು ಅಶೋಕನ ಹೃದಯವನ್ನು ಪರಿವರ್ತಿಸಿ ಬಿಟ್ಟಿತು! ಇನ್ನೆಂದೂ ಕೊಲೆಗೆ ಕೈಯಿಕ್ಕಲಿಕ್ಕಿಲ್ಲೆಂದು ಪ್ರತಿಜ್ಞೆಯನ್ನು ಮಾಡಿದನು ಅದೇ ಹೊತ್ತಿಗೆ ನರಿಯಾಗಿ ಆತನಿಗೆ ಉಪಗುಪ್ತನೆಂಬ ಬೌದ್ಧಗುರುವಿನ ದರ್ಶನವಾಯಿತು ಆತನಿಂದ ಅಶೋಕ ಚಕ್ರವರ್ತಿಯು ಬೌದ್ಧಧರ್ಮದೀಕ್ಷೆಯನ್ನು ತೆಗೆದುಕೊಂಡನು ಅಂದಿನಿಂದ ಅಹಿಂಸೆ, ಸತ್ಯ, ಸದಾಚಾರ, ಪರೋಪಕಾರ, ಪ್ರೇಮಗಳಿಗೆ ಆತನ ಹೃದಯವು ತವರುಮನೆಯಾಯಿತು ಇಷ್ಟೇ ಅಲ್ಲ, ರಾಜ್ಯದಲ್ಲಿ ಅಧಿಕಾರಿಗಳೂ ಪ್ರಜೆಗಳೂ ಇದೇ ಭಾವನೆಯಿಂದಲೇ ನಡೆದುಕೊಳ್ಳಬೇಕೆಂದು ರಾಜಾಜ್ಞೆಯನ್ನು ಹೊರಡಿಸಿದನು ಯಾರೂ ಯಾವ ಕಾರಣದಿಂದಲೂ ಪ್ರಾಣಿಗಳನ್ನು ಕೊಲ್ಲಬಾರದೆಂದು ಕಟ್ಟಪ್ಪಣೆಮಾಡಿದನು ತಾನು ವಿಲಾಸ-ವೈಭವಗಳಿಂದಲೂ ದೂರನಾಗಿ, ಸಂನ್ಯಾಸಿಯಂತೆ ಕಾಲ ಕಳೆಯಹತ್ತಿದನು

**ರಾಜ್ಯವ್ಯವಸ್ಥೆ** — ಆದರೂ ಅಶೋಕ ಚಕ್ರವರ್ತಿ ರಾಜ್ಯವ್ಯವಸ್ಥೆಯನ್ನು ಚೆನ್ನಾಗಿ ಇರಿಸಿದ್ದನು ಆತನ ಸುವ್ಯವಸ್ಥೆ ಇಂದಿಗೂ ಮಾದರಿಯಾಗಿದೆ. ಆ ಕಾಲದ ಅಧಿಕಾರ ವ್ಯವಸ್ಥೆಯೆಂದರೆ

೧ **ಕುಮಾರರು** ಅಥವಾ ಅರಸುಮಕ್ಕಳು ಇವರೆಲ್ಲ ಹಲವು ಮುಖ್ಯ ಪ್ರಾಂತಗಳ ಮುಖ್ಯಾಧಿಕಾರಿಗಳಿದ್ದರು ಇವರ ಸಹಾಯಕ್ಕಾಗಿ ಮಂತ್ರಿ-ಪರಿಷತ್ತುಗಳೂ ಇರುತ್ತಿದ್ದುವು

೨ **ಮಹಾಮಾತ್ರರು** — ಇತರ ಪ್ರಾಂತಗಳ ಮುಖ್ಯಾಧಿಕಾರಿಗಳು, ಅಲ್ಲದೆ, ಪ್ರತಿಯೊಂದು ವಿಭಾಗ (ಖಾತೆ)ದ ಮುಖ್ಯಾಧಿಕಾರಿಗಳು

೩ **ರಜ್ಜುಕರು** — ಕಾರ್ಯವಾಹಕ ಅಧಿಕಾರಿಗಳು ಇವರಿಗೆ ಭೂಮಿಯನ್ನು ಅಳೆಯುವ ಮತ್ತು ತೆರಿಗೆಯನ್ನು ತೆಗೆದುಕೊಳ್ಳುವ ಅಧಿಕಾರವಿರುತ್ತಿದ್ದಿತು

೪ **ಪ್ರಾದೇಶಿಕರು** — ಪ್ರಾಂತದ ಆಡಳಿತಗಾರ ಅಥವಾ ಸ್ಥಾನಿಕ ಅಧಿಕಾರಿ, ಇಲ್ಲವೆ ಜಿಲ್ಹಾಧಿಕಾರಿ ತೆರಿಗೆಯನ್ನು ಕೂಡಿಸುವುದೂ ಅಪರಾಧಿಗಳ ನ್ಯಾಯನಿರ್ಣಯ ಮಾಡುವುದೂ ಈತನ ಕೆಲಸ

೫ **ಯುಕ್ತರು, ಪುರುಷರು, ಪ್ರತಿವೇದಕರು, ಮಜಭೂಮಿಕರು** — ಇವರೆಲ್ಲರು ರಜ್ಜುಕರಿಗೂ ಪ್ರಾದೇಶಿಕರಿಗೂ ಸಹಾಯಕರಾಗಿ ಪ್ರಾಂತದ ಆಡಳಿತದಲ್ಲಿ ಪ್ರತ್ಯಕ್ಷವಾಗಿ ಕೆಲಸಮಾಡುವ ಕೆಳಗಿನ ತರಗತಿಯ ಅಧಿಕಾರಿಗಳು

೬. **ಧರ್ಮಮಹಾಮಾತ್ರರು** — ಧಾರ್ಮಿಕ ರೀತಿ-ನೀತಿಗಳ ಮೇಲ್ವಿಚಾರಕರು,

ಬೌದ್ಧಸಂಘ ಮೊದಲಾದ ಸಂಘಗಳ ಮೇಲ್ವಿಚಾರಕರು ಇವಲ್ಲದೆ, ನಗರ ಮಹಾಮಾತ್ರರು, ಅಂತ ಮಹಾಮಾತ್ರರು ಮುಂತಾಗಿ ನಗರಗಳ ಆಡಳಿತಕ್ಕೂ ಗಡಿನಾಡಿನ ನಿರೀಕ್ಷಣಗೂ ಪ್ರತ್ಯೇಕ ಉನ್ನತಾಧಿಕಾರಿಗಳು ಇರುತ್ತಿದ್ದರು ರಾಜರು ಮತ್ತು ರಾಜಮನತನದವರು ತಮ್ಮ ದಾನದತ್ತಿಗಳಿಂದ ನಡೆಸುತ್ತಿದ್ದ ಸಂಸ್ಥೆಗಳ ಮೇಲ್ವಿಚಾರಕರು, ನ್ಯಾಯಾಲಯಗಳಲ್ಲಿ ತೀರ್ಪುಗಳೆಲ್ಲವೂ ಧರ್ಮಕ್ಕನುಸಾರವಾಗಿ ಇವೆಯೋ ಇಲ್ಲವ ಎಂದು ವಿವೇಚಿಸುವ ಅಧಿಕಾರಿಗಳು ಇದ್ದರು

ಈ ಅಧಿಕಾರಿವರ್ಗವಲ್ಲದೆ ರಾಜನ ನೆರವಿಗೆ ಒಂದು ಮಂತ್ರಿಮಂಡಲವೂ ಇದ್ದಿತು ಮೊದಲಿನ ರೀತಿ-ರೂಢಿಗಳಲ್ಲಿ ಬದಲು ಮಾಡುವುದಿದ್ದರೆ ಅವರ ಒಪ್ಪಿಗೆಯನ್ನು ಅವಶ್ಯವಾಗಿ ತೆಗೆದುಕೊಳ್ಳುತ್ತಿದ್ದನು ಈ ಕಾರಣಗಳಿಂದ ಅಶೋಕಚಕ್ರವರ್ತಿ ಅನಿಯಂತ್ರಿತ ರಾಜಸತ್ತೆಯನ್ನು ನಡೆಸುತ್ತಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು ಈ ರೀತಿಯಿಂದ ಉತ್ತಮ ಆಳಿಕೆಗೆ ಒಳಗಾದ ಪ್ರಜೆಗಳು ಶಾಂತಿ-ಸಮೃದ್ಧಿ ಪೂರ್ಣರಾಗಿದ್ದುದು ಆಶ್ಚರ್ಯವಲ್ಲ

**ಅಶೋಕನ ರಾಜ್ಯವಿಭಾಗ** -ಅಶೋಕಚಕ್ರವರ್ತಿಯ ಸಾಮ್ರಾಜ್ಯವು ಸಾಮಾನ್ಯವಾಗಿ ಸಂಪೂರ್ಣ ಭಾರತವನ್ನೇ ವ್ಯಾಪಿಸಿತ್ತೆಂದು ಹೇಳಬಹುದು ತನ್ನ ಮೌರ್ಯಮನೆತನವು ಮುನ್ನಡೆಯಲೆಂದು ತನ್ನ ರಾಜ್ಯವನ್ನು ನಾಲ್ಕು ವಿಭಾಗವಾಗಿ ಮಾಡಿದ್ದನು (೧) **ಮಾಳವ ರಾಜ್ಯ,** ರಾಜಧಾನಿ ಉಜ್ಜಯಿನಿ, (೨) **ಕಲಿಂಗ ದೇಶ,** ರಾಜಧಾನಿ ಕೋಸಲಿ, (೩) **ಸ್ವರ್ಣ ನಗರೀರಾಜ್ಯ,** ರಾಜಧಾನಿ ಸ್ವರ್ಣಗಿರಿ, (ಹೈದರಾಬಾದಿನಲ್ಲಿರುವ ಮಸ್ಕಿ) (೪) **ಪಂಜಾಬ,** ರಾಜಧಾನಿ ತಕ್ಷಶಿಲೆ

ಆತನಿರುವವರೆಗೆ ಈ ವ್ಯವಸ್ಥೆಯೆಲ್ಲ ಸರಿಯಾಗಿಯೇ ಸಾಗಿತ್ತು ಆದರೆ ಮುಂದೆ ಮಕ್ಕಳು ಸಮರ್ಥರಾಗಲಿಲ್ಲವಾದುದರಿಂದ, ಆ ಮಹಾಪುರುಷನೊಡನೆಯೇ ಮೌರ್ಯವಂಶದ ಮುಗಿತಾಯವಾಯಿತೆಂದು ಹೇಳಬಹುದು

**ಧರ್ಮಪ್ರಸಾರ.**—ಅಶೋಕಚಕ್ರವರ್ತಿ ಹೀಗೆ ರಾಜ್ಯವ್ಯವಸ್ಥೆಯನ್ನು ಮಾಡಿದ ಮೇಲೆ, ಧರ್ಮಪ್ರಸಾರಕ್ಕೆ ಕೈಹಾಕಿದನು ಬುದ್ಧದೇವನ ಕಾಲದಲ್ಲಿ ಕೂಡ ಅದು ಅಷ್ಟಾಗಿ ಬೆಳಕಿಗೆ ಬಂದಿರಲಿಲ್ಲ, ಹೊರನಾಡುಗಳಿಗೆ ಹರಡಿರಲಿಲ್ಲ ಈ ಚಕ್ರವರ್ತಿಯಿಂದಲೇ ಅದರ ಬೆಳವಣಿಗೆ ಬಲವಾಯಿತು

ಈ ಹೊತ್ತಿಗೆ ಬೌದ್ಧಶಿಷ್ಯರಲ್ಲಿ ಭಿನ್ನಾಭಿಪ್ರಾಯಗಳಾಗಿ ಬೇರೆಬೇರೆ ಗುಂಪುಗಳಾಗಿದ್ದುವು. ಅವುಗಳನ್ನೆಲ್ಲ ಚರ್ಚೆಯಿಂದ ನಿರ್ಣಯಿಸಬೇಕೆಂದು ಈತನ ಪ್ರೇರಣೆಯಿಂದ ಬೌದ್ಧಧರ್ಮದ **ಮೂರನೆಯ ಮಹಾಸಭೆಯು**

ಕೂಡಿತು ಆಮಂತ್ರಣದಂತೆ ನಾಲ್ಕೂ ನಿಟ್ಟುಗಳಿಂದಲೂ ಬೌದ್ಧಭಿಕ್ಷುಗಳೂ ಸಂನ್ಯಾಸಿಗಳೂ ಬಂದರು **ಮೊಗ್ಗಲಿ ಪುತ್ತತಿಸ್ಸರೂ, ಉಪಗುಪ್ತರೂ** ಅಧ್ಯಕ್ಷರಾಗಿದ್ದರು ಬುದ್ಧದೇವನ ವಚನಗಳ ಬಗೆಗೆ ದೀರ್ಘಕಾಲ ಚರ್ಚೆ ನಡೆಯಿತು, ಕೊನೆಗೆ ವಚನಗಳ ಅರ್ಥವನ್ನು ನಿರ್ಣಯಿಸಿದರು

ಪರಿಷತ್ತು ಮುಗಿದ ಮೇಲೆ, ಅಶೋಕ ಚಕ್ರವರ್ತಿಯು ಧರ್ಮಪ್ರಸಾರಕ್ಕಾಗಿ **ಕಾಶ್ಮೀರ, ಗಾಂಧಾರ, ಗ್ರೀಕದೇಶ, ಮೈಸೂರು, ಗುಜರಾಥ, ಮಹಾರಾಷ್ಟ್ರ ಮತ್ತು ದಕ್ಷಿಣಪ್ರಾಂತ, ಹಿಮಾಲಯ ಭಾಗ, ಬ್ರಹ್ಮದೇಶ** ಮೊದಲಾದುವುಗಳಿಗೆ ಬೌದ್ಧಭಿಕ್ಷುಗಳನ್ನೂ ಮಕ್ಕಳಾದ **ಮಹೇಂದ್ರ-ಸಂಘಮಿತ್ರೆಯರನ್ನೂ** ಕಳುಹಿಕೊಟ್ಟನು! ಇವರೆಲ್ಲರೂ ತಮ್ಮ ನಡುವದೇಶದಿಂದ ಬೌದ್ಧಧರ್ಮದ ಪ್ರಸಾರಮಾಡಿದರು ಇದರಿಂದ, ಪೂರ್ವ್ವಏಶಿಯಾ ಎಲ್ಲವೂ ಬೌದ್ಧಮಯವಾಯಿತು

**ಶಿಲಾಲೇಖಗಳು** — ಅಶೋಕನು ಬೌದ್ಧಧರ್ಮವನ್ನು ಸ್ವೀಕರಿಸಿದ್ದೇನೋ ನಿಜ, ಆದರೆ ಅವನು ಭಾರತದಲ್ಲಿ ಎಲ್ಲ ಧರ್ಮಗಳಿಗೂ ಉತ್ತೇಜನವಿತ್ತನು ಎಲ್ಲ ಧರ್ಮಗಳ **ಮೂಲತತ್ತ್ವ**ಗಳನ್ನೂ, ಎಲ್ಲ ಮಾನವರಿಗೂ ಬೇಕಾದ ಸುಗುಣಗಳನ್ನೂ ಸಾರಿದನು ತನ್ನ ಧರ್ಮಲಿಪಿಗಳಲ್ಲಿ, ತನ್ನನ್ನು "ದೇವರಿಗೆ ಪ್ರಿಯನಾದ" "ಪ್ರಿಯವಾದುದನ್ನೇ ಕಾಣುವ", ಎಂದು ಸಂಬೋಧಿಸಿಕೊಂಡಿದ್ದಾನೆ



ಶಿಲಾಲೇಖ

ಆತನ ಶಿಲಾಲೇಖಗಳು ಅನೇಕ ಬಗೆಯವಾಗಿವೆ ಧರ್ಮೋಪದೇಶ ಸಮಾಜನೀತಿ, ನೈತಿಕ ಆಚರಣ, ರಾಜಕೀಯ ಕಟ್ಟುನಿಟ್ಟು ಇವುಗಳನ್ನೆಲ್ಲ ಅವುಗಳಲ್ಲಿ ಕಾಣಬಹುದು ಸಾಮಾನ್ಯವಾಗಿ—ಎಲ್ಲರೂ ಸತ್ಯ, ನ್ಯಾಯ, ಪ್ರಾಮಾಣಿಕತೆಗಳಿಂದ ನಡೆಯಿರಿ, ತಾಯಿ-ತಂದೆಗಳನ್ನು ಮನ್ನಿಸಿರಿ, ಗುರುಗಳೊಡನೆ ನಮ್ರರಾಗಿ ನಡೆಯಿರಿ, ದಾನ-ಧರ್ಮಗಳನ್ನು ಮಾಡಿರಿ, ಪರಮತದವರನ್ನು ಆದರಿಸಿರಿ– ಈ ಮುಂತಾದ ಆದೇಶಗಳು ಪ್ರಿಯದರ್ಶಿಯ ಹೆಸರಿನಲ್ಲಿ ಕಂಡುಬರುತ್ತಿವೆ

ಈ ವರೆಗೆ ಅಶೋಕನ ಮುವ್ವತ್ತುನಾಲ್ಕು ಶಿಲಾಲೇಖಗಳು ಸಿಕ್ಕಿವೆ ಬಂಡೆಗಲ್ಲಿನಲ್ಲಿಯೂ ಸ್ತಂಭಗಳಲ್ಲಿಯೂ ಬರೆಹಗಳಿವೆ. ಅವುಗಳಲ್ಲಿ

**ಅಯೋಧ್ಯಾ** ಪ್ರಾಂತದೊಳಗಿನ ಒಂದು ಸ್ತಂಭವು ೫೦ ಅಡಿ ಎತ್ತರವಾಗಿದೆ, ಅದು ಒಂದೇ ಕಲ್ಲಿನಲ್ಲಿದ್ದು ಸುಮಾರು ೫೦ ಟನ್ ಭಾರವಾಗಿದೆಯೆಂದು ಹೇಳುತ್ತಾರೆ ಯಾಂತ್ರಿಕ ಸಾಧನವಿಲ್ಲದ ೨೦೦೦ ವರುಷಗಳ ಪೂರ್ವದಲ್ಲಿ ಆ ಕಲ್ಲನ್ನು ಹೇಗೆ ಎತ್ತಿ ಇಟ್ಟರೋ! ಎಂದಮೇಲೆ ಆಗಿನ ಶಿಲ್ಪಶಾಸ್ತ್ರವು ಎಷ್ಟು ಉಚ್ಚ ಮಟ್ಟದಲ್ಲಿರಬಹುದು? **ಸಾಂಚಿಯಲ್ಲಿಯ ಸ್ತೂಪವಂತೂ** ಎಲ್ಲವುಗಳಿಗಿಂತಲೂ ಮಿಗಿಲಾಗಿದೆ ಎತ್ತರವಾದ ಕಟ್ಟೆಯ ಮೇಲೆ, ೫೪ ಅಡಿ ಎತ್ತರವಾಗಿ, ಅರ್ಧವರ್ತುಲಾಕಾರದಿಂದ ನಿಂತಿದೆ ಇದು! ಬುದ್ಧನ ಅಸ್ಥಿಶೇಷಗಳನ್ನು ಅಶೋಕನು ೮೪೦೦೦ ಸ್ತೂಪಗಳಲ್ಲಿ ಇಡಿಸಿದನೆಂದು ಕೆಲವರು ಹೇಳುತ್ತಾರೆ!



ಅಶೋಕನ ಸ್ತಂಭ (ಅಯೋಧ್ಯ)

**ಆಜೀವಕರ** ವಸತಿಯ ಸಲುವಾಗಿ ಗುಹೆಗಳೂ ಭಿಕ್ಷುಕರಿಗಾಗಿ ಅಶೋಕಾರಾಮ ಕುಕ್ಕುಟಾರಾಮಗಳೂ ನಿರ್ಮಿತವಾಗಿದ್ದುವು ಇದರಂತೆ **ಬರ್‌ಬರ** ಗುಡ್ಡಗಳಲ್ಲಿಯೂ **ಬುದ್ಧಗಯೆ**ಯಲ್ಲಿಯೂ ಬೌದ್ಧ ಭಿಕ್ಷುಗಳ ವಸತಿಗಾಗಿ ಕಟ್ಟಿಸಿದ ಬೌದ್ಧ-ವಿಹಾರಗಳೂ ಗುಹೆಗಳೂ ಈಗಲೂ ಅವೆ

**ಲೋಕೋಪಯುಕ್ತ ಕಾರ್ಯಗಳು** — ಸಮಾಜಜೀವನದ ಸುಖ-ಸೌಕರ್ಯಗಳಿಗೂ ಆ ರಾಜ್ಯದಲ್ಲಿ ಕೊರತೆಯಿರಲಿಲ್ಲ ವ್ಯಾಪಾರ ಉದ್ದಿಮೆಗಳ ಬೆಳವಣಿಗೆಗಾಗಿ ರಾಜಮಾರ್ಗಗಳು ಇದ್ದುವು ಮಾರ್ಗದ ಇಬ್ಬದಿಗಳಲ್ಲಿಯೂ ಮರಗಳ ಸಂಖ್ಯೆ ಹೆಚ್ಚಿತು ಅಲ್ಲಲ್ಲಿ ಅನ್ನಛತ್ರಗಳೂ ಅರವಟ್ಟಿಗೆಗಳೂ ಧರ್ಮಶಾಲೆಗಳೂ ನಿರ್ಮಿತವಾಗಿದ್ದವು ಸೌರಾಷ್ಟ್ರ ಪ್ರಾಂತದಲ್ಲಿ ಅಶೋಕನ ಮಹಾಮಾತ್ರರು ನೀರಾವರಿಗಾಗಿ ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದರು ಎಂದು ತಿಳಿದುಬಂದಿದೆ ಜನಗಳಿಗೂ ದನಗಳಿಗೂ ಪುಕ್ಕಟೆಯಾಗಿ ಔಷಧೋಪಚಾರ ನಡೆಯುವಂತೆ ಎಷ್ಟೋ ಔಷಧಾಲಯಗಳೂ ಏರ್ಪಟ್ಟವು ಔಷಧೋಪಚಾರಕ್ಕೆ ಬೇಕಾಗುವ ವನಸ್ಪತಿಗಳನ್ನು ಬೆಳಸುವದಕ್ಕೆ ಸರಕಾರದ ಸಹಾಯ ದೊರೆಯುತ್ತಿತ್ತು ಎಲ್ಲ ಮತದವರಿಗೂ ತಮ್ಮ ತಮ್ಮ ಧರ್ಮಾಚರಣೆಗೆ ಬೇಕಾಗುವ ಅನುಕೂಲತೆಗಳು ಒದಗುತ್ತಿದ್ದವು, ಧರ್ಮೋಪದೇಶಕರಿ

ಗಾಗಿ ೮-೪ ಸಾವಿರ ಧರ್ಮಗೃಹಗಳಿದ್ದುವು. ಆ ಕಾಲದಲ್ಲಿ ಸಾವಿರಾರು ಜನ ಧರ್ಮೋಪದೇಶಕರಿದ್ದಂತೆ ತಿಳಿಯುತ್ತದೆ



ಸಾಂಚಿ ಸ್ತೂಪ

**ಅಶೋಕನ ಶ್ರೇಷ್ಠತೆ** — ಅಶೋಕನು ಶೂರನೂ ಧೀರನೂ ಕಡುಗಲಿಯೂ ಇದ್ದನೆಂಬುದನ್ನು ಕಲಿಂಗದ ಕಾಳಗವೇ ಹೇಳುತ್ತದೆ ಆದರೆ, ಆ ಕೊಲೆಯಿಂದ ಕರುಳು ಕಿವುಚಿ ಬೌದ್ಧಧರ್ಮವನ್ನು ಸ್ವೀಕರಿಸಿದ ಮೇಲೆ, ಆತನ ಮನಸ್ಸು ಮೇಣಕ್ಕಿಂತ ಮಿದುವಾಯಿತು ಮೊದಲಿನ ಕ್ರೂರತನವೂ, ವಿಲಾಸ-ವೈಭವಗಳೂ ಹೇಳಹೆಸರಿಲ್ಲದೆ ಹೋದುವು ದಿಗ್ವಿಜಯದ ಮೇಲಿನ ಆಸೆ ಹೋಗಿ 'ಧರ್ಮವಿಜಯವೇ ಉತ್ತಮ' ಎಂಬ ಸಂಕಲ್ಪ ಮೂಡಿತು ನ್ಯಾಯ-ನೀತಿಗಳಿಂದ ರಾಜ್ಯ ಪರಿಪಾಲನೆ ಮಾಡಬೇಕು, ಪ್ರಜೆಗಳಿಗೆ ಶಾಂತಿ-ಸಮೃದ್ಧಿಗಳನ್ನು ಒದಗಿಸಬೇಕು, ಬೌದ್ಧಧರ್ಮವನ್ನು ಜಗತ್ತಿನ ತುಂಬ ಹಬ್ಬಿಸಬೇಕು ಇವೇ ಆತನ ಜೀವನದ ಹೆಗ್ಗುರಿಗಳಾದುವು ಅವುಗಳನ್ನು ನೆರವೇರಿಸಲು ಆಯುಷ್ಯದ ಅಂತ್ಯದ ವರೆಗೂ ಪ್ರಯತ್ನಮಾಡಿದನು

ಅಶೋಕ ಚಕ್ರವರ್ತಿಯು ಬೌದ್ಧನಾದರೂ ಪರಮತದವರನ್ನು ದ್ವೇಷಿಸುತ್ತಿರಲಿಲ್ಲ, ತಾನು ಅರಸನಾದರೂ ಸಾಮಾನ್ಯ ಮನುಷ್ಯನನ್ನೂ ಸಮಾನತೆಯಿಂದ ನಡೆಸಿಕೊಳ್ಳಬೇಕೆನ್ನುತ್ತಿದ್ದನು ಹಣ್ಣುಮಕ್ಕಳನ್ನು ಹೆಚ್ಚಾಗಿ ಗೌರವಿಸುತ್ತಿದ್ದನು ಯಾರು ಬೇಕಾದರೂ—ತಾನು ಊಟಕ್ಕ ಕುಳಿತ ಸಮಯದಲ್ಲಿ ಕೂಡ— ತಮ್ಮ ಕಷ್ಟ-ನಷ್ಟಗಳ ದೂರನ್ನು ಮುಟ್ಟಿಸಬಹುದೆಂದು ರಾಜ್ಯದಲ್ಲೆಲ್ಲ ಸಾರಿದ್ದನು ದಯಾ-ದಾಕ್ಷಿಣ್ಯ-ಪ್ರೇಮ- ಪರೋಪಕಾರಗಳಿಗೆ

ಕೊಂಚವೂ ಕೊರತೆಯಾಗದಂತೆ ನಡೆದುಕೊಳ್ಳುತ್ತಿದ್ದನು, ಅದರಂತೆ ನಡೆಯಲು ಪ್ರಜೆಗಳನ್ನೂ ಪ್ರೇರಿಸುತ್ತಿದ್ದನು ಈ ಕಾರಣಗಳಿಂದ ಅಶೋಕ ಚಕ್ರ-




ವರ್ತಿಯು ಪ್ರಜೆಗಳಿಗೂ ಪರಮಾತ್ಮನಿಗೂ ಸಮನಾಗಿಯೇ ಪ್ರಿಯದರ್ಶಿಯಾಗಿದ್ದನು! ಆತನ ಆ ಹೆಸರು ಸಾರ್ಥಕವಾದುದೆಂದೇ ಹೇಳಬೇಕು. ಅದರಿಂದಲೇ ಆತನ ಹೆಸರು ಎಂದೆಂದಿಗೂ ಆದರ್ಶವಾಗಿ ಉಳಿದಿದೆ

ಅಶೋಕನು ಮುಪ್ಪಿನ ಕಾಲದಲ್ಲಿ ತನ್ನ ಹೆಂಡಿರು-ಮಕ್ಕಳು ಮತ್ತು ಮೊಮ್ಮಕ್ಕಳ ದೆಸೆಯಿಂದ ತುಂಬ ತಳಮಳಿಸಿದನಂತೆ! ಆದರೂ, ೪೦ ವರ್ಷಗಳ ಕಾಲ ಭಾರತವರ್ಷಕ್ಕೆ ಸುಖ-ಶಾಂತಿಯನ್ನು ನೀಡಿದನು ಅಚಲವಾದ ಕೀರ್ತಿಯನ್ನು ಪಡೆದನು ಅಶೋಕಚಕ್ರವರ್ತಿಯು ತನ್ನ ೭೨ನೆಯ ವಯಸ್ಸಿನಲ್ಲಿ ಇಹಲೋಕವನ್ನು ತ್ಯಜಿಸಿದನು

**ಅಶೋಕನ ತರುವಾಯ** — ಅಶೋಕನ ತರುವಾಯ ಭಾರತದಲ್ಲಿ ಅಂತಃಕಲಹಗಳು ಮತ್ತೆ ತಲೆ ಎತ್ತಿದುವು ಕಾಶ್ಮೀರ, ಗಾಂಧಾರ, ಕಳಿಂಗ ದಕ್ಷಿಣಾಪಥ ಮೊದಲಾದ ಪ್ರಾಂತಗಳೆಲ್ಲವೂ ಸ್ವತಂತ್ರವಾದುವು ಭಾರತದ ಇತಿಹಾಸದಲ್ಲಿ ಇಂತಹ ಘಟನೆಗಳು ಆಗಾಗ ಬರುತ್ತವೆ ಕೇಂದ್ರದ ಆಡಳಿತ ಬಿಗಿಯಾದಾಗ, ಇಡಿಯ ದೇಶ ಒಕ್ಕೂಟಕ್ಕೆ ಸೇರಿರುತ್ತದೆ, ಕೇಂದ್ರದ ಬಿಗಿ ತಪ್ಪಿದಾಗ, ಪ್ರಾಂತಗಳು ತಮ್ಮ ತಮ್ಮ ದಾರಿ ಹಿಡಿಯುತ್ತವೆ ಆದರೂ ಭಾರತಸಂಸ್ಕೃತಿ ಎಲ್ಲೆಡೆಯಲ್ಲೂ ಒಂದೇ ಬಗೆಯಾಗಿದ್ದರಿಂದ, ಸಮರ್ಥ ಮುಂದಾಳು ಇರುವಾಗ, ಇಡಿಯ ಭಾರತವು ಒಕ್ಕೂಟವಾಗಿರಲು ಶಕ್ಯವಾಯಿತು

ಅಶೋಕನು ಎಲ್ಲ ಮತಗಳನ್ನು ಏಕರೀತಿಯಾಗಿ ಕಾಣಬೇಕೆಂದು ಸಾರಿದುದು ಹಲವು ತೀವ್ರವಾದಿಗಳಿಗೆ ರುಚಿಸಲಿಲ್ಲ ಯಜ್ಞ-ಯಾಗಾದಿಗಳನ್ನು ನಿಲ್ಲಿಸಿದ್ದುದರಿಂದ, ವೈದಿಕಮತದವರು ಆಕ್ರೋಶ ಮಾಡಿದರು ಅವನ ಮಕ್ಕಳು-ಮೊಮ್ಮಕ್ಕಳೊಳಗೆ ಅಂತಃಕಲಹವು ಪ್ರಾರಂಭವಾಯಿತು ಮೌರ್ಯವಂಶದ ಕಟ್ಟಕಡೆಯ ರಾಜನಾಗಿದ್ದ **ಬೃಹದ್ರಥನ** ಮೇಲೆ, ಅವನ ಕ್ರೂರತರವಾದ ಆಡಳಿತದಿಂದ ಇಡಿ ದೇಶವೇ ಕೆರಳಿತು ಆತನ ದಂಡನಾಯಕನಾಗಿದ್ದ **ಪುಷ್ಯಮಿತ್ರನು** ಜನನಾಯಕನಾಗಿ ಮುಂದ ಬಂದು, ರಾಜನನ್ನು ಕೊಂದು, ಸಿಂಹಾಸನವನ್ನು ಆಕ್ರಮಿಸಿದನು

## ಅಭ್ಯಾಸಗಳು

೧ ಹಿಂದುಸ್ತಾನದ ಬಾಹ್ಯರೇಷೆಯ ನಕಾಶೆಯನ್ನು ತೆಗೆದು, ಅದರಲ್ಲಿ ಅಶೋಕನ ಸಾಮ್ರಾಜ್ಯ ವಿಸ್ತಾರವನ್ನು ಗುರುತಿಸಿರಿ

೨ ಕೆಳಗಿನ ಪ್ರಶ್ನೆಗಳಿಗೆ ಚಿಕ್ಕ ಉತ್ತರಗಳನ್ನು ಹೇಳಿರಿ

ಅ) ಭಾರತ ಸರಕಾರವು ಅಶೋಕಚಕ್ರವನ್ನು ತನ್ನ ಮುದ್ರೆಯನ್ನಾಗಿ ಏಕೆ ಅಂಗೀಕರಿಸಿದೆ?

ಆ) ಅಶೋಕನ ಹೃದಯವನ್ನು ಪರಿವರ್ತಿಸಿದ ಪ್ರಸಂಗ ಯಾವುದು?

ಇ) ಆತನ ಅಧಿಕಾರವ್ಯವಸ್ಥೆಯಲ್ಲಿಯ ಅಧಿಕಾರಿಗಳು ಯಾರು?

ಈ) ಆತನು ಮಾಡಿದ ರಾಜ್ಯವಿಭಾಗಗಳು ಯಾವವು?

ಉ) ಧರ್ಮಲಿಪಿಗಳಲ್ಲಿ ಆತ ತನ್ನನ್ನು ಏನೆಂದು ಸಂಬೋಧಿಸಿಕೊಂಡಿದ್ದಾನೆ?

ಊ) ಅಶೋಕನ ಕಾಲದ ಶಿಲ್ಪಶಾಸ್ತ್ರವನ್ನು ತೋರಿಸುವ ಆಧಾರಗಳು ಯಾವುವು?

೩ ಕೆಳಗಿನ ಹೆಸರುಗಳ ಬಗೆಗೆ ನೀವು ಓದಿದ ಒಂದೊಂದು ಮಹತ್ತ್ವದ ಮಾತನ್ನು ಹೇಳಿರಿ

ಅಮಿತ್ರಘಾತ, ಉಪಗುಪ್ತ, ಸಂಘಮಿತ್ರೆ, ಪುಷ್ಯಮಿತ್ರ

೪. ಅಶೋಕನ ಹಸರು, ಭಾರತದ ಇತಿಹಾಸದಲ್ಲಿ ಬಂಗಾರದ ಅಕ್ಷರಗಳಿಂದ ಬರೆಯಲು ಯೋಗ್ಯವಾಗಿದೆ ಅದು ಹೇಗೆ?

---

# ೮. ಸಮ್ರಾಟ ಕನಿಷ್ಕ

**ತುಂಗವಂಶ**—(ಕ್ರಿ ಪೂ ೧೮೪—ಕ್ರಿ ಪೂ ೭೩)—ಪುಷ್ಯಮಿತ್ರನು ಭಾರದ್ವಾಜಗೋತ್ರದ ಬ್ರಾಹ್ಮಣನು ವೈದಿಕಧರ್ಮದ ಅಭಿಮಾನಿ ಮೇಲಾದ ಶಿವಭಕ್ತ ಬೌದ್ಧರನ್ನು ಕಂಡರೆ ಅವನಿಗೆ ಆಗುತ್ತಿರಲಿಲ್ಲ ಆ ಕಾಲಕ್ಕೆ ಕಾಬೂಲ ಪಂಜಾಬ ಪ್ರಾಂತಗಳಲ್ಲಿ ಬೌದ್ಧಧರ್ಮಾನುಯಾಯಿಯಾದ **ಮಿಲಿಂದ** ಎಂಬ ಗ್ರೀಕ ಅರಸನು ಆಳುತ್ತಿದ್ದನು ಅವನು ಸಿಂಧ, ಮಧುರೆ, **ಸೌರಾಷ್ಟ್ರ, ಅಯೋಧ್ಯೆ** ಪ್ರಾಂತಗಳನ್ನು ಗೆದ್ದು, ಪುಷ್ಯಮಿತ್ರನ ರಾಜಧಾನಿಯಾದ ಪಾಟಲೀಪುತ್ರಕ್ಕೂ ದಾಳಿಯಿಟ್ಟನು ಈ ಯುದ್ಧದಲ್ಲಿ ಪುಷ್ಯಮಿತ್ರನಿಗೆ ಗೆಲುವಾಯಿತು ಈ ಗೆಲುವಿನಿಂದ ವೈದಿಕಮತಾನುಯಾಯಿಗಳಿಗೆಲ್ಲ ಪರಮಾನಂದವಾಯಿತು ಆಗ ರಾಜನು ಅಶ್ವಮೇಧ ಯಾಗವನ್ನು ಮಾಡಿದನು ಯಜ್ಞಕಾಲಕ್ಕೆ ಎಲ್ಲ ಕಾರ್ಯಗಳೂ ವೈಭವದಿಂದ ನೆರವೇರಿದುವು

ಪುಷ್ಯಮಿತ್ರನ ಆರಂಭದ ಆಳಿಕೆ ಗೆಲುವಿನಿಂದಲೇ ಸಾಗಿತು ಆತನ ಮಗನಾದ **ಅಗ್ನಿಮಿತ್ರನು** ಉಜ್ಜಯಿನಿಯಲ್ಲಿ ಆತನ ಪ್ರತಿನಿಧಿಯಾಗಿ ಒಳ್ಳೇ ಬಿಗುವಿನ ಆಳಿಕೆಯನ್ನಿಟ್ಟಿದ್ದನು ಕಾಳಿದಾಸ ಕವಿಯ 'ಮಾಲವಿಕಾಗ್ನಿಮಿತ್ರ' ಎಂಬ ನಾಟಕದಲ್ಲಿ, ಈ ಅಗ್ನಿಮಿತ್ರನ ಆಸ್ಥಾನದ ವಿವರಣೆ ಇದೆ, ಆದರೆ ಕೊನೆ-ಕೊನೆಯಲ್ಲಿ ಪುಷ್ಯಮಿತ್ರನಿಗೆ ಇಳಿಗಾಲ ಪ್ರಾಪ್ತವಾಯಿತು ಕಲಿಂಗದ **ಖಾರವೇಲನೆಂಬ** ಅರಸನು ಆತನನ್ನು ಪೂರಾ ಹಣ್ಣುಮಾಡಿದನು. ಪುಷ್ಯಮಿತ್ರನು ಮೂವತ್ತಾರು ವರ್ಷ ರಾಜ್ಯವನ್ನಾಳಿ ಸತ್ತನು ಅವನ ತರುವಾಯ ಮಗನಾದ ಅಗ್ನಿಮಿತ್ರನು ಪಟ್ಟಕ್ಕೆ ಬಂದನು

**ಅಗ್ನಿಮಿತ್ರ**—ಅಗ್ನಿಮಿತ್ರನು ಪಟ್ಟಕ್ಕೆ ಬಂದಾಗ ತೀರ ವಯಸ್ಕನಾಗಿದ್ದನು. ಅವನ ಮಗ ವಸುಮಿತ್ರನು ಭಾರತದ ಮೇಲೆ ವಾಯವ್ಯ ಪ್ರಾಂತದಿಂದ ದಂಡೆತ್ತಿಬಂದ ಯವನರನ್ನು, ಸಿಂಧುನದೀತೀರದಲ್ಲಿ ಸೋಲಿಸಿ ಓಡಿಸಿದನು ಈ ನಂತರದ ಆಳಿಕೆ ಹೇಳಿಕೊಳ್ಳುವಂತಹದೇನೂ ಇಲ್ಲ ಈ ವಂಶದ **ದೇವಭೂತಿ** ಎಂಬ ಕೊನೆಯ ಅರಸನನ್ನು **ಕಾಣ್ವವಂಶದ ವಾಸುದೇವನೆಂಬ** ಮಂತ್ರಿ ಕೊಲ್ಲಿಸಿ, ತಾನೇ ಅರಸನಾದನು

**ಆ ಕಾಲದ ಸ್ಥಿತಿ**—ಮೌರ್ಯ ಮತ್ತು ಶುಂಗವಂಶದ ಕೊನೆಗಾಲದಲ್ಲಿ ಭಾರತೀಯ ಸಾಹಿತ್ಯಕ್ಕೆ ಒಳ್ಳೇ ಬಲ ಬಂದಿತ್ತು ಮಿಲಿಂದರಾಜನು ಸ್ವತಃ ವಿದ್ವಾಂಸನಾಗಿದ್ದನು ಇವನ **ಮಿಲಿಂದಪ್ರಶ್ನ** ಎಂಬ ಬೌದ್ಧಗ್ರಂಥವು

ಈಗಲೂ ಮಾನ್ಯವಾಗಿದೆ ಪಾಣಿನಿಯ ವ್ಯಾಕರಣಕ್ಕೆ ಭಾಷ್ಯವನ್ನು ಬರೆದ **ಪತಂಜಲಿ** ಋಷಿಗಳೂ ಪುಷ್ಯಮಿತ್ರನ ಕಾಲಕ್ಕೆ ಇದ್ದರು ಅವರ 'ಪಾತಂಜಲ ಯೋಗ್ಯಸೂತ್ರ' ಎಂಬ ಗ್ರಂಥವು ಒಳ್ಳೇ ಪ್ರಸಿದ್ಧವಿದೆ ಆಗ ಸಂಸ್ಕೃತ ಲಲಿತ ಸಾಹಿತ್ಯವೂ ಬಹಳ ಕಳೆಗೊಂಡಿತ್ತು

ಆ ಕಾಲದ ಧಾರ್ಮಿಕ ಆಚರಣೆಗಳೂ ಶಾಂತರೀತಿಯಲ್ಲಿ ಸಾಗುತ್ತಿದ್ದುವು ಬೌದ್ಧ, ಜೈನ, ಹಿಂದು ಧರ್ಮದವರು ಒಬ್ಬರನ್ನೊಬ್ಬರು ಪ್ರೀತಿಯಿಂದ ಕಾಣು ತ್ತಿದ್ದರು ಪರದೇಶದ ವ್ಯಾಪಾರವು ಬಹಳ ದೊಡ್ಡ ಪ್ರಮಾಣದಲ್ಲಿ ಸಾಗು ತ್ತಿತ್ತು ಅರಿವೆ, ಮಸಾಲೆಯ ಪದಾರ್ಥ, ರತ್ನ ಮತ್ತು ಶ್ರೀಗಂಧಗಳು ಸೌರಾಷ್ಟ್ರದ ರೇವುಗಳ ಮಾರ್ಗವಾಗಿಯೂ ವಾಯವ್ಯ ಗಡಿಯ ಕಣಿವೆಗಳ ಮಾರ್ಗವಾಗಿಯೂ ಪರದೇಶಗಳಿಗೆ ಹೋಗುತ್ತಿದ್ದುವು

ಮೌರ್ಯರ ಮುಗಿತಾಯ ಕಾಲದಲ್ಲಿ ಭಾರತದ ಪಶ್ಚಿಮದಲ್ಲಿ, ಭೂಮಧ್ಯ ಸಾಗರದವರೆಗೂ ಹಬ್ಬಿದ್ದ ಸೆಲ್ಯೂಕ್ಯೂಸನ ಸಾಮ್ರಾಜ್ಯವೂ ಮುಗಿತಾಯಕ್ಕ ಬಂದಿತು ಆತನ ತರುವಾಯ ಬಂದ ಅಧಿಕಾರಿಗಳು ಅಯೋಗ್ಯರಿದ್ದರು. ಅದರಿಂದ ಅಫಗಾನಿಸ್ತಾನ ಮತ್ತು ಉತ್ತರ-ಮಧ್ಯ ಏಶಿಯಾದೊಳಗಿನ ಕಾಡುಜನರು, ಪ್ರಬಲರಾಜರಾರೂ ಇಲ್ಲದ ಭಾರತದ ಕಡೆಗೆ ನುಗ್ಗ ಹತ್ತಿದರು ಅದರಲ್ಲಿ **ಪಾರ್ಥಿವ** ಅಥವಾ **ಪಹಲ್ಲವರು, ಸಿಥಿಯನ್** ಅಥವಾ **ಶಕರು, ಯುಎಚಿಗಳು, ಹೂಣರು** ಮುಖ್ಯರೆಂದು ಹೇಳಬಹುದು ಇವರೆಲ್ಲ ಭಾರತದ ಕೆಲಕೆಲವು ಭಾಗಗಳನ್ನು ಗದ್ದುಕೊಂಡು ಎಷ್ಟೋ ವರ್ಷ ಅರಸೊತ್ತಿಗೆಯನ್ನು ನಡೆಸಿದರು ಇವರಲ್ಲಿ ಹೂಣರೂ ಕುಶಾನರೂ ಪ್ರಸಿದ್ಧರು

**ಹೂಣರು** — ಹೂಣಜನರು ಭಾರತಕ್ಕೆ ಬರುವ ಮೊದಲು ಚೀನದ ಮೇಲೆ ದಾಳಿಮಾಡಿದರು ಆಗ ಅಲ್ಲಿಯ ದೊರೆ **ಶೀಹುಅಂಗಲೇ** (ಕ್ರಿ ಪೂ ೨೪೬—ಕ್ರಿ ಪೂ ೨೧೦) ಎಂಬವನು ಈ ಜನರಿಗೆ ಹೆದರಿ ಚೀನದ ಗಡಿಯುದ್ದಕ್ಕೂ ದೊಡ್ಡ ಗೋಡೆಯನ್ನು ಕಟ್ಟಿಸಿ, ತನ್ನ ದೇಶವನ್ನು ಕಾಪಾಡಿದನು.

**ಕುಶಾನರು** —(ಕ್ರಿ ಪೂ ೧೩೦—ಕ್ರಿ. ಪೂ ೧೨೦) ಈ ಹೂಣರಲ್ಲಿಯೇ **ಯುಎಚಿ, ಡಾಕಾ, ಕುಶಾನ** ಮೊದಲಾದ ಪಂಗಡಗಳಿದ್ದುವು ಇವರಲ್ಲಿ ಕುಶಾನರು ಒಳ್ಳೇ ಪ್ರಬಲರಾದರು ಇವರಲ್ಲಿ ಕುಜೋಲೋ ಹಾಗು ವೀಮಾ ಕಾಡ್ಫಿಸಸ್ ಎಂಬವರು ಇರಾಣ, ಕಾಬೂಲ, ವಾಯವ್ಯ ಪಂಜಾಬ ಮೊದ ಲಾದ ಕಡೆಗಳಲ್ಲಿ ಹೊಸ ರಾಜ್ಯವನ್ನು ಕಟ್ಟಿದರು ಕಾಡ್ಫಿಸಸನ ತರುವಾಯ ಕನಿಷ್ಕನೆಂಬ ಪ್ರಸಿದ್ಧ ಅರಸನು ಪಟ್ಟಕ್ಕೆ ಬಂದನು

**ಸಮ್ರಾಟ ಕನಿಷ್ಕ** — ಅಶೋಕನ ತರುವಾಯ ಸಮ್ರಾಟನ ಪದವಿಗೆ ಪಾತ್ರನಾದವನೆಂದರೆ ಕನಿಷ್ಕನೇ. ಸ್ವಂತದ ಬಲದಿಂದ ಬೆಳಕಿಗೆ ಬಂದವರಲ್ಲಿ ಈತನು ಅಗ್ರಗಣ್ಯನೆಂದು ಹೇಳಬಹುದು. ಈತನು ಪಾರ್ಥಿಯರನ್ನೂ ಸೋಲಿಸಿದುದಲ್ಲದೆ ಮಧ್ಯಏಶಿಯಾದ ರಾಜ್ಯವನ್ನೆಲ್ಲ ವಶಪಡಿಸಿಕೊಂಡನು. ಈತನ ಪಟ್ಟಾಭಿಷೇಕದ ಸಮಯವು ಕ್ರಿ. ವರ್ಷದ ೭೮. ಈತನೇ ಈಗಿರುವ 'ಶಾಲಿವಾಹನ ಶಕ' ಎಂಬ ಕಾಲಗಣನೆಯನ್ನು ಆರಂಭಮಾಡಿದನೆಂದು ಕೆಲವರು ಹೇಳುತ್ತಾರೆ. ಈತನು **ಪುರುಷಪುರ** ಅಥವಾ **ಪೇಶಾವರ**ದಲ್ಲಿ ತನ್ನ ರಾಜಧಾನಿಯನ್ನು ಮಾಡಿಕೊಂಡಿದ್ದನು.

**ಕನಿಷ್ಕನ ದಿಗ್ವಿಜಯ** — ಕನಿಷ್ಕನು ಚೀನಕ್ಕೆ ದಂಡೆತ್ತಿ ಹೋಗಿ, ಅವರಿಂದ ಮಧ್ಯಏಶಿಯಾದಲ್ಲಿಯ ಮೂರು ಪ್ರಾಂತಗಳನ್ನು ಕಸಿದುಕೊಂಡನು. ತಿರುಗಿ ಬರುವಾಗ ದಾರಿಯಲ್ಲಿ ಕಾಸ್ಪಿಯನ್ ಸಮುದ್ರದ ವರೆಗಿನ ಪ್ರದೇಶವನ್ನು ವಶಪಡಿಸಿಕೊಂಡನು. ಭಾರತದೊಳಗೆ ಮಾಳವ, ಮಗಧ, ಗುಜರಾಥಗಳನ್ನು ಗೆದ್ದು ಚಕ್ರವರ್ತಿಯೆಂದು ಬಿರುದು ಪಡೆದನು.

**ಅವನ ಮಹತ್ಕಾರ್ಯಗಳು** — ಕನಿಷ್ಕನು ಬೌದ್ಧ-ಧರ್ಮದ ಕಟ್ಟು ನಿಟ್ಟಿನ ಅನುಯಾಯಿ. ಅದರಿಂದ ಬೌದ್ಧಧರ್ಮವನ್ನು ಬೆಳೆಸುವುದಕ್ಕೆ ಮನ ಮುಟ್ಟಿ ಪ್ರಯತ್ನಮಾಡಿದನು. ಈ ಕಾಲಕ್ಕೆ ಬುದ್ಧದೇವನ ಉಪದೇಶ-ವಚನಗಳಲ್ಲಿ ಸಿಕ್ಕಸಿಕ್ಕಂತೆ ಪಾಠಾಂತರಗಳಾಗಿದ್ದುವು. ಅದರಿಂದ ಭಿಕ್ಷುಗಳಲ್ಲಿಯೇ ಕಾದಾಟಕ್ಕೆ ಕಾರಣವಾಗಿತ್ತು. ಇದೆಲ್ಲವನ್ನು ತಪ್ಪಿಸಿ ಒಂದು ನಿರ್ಣಯಕ್ಕೆ ಬರಬೇಕೆಂದು ಕನಿಷ್ಕ ಸಮ್ರಾಟನು ಕಾಶ್ಮೀರದೇಶದ ಕುಂಡಲ ವನದಲ್ಲಿ ಬೌದ್ಧಧರ್ಮದ ನಾಲ್ಕನೆಯ ಮಹಾಸಭೆಯನ್ನು ಕೂಡಿಸಿದನು. ಇದಕ್ಕೆ ಐನೂರಕ್ಕೆ ಮೇಲ್ಪಟ್ಟು ಬೌದ್ಧ ವಿದ್ವಾಂಸರು ಬಂದಿದ್ದರು. ಕನಿಷ್ಕನಿಗೆ ಬೌದ್ಧದೀಕ್ಷೆಯನ್ನು ಕೊಟ್ಟ **ಅಶ್ವಘೋಷರೇ** ಇದಕ್ಕೆ ಮುಖ್ಯಸ್ಥರಾಗಿದ್ದರು. ಇವರು ಕವಿ, ನಾಟಕಕಾರ, ಸಂಗೀತವಿದ್ವಾಂಸರು, ತತ್ತ್ವವೇತ್ತರು ಹೀಗೆ ಎಲ್ಲ ರೀತಿಯಿಂದಲೂ ಪ್ರಸಿದ್ಧರಾಗಿದ್ದರು. ಮಗಧರಾಜ್ಯವನ್ನು ಗೆಲ್ಲುವುದರಿಂದ ಪ್ರಾಪ್ತವಾದ ಸಂಪತ್ತಿಗಿಂತ ಅಶ್ವಘೋಷರ ಗೆಳೆತನ ಸಿಕ್ಕುದು ಕನಿಷ್ಕನಿಗೆ ಮಿಗಿಲಾದ ಸಂಪತ್ತು ಎನಿಸಿತು. ಇವರೇ ಆತನಿಗೆ ಬೌದ್ಧ ಧರ್ಮ ದೀಕ್ಷೆಯನ್ನು ಕೊಟ್ಟಿದ್ದರು.

**ಪ್ರಚಾರಕಾರ್ಯ** — ಈ ಸಭೆ ಎಷ್ಟೋ ತಿಂಗಳು ಸಾಗಿ ನಿರ್ಣಯಕ್ಕೆ ಬಂದಿತು. ಈ ಸಭೆಯ ತರುವಾಯ, ಬೌದ್ಧಧರ್ಮದಲ್ಲಿ ಮಹಾಯಾನ ಎಂಬ ಪಂಥ ಬೆಳೆಯಿತು. ಬುದ್ಧನನ್ನೇ ಭಗವಂತನೆಂದು ಭಾವಿಸಿ ಆರಾಧಿಸುವುದು, ಬುದ್ಧದೇವಾಲಯಗಳನ್ನು ಕಟ್ಟುವುದು, ಪಾಲಿಯನ್ನು ತೊರೆದು

ಸಂಸ್ಕೃತದಲ್ಲಿ ಧರ್ಮಗ್ರಂಥಗಳನ್ನು ರಚಿಸುವುದು ಇವು ಮಹಾಯಾನ ಪಂಥ ದಿಂದ ಪ್ರಚುರವಾದುವು ಮುಂದೆ ಬೌದ್ಧಧರ್ಮಪ್ರಸಾರಕ್ಕೆ ಅನೇಕ ಸ್ತೂಪ-ವಿಹಾರ-ವಿಜಯಸ್ಥಂಭಗಳನ್ನೂ ಎಷ್ಟೋ ಹೊಸ ಪಟ್ಟಣಗಳನ್ನೂ ಇವನು ಕಟ್ಟಿಸಿದನು ಪುರುಷಪುರ (ಪೇಶಾವರ)ದಲ್ಲಿ ೪೦೦ ಅಡಿ ಎತ್ತರವಾದ ಮತ್ತು ಹದಿಮೂರು ಅಂತಸ್ತುಗಳುಳ್ಳ ಸ್ತೂಪವನ್ನು ನಿಲ್ಲಿಸಿದನು

**ಧರ್ಮಭಾವನೆ** – ಕನಿಷ್ಕನು ಬೌದ್ಧಧರ್ಮವನ್ನು ಸ್ವೀಕರಿಸಿದ್ದರೂ ಪರಧರ್ಮಗಳನ್ನು ತಿರಸ್ಕರಿಸುತ್ತಿದ್ದಿಲ್ಲ, ಇಷ್ಟೇ ಅಲ್ಲ, ಪರಧರ್ಮಗಳ ಮೂರ್ತಿಪೂಜೆಯ ತತ್ತ್ವವನ್ನು ಸಹ ಈತನು ಸ್ವೀಕರಿಸಿದನು, ಹೀಗಾಗಿ, **ಗ್ರೀಕ ಝೊರಾಷ್ಟ್ರಿಯನ್** ಮತ್ತು **ಬಾಬಿಲೋನದ** ಕೆಲವು ದೇವತಾಮೂರ್ತಿಗಳು ಅಲ್ಲಲ್ಲಿ ನಿರ್ಮಾಣವಾದುವು ಇದರಂತೆ ತನ್ನ ರಾಜ್ಯದಲ್ಲಿಯ ಎಲ್ಲ ಧಾರ್ಮಿಕಸಂಸ್ಥೆಗಳಿಗೂ ಸರಿಯಾಗಿಯೇ ಸಹಾಯ ಮಾಡುತ್ತಿದ್ದನು ಈತ **"ದೇವಪುತ್ರ"** ಎಂಬ ಬಿರುದನ್ನು ಇಟ್ಟುಕೊಂಡಿದ್ದನು



ಕನಿಷ್ಕನ ರುಂಡವಿಲ್ಲದ ಪುತ್ಥಳಿ

**ಕನಿಷ್ಕನ ಕಾರ್ಯಗಳು** — ಕನಿಷ್ಕ ಸಮ್ರಾಟನ ಆಳಿಕೆಯಲ್ಲಿ ವಿದೇಶಗಳ ವ್ಯಾಪಾರ ಬಹಳವಾಗಿ ಬೆಳೆಯಿತು ಭಾರತದ ರೇಶಿಮೆ, ಮಲಮುಲಿನ ವಸ್ತ್ರಗಳನ್ನು ರೋಮನರು ಹೆಚ್ಚಾಗಿ ಕೊಳ್ಳುತ್ತಿದ್ದರು. ಆ ಕಾಲದಲ್ಲಿ ಶಿಲ್ಪಕಲೆಯೂ ಬಹಳವಾಗಿ ಬೆಳೆದಿತ್ತು **ಮಧುರಾ** ರಾಜಧಾನಿಯಲ್ಲಿ ಕನಿಷ್ಕನ ಪುತ್ಥಳಿ-ಯನ್ನು ನಿಲ್ಲಿಸಲಾಗಿತ್ತು ಈಗಲೂ ಅದನ್ನು ನೋಡಬಹುದು, ಆದರೆ ಅದು ಭಿನ್ನವಾಗಿ ಹೋಗಿದೆ ಕವಿಗಳಿಗೂ ವಿದ್ವಾಂಸರಿಗೂ ಶಾಸ್ತ್ರಜ್ಞರಿಗೂ ಈತನ ರಾಜ್ಯದಲ್ಲಿ ಮನ್ನಣೆ ಹೆಚ್ಚಾಗಿತ್ತು ಈ ಕಾಲದಲ್ಲಿಯೇ **ನಾಗಾರ್ಜುನ, ವಸುಮಿತ್ರ, ಅಶ್ವಘೋಷ** ಎಂಬ ಪಂಡಿತರು ಬೌದ್ಧಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದರು, ಪಾಲಿಯಿಂದ ಭಾಷಾಂತರಿಸಿದರು ಅನೇಕರು ಮಧ್ಯ ಏಶಿಯಾಕ್ಕೂ ಅಲ್ಲಿಂದ ಚೀನ, ಕೋರಿಯಾ, ಜಪಾನ ದೇಶಗಳಿಗೂ

ಹೋಗಿ, ಅಲ್ಲಿ ಮಹಾಯಾನ ಬೌದ್ಧಧರ್ಮವನ್ನು ಪ್ರಸಾರಮಾಡಿದರು ಆ ಧರ್ಮದ ಸಂಗಡವೇ ಭಾರತೀಯ ಸಂಸ್ಕೃತಿಯೂ ಶಿಲ್ಪ-ವೈದ್ಯಕ-ಸಂಗೀತ-ಸಾಹಿತ್ಯಗಳೂ ಅಲ್ಲೆಲ್ಲ ಮನ್ನಣೆ ಪಡೆದುವು **ಚರಕಾಚಾರ್ಯ**ನೆಂಬ ಆಯು-ರ್ವೇದ ವಿಶಾರದನು ಈತನ ಆಸ್ಥಾನ ವೈದ್ಯನಾಗಿದ್ದುದಲ್ಲದೆ, **ಚರಕ-ಸುಶ್ರುತ** ಎಂಬ ಎರಡು ಸುಪ್ರಸಿದ್ಧ ವೈದ್ಯಕ ಗ್ರಂಥಗಳನ್ನು ಬರೆದಿದ್ದಾನೆ **ವಾಗ್ಭಟ**ನೆಂಬ ವೈದ್ಯಪಂಡಿತನು **ಅಷ್ಟಾಂಗಹೃದಯ**ವೆಂಬ ವೈದ್ಯಕಗ್ರಂಥವನ್ನು ಬರೆದುದೂ ಇದೇ ಕಾಲದಲ್ಲಿಯೇ

ಕನಿಷ್ಕ ಸಮ್ರಾಟನು ತನ್ನ ಹೆಸರಿನ ಚಿನ್ನದ ನಾಣ್ಯಗಳನ್ನು ಬಳಕೆಯಲ್ಲಿ ತಂದನು ಅವುಗಳ ಮೇಲೆ ದೊರೆಯ ಮುದ್ರೆಯಲ್ಲದೆ ಹಿಮ್ಮಗ್ಗಲು ಬೇರೆ ಬೇರೆ ಜನಾಂಗಗಳ ದೇವತೆಗಳ ಮೂರ್ತಿಗಳೂ ಕೆತ್ತಲ್ಪಟ್ಟಿವೆ



ಕನಿಷ್ಕನ ನಾಣ್ಯ

ಈತನ ಕಾಲದಲ್ಲಿ ವ್ಯಾಪಾರ ಮತ್ತು ಬೇರೆ ಕಾರಣಗಳಿಂದ ಹಿಂದುಗಳು ದೂರ ದೂರದ ದೇಶಗಳಿಗೆ ಹೋಗುತ್ತಿದ್ದರು, ಅಲ್ಲಿಯೇ ವಾಸವಾಗುತ್ತಿದ್ದರು ಇವರಿಗೆ ರಾಜನಿಂದ ಎಲ್ಲ ಅನುಕೂಲತೆಯೂ ದೊರೆಯುತ್ತಿತ್ತು ಅದರಿಂದ, **ಇಜಿಪ್ತ, ಮೆಸೊಪೊಟೇಮಿಯಾ, ಜಾವಾ, ಬೋರ್ನಿಯೊ, ಬಾಲಿ** ಮುಂತಾದ ದ್ವೀಪಗಳಲ್ಲಿ ಹಿಂದುಗಳ ವಸತಿಗಳು ಉಂಟಾದುವು, ಮತ್ತು ಅಲ್ಲಿ ಆರ್ಯಸಂಸ್ಕೃತಿಯ ಕುರುಹುಗಳೂ ದೇವಾಲಯಗಳೂ ಕಾಣುವಂತಾಯಿತು

**ಕೊನೆ** – ಕನಿಷ್ಕ ಸಮ್ರಾಟನು ನಿಜವಾಗಿಯೂ ಶೂರ, ಧೀರ! ಯುದ್ಧಮಾಡುವುದರಲ್ಲಿಯೇ ಆತನ ಆಳಿಕೆಯ ಬಹುಭಾಗ ಕಳೆಯಿತು ಪೂರ್ವಕ್ಕೆ ಕಾಶಿಯ ವರೆಗೆ, ದಕ್ಷಿಣಕ್ಕೆ ಮಹಾರಾಷ್ಟ್ರದ ವರೆಗೆ, ಉತ್ತರಕ್ಕೆ ಮಧ್ಯ ಏಶಿಯದ **ಅಲ್ತಾಯಿ** ಪರ್ವತದ ವರೆಗೆ, ಪಶ್ಚಿಮಕ್ಕೆ ಇರಾಣದ ವರೆಗೆ ರಾಜ್ಯವನ್ನು ವಿಸ್ತರಿಸಿದ್ದನು ಈತನಲ್ಲಿ ಧರ್ಮಭಾವನೆಯೂ ಬಲವಾಗಿತ್ತು. ಆದರೆ, ಈತನಲ್ಲಿ ಅಶೋಕನ ದಯಾಧರ್ಮ-ನ್ಯಾತಿಕಾಚರಣೆಗಳು ಅಷ್ಟೊಂದು ಇರಲಿಲ್ಲ ಈತನು ಒಟ್ಟು ಇಪ್ಪತ್ತುಮೂರು ವರುಷ ರಾಜ್ಯಭಾರ ಮಾಡಿದಂತೆ ತಿಳಿಯುತ್ತದೆ ಕೊನೆಕೊನೆಯಲ್ಲಿ ವಾಸಿಷ್ಕ, ಹವಿಷ್ಕ ಎಂಬ ಮುಖ್ಯಾಧಿಕಾರಿಗಳಿಗೆ ಹೆಚ್ಚಾದ ಅಧಿಕಾರವಿತ್ತನೆಂದೂ ಅವರು ಇವನ ಅನಂತರ ಪಟ್ಟಕ್ಕೆ ಬಂದರೆಂದೂ ಹೇಳುತ್ತಾರೆ

ಕನಿಷ್ಕ ಸಮ್ರಾಟನು ಎರಡನೆಯ ಸಲ ಚೀನದ ಮೇಲೆ ಯುದ್ಧ ಮಾಡಲು ಮಧ್ಯ ಏಶಿಯದ ತನಕ ಹೋಗಿ ತನ್ನ ರಾಜ್ಯಕ್ಕೆ ಸೇನಾಸಮೇತನಾಗಿ ತಿರುಗಿ




ಬರುವಾಗ, ಈತನ ಮಂತ್ರಿಗಳೇ ಒಳಸಂಚಿನಿಂದ ಈತನ ಕೊಲೆ ಮಾಡಿದಂತೆ ಇತಿಹಾಸವಿದೆ

ಕನಿಷ್ಕನ ತರುವಾಯ ಕುಶಾನ ವಂಶದ ಹೆಸರು ಬಹುಕಾಲ ಉಳಿಯ ಲಿಲ್ಲ

## ಅಭ್ಯಸನಗಳು

೧ ಕೆಲವು ಐತಿಹಾಸಿಕ ಸಂಗತಿಗಳನ್ನು, ಕೆಳಗೆ ಎರಡು ವಿಭಾಗಗಳಲ್ಲಿ ಒಡೆದು ಹಿಂದೆ ಮುಂದೆ ಮಾಡಿ ಕೊಟ್ಟಿದೆ ಅವುಗಳನ್ನು ಸರಿಯಾಗಿ ಹೊಂದಿಸಿ ಹೇಳಿರಿ

| | |
|---|---|
| ಮಿಲಿಂದ ಎಂಬ ಗ್ರೀಕ ಅರಸನು | ಪಾಣಿನಿಯ ವ್ಯಾಕರಣಕ್ಕೆ ಭಾಷ್ಯವನ್ನು ಬರೆದನು |
| ಶ್ರೀಹುಅಂಗಲೇ ಎಂಬವನು | ಶಾಲಿವಾಹನ ಶಕವನ್ನು ಆರಂಭಮಾಡಿದನು |
| ಅಗ್ನಿಮಿತ್ರನು | ಮಾಲವಿಕಾಗ್ನಿಮಿತ್ರಮ್ ಎಂಬ ನಾಟಕವನ್ನು ಬರೆದನು. |
| ಪತಂಜಲಿಯು | ಹೂಣರಿಗೆ ಹೆದರಿ, ಚೀನದ ದೊಡ್ಡ ಗೋಡೆಯನ್ನು ಕಟ್ಟಿಸಿದನು |
| ಕಾಳಿದಾಸನು | ಪುಷ್ಯಮಿತ್ರನ ಮೇಲೆ ದಾಳಿ ಮಾಡಿದನು |
| ಕನಿಷ್ಕನು | ಉಜ್ಜಯಿನಿಯಲ್ಲಿ ಬಿಗುವಿನ ಆಳಿಕೆಯನಿಟ್ಟಿದ್ದನು |

೨ ಕಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತ ಉತ್ತರ ಬರೆಯಿರಿ

(ಅ) ಕನಿಷ್ಕನಿಗೆ ಬೌದ್ಧದೀಕ್ಷೆಯನ್ನು ಯಾರು ಕೊಟ್ಟರು?

(ಆ) ಬೌದ್ಧಧರ್ಮ ಪ್ರಸಾರಕ್ಕಾಗಿ ಕನಿಷ್ಕನು ಏನನ್ನು ಕಟ್ಟಿಸಿದನು?

(ಇ) ಚರಕಾಚಾರ್ಯನು ಯಾರು? ಅವನು ಬರೆದ ಗ್ರಂಥಗಳು ಯಾವವು?

(ಈ) ವಾಗ್ಭಟನು ಯಾವ ಗ್ರಂಥವನ್ನು ಬರೆದನು?

(ಉ) ಅಶೋಕನಿಗೂ, ಕನಿಷ್ಕನಿಗೂ ಯಾವ ಮಾತಿನಲ್ಲಿ ಭೇದ ಕಾಣಬರುತ್ತಿದೆ?

(ಊ) ಕನಿಷ್ಕನು ಯಾವ ನಾಣ್ಯಗಳನ್ನು ಬಳಕೆಯಲ್ಲಿ ತಂದನು?

೩ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ

ಬುದ್ಧದೇವನ ಉಪದೇಶ ವಚನಗಳಲ್ಲಿ ಸಿಕ್ಕಸಿಕ್ಕಂತೆ——ಗಳು ಇದ್ದುವು. ಅದರಿಂದ ಭಿಕ್ಷುಗಳಲ್ಲಿ——ಕ್ಕ ಕಾರಣವಾಗಿತ್ತು ಇದನ್ನು ತಪ್ಪಿಸಿ ಒಂದು ——ಕ್ಕ ಬರಬೇಕೆಂದು—— ಸಮ್ರಾಟನು——ದೇಶದ ಕುಂಡಲವನದಲ್ಲಿ——ಧರ್ಮದ——ನೆಯ ಮಹಾಸಭೆಯನ್ನು ಕರೆದನು ಇದಕ್ಕೆ——ಕ್ಕೆ ಮೇಲ್ಪಟ್ಟು ವಿದ್ವಾಂಸರು ಬಂದಿದ್ದರು——ರೇ ಇದಕ್ಕ ಮುಖ್ಯಸ್ಥರಾಗಿದ್ದರು ಈ ಸಭೆಯ ತರುವಾಯ——ಧರ್ಮದಲ್ಲಿ——ಎಂಬ ಪಂಥ ಬೆಳೆಯಿತು

# ೧೦ ಭಾರತದ ಬಂಗಾರದ ಯುಗ

(ಗುಪ್ತ ಸಾಮ್ರಾಜ್ಯ)

**ಕ್ರಾಂತಿಯ ಸಮಯ** — ಅಶೋಕಚಕ್ರವರ್ತಿಯ ಅಂತ್ಯವಾದ ಮೇಲೆ ಕನಿಷ್ಕನ ಕಾಲದ ವರೆಗೂ ಅಥವಾ ಗುಪ್ತ ಅರಸರ ಅರಸೊತ್ತಿಗೆ ಆರಂಭ ವಾಗುವವರೆಗೂ ಕ್ರಾಂತಿಯ ಸಮಯವೆಂದು ಹೇಳಬಹುದು ಹೊಸ ರಾಜ್ಯಗಳು ಹುಟ್ಟುವುದು ಹಾಳಾಗುವುದು, ಧರ್ಮಗಳು ಏರುವುದು ಇಳಿಯು ವುದು, ಲಲಿತ ಕಲೆಗಳು ಹಿಗ್ಗುವುದು ಕುಗ್ಗುವುದು, ಜನರು ಒಂದು ಧರ್ಮವನ್ನು ಬಿಟ್ಟು ಬೇರೆ ಧರ್ಮಕ್ಕೆ ಹೋಗುವುದು ಇವೇ ಮುಂತಾದ ಸಂಗತಿಗಳು ಎಡೆಬಿಡದೆ ನಡೆಯುತ್ತಿದ್ದವು ಇಂತಹ ಕ್ರಾಂತಿಸಮಯದಲ್ಲಿ ಭಾರತದ ಇತಿಹಾಸವನ್ನು ಸರಿಯಾಗಿ ತಿಳಿದುಕೊಳ್ಳುವುದು ಕಷ್ಟವೇ ಎನಿಸುವಂತಿದೆ

**ಯಾರು ಯಾರು ಎಲ್ಲಿ ಎಲ್ಲಿ?** — ಕುಶಾನ ವಂಶದ ಸಮ್ರಾಟನಾದ ಕನಿಷ್ಕ ಚಕ್ರವರ್ತಿಯ ಕೊನೆಯಾದ ಮೇಲೆ, ಅದೇ ವಂಶದ ಕೆಲವು ಅರಸರು ಕಾಬೂಲ-ಪಂಜಾಬಗಳಲ್ಲಿ ಸಣ್ಣ ಪುಟ್ಟ ರಾಜ್ಯಗಳನ್ನು ಬೇರೆಬೇರೆಯಾಗಿ ಕಟ್ಟಿಕೊಂಡು ಆಳಹತ್ತಿದರು ಇಂತಹ **ಸತ್ರಪರು** ಮಾಳವಾ-ಗುಜರಾಥ ಭಾಗಗಳಲ್ಲಿ ತಲೆಯೆತ್ತಿದರು ದಕ್ಷಿಣದಲ್ಲಿ ಬಲಾಢ್ಯರೆನಿಸಿದ ಆಂಧ್ರರನ್ನು ಅಡಗಿಸಿ **ಪಾರ್ಥಿಯನ್** ಜನಾಂಗಕ್ಕೆ ಸೇರಿದ **ಪಲ್ಲವರು** ರಾಜ್ಯಭಾರವನ್ನು ಬೆಳೆಸಿದರು ಅವರು ಬಹು ಬೇಗ ಭಾರತೀಯ ಸಂಸ್ಕೃತಿಗ ತಲೆಬಾಗಿ, ಅದರ ಬೆಳವಣಿಗೆಗಾಗಿ ದುಡಿದರು ಅತಿ ದಕ್ಷಿಣದಲ್ಲಿ **ಪಾಂಡ್ಯ, ಚೋಳ, ಕೇರಳರು** ದ್ರಾವಿಡರಾಜ್ಯವನ್ನು ಬಲಪಡಿಸಿದರು

ಹೊರಗಿನಿಂದ ಭಾರತವನ್ನು ಹೊಕ್ಕ ಶಕ-ಕುಶಾನ ಮೊದಲಾದ ಪರ-ರಾಯರು ಇಲ್ಲಿ ಬಂದಮೇಲೆ, ಹಿಂದು ಇಲ್ಲವೆ ಬೌದ್ಧಧರ್ಮವನ್ನು ಸ್ವೀಕರಿಸಿ ದುದು ಭಾರತೀಯ ಸಂಸ್ಕೃತಿಯ ವಿಜಯವೇ ಸರಿ! ಅದರಲ್ಲಿ ಕುಶಾನರ ಕನಿಷ್ಕಚಕ್ರವರ್ತಿಯು ಬೌದ್ಧಧರ್ಮದ ಬೆಳವಣಿಗೆಗೆ ಯತ್ನಿಸಿದುದು ಮಹತ್ತ್ವವುಳ್ಳದು ಆತನ ಮೊಮ್ಮಗನು ತೀರ ಭಾರತೀಯನೇ ಆಗಿ 'ವಾಸು ದೇವ' ಎಂಬ ಹೆಸರಿನಿಂದ ಕೀರ್ತಿಪಡೆದನು ಶುಂಗ, ಕಾಣ್ವ ಮನೆತನ ದವರು ವೈದಿಕಧರ್ಮವನ್ನು ಬೆಳೆಸಲು ಪ್ರಯತ್ನಪಟ್ಟರು, ಆದರೆ, ಬೌದ್ಧ ಧರ್ಮದ ಸಂಪರ್ಕದಿಂದ ಹಿಂದುಧರ್ಮದಲ್ಲಿ ಮಹತ್ತ್ವದ ಸ್ಥಿತ್ಯಂತರಗಳಾ ದುವು ಹಳೆಯ ಯಜ್ಞ-ಯಾಗಾದಿಗಳು ಕಡಿಮೆಯಾದುವು ಬೌದ್ಧರ ವಿಹಾರ ಗಳಂತೆ ಹಿಂದುಗಳಲ್ಲಿಯೂ ದೇವಾಲಯಗಳ ರಚನೆಗೆ ಆರಂಭವಾಯಿತು ಬುದ್ಧರ ತ್ರಯಿಯಂತೆ ವೈದಿಕರಲ್ಲಿಯೂ ಬ್ರಹ್ಮ-ವಿಷ್ಣು-ಶಿವ ಎಂಬ ದೇವತೆಗಳ

ಕಲ್ಪನೆಯಾಯಿತು ಬೌದ್ಧಧರ್ಮದಲ್ಲಿ ಮೊದಲು ಮೂರ್ತಿಪೂಜೆಯಿರಲಿಲ್ಲ; ಆದರೆ, ವೈದಿಕಧರ್ಮದ ಸಂಸರ್ಗದಿಂದ ಅವರಲ್ಲಿ ಮೂರ್ತಿಪೂಜೆ ಬಳಕೆಯಲ್ಲಿ ಬಂದಿತು ಬುದ್ಧನ ಮೂರ್ತಿಗಳಂತೂ ಎಲ್ಲೆಡೆಗಳಲ್ಲಿಯೂ ಸ್ಥಾಪಿತವಾದುವು. ಸಾವಿರಾರು ವಿಹಾರಗಳಿದ್ದುದರಿಂದ, ಹಿಂದಿನ ಮಗಧ ರಾಜ್ಯಕ್ಕೆ 'ವಿಹಾರ' ಎಂಬ ಹೆಸರೇ ಸ್ಥಿರವಾಯಿತು ಈ ಗಲಾಟೆಯಲ್ಲಿ ಜೈನಧರ್ಮದ ಬೆಳಕು ಮಂದ-ಮಂದವಾಗಿಯೇ ಬೆಳಗುತ್ತಿತ್ತು ದಕ್ಷಿಣದೇಶದ ಕರ್ನಾಟಕದಲ್ಲಿ ಕದಂಬ, ಗಂಗ ಮುಂತಾದ ಅರಸೊತ್ತಿಗೆಗಳ ಕಾಲದಲ್ಲಿಯೂ ತಮಿಳುದೇಶದಲ್ಲಿಯೂ ಜೈನಧರ್ಮವು ಪ್ರಚಾರದಲ್ಲಿತ್ತು ಬೌದ್ಧ-ವೈದಿಕ ಧರ್ಮಗಳು ಒಂದರ ಹಿಂದೊಂದರಂತೆ ಕೂಡಿಯೇ ಮುನ್ನಡೆಯುತ್ತಿದ್ದುವು ಧರ್ಮವು ಬೇರೆ ಯಾದರೂ ಅವರಿವರಲ್ಲಿ ತಿಕ್ಕಾಟಗಳು ಹೆಚ್ಚಾಗಿ ನಡೆದಂತೆ ಉದಾಹರಣೆ ಗಳಿಲ್ಲ

**ಶಾಸ್ತ್ರಗಳ ರಚನೆ** — ಹಿಂದೂ ಸಮಾಜವನ್ನು ಒಂದು ಕಟ್ಟಿನಲ್ಲಿಟ್ಟು ಕೊಂಡು ನಡೆಯಿಸಿದ **ಮನುಸ್ಮೃತಿ** ಹುಟ್ಟಿದುದು ಇದೇ ಕಾಲದಲ್ಲಿಯೇ **ಪರಾಶರ** ಮತ್ತು ಗರ್ಗ ಋಷಿಗಳು **ಜ್ಯೋತಿಷಶಾಸ್ತ್ರ**ವನ್ನು ಕುರಿತು ಮಹತ್ತ್ವದ ಗ್ರಂಥಗಳನ್ನು ಬರೆದರು **ಪಾಣಿನಿ** ಆಚಾರ್ಯರ ಅಷ್ಟಾಧ್ಯಾಯಿಗೆ **ವಾರ್ತಿಕ** ವನ್ನು ಜೋಡಿಸಿದ **ಕಾತ್ಯಾಯನರು** ಕ್ರಿ ಪೂ ೪ನೆಯ ಶತಕದಲ್ಲಿಯೂ ಅದಕ್ಕೆ ಭಾಷ್ಯವನ್ನು ಬರೆದ **ಪತಂಜಲಿ**ಗಳು ಕ್ರಿ ಪೂ ೨ನೆಯ ಶತಕದಲ್ಲಿಯೂ ಇದ್ದಂತೆ ತಿಳಿಯುತ್ತದೆ

**ಬೇರೆ ಮುನ್ನಡೆಗಳು** — ಚಂದ್ರಗುಪ್ತನ ಕಾಲದಲ್ಲಿ ಮತ್ತು ಆ ತರು ವಾಯ ವ್ಯಾಪಾರವು ಒಳ್ಳೆಯ ಬೆಳಿಗೆಯಲ್ಲಿದ್ದಿತು **ಇರಾಣ, ಅರಬಸ್ಥಾನ, ಏಶಿಯಾಮೈನರ, ರೋಮ ಸಾಮ್ರಾಜ್ಯ** ಮತ್ತು **ಚೀನ** ದೇಶಗಳೊಡನೆ ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ಹಿಂದುಗಳು ವ್ಯಾಪಾರ ಮಾಡುತ್ತಿದ್ದರು ಮಲಮಲಿನ ಅರಿವೆ, ರೇಶಿಮೆ, ಮಸಾಲೆ ಪದಾರ್ಥಗಳು, ಹಸ್ತಿದಂತದ ಒಡವೆಗಳು, ಮುತ್ತು, ಹವಳ ಮುಂತಾದುವು ಜಲಮಾರ್ಗವಾಗಿ ರೋಮರಾಜ್ಯಕ್ಕೆ ಹೋಗುತ್ತಿದ್ದುವು ಇದರಂತೆ ಶಿಲ್ಪಕಲೆಯೂ ಉತ್ತೇಜನ ಹೊಂದಿತ್ತು ಗುಡ್ಡದಲ್ಲಿ ಕೊರೆದ ಗುಹಾಲಯಗಳೂ ಸ್ತೂಪಗಳೂ ಇಂದಿಗೂ ಇದಕ್ಕೆ ಸಾಕ್ಷಿಯಾಗಿವೆ ಇದೆಲ್ಲವನ್ನು ಕಂಡೇ ಪರಕೀಯರು ಭಾರತವನ್ನು ಬಂಗಾರದ ಭೂಮಿಯೆಂದು ಕರೆದಿದ್ದಾರೆ

**ಗುಪ್ತ ಸಾಮ್ರಾಜ್ಯದ ಉದಯ** — ಮೌರ್ಯರ ಅಧಃಪತನದನಂತರ, ಆಂಧ್ರ, ಕಾಣ್ವ ಮುಂತಾದ ರಾಜವಂಶಗಳು ಮಗಧವನ್ನಾಳಿದರು, ಆದರೆ, ಪಾಟಲೀ ಪುತ್ರ ನಗರದ ಸುತ್ತಣ ಪ್ರದೇಶವು ಹತ್ತಾರು ಕೈ ಬದಲಾಗಿ, ಕಡೆಗೆ ಗುಪ್ತ

ಎಂಬ ಒಬ್ಬ ಪಾಳೆಯಗಾರನ ವಶವಾಯಿತು ಆತ 'ಮಹಾರಾಜ ಗುಪ್ತ' ಎಂಬ ಬಿರುದಿನಿಂದ ಮೆರೆದನು ಆತನ ಮೊಮ್ಮಗ **ಚಂದ್ರಗುಪ್ತ** ಎಂಬವನು, **ಲಿಚ್ಛವಿ** ವಂಶದ **ಕುಮಾರದೇವಿ**ಯನ್ನು ಮದುವೆಯಾದನು ಬಲಾಢ್ಯ ಬೀಗರ ನೆರವು ದೊರಯುತ್ತಲೇ ಚಂದ್ರಗುಪ್ತನ ಶೌರ್ಯ-ಧೈರ್ಯಗಳಿಗೆ ಉಕ್ಕು ಬಂದಿತು ಕೂಡಲೆ ದಿಗ್ವಿಜಯಕ್ಕೆ ಹೊರಟು ಗಂಗಾ-ಯಮುನೆಗಳ ಸೀಮೆ ಯನ್ನು ಗೆದ್ದುಕೊಂಡು, ರಾಜ್ಯವನ್ನು ಬಲಪಡಿಸಿದನು ಮಹಾರಾಜಾಧಿರಾಜ ಎಂದು ಬಿರುದನ್ನು ಧರಿಸಿ, ಅದನ್ನು ಸಾರ್ಥಕಗೊಳಿಸಿದನು

**ಚಂದ್ರಗುಪ್ತನ ಆಳಿಕೆ** —(ಕ್ರಿ ವ ೩೨೦-೩೩೦) ಚಂದ್ರಗುಪ್ತನು ತಾನು ಸಿಂಹಾಸನಾರೋಹಣ ಮಾಡಿದಂದಿನಿಂದ, ಎಂದರೆ ಕ್ರಿ ಶ ೩೨೦ರಿಂದ ಒಂದು ಹೊಸ ಶಕವನ್ನು ಪ್ರಾರಂಭಿಸಿ, ಅದಕ್ಕೆ ಗುಪ್ತಶಕವೆಂದು ಹೆಸರಿಟ್ಟನು ಈತನ ಕಾಲದಿಂದಲೇ ಭಾರತದಲ್ಲಿ ಬಂಗಾರದ ಯುಗ ಆರಂಭವಾಯಿತೆನ್ನ ಬಹುದು ಮುಂದೆ ಹರ್ಷನವರೆಗೂ ಎಂದರೆ ಸುಮಾರು ಮುನ್ನೂರು ವರುಷಗಳ ವರೆಗೆ ಇದು ಎಡೆಬಿಡದೆ ಸಾಗಿತ್ತು ಈ ಅರಸರೆಲ್ಲರೂ ಹಿಂದೂ ಧರ್ಮಾಭಿಮಾನಿಗಳು

ಚಂದ್ರಗುಪ್ತನು ಹೊಸ ಕಾಲಗಣನೆಯೊಡನೆ ತನ್ನ ಹೆಸರಿನ ಹೊಸ ನಾಣ್ಯಗಳನ್ನು ಮುದ್ರಿಸಿದನು ನಾಣ್ಯಗಳ ಮೇಲೆ ಚಂದ್ರಗುಪ್ತ ಹಾಗೂ ಅವನ ಮಹಾರಾಣಿ ಕುಮಾರೀದೇವಿ ಇವರಿಬ್ಬರ ಚಿತ್ರವನ್ನೂ ನಾವು ಕಾಣ ಬಹುದು ಪಟ್ಟದರಸಿಗೆ ಇಷ್ಟು ಹಿರಿಯ ಸ್ಥಾನವನ್ನು ತೋರಿಸುವ ಮಹಾ ರಾಜರು ಚರಿತ್ರೆಯಲ್ಲಿ ವಿರಳ ಈತನು ತನ್ನ ರಾಜ್ಯವನ್ನು ಅಯೋಧ್ಯಾ, ತಿರಹೂತಗಳ ವರೆಗೂ ಬೆಳೆಸಿದನು ಮುಂದೆಯೂ ಬೆಳೆಸಬಹುದಾಗಿತ್ತು ಆದರೆ ಪಟ್ಟಕ್ಕೆ ಬಂದ ಹತ್ತೇ ವರ್ಷಗಳಲ್ಲಿ ತೀರಿಕೊಂಡನು ಸಾಯುವ ಮೊದಲು ರಾಜಮನೆತನದವರ ಹಾಗೂ ಮಂತ್ರಿಗಳ ಸಭೆ ಸೇರಿಸಿ, ತನ್ನ ಮಕ್ಕಳಲ್ಲಿ ಸಮುದ್ರಗುಪ್ತನೇ ತನ್ನ ನಂತರ ಸಿಂಹಾಸನಕ್ಕೆ ಬರತಕ್ಕದ್ದು ಎಂದು ಸಾರಿದ್ದನು

**ಸಮ್ರಾಟ ಸಮುದ್ರಗುಪ್ತ** —(ಕ್ರಿ ವ ೩೩೦-೩೭೫) ಸಮ್ರಾಟ ಸಮುದ್ರ ಗುಪ್ತನು ಗುಪ್ತವಂಶದಲ್ಲಿಯೇ ಹೆಸರಾದ ದೊರೆ, ಅಥವಾ ಅಶೋಕನ ತರುವಾಯ ಸಮ್ರಾಟ ಪದವಿಗೆ ತಕ್ಕ ಅರಸನೆಂದರೆ ಈತನೇ

ಈ ಸಮ್ರಾಟನಲ್ಲಿ ಬರಿಯ ಶೌರ್ಯ-ಧೈರ್ಯಾದಿಗಳೇ ಅಲ್ಲದೆ ಬುದ್ಧಿ ಬಲವೂ ಹೃದಯದ ಒಲವೂ ಹೊಗಳಿಸಿಕೊಳ್ಳುವಂತಿದ್ದುವು ಈತನು ಧೀರ ಸೇನಾಪತಿ, ಮಿಗಿಲಾದ ಮುತ್ಸದ್ದಿ, ವಿದ್ವಾಂಸ, ಕವಿ, ಗಾಯಕ ಎಂದು ಹೆಸರಾಗಿದ್ದಾನೆ

ಈತನ ಕೈಯಲ್ಲಿ ರಾಜ್ಯಸೂತ್ರವು ಬಂದಮೇಲೆ ದಿಗ್ವಿಜಯಕ್ಕೆ ಆರಂಭ ಮಾಡಿದನು ಈ ದಿಗ್ವಿಜಯದ ಕಥೆಯನ್ನು ಸಮುದ್ರಗುಪ್ತನ ಆಸ್ಥಾನಕವಿ **ಹರಿಷೇಣನು** ಬಹು ಚೆನ್ನಾಗಿ ವರ್ಣಿಸಿದ್ದಾನೆ ಅದನ್ನು ಪ್ರಯಾಗದಲ್ಲಿ ಅಶೋಕನ ಶಿಲಾಸ್ತಂಭವೊಂದರ ಮೇಲೆ ಕೆತ್ತಿಸಿ ಬರೆಯಿಸಲಾಯಿತು. ಮೊದಲು ಉತ್ತರಭಾರತದ ರಾಜರನ್ನೆಲ್ಲ ಸೋಲಿಸಿ, ಸಮುದ್ರಗುಪ್ತನು ಅವರ ರಾಜ್ಯಗಳನ್ನೆಲ್ಲ ತನ್ನ ಸಾಮ್ರಾಜ್ಯಕ್ಕೆ ಸೇರಿಸಿದನು ಅನಂತರ, ವಿಂಧ್ಯ-

ಸಾತಪುಡಾ-ಮಧ್ಯಭಾರತ ಪ್ರದೇಶದ ಅಟವೀರಾಜ್ಯಗಳನ್ನೆಲ್ಲ ಆಕ್ರಮಿಸಿದನು. ತರುವಾಯ, ಪೂರ್ವಸಮುದ್ರತೀರದಗುಂಟ ಕಾಂಚಿಯ ವರೆಗೂ ದಂಡೆತ್ತಿ ಬಂದು, ಹರಿಷೇಣನು ಹೇಳುವಂತೆ, 'ಸರ್ವದಕ್ಷಿಣಾಪಥ ರಾಜಗ್ರಹಣ ಮೋಕ್ಷಾನುಗ್ರಹ' ಶಕ್ತಿಯುಳ್ಳವನಾಗಿ, ತುಂಬಾ ಪ್ರತಾಪಶಾಲಿ ಎನಿಸಿಕೊಂಡನು, ಅಲ್ಲದೆ, ವಾಯವ್ಯ ಆಗ್ನೇಯ ಗಡಿಗಳ ರಾಜರೂ ಹಿಮಾಲಯದ ತಪ್ಪಲಿನ ರಾಜರೂ ಅವನಿಗೆ ತಲೆಬಾಗಿ ಕಪ್ಪಕಾಣಿಕೆಗಳನ್ನಿತ್ತರು

ಸಿಂಹಲದ ಅರಸನಾದ ಮೇಘವರ್ಮನಿಗೂ ಈತನಿಗೂ ಒಳಿತಾದ ಗೆಳೆತನವಿತ್ತು ಆ ರಾಜ್ಯದಿಂದ ಅನೇಕ ಬೌದ್ಧಯಾತ್ರಿಕರು ಬುದ್ಧಗಯೆಗೆ ಬರುತ್ತಿದ್ದರು ಅವರಿಗೆ ವಸತಿ ಮೊದಲಾದ ಅನುಕೂಲತೆಗಳನ್ನು ಮಾಡಿ-ಕೊಡಬೇಕೆಂದು ಮೇಘವರ್ಮನು ಕೇಳಿಕೊಂಡನು ಅದರಂತೆ ಈತನು ಬುದ್ಧಗಯೆಯಲ್ಲಿ ಧರ್ಮಶಾಲೆಯನ್ನು ಕಟ್ಟಿಸಿದನು

**ಅಶ್ವಮೇಧಯಾಗ** – ಸಮುದ್ರಗುಪ್ತನು ಹೀಗೆ ದಿಗ್ವಿಜಯವನ್ನು ನಡೆಸಿದ ನಂತರ, ಪುರಾತನ ಹಿಂದೂಪದ್ಧತಿಯಂತೆ, ಸಮ್ರಾಟನೆನಿಸಿಕೊಳ್ಳಬೇಕೆಂದು ಅಶ್ವಮೇಧಯಜ್ಞವನ್ನು ಆರಂಭಿಸಿದನು

**ನಾಣ್ಯಗಳು** — ಈ ಯಜ್ಞದ ನೆನಪಿಗಾಗಿ ಯಜ್ಞಾಶ್ವದ ಗುರುತಿನ ನಾಣ್ಯಗಳನ್ನು ಮಾಡಿಸಿದನು ಆ ನಾಣ್ಯದ ಮೇಲೆ ತನ್ನ ಹೆಸರನ್ನಲ್ಲದೆ ತನ್ನ ರಾಣಿ ದತ್ತಾದೇವಿಯ ಹೆಸರನ್ನೂ ಕೆತ್ತಿಸಿದ್ದಾನೆ "ನೂರು ಸಮರಗಳಲ್ಲಿ ಜಯಗಳಿಸಿ ಇಹಲೋಕವನ್ನೆಲ್ಲ ಗೆದ್ದ ಮಹಾರಾಜರು ಪರಲೋಕವನ್ನು ಜಯಿಸುವುದಕ್ಕಾಗಿ ಅಶ್ವಮೇಧ ಮಾಡಿದರು" ಎಂದು ಅದರಲ್ಲಿ ಬರೆದಿದೆ




ಅಶ್ವಮೇಧ ಕುದುರೆ ರಾಣಿದತ್ತಾದೇವಿ
ಸಮುದ್ರಗುಪ್ತನ ಕಾಲದ ನಾಣ್ಯ

**ರಾಮಗುಪ್ತ** — ಸಮುದ್ರಗುಪ್ತನ ತರುವಾಯ ರಾಮಗುಪ್ತನು ಪಟ್ಟಕ್ಕೆ ಬಂದನು ಈತನಲ್ಲಿ ರಾಜ್ಯವಾಳುವ ಯೋಗ್ಯತೆಯಿರಲಿಲ್ಲ ಅವನ ಐದೇ ವರುಷಗಳ ಆಳಿಕೆಯಲ್ಲಿ ರಾಜ್ಯದಾಡಳಿತವು ಸಡಿಲಾಗಿ ಸುತ್ತುಮುತ್ತಲಿನ ಚಿಕ್ಕ ರಾಜರು ಎದ್ದುಕುಳಿತರು ಇದು ಅವನ ತಮ್ಮನಾದ **೨ನೆಯ ಚಂದ್ರಗುಪ್ತ**ನಿಗೆ ಸಹನವಾಗದೆ, ಅಣ್ಣನ ಅಧಿಕಾರವನ್ನು ಕಸಿದುಕೊಂಡು ತಾನೇ ಅರಸನಾದನು

**ವಿಕ್ರಮಾದಿತ್ಯ** — ೨ನೆಯ ಚಂದ್ರಗುಪ್ತನು ಸ್ವತಃ ಶೂರನಿದ್ದುದರಿಂದ, **ವಿಕ್ರಮಾದಿತ್ಯ**ನೆಂಬ ಹೆಸರು ಧರಿಸಿದ್ದನು. ಈತನು ಮೊದಲು **ಪಂಜಾಬ-**

ಬಂಗಾಲಗಳನ್ನು ಗೆದ್ದು ತನ್ನ ರಾಜ್ಯಕ್ಕೆ ಕೂಡಿಸಿದನು ಮತ್ತು **ಮಾಳವ**ದಲ್ಲಿಯ ಕ್ಷತ್ರಪರನ್ನು ಸೋಲಿಸಿ, **ಉಜ್ಜಯಿನಿ**ಯನ್ನೇ ತನ್ನ ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡನು ಆ ಮೇಲೆ ಶಕರನ್ನು ಸೋಲಿಸಿ **'ಶಕಾರಿ ವಿಕ್ರಮಾದಿತ್ಯ'** ಎಂಬ ಬಿರುದನ್ನು ಧರಿಸಿದನು

**ಯೋಗ್ಯತೆ**—ತಂದೆಯಂತೆ ಮಗನೂ ಶೌರ್ಯ-ಧೈರ್ಯ-ರಾಜಕಾರಣಗಳಲ್ಲಿ ಮಿಗಿಲಾಗಿದ್ದನು ಅವನು ಉಜ್ಜಯಿನಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಮೇಲೆ, ರಾಜ್ಯದ ಸಂಪತ್ತನ್ನು ಬೆಳೆಸಲು ಒಳ್ಳೆ ಸಹಾಯವಾಯಿತು ಖಂಬಾಯತ ಆಖಾತದ ಮುಖಾಂತರವಾಗಿ ಪರದೇಶದ ವ್ಯಾಪಾರವು ಬೆಳೆಯಿತು ಈತನ ಆಸ್ಥಾನದಲ್ಲಿಯೇ **ಧನ್ವಂತರಿ, ಕ್ಷಪಣಕ, ಅಮರಸಿಂಹ, ವೈಶಾಖಭಟ್ಟ, ವರರುಚಿ, ಬ್ರಹ್ಮಗುಪ್ತ, ವರಾಹಮಿಹಿರ, ಕಾಳಿದಾಸನೇ** ಮೊದಲಾದ ಒಂಬತ್ತು ಜನ ವಿದ್ವಾಂಸರೂ ಮಹಾಕವಿಗಳೂ ಇದ್ದರೆಂದು ಹೇಳುತ್ತಾರೆ

ವಿಕ್ರಮಾದಿತ್ಯನಲ್ಲಿ ವಿದ್ಯಾಭಿಮಾನವುಂಟಾಗುವುದಕ್ಕೆ ಮಧ್ಯಭಾರತದ ವಾಕಾಟಕ ಮನೆತನದೊಡನೆ ಬೀಗತನವಾದುದು ಕಾರಣವೆಂದು ಕೆಲವರ ಅಭಿಪ್ರಾಯ ಆ ಮನೆತನದ **ರುದ್ರಸೇನನಿಗೆ** ತನ್ನ ತಂಗಿ **ಪ್ರಭಾದೇವಿ**ಯನ್ನು ಕೊಟ್ಟು, ವಿಕ್ರಮಾದಿತ್ಯನು ಆತನ ತಂಗಿಯನ್ನು ಮದುವೆಯಾದನು ರುದ್ರ-ಸೇನನು ವಿದ್ಯಾವಂತನೂ ವಿದ್ಯಾಪಕ್ಷಪಾತಿಯೂ ಆಗಿದ್ದನು ಆ ಸಂಬಂಧದಿಂದಲೇ ಚಂದ್ರಗುಪ್ತನೂ ತನ್ನ ರಾಜ್ಯದಲ್ಲಿ ವಿದ್ವಾಂಸರಿಗೆ ಹೆಚ್ಚಾಗಿ ಆಶ್ರಯವನ್ನು ಕೊಡುವಂತಾಯಿತು

**ಆದರ್ಶ ಆಡಳಿತ**—ವಿಕ್ರಮಾದಿತ್ಯನ ಆಳಿಕೆ ಎಲ್ಲ ರೀತಿಯಿಂದಲೂ ಉತ್ತಮವಾಗಿದ್ದಿತೆಂದು ಅಲ್ಲಲ್ಲಿ ಶಿಲಾಲೇಖಗಳೂ ನಾಣ್ಯಗಳೂ ಹೇಳುತ್ತವೆ. ಅವನ ನಾಣ್ಯಗಳಲ್ಲಿ ಅವನನ್ನು ಶಾರ್ದೂಲಪರಾಕ್ರಮ, ಸಿಂಹಪರಾಕ್ರಮ ಎಂದು ಹೊಗಳಲಾಗಿದೆ ಇದರೊಡನೆ ಪರದೇಶದಿಂದ ಬಂದವರೂ ಅವನ ಆಡಳಿತದ ವಿಷಯವಾಗಿ ತುಂಬ ಹೊಗಳಿದ್ದಾರೆ **ಫಾಹಿಯಾನ್** ಎಂಬ **ಚೀನದ** ಪ್ರವಾಸಿಯು ಕ್ರಿ ವ ೪೦೫ರಲ್ಲಿ ಭಾರತಕ್ಕೆ ಬಂದು, ಆರು ವರುಷ ಸಂಚಾರಮಾಡುತ್ತ ಪಾಟಲಿಪುತ್ರದಲ್ಲಿ ಮೂರು ವರುಷ ಕಳೆದನು ಆ ಅನುಭವದಲ್ಲಿ ಆತನು ಮಗಧಸಾಮ್ರಾಜ್ಯದ ಬಗಗೆ—"ಇಲ್ಲಿಯ ರಾಜರು ಬಹಳ ಧರ್ಮಶೀಲರು, ದಯಾಳುಗಳು ಸಣ್ಣ ಪುಟ್ಟ ತಪ್ಪುಗಳಿಗೆ ಶಿಕ್ಷೆಯನ್ನು ಕೊಡುವುದಿಲ್ಲ. ತೀರ ಕ್ರೂರಕರ್ಮ ಮಾಡಿದವನ ಬಲಗೈಯನ್ನು ಕತ್ತರಿಸುತ್ತಾರೆ ಎಲ್ಲ ಪಟ್ಟಣಗಳೂ ಸಂಪತ್ತಿನ ಸಾಧನಗಳಾಗಿವೆ. ಜನರು ಸುಖಿಗಳಾಗಿದ್ದಾರೆ. ಜನರು ಕೊಟ್ಟ ದಾನ-ಧರ್ಮಗಳಿಂದಲೇ ನಡೆಯುವ

ಧರ್ಮಾರ್ಥ ಸಂಸ್ಥೆಗಳಿವೆ ದಾರಿಕಾರರ ಅನುಕೂಲತೆಗಾಗಿ ಅಲ್ಲಲ್ಲಿ ಧರ್ಮಶಾಲೆ-ಧರ್ಮಚ್ಛತ್ರಗಳಿವೆ ಭಿಕ್ಷುಕರಿಗೆ ಅರಸನಿಂದಲೇ ಹೊಟ್ಟೆಬಟ್ಟೆಗಳ ವ್ಯವಸ್ಥೆ ನಡೆಯುತ್ತಿದೆ ಕಳವು, ಕೊಲೆ, ಸುಲಿಗೆಗಳು ಎಲ್ಲಿಯೂ ನಡೆಯುವುದಿಲ್ಲ ರಾಜಧಾನಿಯಲ್ಲಿ ದೊಡ್ಡದೊಂದು ಔಷಧಾಲಯವಿದೆ ಅಲ್ಲಿ ಬಡವರಿಗೆ ಪುಕ್ಕಟೆಯಾಗಿ ಔಷಧೋಪಚಾರ ನಡೆಯುತ್ತದೆ ಸಿಂಧು-ನದಿಯ ಮುಖದಿಂದ ಯಮುನಾನದಿಯ ವರೆಗೆ ಸಾವಿರಾರು ಬೌದ್ಧ ಭಿಕ್ಷುಗಳ ಮಠಗಳಿವೆ ವಿಹಾರಗಳಲ್ಲಿ ಬೌದ್ಧ-ಬ್ರಾಹ್ಮಣ ಪಂಡಿತರು ಒಮ್ಮನಸ್ಸಿನಿಂದಲೇ ಇದ್ದಾರೆ

ಪ್ರಜೆಗಳಿಗೆ ಭಾರವಾದ ಕರಗಳಿಲ್ಲ, ತೊಂದರೆಯಿಲ್ಲ ಕಟುಕರ ಅಂಗಡಿಗಳಾಗಲಿ ಹೆಂಡದ ಗಡಂಗಗಳಾಗಲಿ ಕಾಣುವುದಿಲ್ಲ ಅದರಿಂದ ಮದ್ಯ-ಮಾಂಸಗಳನ್ನು ತಿನ್ನುವ ರೂಢಿಗಳು ಈ ರಾಜ್ಯದಲ್ಲಿ ಕಾಣುವುದಿಲ್ಲ" ಎಂದು ಮುಂತಾಗಿ ಹೊಗಳಿ ಬರೆದಿದ್ದಾನೆ ಇದಕ್ಕೆ ತಕ್ಕಂತೆಯೆ ಆ ರಾಜ್ಯದ ಸ್ಥಿತಿಯಿದ್ದಿತೆಂದು ಇತಿಹಾಸಕಾರರೂ ಒಪ್ಪುತ್ತಾರೆ ಈತನ ತರುವಾಯ ಮಗನಾದ **ಕುಮಾರಗುಪ್ತನು** ಪಟ್ಟವನ್ನೇರಿದನು

**ಕುಮಾರಗುಪ್ತ** —(ಕ್ರಿ ವ ೪೧೪-೪೫೫) ಇವನು ಧ್ರುವದೇವಿಯ ಹಿರಿಯ ಮಗ ಚಿಕ್ಕ ಮಗ ಗೋವಿಂದಗುಪ್ತನು ಪಶ್ಚಿಮಪ್ರದೇಶಗಳ ಆಡಳಿತಕ್ಕೆ ಅಧಿಕಾರಿಯಾಗಿದ್ದನು ಕುಮಾರಗುಪ್ತನಾದರೂ ತಂದೆಯಂತೆ ಶೂರನೇ ಸರಿ ಈತನ ಕಾಲದಲ್ಲಿ ಪಶ್ಚಿಮ ಪಂಜಾಬದಿಂದ ಪೂರ್ವ ಬಂಗಾಲದ ವರೆಗೂ ಹಿಮಾಲಯದ ಅಡಿಯಿಂದ ನರ್ಮದಾನದಿಯ ವರೆಗೂ ರಾಜ್ಯ ವಿಸ್ತಾರವಿತ್ತು ಈತನೂ ಅಶ್ವಮೇಧ ಯಾಗವನ್ನು ಮಾಡಿದನು ಈ ದೊರೆ ವಿಶೇಷವಾಗಿ ಪಾಟಲೀಪುತ್ರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು ಆರಂಭದಲ್ಲಿ ಈ ಆಳಿಕೆ ಸುಖ-ಸೌಭಾಗ್ಯಗಳಿಗ ಬೀಡಾಗಿತ್ತು ಮುಂದೆ ಮಾತ್ರ ಹೂಣರ ದಾಳಿಯಿಂದಾಗಿ ತೊಂದರೆಗಳುಂಟಾದುವು ಮೊದ-ಮೊದಲು ಹೂಣರನ್ನು ಹಿಮ್ಮೆಟ್ಟಿಸಿದರೂ ಮುಂದೆ ಮಗಧ ಸಾಮ್ರಾಜ್ಯದ ಕಟ್ಟು ಸಡಿಲಾಯಿತು ಕೆಲವರು ಅಧೀನರಾಜರು ಸ್ವತಂತ್ರರಾದರು

**ಕಲಾಭಿಮಾನ** — ಕುಮಾರಗುಪ್ತನಲ್ಲಿ ಶೌರ್ಯ-ಧೈರ್ಯಗಳಿಗಿಂತ ಬುದ್ಧಿಯ ಬಲ ಹೆಚ್ಚಾಗಿತ್ತು. ಅದರಿಂದ, ಆತನ ಕಾಲದಲ್ಲಿ ಲಲಿತಕಲೆಗಳಿಗೆ ಕಳೆಯೇರಿತ್ತು ಈತನೂ ತನ್ನ ಹೆಸರಿನ ಬೆಳ್ಳಿ-ಬಂಗಾರದ ನಾಣ್ಯಗಳನ್ನು ಮುದ್ರಿಸಿದನು ಅದರ ಮೇಲೆ ಸೌಂದರ್ಯದ ಚಿಹ್ನವಾದ ನವಿಲಿನ ಚಿತ್ರವಿರುತ್ತಿದ್ದಿತು ಅನೇಕ ಸುಂದರಮೂರ್ತಿಗಳೂ ದೇವಾಲಯಗಳೂ ಈತನ ಕಾಲಕ್ಕೆ ನಿರ್ಮಿತವಾದುವು

**ಸ್ಕಂದಗುಪ್ತ** — ಕುಮಾರಗುಪ್ತ ಕ್ರಿ ವ ೪೫೫ರಲ್ಲಿ ಮರಣಹೊಂದಲು, ಆತನ ಹಿರಿಯ ಮಗನಾದ **ಸ್ಕಂದಗುಪ್ತನು** ಸಿಂಹಾಸನಕ್ಕೆ ಬಂದನು (ಕ್ರಿ ವ ೪೫೫-೪೬೮) ಸ್ಕಂದಗುಪ್ತನ ಆಳಿಕೆಯೆಲ್ಲ ಕಾದಾಟದಲ್ಲಿಯೇ ಕಳೆಯಿತೆಂದು ಹೇಳಬಹುದು ಹೂಣರ ದಾಳಿಗಳು ಆಗಾಗ ನಡೆದೇ ಇದ್ದುವು ಅವರನ್ನು ಪ್ರಯತ್ನಪೂರ್ವಕವಾಗಿ ಗುಪ್ತದೊರೆಯು ಹಿಂದಕ್ಕಟ್ಟುತ್ತಿದ್ದನು ಇದ್ದ ರಾಜ್ಯವನ್ನು ಸ್ಥಿರಪಡಿಸುವುದೂ ಕಷ್ಟದ ಕೆಲಸವಾಯಿತು

ಈತನ ಆಳಿಕೆಯಲ್ಲಿ 'ಗರುಡ, ಎತ್ತು'ಗಳ ಮುದ್ರೆಗಳುಳ್ಳ ನಾಣ್ಯಗಳು ಬಳಕೆಯಲ್ಲಿ ಬಂದುವು.

ಈ ಅರಸನ ತರುವಾಯ ಕುಮಾರಗುಪ್ತನ ಇನ್ನೊಬ್ಬ ಮಗನಾದ ಪುರುಗುಪ್ತನು ಕ್ರಿ ವ ೪೬೮ರಲ್ಲಿ ಪಟ್ಟವೇರಿದನು

**ಗುಪ್ತಮನೆತನದ ಮುಗಿತಾಯ** — ಇಷ್ಟು ಹೊತ್ತಿಗೆ ಗುಪ್ತಮನೆತನವು ಮುಗಿತಾಯಕ್ಕೆ ಬಂದಿತು ಮುಂದೆ ಆದಿತ್ಯಗುಪ್ತ, ಬುಧಗುಪ್ತ, ಬಾಲಾದಿತ್ಯ ಮುಂತಾಗಿ ವೀರರು ಹುಟ್ಟಿದರು ಇವರ ಆಳಿಕೆಯಲ್ಲಿ **ಹೂಣರ** ದಾಳಿಗಳು ದಿನದಿನಕ್ಕೆ ಪ್ರಬಲವಾಗುತ್ತ ನಡೆದುವು

**ಹೂಣರ ದಾಳಿ** —(ಕ್ರಿ ಶ ೪೯೯– ೬೦೦) ಹೂಣರು **ಮಂಗೋಲ** ಸಂತತಿಗೆ ಸೇರಿದವರು ಇವರು ಅನಾಗರಿಕರು, ಕ್ರೂರರು ಈ ಗುಂಪಿನ ನಾಯಕನಾದ **ತೋರಮಾಣನು** ಗುಪ್ತರನ್ನು ಸೋಲಿಸಿ ಉಜ್ಜಯಿನಿಯನ್ನು ಆಕ್ರಮಿಸಿದನು ಸೌರಾಷ್ಟ್ರದ ವಲ್ಲಭಿರಾಜರೂ ಇನ್ನಿತರರೂ ಈತನಿಗೆ ಅಂಕಿತರಾದರು ಈತನು ಕ್ರಿ ವ ೫೦೨ರಲ್ಲಿ ತೀರಿಕೊಂಡನು ಒಳಿಕ ಈತನ ಮಗ **ಮಿಹಿರಕುಲನು** ಪಟ್ಟವೇರಿದನು ಇವನು ಪಂಜಾಬವನ್ನು ಗೆದ್ದು **ಸಿಯಾಲಕೋಟ**ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು ವಾಯವ್ಯಕ್ಕಿರುವ ಇರಾಣ-**ಖೋತಾನ**ಗಳನ್ನು ವಶಪಡಿಸಿಕೊಂಡನು ಆದರೆ, ಸ್ವಭಾವದಿಂದ ಮಹಾಕ್ರೂರನು, ಅದರಿಂದ ಪ್ರಜೆಗಳು ಬೇಸತ್ತು ಮಾಳವದ ಯಶೋಧರ್ಮದೊರೆಗೆ ಮೊರೆಹೊಕ್ಕರು. ಅವನು **ಬಾಲಾದಿತ್ಯ**ಗುಪ್ತ ದೊರೆಯ ಸಹಾಯದಿಂದ ಕ್ರಿ ವ ೫೨೮ರಲ್ಲಿ ಮಿಹಿರಕುಲನನ್ನು ಸೋಲಿಸಿದನು

**ಗುಪ್ತರಾಜ್ಯದ ಸಿಂಹಾವಲೋಕನ** —ಗುಪ್ತವಂಶವು ಒಟ್ಟು ಸುಮಾರು ಇನ್ನೂರು ವರ್ಷ ಸಾಗಿತು ಈ ಅವಧಿಯಲ್ಲಿ ರಾಜಕೀಯ, ನೈತಿಕ, ಧಾರ್ಮಿಕ, ಸಾಂಪತ್ತಿಕ ಮೊದಲಾಗಿ ಎಲ್ಲ ವಿಚಾರಗಳಲ್ಲಿಯೂ ಕೀರ್ತಿಯ ಕಹಳೆಯು ಎಲ್ಲೆಲ್ಲಿಯೂ ಮೊಳಗುತ್ತಿತ್ತು ಭಾರತದಲ್ಲಿ ಬಂಗಾರದ **ಹೊಗೆ**

ಹಾಯುತ್ತಿತ್ತೆಂದು ಹೆಸರಾದುದು ಇದೇ ಕಾಲದಲ್ಲಿ ಆದುದರಿಂದಲೇ ಈ ಕಾಲವನ್ನು **'ಬಂಗಾರದ ಯುಗ', 'ಸುವರ್ಣಯುಗ'**ಮುಂತಾಗಿ ಬರೆದಿದ್ದಾರೆ.

**ವ್ಯಾಪಾರ** —ಗುಪ್ತ ಅರಸರು ಕಲಿಂಗ, ಸುರತ, ಕಲ್ಯಾಣ, ಸೋಪಾರಾ ಮುಂತಾಗಿ ಮೂರು ನಾಲ್ಕು ಬಂದರಗಳಲ್ಲಿ ಬೇರೆ ಬೇರೆ ದೇಶಗಳ ವ್ಯಾಪಾರ ಸಂಬಂಧವನ್ನು ಬೆಳೆಸಿದರು ಆ ಕಾಲಕ್ಕೆ ಪ್ರಸಿದ್ಧವಾದ **ರೋಮನ್** ಸಾಮ್ರಾಜ್ಯಕ್ಕೆ ಈ ದೇಶದಿಂದ ಹೇರಳ ಪದಾರ್ಥಗಳು ನಿರ್ಯಾತವಾಗುತ್ತಿದ್ದುವು. ಈ ವ್ಯಾಪಾರವು ಎಷ್ಟು ಬೆಳೆದಿತ್ತೆಂದರೆ, ರೋಮನ್ ಚಕ್ರಾಧಿಪತ್ಯದ ಹಲವು ನಾಯಕರು ತಮ್ಮ ದೇಶದಿಂದ ಭಾರತಕ್ಕೆ ಹರಿದುಹೋಗುತ್ತಿದ್ದ ಚಿನ್ನದ ಪ್ರವಾಹವನ್ನು ತಡೆಗಟ್ಟಬೇಕೆಂದು ಬೊಬ್ಬೆ ಇಟ್ಟರು ಎರಡನೆಯ ಚಂದ್ರ-ಗುಪ್ತನ ನಾಣ್ಯಗಳು ಎರಡೂ ದೇಶಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿದ್ದುವು

ಇದರಂತೆ ಒಳದೇಶದಲ್ಲಿ ಕೂಡ, ದಕ್ಷಿಣೋತ್ತರ ಭಾರತದಲ್ಲಿ ರಾಜ-ಮಾರ್ಗಗಳಿದ್ದುದರಿಂದ ವ್ಯಾಪಾರಕ್ಕೆ ಕಳೆಯೇರಿತ್ತು

**ಕಲಾಕೌಶಲ್ಯ** –ಗುಪ್ತ ಅರಸುಗಳ ಕಾಲದಲ್ಲಿ ಕಲೆ-ಕೈಗಾರಿಕೆಗಳು ಬಹು ಊರ್ಜಿತ ಮಟ್ಟದಲ್ಲಿದ್ದುವು **ಅಜಂತ**ದ ಗುಡ್ಡದಲ್ಲಿ ಕೊರೆದ ಸುಂದರವಾದ ಎಷ್ಟೋ ಗುಡಿಗಳು ಬಹುಶಃ ಇದೇ ಕಾಲಕ್ಕೆ ಆದುವು ದಿಲ್ಲಿಯ ನೆರೆಯಲ್ಲಿ ಕುತುಬಮಿನಾರದ ಹತ್ತಿರ ಅತಿ ಎತ್ತರವಾದ **ಲೋಹಸ್ತಂಭವು** ಇದೇ ಕಾಲದಲ್ಲಿ ನಿಂತಿತು ಶೈವ-ವೈಷ್ಣವ ದೇವಾಲಯಗಳೂ ಅವುಗಳಲ್ಲಿಯ ಸುಂದರವಾದ ಮೂರ್ತಿಗಳೂ ಇದೇ ಕಾಲಕ್ಕೆ ನಿರ್ಮಿತವಾದುವು ಭುಮರಾದ ಶೈವ ದೇವಾಲಯ ಮತ್ತು ಬುಂದೇಲಖಂಡದ **ನಾಚನಕುರಾರ** ದೇವಾಲಯ ಇವು ಈಗಲೂ ನೋಡತಕ್ಕುವಿವೆ **ದೇವಗಡ**ದಲ್ಲಿಯ **ದಶಾವತಾರ** ದೇವಾಲಯದಲ್ಲಿ ಪ್ರಾಚೀನ ಪುರಾಣಗಳನ್ನು ಚಿತ್ರರೂಪದಿಂದ ಓದಬಹುದು.

**ವಿದ್ಯಾವೈಭವ** —ಗುಪ್ತ ಅರಸರ ಕಾಲದಲ್ಲಿ ಸರಸ್ವತಿಗೂ ಲಕ್ಷ್ಮೀದೇವಿಯಷ್ಟೇ ಸನ್ಮಾನವಿದ್ದುದು ನೆನಪಿಡತಕ್ಕ ಸಂಗತಿ' ಪ್ರತಿಯೊಬ್ಬ ರಾಜನಲ್ಲಿಯೂ ಆಸ್ಥಾನ ವಿದ್ವಾಂಸರು ಇದ್ದೇ ಇರುತ್ತಿದ್ದರು, ಅಲ್ಲದೆ, ಈ ಅರಸರು ವೈದಿಕ-ಸಂಪ್ರದಾಯದವರು ಅದರಿಂದ ಪಂಡಿತವರ್ಗಕ್ಕೆ ಉತ್ತೇಜನಕೊಡುತ್ತಿದ್ದರಲ್ಲದೆ ಅವರ ಸೂಚನೆ-ಸಲಹೆಗಳಂತೆ ರಾಜ್ಯವನ್ನು ಶಾಸ್ತ್ರೋಕ್ತ ರೀತಿಯಲ್ಲಿ, ಸಕಲರ ಹಿತದೃಷ್ಟಿಯಿಂದ ಸಾಗಿಸುತ್ತಿದ್ದರು ಎರಡನೆಯ ಚಂದ್ರ-ಗುಪ್ತ ಅರಸನ ಕಾಲದಲ್ಲಿಯಂತೂ ವಿದ್ವಾಂಸರ ವೈಭವವು ಶಿಖರಕ್ಕೆ ಮುಟ್ಟಿದ್ದಿತು ಕಾಳಿದಾಸನೇ ಮೊದಲಾದ ಕವಿಗಳಿಂದ, ಶ್ರೇಷ್ಠವಾದ ಲಲಿತ ವಾಙ್ಮಯವು ಹುಟ್ಟಿತು. ಕಾಳಿದಾಸನು ತನ್ನ ರಘುವಂಶ ಕಾವ್ಯವನ್ನು

ಬಹುಶಃ ಗುಪ್ತವಂಶದ ಕೀರ್ತಿಯಿಂದ ಸ್ಫೂರ್ತಿವಡೆದೇ ಬರೆದಿರಬೇಕೆಂದು ಹಲವರು ಹೇಳುತ್ತಾರೆ ಸಮುದ್ರಗುಪ್ತನಿಗೆ ಕವಿರಾಜ ಎಂಬ ಬಿರುದಿತ್ತು. ಭಾಗವತವನ್ನೂ **ಸ್ಕಂದ, ಶಿವ, ಮತ್ಸ್ಯ, ವಾಯು** ಮೊದಲಾದ ಪುರಾಣಗಳನ್ನೂ ಪುನಃ ಸುಧಾರಿಸಿ ಬರೆಯಲಾಯಿತು **ರಾಮಾಯಣ-ಮಹಾಭಾರತ**ಗಳ ನಡುವೆ ಸೇರಿಸಲಾದ ಹಲವು ಕಥಾಭಾಗಗಳು ಇದೇ ಕಾಲದಲ್ಲಿ ಆದುವೆಂದು ಕೆಲವರ ಮತವಿದೆ. ಬೌದ್ಧಧರ್ಮದಲ್ಲಿಯ ಜಾತಕಕಥೆಗಳು ಆ ಕಾಲಕ್ಕೆ ಜನಪ್ರಿಯವಾಗಿದ್ದುವು ಅವುಗಳ ಸ್ಥಳದಲ್ಲಿ ವೈದಿಕಸಾಹಿತ್ಯವನ್ನು ತರಬೇಕೆಂಬ ಇಚ್ಛೆಯಿಂದಲೇ ಈ ಪುರಾಣಗಳ ಸಂಸ್ಕರಣವು ಆಗಿರಬೇಕಂತೆ

ಲಲಿತವಾಙ್ಮಯದಂತೆ ಶಾಸ್ತ್ರೀಯ ವಿಚಾರಗಳಲ್ಲಿಯೂ ಗುಪ್ತಕಾಲವು ಪ್ರಸಿದ್ಧವಿದೆ **ಶೂನ್ಯ ಮತ್ತು ದಶಕವದ್ಧತಿಯ** ಸಂಖ್ಯಾಲೇಖನ ಈ ಕಾಲದಿಂದಲೇ ಮೊದಲಾಯಿತೆಂದು ಹೇಳುತ್ತಾರೆ **ಆರ್ಯಭಟನ ಜ್ಯೋತಿಷಶಾಸ್ತ್ರ**ದಲ್ಲಿ ರೋಮನ್, ಇಜಿಪ್ಸಿಯನ್ ಜ್ಯೋತಿಷ ಸಿದ್ಧಾಂತಗಳ ಪ್ರತಿಪಾದನೆಯೂ ಇದೆ ಧನ್ವಂತರಿಯ **ವೈದ್ಯಶಾಸ್ತ್ರ**, ಕ್ಷಪಣಕನ **ಫಲಜ್ಯೋತಿಷ**, ವೈಶಾಖಭಟ್ಟನ **ಮಂತ್ರತಂತ್ರ**ಗಳು ಮುಂದಿನವರ ಶೋಧಗಳಿಗೆ ಅಮೌಲ್ಯವಾದ ಭಂಡವಲುಗಳಾಗಿವೆ **ನಾಲಂದದ ಮಹಾ ವಿಶ್ವವಿದ್ಯಾಲಯ**ವು ಗುಪ್ತ ಅರಸರ ಕಾಲಕ್ಕೇ ಊರ್ಜಿತಾವಸ್ಥೆಗೆ ಬಂದಿತ್ತು

**ರಾಜ್ಯವ್ಯವಸ್ಥೆ** –ಗುಪ್ತಕಾಲದ ರಾಜ್ಯವ್ಯವಸ್ಥೆಯೂ ಅನುಕರಣೀಯವಾಗಿದ್ದಿತು ಅರಸುತನವು ಪಿತೃಪರಂಪರಯಿಂದ ಬರುತ್ತಿದ್ದಿತು, ಆದರೂ ಅಯೋಗ್ಯನಾದವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುತ್ತಿರಲಿಲ್ಲ. ಅರಸನಿಗೆ **ಆಲೋಚನಾ**ಸಭೆಯಿರುತ್ತಿದ್ದಿತು ಈ ಪ್ರಧಾನರ ಮಂಡಲದಂತೆಯೇ ಮಹಾಮಾತ್ರ ಮುಂತಾಗಿ ವರಿಷ್ಠ ಅಧಿಕಾರದ ಸ್ಥಾನಗಳೂ ಇದ್ದುವು ಪ್ರಾಂತಗಳ ಮೇಲ್ವಿಚಾರಣೆಗೆ **ಉಪರಿಕ** ಎಂಬ ಅಧಿಕಾರಿಯಿರುತ್ತಿದ್ದನು ಹಳ್ಳಿ-ಹಳ್ಳಿಗೆ **ಗ್ರಾಮಿಕ**ನೇ ಮೇಲಧಿಕಾರಿ, ಮತ್ತು ಹಳ್ಳಿಯ ಸುವ್ಯವಸ್ಥೆಯನ್ನು ಕಾಯುವುದಕ್ಕೆ **ಪಂಚಮಂಡಲ**ಗಳೂ ಇರುತ್ತಿದ್ದವು. **ಮಹಾದಂಡನಾಯಕ** ಎಂಬ ಶ್ರೇಷ್ಠ ಅಧಿಕಾರಿಯು ಹಿರಿಯ ನ್ಯಾಯಾಧೀಶನಾಗಿರುತ್ತಿದ್ದನು. ಅರಸನಲ್ಲಿ ಅಪರಿಮಿತವಾದ ಚತುರಂಗಸೈನ್ಯವಿರುತ್ತಿತ್ತು. ಈ ಅರಸರೆಲ್ಲ ಸ್ವಯಂಶೂರರಿದ್ದರು ಅದರಿಂದ ಯುದ್ಧ ಪ್ರಸಂಗಗಳಲ್ಲಿ ತಾವೇ ಸೇನಾಪತಿಗಳಾಗಿ ಸಮರಭೂಮಿಗೆ ಸಾಗಿದ ಪ್ರಸಂಗಗಳೂ ಉಂಟು. ಅರಸನು ತನ್ನ ಚರಿತ್ರೆಯನ್ನು, ಗೆಲುವುಗಂಬಗಳ ಮೇಲೆ ಶ್ರೇಷ್ಠಕವಿಗಳಿಂದ ರಚಿತವಾದ ಕವಿತೆಗಳಲ್ಲಿ ಕೆತ್ತಿಸುತ್ತಿದ್ದನು ಇದರೊಂದಿಗೆ ಪ್ರತಿಯೊಬ್ಬ ಅರಸನೂ ತನ್ನ ಹೆಸರಿನ ನಾಣ್ಯಗಳನ್ನು ಮುದ್ರಿಸಿ ಬಳಕೆಯಲ್ಲಿ ತರುತ್ತಿದ್ದನು.

**ಸಾಮಾಜಿಕ ಸ್ಥಿತಿ** — ಗುಪ್ತ ಅರಸರೆಲ್ಲ ವೈದಿಕಧರ್ಮದ ಅನುಯಾಯಿಗಳೇ ಆಗಿದ್ದರು. ಅದರಿಂದ ಹಿಂದುಧರ್ಮವು ಮತ್ತೆ ಮೆರೆಯುವಂತಾಯಿತು. ಆದರೆ, ಅವರು ಬೌದ್ಧ-ಜೈನಧರ್ಮಗಳನ್ನು ತಿರಸ್ಕರಿಸಲಿಲ್ಲವೆಂಬುದು ನೆನಪಿಡತಕ್ಕ ಮಾತು. ಹಿಂದುಧರ್ಮದಲ್ಲಿ ಯೋಗ್ಯವಾದ ಬದಲಾವಣೆಗಳನ್ನು ಮಾಡಿಯೇ ಜನರನ್ನು ಒಲಿಸಿಕೊಂಡರು. ಅದರಿಂದ ಅನೇಕ ಬೌದ್ಧರೂ, ಜೈನರೂ ಮತ್ತೆ ಹಿಂದುಧರ್ಮವನ್ನು ಅವಲಂಬಿಸಿದರು. ವರ್ಣವ್ಯವಸ್ಥೆಯ ಮೊದಲಿನ ಕಟ್ಟು ಉಳಿಯಲಿಲ್ಲ. ಆದರೆ, ಬೇರೆ ಬೇರೆ ಉದ್ಯೋಗಗಳಲ್ಲಿ ನಿರತರಾದವರು ಬೇರೆ ಬೇರೆ ಜಾತಿಯವರು, ಎಂಬ ಮನೋಭಾವ ಬೆಳೆದು, ನಾಲ್ಕು ವರ್ಣಗಳ ಬದಲು ಎಷ್ಟೋ ಜಾತಿಗಳು ಹುಟ್ಟಿದುವು. ಇವುಗಳಲ್ಲಿ ಕೀಳು-ಮೇಲುಗಳು ಆರಂಭಕ್ಕೆ ಇರಲಿಲ್ಲವಾದರೂ, ಕ್ರಮೇಣ ಉದ್ಯೋಗಗಳ ಅಂತಸ್ತಿನ ಮೇರೆಗೆ ಉತ್ತಮ, ಮಧ್ಯಮ, ಅಧಮ ಎಂಬ ತಾರತಮ್ಯಗಳು ಜಾತಿಪದ್ಧತಿಯಲ್ಲಿ ಬೆಳೆದು ಬಂದುವು. ವಿಧವೆಯರ ಪುನರ್ವಿವಾಹಕ್ಕೆ ಸಮಾಜದಲ್ಲಿ ವಿರೋಧವಿರಲಿಲ್ಲ. ಸತಿಹೋಗುವ ಪದ್ಧತಿಯೂ ಈ ಕಾಲಕ್ಕೆ ಬಳಕೆಯಲ್ಲಿರಬೇಕೆಂದು ತಿಳಿಯುತ್ತದೆ. ಜನರಲ್ಲಿ ನೀತಿ-ನ್ಯಾಯಗಳ ಬಗೆಗೆ ಹೆಚ್ಚಾದ ಆದರವಿದ್ದಿತೆಂಬುದನ್ನು ಫಾಹಿಯಾನನೇ ಹೇಳಿದ್ದಾನೆ.

ಫಾಹಿಯಾನನು ಭಾರತದಿಂದ ತನ್ನ ಸ್ವದೇಶವಾದ ಚೀನಕ್ಕೆ ಸಿಂಹಳ, ಜಾವಾ ಮಾರ್ಗವಾಗಿ ಇಂಡೋಚೀನದ ಮೂಲಕ ಹೊರಟನು. ಅಲ್ಲೆಲ್ಲ ಹಿಂದು ಹಾಗೂ ಬೌದ್ಧ ಅರಸರು ಆಳುತ್ತಿದ್ದರೆಂದು ಅವನು ಹೇಳುತ್ತಾನೆ. ಹೀಗೆ ಭಾರತದಿಂದ ಸಮುದ್ರಮಾರ್ಗವಾಗಿ ಅಷ್ಟು ದೂರ ಹೋಗಿ ನೆಲಸಿ, ಭಾರತ-ಸಂಸ್ಕೃತಿಯನ್ನು ಅಲ್ಲಿ ಸ್ಥಾಪಿಸಿ, ವಿಶಾಲಭಾರತವನ್ನು ಕಟ್ಟಿದ ಕಥೆಯು ನಮ್ಮ ದೇಶದ ಇತಿಹಾಸದಲ್ಲಿ ಒಂದು ಮಹತ್ತ್ವದ ಅಧ್ಯಾಯವಾಗಿದೆ.

## ಅಭ್ಯಸನಗಳು

೧. ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ವಾಕ್ಯದಲ್ಲಿ ಉತ್ತರ ಹೇಳಿರಿ.
   (ಅ) ಮಗಧ ರಾಜ್ಯಕ್ಕೆ ಬಿಹಾರ ಎಂಬ ಹೆಸರು ಏಕೆ ಬಂದಿತು?
   (ಆ) ಗುಪ್ತ ಶಕವನ್ನು ಪ್ರಾರಂಭಿಸಿದವರು ಯಾರು? ಯಾವ ವರುಷದಿಂದ?
   (ಇ) ಚಂದ್ರಗುಪ್ತನ ನಾಣ್ಯಗಳ ವೈಶಿಷ್ಟ್ಯವೇನು?

೨. ಕೆಳಗೆ ಕೊಟ್ಟ ಹೆಸರುಗಳ ಬಗೆಗೆ ನೀವು ಓದಿದ ಒಂದೊಂದು ಮಹತ್ತ್ವದ ಮಾತನ್ನು ಬರೆಯಿರಿ.
   ಪರಾಶರ, ಕುಮಾರದೇವಿ, ಹರಿಷೇಣ, ಬತ್ತಿಸಪುತ್ಥಳಿ, ಧನ್ವಂತರಿ, ರುದ್ರಸೇನ, ತೋರಮಾಣ, ಬಾಲಾದಿತ್ಯ, ಅಜಂತ, ಸ್ಕಂಧ, ಆರ್ಯಭಟ್ಟ, ನಾಲಂದ.

೩. ಫಾಹಿಯಾನನು ಯಾರು? ಅವನ ಬರೆಹಗಳಿಂದ ನಮಗೆ ಗುಪ್ತರ ಕಾಲದ ಸ್ಥಿತಿಯ ಬಗೆಗೆ ಯಾವ ಯಾವ ಮುಖ್ಯಮಾತುಗಳು ಗೊತ್ತಾಗುತ್ತವೆ?

# ೧೧ ವಿಶಾಲ ಭಾರತ

**ವಿಶಾಲ ಭಾರತವೆಂದರೇನು?**— ಭಾರತೀಯರು ತಮ್ಮ ರಾಜ್ಯಾಧಿಕಾರ, ವಿದ್ಯಾಪ್ರಸಾರ, ವ್ಯಾಪಾರ ವಿಸ್ತಾರ, ಸಂಸ್ಕೃತಿ ಪ್ರಸಾರ ಇವುಗಳಿಂದ ಯಾವ ಯಾವ ದೇಶಗಳ ಮೇಲೆ ಪ್ರಭಾವ ಬೀರಿದ್ದರೋ, ಅವುಗಳೆಲ್ಲ ಕೂಡಿ ವಿಶಾಲ ಭಾರತವಾಗುವುದು ಇದರೊಡನೆ ಇರುವ ಭೂಪಟ (ನಕಾಶ)ವು ನಿಮಗೆ ಆ ವಿಶಾಲಭಾರತದ ಕಲ್ಪನೆಯನ್ನು ಕೊಡುತ್ತದೆ

**ಪಶ್ಚಿಮದ ಕ್ಷೇತ್ರವ್ಯಾಪಾರ** — ಹರಪ್ಪ-ಮೊಹೆಂಜೊದಾರೋದಲ್ಲಿ ಸಿಕ್ಕಿರುವ ಕೆಲವು ವಸ್ತುಗಳು ಅತಿದೂರದಲ್ಲಿರುವ ಈಜಿಪ್ತ, ಮೆಸೊಪೊಟೇಮಿಯ ದೇಶಗಳೊಡನೆ ಭಾರತದ ವ್ಯಾಪಾರಸಂಬಂಧವಿದ್ದಂತೆ ತಿಳಿಸುತ್ತವೆ




ಅನಂತರ ಸಿಂಧುವಿನ ಬೈಲಿಗೆ ಬಂದ ಆರ್ಯರಿಗೆ, ಯುರೋಪರಾಷ್ಟ್ರಗಳ ಸಂಬಂಧವಿತ್ತು ಋಗ್ವೇದದ ಮಂತ್ರದಲ್ಲಿ "ಕಡಲಿನ ಹಡಗವನ್ನು ಪಾರುಮಾಡು" ಎಂಬ ಸ್ತೋತ್ರವಿದೆ ಎಂದ ಮೇಲೆ, ಹಡಗುಗಳ ವ್ಯಾಪಾರವು ನಡೆಯುತ್ತಿದ್ದಿತಲ್ಲದೆ ಅದು ಪಶ್ಚಿಮಖಂಡದೊಡನೆಯೇ ನಡೆಯುತ್ತಿದ್ದಿತೆಂದು ಊಹಿಸಬಹುದು ರೋಮನ್ ದೇಶದವರು ಭಾರತದಿಂದ ಹೇರಳವಾಗಿ ವಿಲಾಸು-ಸಾಮಗ್ರಿಗಳನ್ನು ಕೊಳ್ಳುತ್ತಿದ್ದರೆಂದು 'ಪ್ಲಿನಿ' ಎಂಬ ಇತಿಹಾಸಕಾರನು ಬರೆ

ಯುತ್ತಾನೆ ರೋಮನ್ ನಾಣ್ಯಗಳು ದಕ್ಷಿಣಭಾರತದಲ್ಲಿ ಹಲವಾರು ಕಡೆ ಸಿಕ್ಕಿವೆ ತಮಿಳಿನ ಕಾವ್ಯಗಳಲ್ಲಿ 'ಯವನ' ನಾವಿಕರ ಹಾಗೂ ವರ್ತಕರ ವಿವರಣೆ ಇದೆ, ಅಲ್ಲದೆ, ಯವನಸ್ತ್ರೀಯರನ್ನು ಅರಮನೆಗಳಲ್ಲಿ ಅಂತಃಪುರದ ಕಾವಲುಗಾರ್ತಿಯರನ್ನಾಗಿ ನೇಮಿಸುವ ಪದ್ಧತಿಯೂ ವರ್ಣಿತವಾಗಿದೆ

**ರಾಜಕಾರಣ** — ಪರ್ಶಿಯಾದೇಶದವರು ಪಂಜಾಬದ ಮೇಲೆ ಮಾಡಿದ ದಾಳಿ, ಇರಾಣದವರು ಗ್ರೀಸಿನ ಮೇಲೆ ನಡೆಸಿದ ಆಕ್ರಮಣ ಇವುಗಳಲ್ಲಿ ಭಾರತೀಯ ಸೈನಿಕರು ಸೇರಿಕೊಂಡುದು, ಅಲೆಕ್ಷಾಂಡರನ ದಂಡಯಾತ್ರೆ, ಸೆಲ್ಯೂಕ್ಯೂಸನಿಗೂ ಮೌರ್ಯ ಚಂದ್ರಗುಪ್ತನಿಗೂ ಬೀಗತನವಾದುದು, ರಾಯಭಾರಿಗಳನ್ನು ಕಳಿಸಿದುದು ಈ ಮುಂತಾದ ರಾಜಕಾರಣ ಸಂಬಂಧದ ವಿಚಾರಗಳು ಈ ಮೊದಲು ಚರಿತ್ರೆಯಲ್ಲಿ ಬಂದಿವೆ

**ವಿದ್ಯಾಪ್ರಸಾರ** — ಗಾಂಧಾರದ ಕಲಾಶಾಲೆಯಲ್ಲಿಯೂ ತಕ್ಷಶಿಲೆಯ ವಿಶ್ವವಿದ್ಯಾಲಯದಲ್ಲಿಯೂ ಹಲವು ಜನ ವಿದೇಶದ ವಿದ್ಯಾರ್ಥಿಗಳೂ ಉಪಾಧ್ಯಾಯರೂ ಸೇರಿದ್ದರು ತಕ್ಷಶಿಲೆಯ ವೈದ್ಯಕೀಯ ವಿದ್ಯೆ ಮತ್ತು ಉಜ್ಜಯಿನಿಯ ಜ್ಯೋತಿಷ ವಿದ್ಯೆ ಇವುಗಳ ಪ್ರಭಾವವು ಗ್ರೀಕ ರೋಮನರ ಮೇಲೆ ಹೆಚ್ಚಾಗಿತ್ತು, ಅದರಂತೆ ಅವರ ವಿಚಾರಗಳೂ ನಮ್ಮ ಸರಣಿಯಲ್ಲಿ ಕೂಡಿಕೊಂಡಿವೆ ಸಂಸ್ಕೃತ ಸಾಹಿತ್ಯಕ್ಕೂ ಗ್ರೀಕ ರೋಮನರ ಸಂಬಂಧ ಬಂದಿದೆ

ಈ ಎಲ್ಲ ಕಾರಣಗಳಿಂದ ಪ್ರಾಚೀನ ಭಾರತದ ಪ್ರಭಾವಕ್ಕೆ ಪಶ್ಚಿಮದ ಅಫಗಾನಿಸ್ತಾನ, ಇರಾಣ, ಅರಬಸ್ತಾನ, ತುರ್ಕಸ್ತಾನ, ಏಶಿಯಾಮೈನರ್ ಮುಂತಾದ ರಾಷ್ಟ್ರಗಳೂ, ಗ್ರೀಕ-ರೋಮ-ಬಾಲ್ಕನ್ ಪ್ರದೇಶಗಳೂ ತಲೆಬಾಗಿದ್ದುವೆಂದು ಸಾಧಾರಣವಾಗಿ ಹೇಳಬಹುದಾಗಿದೆ

**ಉತ್ತರದ ಕ್ಷೇತ್ರ** — ಭಾರತದ ಉತ್ತರಕ್ಕಿರುವ ಮಧ್ಯ ಏಶಿಯಾದಲ್ಲಿ ನಡೆದಿರುವ ಸಂಶೋಧನೆಗಳಿಂದ, ನಮ್ಮ ನಾಗರಿಕತೆ ಮತ್ತು ಸಂಸ್ಕೃತಿಗಳು ಆ ಪ್ರದೇಶಗಳಲ್ಲಿ ಹೇಗೆ ಹಬ್ಬಿದ್ದುವೆಂಬುದು ತಿಳಿಯುತ್ತದೆ ಮಿನಾಂಡರ, ಕನಿಷ್ಕ ಮುಂತಾದ ರಾಜರು ಆಯಾ ದೇಶಗಳಲ್ಲಿ ರಾಜಕೀಯ ಸಂಬಂಧವನ್ನಿಟ್ಟುಕೊಂಡಿದ್ದರು, ಇತ್ತೀಚೆಗಿನ ಶೋಧಗಳಲ್ಲಿ ಭಾರತೀಯ ವಿದ್ಯೆ, ಕಲೆ, ಧರ್ಮ, ಸಂಸ್ಕೃತಿಗಳು ಮಧ್ಯ ಏಶಿಯದ ಮಂಗೋಲಿಯನ್ ಪ್ರದೇಶಗಳಲ್ಲಿ ಹೆಚ್ಚಾಗಿ ಹರಡಿದಂತೆ ಗೊತ್ತಾಗುತ್ತದೆ ಇದರಂತೆ ಅಫಗಾನಿಸ್ತಾನ, ಇರಾಣ, ಪೂರ್ವತುರ್ಕಸ್ತಾನಗಳೂ ಭಾರತಕ್ಕೆ ಋಣಿಯಾಗಿವೆ. ಈ ಮಾರ್ಗವಾಗಿಯೇ ಕಾರವಾನರು-ಯಾತ್ರಿಕರು-ಫಾಹಿಯಾನ್, ಯವನಚ್ವಾಂಗ್ ಮುಂತಾದವರು ಭಾರತಕ್ಕೂ ಕುಮಾರ-ಜೀವ, ಅಮೋಘವಜ್ರ, ಕಶ್ಯಪ, ಮಾತಂಗ ಮುಂತಾದ ಭಾರತೀಯರು ಚೀನದೇಶಕ್ಕೂ ತೆರಳಿದರು

ಬೌದ್ಧಧರ್ಮಕ್ಕೆ ಸಂಬಂಧಿಸಿದ ನೂರಾರು ಶಿಲಾಶಾಸನಗಳು, ಪುರಗಳು, ಸ್ತೂಪಗಳು ಮಧ್ಯ ಏಶಿಯಾದಲ್ಲಿ ಸಿಕ್ಕಿವೆ ಅಶ್ವಘೋಷನು ಬರೆದ "ಸಾರೀಪುತ್ರ ಪ್ರಕರಣ" ಎಂಬ ಒಂದು ಸಂಸ್ಕೃತನಾಟಕದ ಪ್ರತಿಯು, ಅಲ್ಲಿಯ ಮರಳುಕಾಡೊಂದರ ನಡುವೆ ಹೂತುಹೋಗಿದ್ದ ನಗರವನ್ನು ಅಗಿದು ತೆಗೆದಾಗ ಸಿಕ್ಕಿತು!

**ಧರ್ಮ** — ತಿಬೇಟದಲ್ಲಿ **'ಲಾಮಾ'**ಗಳ ಧರ್ಮ, ದೇವಾಲಯ, ಕಲೆ ಮತ್ತು ಸಾಹಿತ್ಯಗಳಿಗೆ ಭಾರತೀಯತೆಯ ಸಂಬಂಧವಿದೆ ಭಾರತೀಯರೇ ಇವನ್ನು ರೂಪಿಸಿರಬೇಕು, ಎಂದು ಪ್ರೊ ಯು ಎನ್ ಘೋಷರು ಬರೆಯುತ್ತಾರೆ ಅಲ್ಲಿಯ ಕೆಲವು ಸ್ತೂಪಗಳಲ್ಲಿ ಕಾರ್ತಿಕೇಯ (ಷಣ್ಮುಖ)ನ ಮೂರ್ತಿಯಿದೆ

**ಭಾರತ ಮತ್ತು ಚೀನ** — ಭಾರತ-ಚೀನಗಳಲ್ಲಿ ಸಂಸ್ಕೃತಿ, ಕಲೆ, ವಿದ್ಯೆ, ರಾಯಭಾರ, ವ್ಯಾಪಾರ ಮೊದಲಾಗಿ ಅಂದಿನಿಂದ ಇಂದಿನವರೆಗೂ ನಿಕಟ ಸಂಬಂಧವಿದೆ ಭಾರತದ **'ಬುದ್ಧಭದ್ರ'**ನು, ಫಾಹಿಯಾನನು ಈ ದೇಶಕ್ಕೆ ಬರುವ ಮೊದಲೇ ಅಲ್ಲಿಗೆ ಹೋಗಿದ್ದನು ಕಾಶ್ಮೀರದ ಪಂಡಿತನಾದ **ಕುಮಾರಜೀವನು** ಚೀನಕ್ಕೆ ಹೋಗಿ, ಅಲ್ಲಿಯೇ ಹಲವು ವರ್ಷಗಳಿದ್ದು, ಬೌದ್ಧಧರ್ಮವನ್ನು ಬಲವಾಗಿಯೆ ಬೆಳೆಸಿದನು ಆತನ ವ್ಯಾಖ್ಯಾನವನ್ನು ಎಲ್ಲರೂ ಆಸ್ಥೆಯಿಂದ ಕೇಳುತ್ತಿದ್ದರು ಆತನ ತರುವಾಯ ಕೆಲವು ಬೌದ್ಧಸಂನ್ಯಾಸಿನಿಯರೂ ಚೀನಕ್ಕೆ ಪ್ರಯಾಣ ಬೆಳೆಸಿದರು **ಬೋಧೀಧರ್ಮ-ಬೋಧೀಸೇನರು** ಏಳನೆಯ ಮತ್ತು ಎಂಟನೆಯ ಶತಕಗಳಲ್ಲಿ ಜಪಾನಕ್ಕೂ ಹೋಗಿದ್ದರು ಬೋಧಿಧರ್ಮನನ್ನು ಆಗಿನ ಜಪಾನದ ಅರಸು ಒಳ್ಳೆಯ ಸಂಭ್ರಮದಿಂದ ಸ್ವಾಗತಿಸಿದನು ಬೋಧೀಸೇನನು ಜಪಾನೀ ಪುರೋಹಿತರಿಗೆ ಸಂಸ್ಕೃತದ ಉಪಾಧ್ಯಾಯನಾಗಿದ್ದನು

ಚೋಳ ಅರಸರ ಕಾಲದಲ್ಲಿ ತಮಿಳರು ಚೀನ-ಜಪಾನಗಳೊಡನೆ ಹೆಚ್ಚಾಗಿ ವ್ಯಾಪಾರ ಮಾಡುತ್ತಿದ್ದರು ಆ ದೇಶದಲ್ಲಿ ವ್ಯಾಪಾರದ ಕ್ಷೇತ್ರಗಳನ್ನು ಸ್ಥಾಪಿಸಿದ್ದರು ಹತ್ತಿ ನೂಲು ಔಷಧಗಳು, ಹಸ್ತಿದಂತದ ಒಡವೆಗಳು, ಮಸಾಲೆ ಧೂಪ ಹವಳಗಳು ನಿರ್ಯಾತದ ಸರಕುಗಳಾಗಿದ್ದುವು ಚೋಳ ಅರಸರ ವ್ಯಾಪಾರನೌಕೆಗಳು ಪೂರ್ವದ್ವೀಪ ಮತ್ತು ಭಾರತಗಳನ್ನು ಸುತ್ತಿ ಉತ್ತರಕ್ಕೆ ತಿರುಗಿ, ಚೀನವನ್ನು ಸೇರುತ್ತಿದ್ದುವು ದಾರಿಯುದ್ದಕ್ಕೂ ಅಲ್ಲಲ್ಲಿ ಅವರು ರಾಜ್ಯಗಳನ್ನು ಸ್ಥಾಪಿಸಿಕೊಂಡಿದ್ದರು

**ಪೂರ್ವದ ಕ್ಷೇತ್ರ** — ಭಾರತೀಯ ಸಂಬಂಧದ ಶ್ರೇಷ್ಠತೆ ಮತ್ತು ದೊಡ್ಡಿತೆಗಳು ಪೂರ್ವದೇಶಗಳಲ್ಲಿ ಅತಿಶಯವಾಗಿದ್ದಂತೆ ಕಂಡುಬರುತ್ತದೆ ಬ್ರಹ್ಮದೇಶ, ಮಲಯ, ಸುಮಾತ್ರಾ, ಜಾವಾ, ಬಾಲಿ, ಸಯಾಮ, ಇಂಡೋಚೀನ ಮತ್ತೆ

ಕೆಲವು ನಡುಗಡ್ಡೆಗಳು ಈ ಕ್ಷೇತ್ರದಲ್ಲಿ ಬರುತ್ತವೆ ಈ ದೇಶಗಳಲ್ಲಿ ಸಂಸ್ಕೃತ ಭಾಷೆಯಲ್ಲಿಯ ಶಿಲಾಲೇಖಗಳೂ ಭಾರತಸಂಸ್ಕೃತಿಯ ಕೇಂದ್ರ-ಸ್ಥಾನಗಳೂ ಭಾರತೀಯ ಶಿಲ್ಪವೂ ಹೆಜ್ಜೆಹೆಜ್ಜೆಗ ನೋಡಲು ಸಿಕ್ಕುತ್ತವೆ ಇಂಡೋಚೀನದಲ್ಲಂತೂ ಭಾರತ-ಚೀನದೇಶಗಳ ಸಂಮಿಶ್ರಸಂಸ್ಕೃತಿಯು ಎದ್ದುಕಾಣುತ್ತದೆ ಅದರ ಹೆಸರೇ ಇದಕ್ಕೆ ನಿದರ್ಶನವಾಗಿದೆ

**ವ್ಯಾಪಾರ** — ಆ ಕಾಲದ ಭಾರತೀಯರು ಬುದ್ಧಿವಂತರೂ ಸಾಹಸಿಗಳೂ ಆಗಿದ್ದರು ವ್ಯಾಪಾರದಲ್ಲಂತೂ ಹೊರನಾಡುಗಳಿಂದ ಹಣ ಹರಿದು ಬರುವಂತೆ ಎಲ್ಲ ಬಗೆಯ ಒಡವೆಗಳನ್ನು ನಿರ್ಯಾತ ಮಾಡುತ್ತಿದ್ದರು ಹಡಗುಗಳನ್ನು ಕಟ್ಟುವುದು, ವಿಲಾಸಸಾಮಗ್ರಿಗಳನ್ನು ಸೃಷ್ಟಿಸುವುದು, ಅಲ್ಲದೆ ಪರದೇಶಗಳಿಗೆ ಹೋಗಿ ನೆಲೆಸಿ, ಆ ಜನರ ಪ್ರೀತಿ-ಗೌರವಗಳನ್ನು ಸಂಪಾದಿಸಿ ಅವರನ್ನು ದಕ್ಷತೆಯಿಂದ ಕಾಪಾಡಿ ಉದ್ಧರಿಸುವುದು— ಇವುಗಳಿಂದ ಭಾರತೀಯರು ಖ್ಯಾತಿಪಡೆದರು

**ಧರ್ಮ-ಭಾಷೆ** — ಬ್ರಹ್ಮದೇಶ, ಮಲಯ, ಕಾಂಬೋದಿಯಾ, ಜಾವಾ, ಸುಮಾತ್ರಾ, ಬಾಲಿ ಮೊದಲಾದ ಕಡೆಗಳಲ್ಲಿದ್ದ ರಾಜ್ಯಗಳು ಭಾರತಕ್ಕೆ ಅಂಕಿತವಾಗಿರಲಿಲ್ಲ, ಆದರೆ ಅವುಗಳನ್ನು ಕಟ್ಟುವುದರಲ್ಲಿ ಭಾರತೀಯರ ಸಂಪೂರ್ಣ ಸಂಬಂಧವಿದೆ ಎನ್ನುವುದನ್ನು ಮರೆಯ ುವಂತಿಲ್ಲ ಏಕೆಂದರೆ ಆ ಸಂಸ್ಕೃತಿಗಳೆಲ್ಲ ಭಾರತೀಯ ಸಂಸ್ಕೃತಿಗೆ ಪೂರ್ಣ ಸಂಬಂಧಪಟ್ಟಿವೆ ಧರ್ಮ ಕಲೆ, ಸಾಹಿತ್ಯಗಳ ದೃಷ್ಟಿಯಿಂದ ಈ ಎಲ್ಲ ದೇಶಗಳಲ್ಲಿಯೂ ಆಪ್ತಬಾಂಧವ್ಯವನ್ನು ಕಾಣಬಹುದು ಬಾಲಿದ್ವೀಪಗಳಲ್ಲಿ ಈಗಲೂ ಕಂಡುಬರುವ ನೃತ್ಯಪದ್ಧತಿಯು ಭಾರತೀಯರ ಕಥಕ್, ಕಥಕ್ಕಲಿ, ಮಣಿಪುರಿ ನೃತ್ಯಗಳನ್ನು ಹೋಲುತ್ತದೆ ಹಿಂದುಗಳ ಶೈವ, ವೈಷ್ಣವ ಮತ್ತು ಬೌದ್ಧರ ಮಹಾಯಾನ-ಹೀನಯಾನಗಳ ಧಾರ್ಮಿಕಸಂಸ್ಕೃತಿಯು ಅಲ್ಲಿ ಒಡಮೂಡಿದೆ ದೇವಾಲಯ, ಶಿಲಾಶಾಸನ, ಸ್ತೂಪಗಳಲ್ಲಿ ಭಾರತೀಯತೆ ಪಡಿಮೂಡಿದೆ ಪಾಲೀಭಾಷೆ ಬಳಕೆಯಾಗಿದ್ದರೂ ಶಾಸ್ತ್ರಗಳ ತಿಳುವಳಿಕೆಗೆ ಸಂಸ್ಕೃತವೇ ಮಾಧ್ಯಮವಾಗಿದೆ. ಲಿಪಿಯೂ ದೇವನಾಗರಿಯನ್ನೇ ಹೋಲುತ್ತಿದೆ

**ಸಂಸ್ಕೃತಿ** — ಸಯಾಮು, ಕಾಂಬೋದಿಯಾ, ಬ್ರಹ್ಮದೇಶ ಈ ದೇಶಗಳ ಮಂತ್ರಗಳಲ್ಲಿ ಭಾರತೀಯ ಪವಿತ್ರನದಿಗಳ ಹೆಸರುಗಳು ಬರುತ್ತವೆ ಆ ಕಾಲದಲ್ಲಿ ಭಾರತಕ್ಕೆ '**ಸುವರ್ಣಭೂಮಿ**'ಯೆಂದೂ ಪೂರ್ವದ್ವೀಪಗಳಿಗೆ '**ಸುವರ್ಣದ್ವೀಪ**'ಗಳೆಂದೂ ಹೆಸರುಗಳಿವೆ. ಈ ಹೆಸರುಗಳೇ ಭಾರತದ ಹಿರಿಮೆಯನ್ನು ಹೇಳುವಂತೆ ಇವೆ

**ರಾಜಕಾರಣ** —ಭಾರತದಲ್ಲಿ ರಾಜ್ಯಸ್ಥಾಪನೆಗೆ ಅಸಮರ್ಥರಾದ ಕೆಲವು ರಾಜಕುಮಾರರು ಈ ಪೂರ್ವದ್ವೀಪಗಳಲ್ಲಿ ನೆಲೆಸಿ ರಾಜ್ಯವನ್ನು ಕಟ್ಟಿದಂತೆ ಆಖ್ಯಾಯಿಕೆಗಳಿವೆ ಹಾಗೆಯೇ ಅವರ ಸಂಬಂಧಿಕರೂ ಬೇರೆ ವ್ಯಾಪಾರಿಗಳೂ ಆಯಾ ದೇಶಗಳಲ್ಲಿ ನೆಲೆಸಿದರು ಇವರಲ್ಲಿ ಕೆಲವರು ಸಾಹಿತಿಗಳು, ಶಿಲ್ಪಿಗಳು, ಧರ್ಮಪ್ರಸಾರಕರು ಇದ್ದರು ಅವರಿಂದಾಗಿ—ಅಲ್ಲಿ ಆಯಾ ವಿದ್ಯೆಗಳ ಪ್ರಸಾರವಾಗುವುದಕ್ಕೆ ಅನುಕೂಲವಾಯಿತು ಕ್ರಿಸ್ತವರ್ಷದ ಒಂದು ಶತಮಾನ ಮೊದಲು ಮತ್ತು ಅನಂತರದ ಎರಡು ಶತಮಾನಗಳಲ್ಲಿ ಜಾವಾ, ಸುಮಾತ್ರಾ, ಕಾಂಬೋದಿಯಾಗಳಲ್ಲಿ ಹಿಂದೂ ರಾಜ್ಯಗಳು ಸ್ಥಾಪಿಸಲ್ಪಟ್ಟುವು ಅವರೆಲ್ಲರೂ ಚೀನ ಮೊದಲಾದ ದೇಶಗಳಿಗೆ ರಾಯಭಾರಿಗಳನ್ನು ಕಳಿಸಿದ್ದರು ನಾಲ್ಕನೆಯ ಶತಮಾನದ ಕೊನೆಯಲ್ಲಿ ಆಳುತ್ತಿದ್ದ **ಕೌಂಡಿಣ್ಯ** ಎಂಬರಸು **ಕಾಂಬೋದಿಯಾ**ದಲ್ಲಿ ಆಳಿದನು ಕಾಂಬೋದಿಯಾ ಎಂಬ ಪ್ರದೇಶದ ಹಿಂದಿನ ಹೆಸರು ಕಾಂಭೋಜ ಎಂದೇ ಇದ್ದಿತು ಕೌಂಡಿಣ್ಯನನ್ನು ಹಿಂದೂ ಬ್ರಾಹ್ಮಣ ಅರಸನೆಂದು ಚೀನದ ಬರೆಹಗಳು ಉಲ್ಲೇಖಿಸಿವೆ ಆತನ ತರುವಾಯ **ಜಯವರ್ಮ**ನು ಪಟ್ಟವೇರಿದನು ಆತನೂ ಚೀನದಲ್ಲಿ ತನ್ನ ರಾಯಭಾರಿಯನ್ನು ಇಟ್ಟಿದ್ದನು ಆ ಮೇಲೆ ಕೆಲವು ಜನ ಬೌದ್ಧಭಿಕ್ಷುಗಳು ಕಾಂಬೋದಿಯಾದಿಂದ ಚೀನಕ್ಕೆ ಹೋದರು ಕಾಂಬೋದಿಯಾದಲ್ಲಿ ಅಂಕೋರ್‌ವಾಟ್ ಎಂಬ ಹೆಸರಿನ ದೊಡ್ಡ ವಿಷ್ಣುದೇವಾಲಯವೊಂದನ್ನು ಯಶೋವರ್ಮ, ಸೂರ್ಯವರ್ಮ ಎಂಬ ರಾಜರು ಕಟ್ಟಿಸಿದ್ದಾರ

ಜಾವಾ-ಬಾಲಿಗಳಲ್ಲಿ ಬೇರೆ ಸಣ್ಣದೊಡ್ಡ ಹಿಂದೂ ರಾಜ್ಯಗಳೂ ಇದ್ದುವು ಶೈಲೇಂದ್ರ ರಾಜವಂಶದವರು ಜಾವಾ ದ್ವೀಪಸಮೂಹವನ್ನಾಳುತ್ತಿದ್ದಾಗ, ಅಲ್ಲಿ ಇಂದಿಗೂ ರಾರಾಜಿಸುತ್ತಿರುವ ಬೊರೊಬುದೂರು ಎಂಬ ಒಂಬತ್ತಂತಸ್ತಿನ ಅತ್ಯುನ್ನತ ಬೌದ್ಧ ಸ್ತೂಪವನ್ನು ನಿರ್ಮಿಸಿದರು ಶೈಲೇಂದ್ರರ ತರುವಾಯ ಬಂದ ರಾಜರಲ್ಲಿ **ಪಾಂಡುರಂಗ, ಭೃಗು, ಹರಿವರ್ಮ, ಇಂದ್ರವರ್ಮ** ಮುಂತಾದ ಅನೇಕ ಹೆಸರುಗಳು ಹಿಂದೂಸಂಸ್ಕೃತಿಯ ಸಂಬಂಧವನ್ನು ತೋರಿಸುತ್ತವ

ಹೀಗೆ ವಿಶಾಲಭಾರತದ ಪೂರ್ವಕ್ಷೇತ್ರದಲ್ಲಿ ಬ್ರಹ್ಮದೇಶ, ಮಲಯ, ಸಯಾಮ, ಇಂಡೋಚೀನ ದೇಶಗಳೂ, ಸುಮಾತ್ರಾ, ಜಾವಾ, ಕಾಂಬೋದಿಯಾ, ಬಾಲಿದ್ವೀಪಗಳೂ ಮುಖ್ಯವಾಗಿ ಬರುತ್ತವ

**ದಕ್ಷಿಣದ ಕ್ಷೇತ್ರ** —ಭಾರತದ ದಕ್ಷಿಣಕ್ಕೆ ಪ್ರಾಮುಖ್ಯವಾಗಿ ಹಿಂದೀ ಮಹಾಸಾಗರವೇ ಹಬ್ಬಿದೆ ಆ ಭಾಗದಲ್ಲಿ **ಸಿಂಹಲದ್ವೀಪವೊಂದೇ** ಸಿಕ್ಕುತ್ತಿದೆ ರಾಮಾಯಣ ಕಾಲದಿಂದಲೂ ಭಾರತ-ಸಿಂಹಲಗಳ ಸಂಬಂಧವಿದೆ ಆ ಕಾಲದಲ್ಲಿ ಅದಕ್ಕೆ **ಲಂಕೆ** ಎಂದು ಹೆಸರಿತ್ತು ಅಶೋಕ ಚಕ್ರವರ್ತಿ ತನ್ನ

ಮಕ್ಕಳಾದ ಮಹೇಂದ್ರ ಮತ್ತು ಸಂಘಮಿತ್ರೆಯರನ್ನು ಧರ್ಮೋಪದೇಶಕ್ಕಾಗಿ ಸಿಂಹಲಕ್ಕೆ ಕಳುಹಿಸಿದ ಸಂಗತಿಯು ಇತಿಹಾಸಪ್ರಸಿದ್ಧವದೆ ಈಗಲೂ ಸಿಂಹಲದಲ್ಲಿ ಲಕ್ಷಾಂತರ ಭಾರತೀಯರು ನೆಲೆಸಿದ್ದಾರೆ

**ಹಿರಿಮೆ** – ಈ ವಿಶಾಲಭಾರತದ ಚತುಃಸೀಮೆಯನ್ನು ಒಮ್ಮೆಲೆ ಕಲ್ಪನೆಯಲ್ಲಿ ತೆಗೆದುಕೊಳ್ಳಬೇಕು, ಎಂದರೆ, ಆ ಕಾಲದ ಭಾರತೀಯ ಜೀವನದ ಹಿರಿಮೆ ಹೊಳೆಯುವುದು ಅಲ್ಲದೆ, ಭರತಖಂಡವೇ ಆಗಿನ ಏಶಿಯಾ ಖಂಡದ ಸಂಸ್ಕೃತಿ-ಜ್ಞಾನ-ಸಾಹಿತ್ಯ-ಕಲಾವಿಜ್ಞಾನಗಳ ತವರುಮನೆಯಾಗಿದ್ದಿತೆಂಬ ಅಭಿಮಾನಕ್ಕೂ ಆಸ್ಪದ ಸಿಕ್ಕುವುದು

## ಅಭ್ಯಾಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ವಾಕ್ಯಗಳಲ್ಲಿ ಉತ್ತರಕೊಡಿರಿ

(ಅ) ವಿಶಾಲಭಾರತವೆಂದು ನಾವು ಯಾವುದಕ್ಕೆ ಅನ್ನಬೇಕು?

(ಆ) ಪ್ಲಿನಿಯು ಭಾರತ-ರೋಮನ್ ಸಂಬಂಧದ ಬಗೆಗೆ ಯಾವ ಮಾತನ್ನು ಹೇಳಿದ್ದಾನ?

(ಇ) ಭಾರತೀಯರಲ್ಲಿ ಚೀನದೇಶಕ್ಕೆ ತೆರಳಿದವರು ಯಾರು?

(ಈ) ಚೋಳ ಅರಸರ ಕಾಲದಲ್ಲಿ ಚೀನ ಹಾಗೂ ಜಪಾನಗಳಿಗೆ ಭಾರತದಿಂದ ಯಾವ ಸರಕುಗಳು ನಿರ್ಯಾತವಾಗುತ್ತಿದ್ದುವು?

(ಉ) ಬಾಲಿದ್ವೀಪಗಳಲ್ಲಿ ಕಂಡುಬರುವ ನೃತ್ಯಕ್ಕೂ ಭಾರತದಲ್ಲಿಯ ನೃತ್ಯಕ್ಕೂ ಸಂಬಂಧವೇನು?

(ಊ) ಜಾವಾದ್ವೀಪದಲ್ಲಿ ಒಂಬತ್ತು ಅಂತಸ್ತಿನ ಬೌದ್ಧ ಸ್ತೂಪವನ್ನು ಯಾರು ನಿರ್ಮಿಸಿದರು?

೨ ಕೆಳಗೆ ಕೊಟ್ಟ ಹೆಸರುಗಳ ವಿಶಿಷ್ಟ ಪರಿಚಯವಾಗುವಂತೆ, ಅವುಗಳ ಬಗೆಗೆ ಮುಖ್ಯವಾದ ಒಂದೊಂದು ಮಾತನ್ನು ಬರೆಯಿರಿ
ಅಂಕೋರ್‌ವಾಟ್, ಕೌಂಡಿಣ್ಯ, ಲಂಕೆ, ಇಂಡೋಚೀನ, ಕುಮಾರಜೀವ, ಸಾರಿಪುತ್ರ-ಪ್ರಕರಣ, ತಕ್ಷಶಿಲೆ

೩ ಬೋಧಿಧರ್ಮದ ಬೋಧಿಸೇನನಿಗೂ ಜಪಾನದ ಅರಸನಿಗೂ ನಡೆದಿರಬಹುದಾದ ಸಂಭಾಷಣೆ ಯಾವುದು? (ಶಿಕ್ಷಕರು ವಿದ್ಯಾರ್ಥಿಗಳಿಂದ ನಟನೆ ಮಾಡಿಸಬೇಕು)

---

# ೧೨ ಶ್ರೀಹರ್ಷವರ್ಧನ

(ಕ್ರಿ ವ ೬೦೬—೬೪೭)

**ವರ್ಧನ ವಂಶ** — ವರ್ಧನ ರಾಜಮನೆತನದ ಮೂಲಪುರುಷನು ಮಹಾ
ರಾಜಾಧಿರಾಜ **ಪ್ರಭಾಕರವರ್ಧನನು** (ಕ್ರಿ ವರ್ಷದ ೫೮೩—೬೦೬)
ಇವನು ಸ್ಥಾನೇಶ್ವರದ ಆದಿತ್ಯವರ್ಧನನ ಮಗನು ಒಳ್ಳೆಯ ಶೂರನೂ
ಯುಕ್ತಿವಂತನೂ ಆಗಿದ್ದನು ಅದರಿಂದ ತೀವ್ರದಲ್ಲಿಯೇ **ಲಾಟ, ಮಾಳವ,**
**ಗುರ್ಜರ, ಸಿಂಧ** ಮೊದಲಾದುವುಗಳನ್ನು ಗೆದ್ದು ಸ್ವತಂತ್ರರಾಜ್ಯವನ್ನು ಸ್ಥಾಪಿಸಿ
ದನು ಅಲ್ಲದೆ, ಹೂಣರನ್ನೂ ತನ್ನ ಭುಜಬಲದಿಂದಲೂ ಬುದ್ಧಿಬಲದಿಂದಲೂ
ಹಿಮ್ಮೆಟ್ಟಿಸಿದನು ಈತನ ಹೆಂಡತಿಯ ಹೆಸರು **ಯಶೋವತಿ** ಇವರಿಗೆ
**ರಾಜ್ಯವರ್ಧನ, ಹರ್ಷವರ್ಧನ, ರಾಜ್ಯಶ್ರೀ** ಎಂಬ ಮೂವರು ಮಕ್ಕಳಾದರು
ರಾಜ್ಯಶ್ರೀಯನ್ನು ಕನೋಜದ ಗ್ರಹವರ್ಮ ಎಂಬ ಮೌಖರಿ ರಾಜನಿಗೆ
ಮದುವೆಮಾಡಿಕೊಟ್ಟನು ರಾಜ್ಯವರ್ಧನನು ದೊಡ್ಡವನಾದ ಮೇಲೆ ತಂದೆಯು
ಆತನನ್ನು ಹೂಣರ ಶಾಸನ ಮಾಡಲು ಕಳಿಸಿಕೊಟ್ಟನು ಹರ್ಷವರ್ಧನನೂ
ಅಣ್ಣನ ಸಂಗಡ ಹೊರಟಿದ್ದನು ಆದರೆ 'ಪ್ರಭಾಕರವರ್ಧನನಿಗೆ ಸ್ವಸ್ಥವಿಲ್ಲ'
ಎಂಬ ಸುದ್ದಿ ನಡುದಾರಿಯಲ್ಲಿಯೇ ಅವರಿಗೆ ಮುಟ್ಟಿತು ಹರ್ಷವರ್ಧನನು
ಹಿಂದಕ್ಕೆ ತಿರುಗಿದನು ರಾಜ್ಯವರ್ಧನನು ಹೂಣರನ್ನು ಮೆತ್ತಗೆ ಮಾಡಿ
ತೀವ್ರವೆ ತಿರುಗಿ ಬಂದನು ಅಷ್ಟರಲ್ಲಿ ತಂದೆ ತೀರಿಕೊಂಡಿದ್ದನು ಯಶೋವತಿ
ಸತಿಹೋಗಿದ್ದಳು

**ರಾಜ್ಯವರ್ಧನ** — ತಂದೆಯ ತರುವಾಯ ರಾಜ್ಯವರ್ಧನನು ಪಟ್ಟಕ್ಕೆ
ಕುಳಿತನು ತುಸು ದಿನಗಳಲ್ಲಿಯೇ **ಮಾಳವದ ದೇವಗುಪ್ತನು** ಕನೋಜದ
ಗ್ರಹವರ್ಮನನ್ನು ಕೊಂದು ರಾಜ್ಯಶ್ರೀಯನ್ನು ಸೆರೆಹಿಡಿದ ಸಂಗತಿಯು ತಿಳಿ
ಯಿತು, ಅದರಂತೆ **ಗೌಡದೇಶದ** ಅರಸನಾದ **ಶಶಾಂಕಗುಪ್ತನ** ಬೆಂಬಲದಿಂದ
ಸ್ಥಾನೇಶ್ವರದ ಮೇಲೆ ಏರಿಬರಲು ಸಿದ್ಧತೆ ನಡೆಸಿದುದೂ ಗೊತ್ತಾಯಿತು
ಕೂಡಲೆ ರಾಜ್ಯವರ್ಧನನು ದಂಡೆತ್ತಿ ಹೋಗಿ ದೇವಗುಪ್ತನನ್ನು ಯುದ್ಧದಲ್ಲಿ
ಕೊಂದುಹಾಕಿ ಶಶಾಂಕನನ್ನು ಹಣ್ಣುಹಣ್ಣು ಮಾಡಿದನು ಶಶಾಂಕನು ಮಗ
ಳನ್ನು ಕೊಡುವುದಾಗಿ ವಚನಕೊಟ್ಟು ಒಪ್ಪಂದಮಾಡಿಕೊಂಡನು ರಾಜ್ಯ-
ವರ್ಧನನು ಜಯಶಾಲಿಯಾಗಿ ತಿರಿಗಿ ಬರುತ್ತಿರುವಾಗ, ಮದುವೆಯ ಮುನ್ನವೇ
ಶಶಾಂಕನು ನೀಚತನದಿಂದ ಅವನನ್ನು ಕೊಲ್ಲಿಸಿದನು

**ಶ್ರೀಹರ್ಷನಿಗೆ ಸಿಂಹಾಸನ** — ಈ ಸುದ್ದಿ ತಿಳಿಯುತ್ತಲೇ ಸ್ಥಾನೇಶ್ವರದಲ್ಲಿ
ಹಾಹಾಕಾರವೆದ್ದಿತು ಹರ್ಷವರ್ಧನನಿಗೆ ಯಾವುದೂ ಬೇಡವಾಯಿತು. ಇತ್ತ

ಅಣ್ಣನ ಕೊಲೆ, ಅತ್ತ ತಂಗಿಯ ಕೈಸೆರೆ! ಆದರೂ ಪ್ರಜೆಗಳ ಆಗ್ರಹಕ್ಕಾಗಿ ಸಿಂಹಾಸನವನ್ನೇರಬೇಕಾಯಿತು ಅದೇ ಹೊತ್ತಿಗೆ ಕನೋಜದ ಮಂತ್ರಿ-ಪರಿಷತ್ತಿನವರು ಹರ್ಷನ ಬಳಿ ಬಂದು, ಕನೋಜರಾಜ್ಯವನ್ನೂ ಆಳುವಂತೆ




ಬಿನ್ನವಿಸಿಕೊಂಡರು ಹರ್ಷನು ಅದಕ್ಕೆ ಒಪ್ಪಿಕೊಂಡನು, ಕನೋಜವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು

**ರಾಜ್ಯಶ್ರೀಯ ಶೋಧ**—ಸಿಂಹಾಸನಕ್ಕೆ ಬರುತ್ತಲೇ ಅವನಿಗೆ ಎರಡು

ಕರ್ತವ್ಯಗಳು ಆವಶ್ಯಕವಾದುವು, ಗೌಡದೇಶದ ಶಶಾಂಕನ ಮೇಲೆ ಸೇಡು ತೀರಿಸಿಕೊಳ್ಳುವುದು ಮತ್ತು ರಾಜ್ಯಶ್ರೀಯ ಸೆರೆ ಬಿಡಿಸುವುದು ಇಷ್ಟು ಮಾಡದಿದ್ದರೆ ರಾಜ್ಯದಲ್ಲಿ ಬಿಗುವು ಉಳಿಯುವಂತಿರಲಿಲ್ಲ ಅದರಿಂದ ಮಹಾ ಸೈನ್ಯದೊಡನೆ ಶತ್ರುಗಳ ಮೇಲೆ ದಾಳಿಮಾಡಲು ಹೊರಟನು ಗೌಡದೇಶದ ಪೂರ್ವದಿಕ್ಕಿನಲ್ಲಿದ್ದ ಕಾಮರೂಪದ ಕುಮಾರ ಎಂಬ ಅರಸನೊಂದಿಗೆ ಸಖ್ಯ ಬೆಳೆಸಿ, ಅವನು ಆ ದಿಕ್ಕಿನಿಂದ ಶಶಾಂಕನ ಮೇಲೆ ಬೀಳುವಂತೆ ಏರ್ಪಾಡು ಮಾಡಿದನು ಅಷ್ಟರಲ್ಲಿ, ರಾಜ್ಯಶ್ರೀಯು ಸೆರೆಯಿಂದ ಪಾರಾಗಿ ವಿಂಧ್ಯಾದ್ರಿಯ ಅಡವಿಗ ಹೋಗಿರುವಳು ಎಂದು ಗೊತ್ತಾಯಿತು ಅದರಿಂದ, ಆತನು ಸಂಗ್ರಾಮವಿಚಾರವನ್ನು ಭಂಡಿ ಎಂಬ ದಂಡನಾಯಕನಿಗೆ ಒಪ್ಪಿಸಿದನು

ಶ್ರೀಹರ್ಷನು ವಿಂಧ್ಯದ ಅಡವಿಯಲ್ಲಿ ಸಂಚರಿಸುತ್ತಿರುವಾಗ **ದಿವಾಕರಮಿತ್ರ**ನೆಂಬ ಬೌದ್ಧಭಿಕ್ಷುವು ಕೂಡಿದನು ಆತನ ಸಹಾಯದಿಂದ ರಾಜ್ಯಶ್ರೀಯ ಶೋಧವಾಯಿತು ಆ ಹೊತ್ತಿಗೆ ಆಕೆ ಸತಿಹೋಗುವ ಸಿದ್ಧತೆಯಲ್ಲಿದ್ದಳು ಶ್ರೀಹರ್ಷನು ಧಾವಿಸಿಹೋಗಿ ತಂಗಿಯನ್ನು ಅಪ್ಪಿಕೊಂಡನು ಅಂತ್ಯಕಾಲದಲ್ಲಾದರೂ ಅಣ್ಣನ ದರ್ಶನವಾಯಿತೆಂದು ಅವಳಿಗೂ ಹೃದಯವು ಉಕ್ಕಿಬಂದಿತು ಇಬ್ಬರೂ ಮನವಾರೆ ಅತ್ತರು ಆದರೆ ಶ್ರೀಹರ್ಷನು ಆಕೆಯನ್ನು ಸತಿಹೋಗಗೊಡಲಿಲ್ಲ ಸಂನ್ಯಾಸಿನಿಯಾಗಬೇಕೆಂಬ ಆಕೆಯ ವಿಚಾರವನ್ನೂ ಒಪ್ಪಲಿಲ್ಲ ಎರಡು ಮನೆತನಗಳಿಗೂ ಅನ್ಯಾಯ ಮಾಡಿದ ವೈರಿಗಳ ಶಾಸನ ಮಾಡಲೇಬೇಕೆಂದು ಅವಳ ಮನವೊಲಿಸಿ ಕನೋಜಕ್ಕೆ ಕರೆದುಕೊಂಡು ಬಂದನು, ಆಕೆಗೆ ಸಿಂಹಾಸನವನ್ನು ಒಪ್ಪಿಸಿ ತಾನು ಸ್ಥಾನೇಶ್ವರಕ್ಕೆ ಬಂದನು ಅಲ್ಲಿಂದಾಚೆಗೆ ಆರು ವರ್ಷಗಳತನಕ ಸತತವಾಗಿ ವಿಜಯಯಾತ್ರೆ ನಡೆಸಿ, ಸಕಲ ಉತ್ತರಾಪಥೇಶ್ವರ ಎಂಬ ಬಿರುದನ್ನು ಗಳಿಸಿದನು

**ಶ್ರೀಹರ್ಷನ ಘನತೆ** – ಆ ಕಾಲದವರೆಗಿನ ಸಮ್ರಾಟರಲ್ಲಿ ಶೌರ್ಯದಲ್ಲಿ ಸಮುದ್ರಗುಪ್ತ, ದಾನದಲ್ಲಿ ಅಶೋಕಚಕ್ರವರ್ತಿ ಇವರಿಬ್ಬರ ಹೆಸರು ಒಡೆದು ಕಾಣುತ್ತವೆ ಈ ಎರಡೂ ಗುಣಗಳು ಇನ್ನೂ ಅಧಿಕಪ್ರಮಾಣದಲ್ಲಿ ಶ್ರೀಹರ್ಷನಲ್ಲಿದ್ದುವೆಂದು ಹೇಳಬಹುದು ಈತನು ದಿಗ್ವಿಜಯ ಮಾಡಿದರೂ ಪರರಾಯರ ರಾಜ್ಯಗಳನ್ನು ವಶಮಾಡಿಕೊಳ್ಳುವ ಹಿರಿಯಾಸೆಗೆ ಒಳಗಾಗಲಿಲ್ಲ. ಕ್ರೂರಕರ್ಮಿಗಳನ್ನು ದಂಡಿಸಿ ಆ ರಾಜ್ಯದಲ್ಲಿ ಸುವ್ಯವಸ್ಥೆಯುಂಟಾಗುವಂತೆ ಮಾಡುತ್ತಿದ್ದನು ಈ ಉದಾರ ಗುಣಕ್ಕಾಗಿ ಅವರು ಹಾಗೂ ಅನೇಕ ರಾಜರು ತಾವಾಗಿಯೇ ಈತನ ಮಾಂಡಲಿಕರಾಗುತ್ತಿದ್ದರು ಚೀನದಿಂದ ಹರ್ಷನ ಆಸ್ಥಾನಕ್ಕೆ ರಾಯಭಾರಿಗಳು ಆಗಮಿಸಿದ್ದರೆಂಬ ಸಂಗತಿಯು ಅವನ ರಾಜ್ಯ-ವಿಸ್ತಾರಕ್ಕೂ ಶ್ರೇಷ್ಠತೆಗೂ ಸಾಕ್ಷಿಯಾಗಿದೆ.

**ಪುಲಿಕೇಶಿಯಿಂದ ಪರಾಭವ** — ಇಷ್ಟಾದ ಮೇಲೆ ದಕ್ಷಿಣ ದಿಗ್ವಿಜಯಕ್ಕೆ ಹೊರಡಬೇಕೆಂಬ ಹಂಬಲವು ಅವನಲ್ಲಿ ಹೊಕ್ಕಿತು ಈ ಕಾಲಕ್ಕೆ ದಕ್ಷಿಣ ದಲ್ಲಿ ಶ್ರೀಹರ್ಷನನ್ನು ಸರಿಗಟ್ಟುವ ೨ನೆಯ ಪುಲಿಕೇಶಿಯು ತನ್ನ ಪ್ರಚಂಡ ಪ್ರತಾಪದಿಂದ ಸಮ್ರಾಟನಾಗಿ ಮೆರೆಯುತ್ತಿದ್ದನು ಪುಲಿಕೇಶಿಯ ರಾಜ-ಧಾನಿಯು ವಾತಾಪಿಯಲ್ಲಿ, ಎಂದರೆ ಈಗಿನ ಬಾದಾಮಿಯಲ್ಲಿತ್ತು ತನ್ನ ತಂದೆ ಕೀರ್ತಿವರ್ಮನ ಕಾಲದಲ್ಲೇ ಪುಲಿಕೇಶಿಯು ಸಮರಾಂಗಣದಲ್ಲಿ ನಿಪುಣ ನೆನಿಸಿ ಕದಂಬರನ್ನು ಸೋಲಿಸಿದ್ದನು ಕಾವೇರಿಯಿಂದ ನರ್ಮದಾ ನದಿಯ ವರೆಗೂ ಆತನ ರಾಜ್ಯವು ಹಬ್ಬಿತ್ತು, ಆದರೆ ಕನ್ನಡಿಗರ ಉದಾರಹೃದಯಕ್ಕೆ ತಕ್ಕಂತೆ ಆತನು ತನ್ನ ರಾಜ್ಯದಲ್ಲಿಯೇ ಸುಖವಾಗಿದ್ದನು ಉತ್ತರದವರನ್ನು ಕೆಣಕುವ ಗೊಡವೆಗೆ ಹೋಗಲಿಲ್ಲ ಈಗ ಹರ್ಷರಾಜನು ತಾನಾಗಿಯೇ ಈತನನ್ನು ಕೆಣಕಿದುದು ವೀರ ಪುಲಿಕೇಶಿಗೆ ತಡೆಯಲಿಲ್ಲ ನರ್ಮದೆಯ ದಂಡೆಯ ಮೇಲೆ ಎರಡೂ ಸೈನ್ಯಗಳು ಇದಿರಾದುವು ಕನ್ನಡ ವೀರರ ಹೊಡೆ ತಕ್ಕೆ ಹರ್ಷನ ದಂಡು ದಿಕ್ಕೆಟ್ಟು ಓಡಿತು! ಶ್ರೀಹರ್ಷನು ಸದ್ದಿಲ್ಲದೆ ಉತ್ತರಕ್ಕೆ ಓಡಿದನು! ಪುಲಿಕೇಶಿಯು ಮಾತ್ರ ಅವನನ್ನು ಬೆನ್ನಟ್ಟಲಿಲ್ಲ! ದಕ್ಷಿಣದ ರಾಜರನ್ನು ಸೋಲಿಸಿ, ಕಾಂಚಿಯಲ್ಲಿ ಮೆರೆಯುತ್ತಿದ್ದ ಪಲ್ಲವರಾಜರ ಪುಂಡಾಟಿಕೆಯನ್ನಡಗಿಸುವುದರಲ್ಲಿಯೇ ಅವನು ತೃಪ್ತನಾದನು

ಶ್ರೀಹರ್ಷನ ರಾಜ್ಯವಿಸ್ತಾರದ ಆಸೆ ಅಲ್ಲಿಯೇ ಮುಗಿಯಿತು ಉತ್ತರದಲ್ಲಂತೂ ಆತನಿಗಿದಿರಾಗುವವರು ಯಾರೂ ಇರಲಿಲ್ಲ ಅದರಿಂದ ಅವನು ಶೇಷಾಯುಷ್ಯವನ್ನು ಉಳಿದ ಮಹತ್ಕಾರ್ಯಗಳಲ್ಲಿ ಕಳೆಯಲು ಅನುವಾಯಿತು ಆ ಕಾಲಕ್ಕೆ ಇಡಿಯ ಭಾರತದಲ್ಲಿ ಎರಡೇ ಭಾಗಗಳಾಗಿದ್ದುವು ನರ್ಮದೆಯ ಉತ್ತರದಲ್ಲಿ ಶ್ರೀಹರ್ಷನೂ ದಕ್ಷಿಣದಲ್ಲಿ ಪುಲಿಕೇಶಿಯೂ ಒಕ್ಕೊಡೆಯಿಂದ ಆಳುತ್ತಿದ್ದರು

**ಬೌದ್ಧಧರ್ಮಕ್ಕೆ ಪ್ರೋತ್ಸಾಹನ** — ಶ್ರೀಹರ್ಷನು ತನ್ನ ಆಳಿಕೆಯ ಶಾಂತಿ-ಕಾಲದಲ್ಲಿ ಬೌದ್ಧಧರ್ಮಕ್ಕೆ ಹೆಚ್ಚು ಬೆಂಬಲವನ್ನು ಕೊಟ್ಟನು, ಆದರೆ ಆರಂಭದಿಂದಲೇ ಈತನು ಬೌದ್ಧನಾಗಿರದೆ ವೈದಿಕಮತಾವಲಂಬಿಯಾಗಿದ್ದನು ಅದಕ್ಕೆಂದೇ ದಿಗ್ವಿಜಯಕ್ಕೆ ಹೊರಡುವ ಮೊದಲು ನೀಲಲೋಹಿತ (ಶಂಕರ)ನ ಆರಾಧನೆ ಮಾಡಿದಂತೆ ತಿಳಿಯುತ್ತದೆ, ಆದರೆ ಈತನ ಮನಸ್ಸಿನ ಮೇಲೆ ಆದ ಆಘಾತಗಳು ಅವನಲ್ಲಿ ವೈರಾಗ್ಯವೃತ್ತಿಯನ್ನು ಹುಟ್ಟಿಸಿದ್ದುವು ಮುಂದೆ ದಿವಾಕರಮಿತ್ರನ ದರ್ಶನದಿಂದ ವೈರಾಗ್ಯವೃತ್ತಿಗೆ ಪುಟ ದೊರೆಯಿತು. ಹೀಗಾಗಿ ಈತನು ಬೌದ್ಧಧರ್ಮಕ್ಕೆ ಮನ್ನಣೆ ಇತ್ತಿರಬೇಕು. ಮುಂದೆ ಚೀನದ ಪ್ರವಾಸಿ **ಯುವಾನ ಚ್ವಂಗ** (ಹುಯೆನ್ ತ್ಸಾಂಗ)ನು ಬೌದ್ಧ

ಧರ್ಮದ ಅಭ್ಯಾಸ ಮಾಡುವುದಕ್ಕಾಗಿ ಭಾರತದಲ್ಲಿ ಸಂಚರಿಸುತ್ತಿರುವಾಗ ಹರ್ಷನ ಆಸ್ಥಾನಕ್ಕೆ ಬಂದನು ಆ ವಿದ್ಯಾವಂತ ಪ್ರವಾಸಿಯ ಸತ್ಕಾರಕ್ಕಾಗಿ ದೊರೆಯು ಬೌದ್ಧಭಿಕ್ಷುಗಳ ಸಭೆ ಕೂಡಿಸಿ ಬುದ್ಧದೇವನ ತತ್ತ್ವಗಳನ್ನು ಕುರಿತು ವಿಚಾರವಿನಿಮಯ ನಡೆಸಿದನು ಮುಂದೆ ಆ ಪ್ರವಾಸಿಯ ಇಚ್ಛೆಯಂತೆ ರಾಜ್ಯದಲ್ಲಿ ಪ್ರಾಣಿವಧೆಯನ್ನು ನಿಲ್ಲಿಸಿದನು, ಅಲ್ಲಲ್ಲಿ ಬೌದ್ಧ-ಧರ್ಮದ ಸ್ಮಾರಕಗಳನ್ನು ಮಾಡಿಸಿದನು ಮತ್ತು ಬೌದ್ಧಭಿಕ್ಷುಗಳು ಪ್ರತಿ ವರ್ಷವೂ ಇಪ್ಪತ್ತೊಂದು ದಿವಸ ಸಭೆ ಕೂಡಿಸಿ ವಿಚಾರವಿನಿಮಯ ಮಾಡಬೇಕೆಂದು ಗೊತ್ತುಮಾಡಿದನು

**ದಾನಶೂರತನ** —ಬೌದ್ಧಧರ್ಮದಂತೆಯೇ ಹಿಂದೂಧರ್ಮಕ್ಕೂ ಆತನಿಂದ ಉತ್ತೇಜನವು ದೊರೆಯುತ್ತಿತ್ತು ಗಂಗಾ ಯಮುನಾ ನದಿಗಳ ಸಂಗಮವಾಗುವ ಪ್ರಯಾಗಕ್ಷೇತ್ರದಲ್ಲಿ ಬಹುಕಾಲದಿಂದ **ಕುಂಭಮೇಳ** ಎಂಬ ಒಂದು ದೊಡ್ಡ ಯಾತ್ರೆಯು ಅನೇಕ ವರ್ಷಗಳಿಗೊಮ್ಮೆ ನಡೆಯುತ್ತದೆ ಆಗಲೂ ಇಂಥ ಮೇಳಗಳಾಗುತ್ತಿದ್ದುವು ಶ್ರೀಹರ್ಷನು ಅಲ್ಲಿ ಐದು ವರ್ಷಕ್ಕೊಮ್ಮೆ 'ಮಹಾಮೋಕ್ಷ ಪರಿಷತ್' ಎಂಬ ಮಹಾಸಭೆಯನ್ನು ಕರೆಯುತ್ತಿದ್ದನು ಆಗ ನಾನಾಮತಗಳ ಗುರುಗಳು ಪಂಡಿತರು ಅಲ್ಲಿಗೆ ಆಗಮಿಸಿ ಅಧ್ಯಾತ್ಮಿಕ ವಿಷಯವಾಗಿ ಚರ್ಚೆ ಮಾಡುತ್ತಿದ್ದರು ಶ್ರೀಹರ್ಷನೂ, ರಾಜ್ಯಶ್ರೀಯೂ, ಹುಯೆನ್‌ತ್ಸಾಂಗನೂ ಈ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರಂತೆ ಹುಯೆನ್‌ತ್ಸಾಂಗನು ನೋಡಿದ ಮೇಳಕ್ಕೆ ೫ ಲಕ್ಷ ಜನರೂ ೨೦ ರಾಜರೂ ಬಂದಿದ್ದರಂತೆ ಸಭೆ ಸುರುವಾಗುವ ಮೊದಲು ಬುದ್ಧನ ಮೂರ್ತಿಯೊಡನೆ ವೈದಿಕಧರ್ಮದ ಸೂರ್ಯ ಮತ್ತು ಶಿವಪ್ರತಿಮೆಗಳನ್ನು ಮೆರೆಸುತ್ತಿದ್ದನು ದಾನಧರ್ಮಗಳನ್ನು ಬೌದ್ಧಭಿಕ್ಷುಗಳಿಗೂ ಬ್ರಾಹ್ಮಣರಿಗೂ ಶ್ರಮಣರಿಗೂ ಸಮನಾಗಿಯೇ ಮಾಡುತ್ತಿದ್ದನು ಆ ಸಮಯದಲ್ಲಿ ನಾಸ್ತಿಕರಿಗೂ ದಾನ ಸಿಕ್ಕುತ್ತಿತ್ತು ಈ ಪ್ರಸಂಗದಲ್ಲಿ ಆತನು ತನ್ನ ಅಯ್ದು ವರ್ಷಗಳ ಸ್ವಂತದ ಶಿಲ್ಕು ಹಣವನ್ನು ಒಂದೂ ಪೈ ಕೂಡ ಉಳಿಯದಂತೆ ಕೈಬಿಚ್ಚಿ ಕೊಡುತ್ತಿದ್ದನು

**ವಿದ್ಯಾಭಿರುಚಿ** —ಹರ್ಷನು ಸ್ವತಃ ವಿದ್ಯಾವಂತನಿದ್ದುದಲ್ಲದೆ ವಿದ್ವಾಂಸರಿಗೆ ವಿಶೇಷವಾದ ಮನ್ನಣೆಯನ್ನು ಕೊಡುತ್ತಿದ್ದನು ಈತನ ಓಲಗದೊಳಗೆ **ದಂಡಿ, ಭಾರವಿ, ಬಾಣಭಟ್ಟ, ಸುಬಂಧು** ಮೊದಲಾದ ಸಂಸ್ಕೃತ ಪಂಡಿತರು ಇದ್ದರು ಬಾಣಭಟ್ಟನು ತನ್ನ ರಾಜನ ಜೀವನಚರಿತ್ರೆಯನ್ನು "ಶ್ರೀಹರ್ಷಚರಿತ್ರ" ಎಂಬ ಹೃದ್ಯಕಾವ್ಯದಲ್ಲಿ ಮನೋಹರವಾಗಿ ವಿವರಿಸಿದ್ದಾನೆ **ರತ್ನಾವಳಿ, ನಾಗಾನಂದ, ಪ್ರಿಯದರ್ಶಿಕಾ** ಎಂಬ ಸಂಸ್ಕೃತ ನಾಟಕಗಳನ್ನು ಸ್ವತಃ ಸಮ್ರಾಟನೇ ರಚಿಸಿದಂತೆ ಆ ನಾಟಕಗಳಿಂದ ತಿಳಿಯುತ್ತದೆ ಅರಸ

ನಂತೆಯೇ ಆ ಮಹಾಕವಿಗಳೂ ಅತ್ಯುತ್ತಮವಾದ ಸಂಸ್ಕೃತ ಗದ್ಯಪದ್ಯ ಕಾವ್ಯಗಳನ್ನು ಬರದಿರುತ್ತಾರೆ **ನಾಲಂದ ವಿಶ್ವವಿದ್ಯಾಲಯವು** ಈ ಸಮ್ರಾಟನ ಸಹಾಯದಿಂದ ಸುವ್ಯವಸ್ಥಿತವಾಗಿ ಸಾಗಿತ್ತು ಮತ್ತು ಒಂದು ನೂರು ಗ್ರಾಮಗಳನ್ನು ಈ ವಿದ್ಯಾಲಯದ ವೆಚ್ಚಕ್ಕಾಗಿ ಉಂಬಳಿಯಾಗಿ ಕೊಟ್ಟಿದ್ದನು **ಬಾಣಭಟ್ಟ**ನ ಹಾಗೂ **ಹುಯೆನ್‌ತ್ಸಾಂಗನ** ಬರೆಹಗಳಿಂದ ಆ ಕಾಲದ ಎಲ್ಲ ಸಂಗತಿಗಳೂ ವಿಶ್ವಸನೀಯವಾಗಿ ತಿಳಿಯುತ್ತವೆ

**ರಾಜ್ಯವ್ಯವಸ್ಥೆ** — ಈ ರೀತಿಯಾಗಿ ಧರ್ಮ ಮತ್ತು ವಿದ್ಯಾಪ್ರಸಾರಗಳಲ್ಲಿ ತೊಡಗಿದ್ದರೂ ಹರ್ಷವರ್ಧನ ರಾಜನು ರಾಜ್ಯದಾಡಳಿತವನ್ನು ಮರತಿರಲಿಲ್ಲ ಕನೋಜ ಎಂಬ ರಾಜಧಾನಿಯ ಕೋಟೆಯನ್ನು ಸುರಕ್ಷಿತವಾಗಿ ಭದ್ರಪಡಿಸಿದ್ದನೆಂದು ಹುಯೆನ್‌ತ್ಸಾಂಗನು ಹೇಳಿದ್ದಾನೆ ನಗರದಲ್ಲಿ ಸರೋವರಗಳೂ, ಉದ್ಯಾನಗಳೂ ಇದ್ದುವಂತೆ ದೇಶ-ವಿದೇಶಗಳಿಂದ ತರಿಸಿದ್ದ ಬಗಬಗೆಯ ಪಕ್ಷಿ-ಮೃಗಾದಿಗಳು ಆ ಉದ್ಯಾನಗಳಲ್ಲಿದ್ದುವಂತೆ **ಮಂತ್ರಿ ಪರಿಷತ್ತಿಗೆ** ಎಲ್ಲ ಮಹತ್ತ್ವದ ಕೆಲಸಗಳನ್ನು ಕೊಟ್ಟು ಅದರ ಮೇಲ್ವಿಚಾರಣೆ ಮಾಡುತ್ತಿದ್ದನು ಬೇಟೆಗಾಗಿಯೋ ಮತ್ತಾವ ನೆವದಿಂದಲೋ ರಾಜ್ಯದಲ್ಲಿ ಅಡ್ಡಾಡಿ ಪ್ರಜೆಗಳ ಕೊರತೆಗಳನ್ನು ತಿಳಿದುಕೊಳ್ಳುತ್ತಿದ್ದನು ಲೆಕ್ಕಪತ್ರಗಳೆಲ್ಲ ಸಜ್ಜಾಗಿರಬೇಕೆಂದು ಅದಕ್ಕಾಗಿ ಸ್ವತಂತ್ರವಾದ ಶಾಖೆಯನ್ನೇ ಏರ್ಪಡಿಸಿದ್ದನು ತಪ್ಪಿಗೆ ಉಗ್ರಶಾಸನಗಳಿದ್ದುವು, ಆದರೆ, ಕರುಣಾದೃಷ್ಟಿಯಿಂದಲೂ ವಿವೇಚನಯಿಂದಲೂ ನ್ಯಾಯಾಲಯಗಳು ಕಲಸ ಮಾಡುತ್ತಿದ್ದುದರಿಂದ, ಬಳಕೆಯಲ್ಲಿ ಮಾತ್ರ ಅವು ಸೌಮ್ಯವಾಗಿಯೇ ಇರುತ್ತಿದ್ದುವು ದೊಡ್ಡದಾದ ಚತುರಂಗ ಸೈನ್ಯವು ಯಾವಾಗಲೂ ಸಿದ್ಧವಾಗಿಯೇ ಇರುತ್ತಿತ್ತು

**ಆದರ್ಶ ರಾಜ** — ಶ್ರೀಹರ್ಷಸಮ್ರಾಟನು ಸ್ವತಃ ಧೀರನೂ ವಿದ್ವಾಂಸನೂ ರಾಜಕಾರಣಪಟುವೂ ಆಗಿದ್ದನು ಪರೋಪಕಾರ ಪ್ರಜಾಹಿತಗಳಿಗಾಗಿ ಕೈ-ಬಿಚ್ಚಿ ದಾನ ಮಾಡುತ್ತಿದ್ದನು ರಾಜ್ಯದಲ್ಲಿ ಅಲ್ಲಲ್ಲಿಗ ಧರ್ಮಶಾಲೆ ಅನ್ನಸತ್ರಗಳ ವ್ಯವಸ್ಥೆ ಮಾಡಿದ್ದನು ತಾನು ಪ್ರತಿದಿನವೂ ದೇವಪೂಜೆ ಮಾಡದೆ ಯಾವ ಕಾರ್ಯಕ್ಕೂ ಕೈಹಾಕುತ್ತಿರಲಿಲ್ಲ. ಅಧಿಕಾರಿಗಳನ್ನೂ ಆಳುಗಳನ್ನೂ ಮಾನವಸಮಾನತೆಯ ದೃಷ್ಟಿಯಿಂದ ನೋಡುತ್ತಿದ್ದನು ಒಟ್ಟಿನಲ್ಲಿ ಪ್ರಜಾ-ರಂಜಕನೆಂಬ ಪದವಿಗ ಪಾತ್ರನಾಗಿದ್ದನು ಈತನು ಆದರ್ಶ-ಚಕ್ರವರ್ತಿಯಾಗಿದ್ದನೆಂದು ಬಾಣ ಮುಂತಾದ ಕವಿಗಳು ಹೇಳುತ್ತಾರೆ

**ಕೊನೆ** — ಈತನಿಗೆ ಗಂಡುಮಕ್ಕಳಿರಲಿಲ್ಲ ಇದ್ದ ಒಬ್ಬ ಮಗಳನ್ನು ವಲ್ಲಭಿ ರಾಜನಿಗ ಮದುವೆಮಾಡಿದ್ದನು. ಶ್ರೀಹರ್ಷನ ಮರಣ ಕ್ರಿ ಶ ೬೪೭ ರಲ್ಲಾಯಿತು ಈತನ ತರುವಾಯ ತಂಗಿಯ ಮಗ ಪಟ್ಟವೇರಿದನು

# ೧೩ ಪರಮೇಶ್ವರ ಪುಲಿಕೇಶಿ

(ಕ್ರಿ ಶ ೬೦೯—೬೪೨)

**ಬಾದಾಮಿಯ ಚಾಲುಕ್ಯರು** —ಹರ್ಷವರ್ಧನನನ್ನು ಹಿಮ್ಮೆಟ್ಟಿಸಿದ ೨ನೆಯ ಪುಲಿಕೇಶಿಯ ಹೆಸರನ್ನು ಈ ಮೊದಲೇ ಹೇಳಿದೆ ಈತನು **ಚಾಲುಕ್ಯ**-ವಂಶದ ದೊರೆ ಚಾಲುಕ್ಯರು **ಬಾದಾಮಿ**ಯಲ್ಲಿ ಆಳುತ್ತಿದ್ದರು ಈ ಮನೆತನದ ಮೂಲಪುರುಷನು ಜಯಸಿಂಹ, ಚಾಲುಕ್ಯರ ರಾಜ್ಯಸ್ಥಾಪಕನು ೧ನೆಯ ಪುಲಿಕೇಶಿ ಈತನು ಒಳ್ಳೆ ಪರಾಕ್ರಮಿ ಅಶ್ವಮೇಧ ಯಜ್ಞವನ್ನು ಮಾಡಿ ತನ್ನ ಶೌರ್ಯವನ್ನು ಪ್ರಕಟಿಸಿದನು ಮುತ್ಸದ್ದಿತನದಿಂದ ರಾಜ್ಯವನ್ನು ಬೆಳೆಸಿದನು ಈತನಿಗೆ **ಕೀರ್ತಿವರ್ಮ, ಮಂಗಲೇಶ** ಎಂದು ಇಬ್ಬರು ಮಕ್ಕಳು ಪುಲಿಕೇಶಿಯ ತರುವಾಯ ಅವನ ಹಿರಿಯ ಮಗನಾದ ಕೀರ್ತಿವರ್ಮನು ಪಟ್ಟವನ್ನು



ಚಾಲುಕ್ಯರ ಗುಡಿಗಳು (ಬಾದಾಮಿ)

ಏರಿದನು ಇವನು ಚಾಲುಕ್ಯರಾಜ್ಯವನ್ನು ಬೆಳೆಸಲಿಕ್ಕೆ ಪ್ರಾರಂಭಿಸಿದನು. ಇವನ ತರುವಾಯ ಇವನ ತಮ್ಮ ಮಂಗಲೇಶನು ಸಿಂಹಾಸನವನ್ನೇರಿದನು ಈತನು ಬುದ್ಧಿವಂತನಲ್ಲದೆ ದೇವಭಕ್ತನೂ ಆಗಿದ್ದನು ಆದುದರಿಂದ ರಾಜ್ಯದಲ್ಲಿ ವ್ಯವಸ್ಥೆಯನ್ನು ಕಾಯ್ದುಕೊಂಡನು, ಗುಡ್ಡಗಳಲ್ಲಿ ವೈಷ್ಣವ ಗುಡಿಗಳನ್ನು ಕೊರೆಸಿದನು ಈತನ ಕಾಲದಲ್ಲಿ ಪಶ್ಚಿಮ ಬಂದರಗಳ ಮುಖಾಂತರ ವಿದೇಶ ವ್ಯಾಪಾರ ನಡೆಯುತ್ತಿತ್ತು

**ಎರಡನೆಯ ಪುಲಿಕೇಶಿಗೆ ರಾಜ್ಯಪ್ರಾಪ್ತಿ** — ಕೀರ್ತಿವರ್ಮನಿಗೆ ೨ನೆಯ ಪುಲಿಕೇಶಿ ಎಂಬ ಮಗನಿದ್ದನು ಈತನು ವಯಸ್ಸಿಗೆ ಬಂದ ಮೇಲೆ ತನ್ನ ತಂದೆಯ ರಾಜ್ಯವನ್ನು ಇವನಿಗೆ ಬಿಟ್ಟುಕೊಡಬೇಕೆಂದು ಜನನಾಯಕರು ಕಕ್ಕನನ್ನು ಕೇಳಿದರು ಆದರೆ, ಮಂಗಲೇಶನು ತನ್ನ ಮಗ ಚಂದ್ರವರ್ಮನಿಗೆ ಪಟ್ಟ ಗಟ್ಟುವ ವಿಚಾರದಲ್ಲಿದ್ದನು ಪುಲಿಕೇಶಿಗೆ ಈ ಮೋಸಗಾರಿಕೆ ಸರಿಬರಲಿಲ್ಲ ಕಕ್ಕನಿಗಿದಿರಾಗಿ ಕಾಳಗವನ್ನೇ ಹೂಡಿದನು ಈ ಯುದ್ಧದಲ್ಲಿ ಮಂಗಲೇಶನು ಮಡಿದನು. ಪುಲಿಕೇಶಿಗೆ ರಾಜ್ಯಪ್ರಾಪ್ತಿಯಾಯಿತು

**ಪುಲಿಕೇಶಿಯ ದಿಗ್ವಿಜಯ** — ಪಟ್ಟಕ್ಕೆ ಬಂದಮೇಲೆ ರಾಜ್ಯವನ್ನು ವಿಸ್ತರಿಸುವುದೇ ಈತನ ಮೊದಲನೆಯ ಕೆಲಸವಾಯಿತು ಮೊದಲು ಸೈನ್ಯಸಹಿತವಾಗಿ ದಕ್ಷಿಣಕ್ಕೆ ದಂಡೆತ್ತಿ ಹೋಗಿ **ರಾಷ್ಟ್ರಕೂಟ, ಗಂಗ, ಕದಂಬ, ಪಲ್ಲವ, ಚೋಳ, ಚೇರ, ಕೇರಳ** ಇವರೆಲ್ಲರನ್ನೂ ಗೆದ್ದು, ಕನ್ಯಾಕುಮಾರಿಯ ವರೆಗೆ ತನ್ನ ರಾಜ್ಯವನ್ನು ಹಬ್ಬಿಸಿದನು ಆ ಮೇಲೆ ಉತ್ತರದಲ್ಲಿ **ಗುರ್ಜರ, ಲಾಟ, ಮಾಳವ**ರನ್ನು ಗೆದ್ದು ತನ್ನ ಅಧೀನರಾಜರನ್ನು ಮಾಡಿಕೊಂಡನು

ಈ ಹೊತ್ತಿಗೆ ಉತ್ತರದಲ್ಲಿದ್ದ ಪ್ರಬಲ ಚಕ್ರವರ್ತಿಯೆಂದರೆ ಹರ್ಷವರ್ಧನನೊಬ್ಬನೇ ಅವನನ್ನು ಕೂಡ ಈ ಕನ್ನಡದ ಕಡುಗಲಿ ಸೋಲಿಸಿದನು, ಅಂದಿನಿಂದಲೇ **ಪರಮೇಶ್ವರ ಪುಲಿಕೇಶಿ** ಎಂಬ ಪದವಿಯನ್ನು ಧರಿಸಿದನು ಇದಲ್ಲದೆ **ದಕ್ಷಿಣಾಪಥೇಶ್ವರ, ಸತ್ಯಾಶ್ರಯ, ರಣವಿಕ್ರಮ** ಎಂಬ ಬಿರುದಾವಳಿಗಳೂ ಇವನಿಗೆ ಇದ್ದುವು

**ರಾಜ್ಯವ್ಯವಸ್ಥೆ** — ದಕ್ಷಿಣಭಾರತದ ಇತಿಹಾಸದಲ್ಲಿ ಎಲ್ಲ ಭಾಗವೂ ಒಕ್ಕೊಡೆಯ ಆಳಿಕೆಯಲ್ಲಿ ಬಂದುದು ಇದೇ ಮೊದಲು ಇಂಥ ದೊಡ್ಡ ಸಾಮ್ರಾಜ್ಯವನ್ನು ಬಾದಾಮಿಯಿಂದ ಆಳುವ ತೊಂದರೆಗಳನ್ನು ಮನಗಂಡು, ಆತನು **ವೆಂಗಿಮಂಡಲ** ಎಂಬ ತೆಲುಗುನಾಡನ್ನು ತಮ್ಮನಾದ **ಕುಬ್ಜವಿಷ್ಣುವರ್ಧನ**ನಿಗೂ **ಲಾಟದೇಶ**ವನ್ನು ತನ್ನ ಬಂಧು **ಜಯಸಿಂಹ**ನಿಗೂ ಆಳಲು ಬಿಟ್ಟುಕೊಟ್ಟನು ಈ ಕಾರಣದಿಂದಲೇ ತೆಲುಗು-ಗುಜರಾಥಗಳಲ್ಲಿ ಚಾಲುಕ್ಯ ಮನೆತನದ ಅನೇಕ ಹೆಸರುಗಳು ಈಗಲೂ ಕಾಣುತ್ತವೆ

**ಕಲಾಪ್ರೇಮ** — ಪುಲಿಕೇಶಿಯಲ್ಲಿ ಕಲಾಪ್ರೇಮವೂ ಮನೆಮಾಡಿತ್ತು ಈತನು ಅಜಂತಾ ಗುಡ್ಡದ ಗುಹೆಯಲ್ಲಿ ತರತರದ ಚಿತ್ರಗಳನ್ನು ಮನಮೋಹಕವಾದ ಬಣ್ಣಗಳಲ್ಲಿ ಬರೆಸಿದನು ಸಾವಿರ-ಹನ್ನೆರಡುನೂರು ವರ್ಷಗಳಾದರೂ ಆ ಚಿತ್ರಗಳು ಇನ್ನೂ ಅಚ್ಚಳಿಯದೆ ಉಳಿದಿರುವುವು

**ಧರ್ಮದೃಷ್ಟಿ** – ಚಾಲುಕ್ಯ ಅರಸರು ಶುದ್ಧ ವೈದಿಕಧರ್ಮದವರು ಇವರ ಬೆಂಬಲದಿಂದಾಗಿಯೇ ಹಿಂದೂಧರ್ಮವು ಮತ್ತೆ ತಲೆಯೆತ್ತಿತು ಬಾದಾಮಿಯಲ್ಲಿಯೂ ಇತರ ನಗರಗಳಲ್ಲಿಯೂ ಗುಹಾದೇವಾಲಯಗಳೂ ತ್ರಿಮೂರ್ತಿಗಳ ವಿಗ್ರಹಗಳೂ ಕಂಡುಬರುವಂತಾಯಿತು ಹೀಗಿದ್ದರೂ ಇವರು ಬೇರೆ ಬೇರೆ ಧರ್ಮದವರನ್ನು ಹಿಂಸಿಸುತ್ತಿರಲಿಲ್ಲ ಜೈನಧರ್ಮಕ್ಕೂ ಪ್ರೋತ್ಸಾಹ ಕೊಟ್ಟಿದ್ದರು



ಅಜಂತೆಯ ಪುರುಷಮೂರ್ತಿ



ಅಜಂತೆಯ ಸ್ತ್ರೀಮೂರ್ತಿ

**ಪರದೇಶಗಳೊಡನೆ ಸಂಬಂಧ** – ಇರಾಣದ ಅರಸನಾದ ಎರಡನೆಯ **ಖುಸ್ರು**ವು ಪರಮೇಶ್ವರ ಪುಲಿಕೇಶಿಯ ಗೆಳೆತನವನ್ನು ಬಯಸಿ, ಅಮೂಲ್ಯ ಕಾಣಿಕೆಯನ್ನು ಕಳಿಸಿ ತನ್ನೊಬ್ಬ ರಾಯಭಾರಿಯನ್ನೂ ಈತನ ರಾಜ್ಯದಲ್ಲಿ ಇಟ್ಟಿದ್ದನು ಆ ರಾಯಭಾರಿಯನ್ನು ಪುಲಿಕೇಶಿಯು ತನ್ನ ಆಸ್ಥಾನದಲ್ಲಿ ಸ್ವಾಗತಿಸುತ್ತಿರುವ ಚಿತ್ರವನ್ನು ನಾವು ಇಂದಿಗೂ ಅಜಂತಯಲ್ಲಿ ಕಾಣಬಹುದು

**ವೈಭವದ ವರ್ಣನೆ** — ಈತನ ಆಳಿಕೆಯಲ್ಲಿ ಚೀನದ ಪ್ರವಾಸಿ **ಯುವಾನ ಚ್ವಂಗನು** ಬಾದಾಮಿಗೆ ಬಂದಿದ್ದನು ರಾಜನ ವಿಷಯವಾಗಿ ಅವನು ಹೀಗೆ ಬರೆದಿದ್ದಾನೆ—“ಪರಮೇಶ್ವರ ಪುಲಿಕೇಶಿಯ ಇಲ್ಲಿಯ ಪ್ರಜೆಗಳು ವೀರರೂ ಮಾನಧನರೂ ಆಗಿದ್ದಾರೆ ಇವರು ನಿಷ್ಕಪಟಿಗಳು ಒಂದೇ ನಾಲಗೆಯವರು, ಮತ್ತು ಮಹಾ ಸ್ವಾಭಿಮಾನಿಗಳು ಕೃತಜ್ಞತೆಯು ಇವರಲ್ಲಿ

ಮನೆಮಾಡಿದೆ ಅಪಕಾರಿಗಳಿಗೆ ಮಾತ್ರ ಯಮಸ್ವರೂಪಿಗಳು ಆದರೆ ಮೊರೆಹೊಕ್ಕ ಮೇಲೆ ಅವರನ್ನೆಂದೂ ಕೊಲ್ಲುವವರಲ್ಲ ವೈರಿಗಳನ್ನು ಕೊಲ್ಲುವುದಿದ್ದರೆ ಖಾಡಾಖಾಡಿಯಾಗಿಯೇ ಇದಿರಾಗುವರು ಪ್ರಜೆಗಳೆಲ್ಲ ತುಂಬಾ ರಾಜನಿಷ್ಠರು, ವಿದ್ಯಾವಂತರು ಅರಸು ಕ್ಷತ್ರಿಯಕುಲಕ್ಕೆ ಸೇರಿದವನು ಶೂರ-ಧೀರನೆಂದು ಹೆಸರಾಗಿದ್ದಾನೆ ಈತನಲ್ಲಿ ಸಾವಿರಾರು ರಣಗಜಗಳೂ



ಪುಲಿಕೇಶಿಯ ಓಲಗದಲ್ಲಿ ಇರಾಣ ದೇಶದ ವಕೀಲನು

ಲಕ್ಷಾವಧಿ ಕಾಲ್ದಳವೂ ಇವೆ ಈ ರಾಜ್ಯದ ಸುತ್ತಳತ ಸಾವಿರದ ಇನ್ನೂರು ಮೈಲು ಇದೆ ಪ್ರಜೆಗಳ ಸೌಖ್ಯ ಸಮೃದ್ಧಿಗಳಿಗ ಯಾವ ಕೊರತೆಯೂ ಇಲ್ಲ ”

**ಕೊನೆ** – ಹೀಗೆ ವೈಭವದಿಂದ ಆಳುತ್ತಿರುವಾಗಲೇ **ಪಲ್ಲವರ ನರಸಿಂಹ ವರ್ಮನು** ಬಾದಾಮಿಯನ್ನು ಮುತ್ತಿದನು ಆಗ ಪುಲಿಕೇಶಿಯು ಅಸ್ವಸ್ಥನಾಗಿದ್ದನು ಆತನ ಇಬ್ಬರು ಮಕ್ಕಳೂ ಬಾದಾಮಿಯಲ್ಲಿ ಇರಲಿಲ್ಲ ಪುಲಿ-ಕೇಶಿಗೆ ಪರಾಭವವಾಯಿತು ಆದರೆ ತೀವ್ರವೇ ಮಕ್ಕಳಿಬ್ಬರೂ ಬಂದರು ಪಲ್ಲವರು ಓಡಿಹೋದರು ಪುಲಿಕೇಶಿಯ ಮಗ ೧ನಯ ವಿಕ್ರಮಾದಿತ್ಯನು ಪಟ್ಟವೇರಿದನು ಈತನ ಮರಣಸಮಯದಿಂದಲೇ ಚಾಲುಕ್ಯರ ಇಳಿಗಾಲಕ್ಕೆ ಆರಂಭವಾಯಿತೆಂದು ಹೇಳಬಹುದು

## ಅಭ್ಯಾಸನೆಗಳು

(ಪಾರ ೧೨—೧೩)

೧ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿರಿ
(ಅ) ವರ್ಧನ ರಾಜಮನೆತನ ಮೂಲಪುರುಷ
(ಆ) ಮಾಳವದ ದೇವಗುಪ್ತನು ಕನೋಜದ ನನ್ನು ಕೊಂದು ಯನ್ನು ಸೆರೆಹಿಡಿದನು ಆದರಂತೆ ಗೌಡದೇಶದ ಅರಸನಾದ ನ ಬೆಂಬಲದಿಂದ ದ ಮೇಲೆ ಏರಿ ಬರಲು ಸಿದ್ಧತೆ ನಡೆಸಿದನು
(ಇ) ಮದುವೆಯ ಮುನ್ನವೇ ನನ್ನು ನು ನೀಚತನದಿಂದ ಕೊಲ್ಲಿಸಿದನು
(ಈ) ೨ನೆಯ ಪುಲಿಕೇಶಿಯು ನನ್ನು ನದಿಯ ದಂಡೆಯ ಮೇಲೆ ಸೋಲಿಸಿದನು, ಆಗ ಆತನು ಪುಲಿಕೇಶಿ ಎಂಬ ಬಿರುದನ್ನು ಧರಿಸಿದನು
(ಉ) ಶ್ರೀ ಹರ್ಷನ ಮನಸ್ಸಿನ ಮೇಲೆ ಆದ ಆಘಾತಗಳು ಆತನಲ್ಲಿ ವೃತ್ತಿಯನ್ನು ಹುಟ್ಟಿಸಿದ್ದವು ಮುಂದೆ ನ ದರ್ಶನದಿಂದ ಈ ಈ ವೃತ್ತಿಗೆ ಪುಟ ದೊರೆತು ಈತನು ಧರ್ಮಕ್ಕೆ ಮನ್ನಣೆ ಇತ್ತಿರಬೇಕು
(ಊ) ಯುವಾನ ಚ್ವಂಗನ ಇಚ್ಛೆಯಂತೆ ನು ರಾಜ್ಯದಲ್ಲಿ ನ್ನು ನಿಲ್ಲಿಸಿದನು
(ಎ) ಶ್ರೀಹರ್ಷನು ಕ್ಷೇತ್ರದಲ್ಲಿ ಐದು ವರುಷಕ್ಕೊಮ್ಮೆ ಎಂಬ ಮಹಾ ಸಭೆಯನ್ನು ಕರೆಯುತ್ತಿದ್ದನು

೨ ಕೆಳಗಿನ ಹೆಸರುಗಳಿಗೆ ಸಂಬಂಧಿಸಿ ನಿಮಗೆ ಗೊತ್ತಿದ್ದ ಒಂದೊಂದು ಮುಖ್ಯ ಮಾತನ್ನು ಬರೆಯಿರಿ
ಕುಂಭಮೇಳ, ಬಾಣಭಟ್ಟ, ನಾಲಂದ, ಬಾದಾಮಿ, ಕುಬ್ಜವಿಷ್ಣು, ಅಜಂತಾ, ಎರಡನೆಯ ಖುಸ್ರು, ಪಲ್ಲವರ ನರಸಿಂಹವರ್ಮ

೩. ಹಿಂದುಸ್ತಾನದ ಬಾಹ್ಯರೇಷೆಯ ಸಕಾಶದಲ್ಲಿ ಶ್ರೀಹರ್ಷನ ಹಾಗೂ ೨ನೆಯ ಪುಲಿಕೇಶಿಯ ಸಾಮ್ರಾಜ್ಯ ವಿಸ್ತಾರಗಳನ್ನು ಗುರುತಿಸಿರಿ

೪ ನಟನೆಗಾಗಿ ಶಿಕ್ಷಕರು ಕೆಳಗಿನ ಪ್ರಸಂಗಗಳನ್ನು ಉಪಯೋಗಿಸಬಹುದು.
(ಅ) ೨ನೆಯ ಪುಲಿಕೇಶಿಯು ಇರಾಣದ ರಾಯಭಾರಿಯನ್ನು ಬರಮಾಡಿಕೊಂಡ ದೃಶ್ಯ.
(ಆ) ಶ್ರೀಹರ್ಷನ ದರಬಾರದಲ್ಲಿ ಯುವಾನ ಚ್ವಂಗ

# ೧೪ ಯುವಾನ ಚ್ವಂಗ

(ಹುಯೆನ್ ತ್ಸಂಗ)

**ಚೀನ-ಭಾರತ** — ಕನಿಷ್ಕನ ಕಾಲದಲ್ಲಿ ಭಾರತದಿಂದ ಚೀನದೇಶಕ್ಕೆ ಪ್ರಥಮತಃ ಬೌದ್ಧಭಿಕ್ಷುಗಳು ಹೋಗಿ, ಅಲ್ಲಿ ಧರ್ಮಪ್ರಚಾರ ಮಾಡತೊಡಗಿದರು ಮುಂದೆ ನೂರಾರುಜನ ಭಾರತೀಯರು ಚೀನಕ್ಕೂ, ಸಾವಿರಾರು



ಯುವಾನ ಚ್ವಂಗ

ಚೀನೀಯರು ತೀರ್ಥಯಾತ್ರೆಗಾಗಿ, ಬೌದ್ಧಧರ್ಮ ಗ್ರಂಥಗಳನ್ನು ಅಭ್ಯಾಸ ಮಾಡುವುದಕ್ಕಾಗಿ, ಹಾಗೂ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಪೂಜ್ಯ ವಸ್ತುಗಳ ಸಂಗ್ರಹ ಮಾಡುವುದಕ್ಕಾಗಿ ಭಾರತಕ್ಕೂ ಪ್ರವಾಸ ಮಾಡಿದರು ಚೀನದಿಂದ ಭಾರತಕ್ಕೆ ಬಂದ ಯಾತ್ರಿಕರಲ್ಲಿ ಹಲವರು ತಮ್ಮತಮ್ಮ ಪ್ರವಾಸದ ಬಗೆಗೆ ಚೀನೀ ಜನರ ಉಪಯೋಗಕ್ಕಾಗಿ ಗ್ರಂಥಗಳನ್ನು ಬರೆದರು ಆದರೆ, ಅವೆಲ್ಲವೂ ನಮಗೆ ದೊರೆತಿಲ್ಲ ಗುಪ್ತರ ಕಾಲದಲ್ಲಿ ಇಲ್ಲಿಗೆ ಬಂದು ಒಂಬತ್ತು ವರ್ಷಗಳ ಕಾಲ ವಾಸವಾಗಿದ್ದ ಫಾಹಿಯಾನನ ಗ್ರಂಥವೂ, ಹರ್ಷನ ಕಾಲದಲ್ಲಿ ಬಂದು ಹದಿನಾಲ್ಕು ವರ್ಷಗಳ ಕಾಲ ಇದ್ದ ಯುವಾನ ಚ್ವಂಗನು ಬರೆದ ಗ್ರಂಥವೂ ಇವೆರಡು ಮಾತ್ರ ದೊರೆತಿವೆ ಇವೆರಡೂ ನಮಗೆ ಅತ್ಯಮೂಲ್ಯ ಆಧಾರಗಳಾಗಿವೆ. ಆಯಾ ಕಾಲದ ಇತಿಹಾಸವನ್ನರಿಯಲು ಅವು ಬಹಳ ಸಹಾಯಕವಾಗಿವೆ

## ಯುವಾನ ಚ್ವಂಗ

**ಬಾಲ್ಯ** — ಯುವಾನ ಚ್ವಂಗನು **ಚೀನ** ದೇಶದವನು ಈತನು ಕ್ರಿ ವ ೬೦೦ರಲ್ಲಿ ಹುಟ್ಟಿದನು ಸಣ್ಣವನಿದ್ದಾಗಲೂ ಆಟ-ನೋಟಗಳಲ್ಲಿ ಕಾಲ ಕಳೆಯುತ್ತಿರಲಿಲ್ಲ. ಯಾವಾಗಲೂ ಅಭ್ಯಾಸ ಮಾಡುವುದರಲ್ಲಿಯೇ ತೊಡಗಿರುತ್ತಿದ್ದನು ವೈರಾಗ್ಯವೃತ್ತಿಯ ಕಡೆಗೇ ಈತನ ಒಲವು ಇರುತ್ತಿತ್ತು ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿಯೇ ಸಂನ್ಯಾಸಿಯಾಗಿ ಬೌದ್ಧಭಿಕ್ಷುವಾದನು.

**ಪ್ರಯಾಣ** — ಈ ಹೊತ್ತಿಗೆ ಬೌದ್ಧಧರ್ಮದ ತತ್ತ್ವಗಳು ಚೀನೀಭಾಷೆಯಲ್ಲಿ ಭಾರತೀಯ ಭಿಕ್ಷುಗಳಿಂದಲೂ, ಚೀನೀಯರಿಂದಲೂ ಭಾಷಾಂತರಿತವಾಗಿದ್ದುವು, ಆದರೆ ಅವುಗಳಿಂದ **ಯುವಾನ** ಚ್ವಂಗನು ತೃಪ್ತನಾಗಲಿಲ್ಲ

ಮೂಲ ಗ್ರಂಥಗಳನ್ನೇ ಅಭ್ಯಾಸ ಮಾಡಬೇಕೆಂದು ಕ್ರಿ ಶ ೬೨೯ರಲ್ಲಿ ಭಾರತಕ್ಕೆ ಪ್ರಯಾಣ ಬೆಳೆಸಿದನು ಚೀನದಿಂದ ಹೊರಡುವ ಮುನ್ನ ಪ್ರತಿ ಒಬ್ಬನೂ ಅಲ್ಲಿಯ ಅರಸನಿಂದ ಅಪ್ಪಣೆಯನ್ನು ಪಡೆಯಬೇಕಾಗಿದ್ದಿತು ಯುವಾನ ಚ್ವಂಗನಿಗೆ ಅದು ದೊರೆಯಲಿಲ್ಲ ಆದ್ದರಿಂದ ಯಾರಿಗೂ ತಿಳಿಯದಂತೆಯೆ ತನ್ನ ದೇಶವನ್ನು ಬಿಟ್ಟನು ಮಧ್ಯ ಏಶಿಯಾದಲ್ಲಿದ್ದ ಸಮರಖಂಡ ಮೊದಲಾದ ಅನೇಕ ಊರುಗಳ ಮಾರ್ಗವಾಗಿ ಅವನು ಗಾಂಧಾರವನ್ನು ಸೇರಿದನು ಅಷ್ಟುಹೊತ್ತಿಗೆ ಅವನಿಗೆ ಸಂಸ್ಕೃತ ಭಾಷೆಯ ಸ್ಥೂಲ ಪರಿಚಯವಾಗಿತ್ತು ಗಾಂಧಾರದಿಂದ ಅವನು ಕಾಶ್ಮೀರಕ್ಕೆ ತೆರಳಿ, ಅಲ್ಲಿದ್ದ ಬೌದ್ಧ ವಿಹಾರಗಳಲ್ಲಿಯ ಭಿಕ್ಷುಗಳ ಬಳಿ ಶಿಷ್ಯತ್ವವನ್ನು ಕೈಕೊಂಡು, ಎರಡು ವರ್ಷ ಕಾಲ ಕಳೆದನು ಕಾಶ್ಮೀರದಿಂದ ಹೊರಟ ಮೇಲೆ ಅವನು ಗಂಗಾನದೀತೀರದ ಅನೇಕ ಪುಣ್ಯ-ಸ್ಥಳಗಳನ್ನು ಸಂದರ್ಶಿಸಿದನು ಕನೋಜದಲ್ಲಿದ್ದ ಶ್ರೀಹರ್ಷನ ಪ್ರೀತಿ-ಗೌರವಗಳನ್ನು ಸಂಪಾದಿಸಿದನು ಅನಂತರ, ಬುದ್ಧದೇವನ ಪವಿತ್ರ ಸಂಪರ್ಕದಿಂದ ಪಾವನವಾಗಿದ್ದ ಸಾರನಾಥ, ಕಪಿಲವಸ್ತು, ಕುಶಿನಗರ, ಬುದ್ಧಗಯಾ ಮುಂತಾದ ಕ್ಷೇತ್ರಗಳಿಗೆ ಹೋದನು ಅವೆಲ್ಲವೂ ತುಂಬ ಮುರುಕಳಿಗೆ ಬಂದಿದ್ದುವೆಂದೂ, ಬೌದ್ಧರು ಅವನ್ನು ಶ್ರದ್ಧೆವಹಿಸಿ ಕಾಪಾಡುತ್ತಿರಲಿಲ್ಲವೆಂದೂ ಅವನು ಬರೆದಿರುವನು

**ವಿಶ್ವವಿದ್ಯಾಲಯಗಳು** — ಆ ಕಾಲಕ್ಕೆ **ನಾಲಂದ, ತಕ್ಷಶಿಲಾ, ವಿಕ್ರಮಶಿಲಾ, ಉದಂತಪುರ, ಕಾಂಚಿ, ಉಜ್ಜಯಿನಿ, ವಲ್ಲಭಿ** ಮುಂತಾದ ವಿಶ್ವವಿದ್ಯಾಲಯಗಳಿದ್ದುವು ಅವುಗಳಲ್ಲಿ ಸಾವಿರಗಟ್ಟಲೆ ವಿದ್ಯಾರ್ಥಿಗಳು ಓದುತ್ತಿದ್ದರು, ಮತ್ತು ಒಂದೊಂದು ವಿದ್ಯಾಲಯವು ಒಂದೊಂದು ವಿಷಯದಲ್ಲಿ ವೈಶಿಷ್ಟ್ಯವನ್ನು ಪಡೆದಿತ್ತು ಬೌದ್ಧಧರ್ಮದಲ್ಲಿ **ಹೀನಯಾನ-ಮಹಾಯಾನ** ಎಂಬೆರಡು ಪಂಥಗಳಿದ್ದವು ಅವುಗಳಲ್ಲಿ ಹೀನಯಾನದ ಬಗಗ **ವಲ್ಲಭಿ ವಿದ್ಯಾಲಯವು** ಪ್ರಸಿದ್ಧವಾಗಿತ್ತು **ಮಹಾಯಾನ**ದ ಬಗೆಗೆ **ನಾಲಂದ ವಿಶ್ವವಿದ್ಯಾಲಯವು** ಪ್ರಸಿದ್ಧವಾಗಿತ್ತು ಈ ವಿದ್ಯಾಲಯವು ಬುದ್ಧಗಯೆಯಿಂದ ಸುಮಾರು ಐವತ್ತು ಮೈಲುಗಳ ಅಂತರದ ಮೇಲೆ ರಾಜಗೃಹದ ನರೆಯಲ್ಲಿದ್ದಿತು ಈ ವಿಶ್ವ-ವಿದ್ಯಾಲಯವು ಆ ಕಾಲಕ್ಕೆ ಅಂತರರಾಷ್ಟ್ರೀಯ ಖ್ಯಾತಿಯನ್ನು ಗಳಿಸಿತ್ತೆಂದು ತಿಳಿಯುತ್ತದೆ ಯುವಾನ ಚ್ವಂಗನು ಎರಡು ಸಂವತ್ಸರಗಳ ಕಾಲ ಇಲ್ಲಿಯೇ ಇದ್ದು ಅಭ್ಯಾಸವನ್ನು ಮಾಡಿದುದರಿಂದ, ಈ ಬಗೆಗೆ ಒಳ್ಳೆ ವಿಶ್ವಸನೀಯ ಸಂಗತಿಗಳನ್ನು ಬರೆದಿದ್ದಾನೆ — ನಾಲಂದ ವಿಶ್ವವಿದ್ಯಾಲಯವು ಐದನಯ ಶತಕದಲ್ಲಿ ೧ನೆಯ **ಕುಮಾರಗುಪ್ತ** ಅರಸನಿಂದ ಸ್ಥಾಪಿಸಲ್ಪಟ್ಟಿತು. ಮುಂದೆ ರಾಜ-ಮಹಾರಾಜರು ಅದನ್ನು ಪ್ರೋತ್ಸಾಹಿಸಿದರು ಶ್ರೀಹರ್ಷನಂತೂ ಅದರ

ಏಳಿಗೆಗಾಗಿ ಹೆಚ್ಚಾದ ನೆರವನ್ನು ನೀಡಿದನು ಸಂನ್ಯಾಸಿಗಳಿಗಾಗಿ ಭವ್ಯವಾದ ಆಶ್ರಮವನ್ನು ಕಟ್ಟಿಸಿದನು

**ಆಡಳಿತ** – ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನೂ ಮುಖ್ಯ ಪ್ರಾಧ್ಯಾಪಕರನ್ನೂ **ಪಂಡಿತ** ಎಂದು ಕರೆಯುತ್ತಿದ್ದರು ಯುವಾನ ಚ್ವಂಗನು ಅಲ್ಲಿ ಅಭ್ಯಾಸ ಮಾಡುವ ಮೊದಲು ಕಾಂಚಿಯಿಂದ ಬಂದಿದ್ದ **ಧರ್ಮಪಾಲನು** ಆ ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದನು ಆತನು ತರ್ಕ ಮತ್ತು ತತ್ತ್ವಶಾಸ್ತ್ರಗಳ ಬಗಗೆ ಮಹತ್ತ್ವದ ಗ್ರಂಥವನ್ನು ಬರೆದಿದ್ದಾನೆ ಆತನ ತರುವಾಯ ಬ್ರಹ್ಮಪುತ್ರದ ನೆರೆಯ ಪ್ರದೇಶದ **ಶೀಲಭದ್ರ ಪಂಡಿತನು** ಆ ಅಧಿಕಾರವನ್ನು ಸ್ವೀಕರಿಸಿದನು ಈತನಲ್ಲಿ ವಾಕ್‌ಶಕ್ತಿ ಒಳ್ಳೆ ಚೆನ್ನಾಗಿತ್ತೆಂದು ಯುವಾನ ಚ್ವಂಗನು ಬರೆದಿರುವನು ಆದುದರಿಂದ ಮಹಾಯಾನ ಪಂಥವನ್ನು ಪ್ರಸಾರಮಾಡುವ ಮಹತ್ಕಾರ್ಯವನ್ನು ಹರ್ಷನು ಈತನಿಗೇ ಒಪ್ಪಿಸಿದ್ದನಂತೆ

**ವಿದ್ಯಾರ್ಥಿಗಳು ಮತ್ತು ಅಧ್ಯಯನ** — ನಾಲಂದದಲ್ಲಿ ಮುಖ್ಯವಾಗಿ ಬೌದ್ಧಶಾಸ್ತ್ರಗಳ ಅಭ್ಯಾಸ ನಡೆಯುತ್ತಿದ್ದಿತು ಆದರೂ ಹಲವರು ಬ್ರಾಹ್ಮಣರೂ ವೇದಾಧ್ಯಯನ ಮಾಡಲು ಅಲ್ಲಿಗೆ ಬರುತ್ತಿದ್ದರು ಇಲ್ಲಿ ತತ್ತ್ವಶಾಸ್ತ್ರಗಳ ಜೊತೆಗೆ ವೈದ್ಯಕೀಯ ವಿದ್ಯೆಯನ್ನೂ ಕಲಿಸುತ್ತಿದ್ದರು ಈ ವಿದ್ಯಾಲಯವನ್ನು ಪ್ರವೇಶಿಸಬೇಕಾದರೆ ಮೊದಲು ಒಂದು ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗಿತ್ತು ಹತ್ತುಸಾವಿರದವರೆಗೂ ವಿದ್ಯಾರ್ಥಿಗಳಿದ್ದರು. ವಸತಿಯ ಅನುಕೂಲತೆಗಾಗಿ ನೂರಾರು ಕೋಣೆಗಳಿದ್ದುವು ಎಲ್ಲರಿಗೂ ಪುಕ್ಕಟೆಯಾಗಿ ವಿದ್ಯೆ ಸಿಕ್ಕುತ್ತಿತ್ತು

**ವಿದ್ಯಾಲಯದ ವೈಭವ** — ಈ ವಿದ್ಯಾಲಯದ ಕ್ಷೇತ್ರವು ಸುಮಾರು ಎರಡು ಮೈಲುಗಳನ್ನು ಆವರಿಸಿತ್ತು ಮೂರು ನಾಲ್ಕು ನೆಲೆಗಳ ಕಟ್ಟಡಗಳೂ ಎತ್ತರವಾದ ಗೋಪುರಗಳೂ ವಿಶ್ವವಿದ್ಯಾಲಯದ ಸೊಬಗನ್ನು ಮತ್ತು ಉಚ್ಚತನವನ್ನು ತೋರಿಸುತ್ತಿದ್ದುವು **ರತ್ನಸಾಗರ, ರತ್ನೋದಧಿ, ರತ್ನರಂಜಕ**ಗಳೆಂಬ ಮೂರು ಮಹಾಮಂದಿರಗಳಲ್ಲಿ ಗ್ರಂಥಭಾಂಡಾರವಿತ್ತು **ವಸುಬಂಧು, ವಿಜ್ಞಾನ, ಕಮಲಶೀಲ, ವೀರದೇವ, ನಾಗಾರ್ಜುನ, ಸಂಘಭದ್ರ** ಎಂಬ ಪ್ರಸಿದ್ಧ ಪಂಡಿತರು ಪ್ರಾಧ್ಯಾಪಕರಾಗಿದ್ದರು ವಿದ್ಯಾಮಂದಿರದ ಆವಾರದಲ್ಲಿ ಕಮಲಗಳಿಂದ ಕಂಗೊಳಿಸುವ ತಿಳಿನೀರಿನ ಕೊಳಗಳಿದ್ದುವು ಈ ವಿದ್ಯಾಲಯದ ವೆಚ್ಚಗಳ ವ್ಯವಸ್ಥೆಗಾಗಿ ನೂರಾರು ಗ್ರಾಮಗಳ ಉಂಬಳಿಯಿದ್ದಿತು, ಅಲ್ಲದೆ, ಶ್ರೀಮಂತರೂ ರಾಜರೂ ಬಿಚ್ಚುಗೈಯಿಂದ ಧನಸಹಾಯ ಮಾಡುತ್ತಿದ್ದರು

**ಯುವಾನ ಚ್ವಂಗನ ಪ್ರವಾಸ** — ಎರಡು ವರ್ಷಗಳಿಂದಲೂ ನಾಲಂದದಲ್ಲಿದ್ದು ಬೌದ್ಧಧರ್ಮವನ್ನು ಆಳವಾಗಿ ಅಭ್ಯಾಸ ಮಾಡಿದನಂತರ, ಯುವಾನ

ಚ್ವಾಂಗನು ಮತ್ತೆ ಭಾರತದಲ್ಲಿ ಪ್ರವಾಸ ಕೈಕೊಂಡನು ಪೂರ್ವದಂಡೆಗುಂಟ ಅವನು ದಕ್ಷಿಣದ ಕಾಂಚಿಗೆ ಹೋಗಿ, ಅಲ್ಲಿ ಕೆಲಕಾಲ ಇದ್ದನು ಅನಂತರ ಬಾದಾಮಿಯ ಪುಲಿಕೇಶಿಯ ಆಸ್ಥಾನಕ್ಕೆ ಆಗಮಿಸಿ ಕೆಲವು ದಿನ ಅಲ್ಲಿ ಇದ್ದನು

ಶ್ರೀಹರ್ಷನ ಮಹಾಮೋಕ್ಷ ಪರಿಷತ್ತಿನಲ್ಲಿ ಭಾಗವಹಿಸಿದ ಅನಂತರ ಈತನು ಕ್ರಿ ಶ ೬೪೪ರಲ್ಲಿ ಸ್ವದೇಶಕ್ಕೆ ಹಿಂತಿರುಗಿದನು ತನ್ನ ಆಪ್ತ ಸ್ನೇಹಿತನನ್ನು ಗಡಿಯತನಕ ಕರೆದುಕೊಂಡು ಹೋಗಿ ಬೀಳ್ಕೊಡಲು, ಶ್ರೀಹರ್ಷನು ಉದಿತ ಎಂಬ ರಾಜನನ್ನು ಅವನ ಸಂಗಡ ಕಳುಹಿಸಿದನಂತೆ

ಮಧ್ಯ ಏಶಿಯಾದ ದುಸ್ತರ ಮಾರ್ಗಗಳಲ್ಲಿ ಅವನಿಗೆ ಅನೇಕ ಸಂಕಷ್ಟಗಳು ಒದಗಿದುವಂತೆ ಆದರೂ ಅವನ್ನೆಲ್ಲ ಧೈರ್ಯದಿಂದ ಎದುರಿಸಿ, ಯುವಾನ ಚ್ವಾಂಗನು ಕಡೆಗೆ ಚೀನದ ರಾಜಧಾನಿಯನ್ನು ತಲುಪಿದನು ೨೦ ಕುದುರೆಗಳು ಹೊರುವಷ್ಟು ಧರ್ಮಗ್ರಂಥಗಳನ್ನೂ ಬೌದ್ಧ ವಿಗ್ರಹಗಳನ್ನೂ ಚಿನ್ನ, ಬೆಳ್ಳಿ, ಶ್ರೀಗಂಧದ ವಸ್ತು ಮುಂತಾದುವುಗಳನ್ನೂ ಅವನು ಚೀನಕ್ಕೆ ಸಾಗಿಸಿದನು ತನ್ನ ಆಯುಷ್ಯದಲ್ಲಿ ಉಳಿದಿದ್ದ ೨೦ ವರ್ಷಗಳ ಕಾಲವನ್ನು, ಅವನು ಆ ಧರ್ಮಗ್ರಂಥಗಳನ್ನು ಚೀನೀಭಾಷೆಗೆ ಪರಿವರ್ತಿಸುವುದರಲ್ಲಿಯೇ ವ್ಯಯಮಾಡಿ, ಕೀರ್ತಿವಡೆದನು

ಭಾರತದ ಪ್ರವಾಸವನ್ನು ವರ್ಣಿಸಿ ಯುವಾನ ಚ್ವಾಂಗನು ಬರೆದಿರುವ ಗ್ರಂಥಕ್ಕೆ **ಸಿ-ಯು-ಕಿ** ಎಂದು ಹೆಸರು ಅದರಲ್ಲಿ ಹೆಚ್ಚಾಗಿ ಬೌದ್ಧರ ಪುಣ್ಯ-ಕ್ಷೇತ್ರಗಳು ಬೌದ್ಧಭಿಕ್ಷುಗಳ ವಿಹಾರಗಳ ಸಂಖ್ಯೆ ಇವುಗಳ ವಿವರಣೆಯೇ ಕಂಡುಬರುತ್ತವೆ ಆದರೂ ಆಗಿನ ಕಾಲದ ಜನಜೀವನವನ್ನು ನಾವು ಈ ಗ್ರಂಥದಿಂದ ತಿಳಿದುಕೊಳ್ಳಬಹುದಾಗಿದೆ

ಕನೋಜ, ಪ್ರಯಾಗ ಮುಂತಾದ ನಗರಗಳು ತುಂಬ ರಮಣೀಯವಾಗಿದ್ದುವು, ಆದರೆ ಪಾಟಲೀಪುತ್ರವು ಹಾಳುಬಿದ್ದಿತ್ತಂತೆ ರಾಜ್ಯದ ಆಡಳಿತವು ದಕ್ಷತೆಯಿಂದ ಪ್ರಜೆಗಳ ಹಿತಸಾಧನೆಗಾಗಿಯೇ ಏರ್ಪಟ್ಟಿತ್ತು ಅಧಿಕಾರಿಗಳನ್ನು ತಮ್ಮ ಮನಬಂದಂತೆ ನಡೆಯಲು ಬಿಡುತ್ತಿರಲಿಲ್ಲ ಮಹಾರಾಜರು ಸದಾ ಊರಿಂದೂರಿಗೆ ಪ್ರಯಾಣ ಮಾಡುತ್ತ, ಅವರನ್ನು ಅಂಕಿತದಲ್ಲಿಟ್ಟುಕೊಂಡಿದ್ದರು ನಿದ್ರಾಹಾರವನ್ನೂ ತೊರೆದು ರಾಜನು ಪ್ರಜಾಸೇವೆಯಲ್ಲೇ ನಿರತನಾಗಿದ್ದನಂತೆ

ಚೀನದಲ್ಲಿದ್ದಂತೆ, ಮನೆ-ಮನೆಯನ್ನೂ ಲೆಕ್ಕಹಾಕಿ, ಪ್ರತಿ ಮನೆಯವರೂ ಸಂಬಳವಿಲ್ಲದೆ, ಸರಕಾರಕ್ಕಾಗಿ ಇಂತಿಷ್ಟು ದಿನ ದುಡಿಯಬೇಕೆಂಬ ನಿಯಮವು ಭಾರತದಲ್ಲಿರಲಿಲ್ಲವಂತೆ ಬೆಳೆದದ್ದರ ಆರನೆಯ ಒಂದು ಭಾಗವು ಮಾತ್ರ ಭೂಕಂದಾಯವಾಗಿದ್ದಿತು, ಅಲ್ಲದೆ, ಅರಮನೆಗೆ ಬಹು ವಿಸ್ತೀರ್ಣವಾದ

ಹೊಲಗದ್ದೆಗಳಿದ್ದುವು ಅವುಗಳ ಉತ್ಪತ್ತಿಯನ್ನು ನಾಲ್ಕು ಭಾಗ ಮಾಡಿ, ಆಡಳಿತದ ಖರ್ಚಿಗೊಂದು ಭಾಗ, ಅಧಿಕಾರಿಗಳ ಸಂಭಾವನೆಗೊಂದು ಭಾಗ, ವಿದ್ವಾಂಸರಿಗೆ ಕೊಡಬೇಕಾದ ಸಂಭಾವನೆಗೆ ಮತ್ತೊಂದು ಭಾಗ, ಉಳಿದದ್ದು ಬಡವರಿಗೂ ಸಾಧುಸಂತರಿಗೂ ದಾನಕ್ಕಾಗಿ, ಹೀಗ ವೆಚ್ಚ ಮಾಡುತ್ತಿದ್ದರಂತೆ

ಶ್ರೀಮಂತರ ಮನೆಗಳನ್ನು ಇಟ್ಟಂಗಿಗಳಿಂದ ಕಟ್ಟುತ್ತಿದ್ದರು ಬಡವರು ಮರದ ಹಲಗೆಗಳಿಂದಲೂ ಕಟ್ಟಿಗೆಗಳಿಂದಲೂ ತಮ್ಮ ಗುಡಿಸಲುಗಳನ್ನು ಮಾಡಿಕೊಳ್ಳುತ್ತಿದ್ದರು ನಾಲ್ಕೈದು ಅಂತಸ್ತಿನ ಸೌಧಗಳು ನಗರಗಳಲ್ಲಿ ಹೇರಳವಾಗಿದ್ದುವು ಹೊರನೋಟಕ್ಕೆ ಅಷ್ಟು ಚೆಂದ ಕಾಣದಿದ್ದರೂ ಮನೆಗಳು ಒಳಗ ಸುವ್ಯವಸ್ಥಿತವಾಗಿಯೂ ಅಂದವಾಗಿಯೂ ಶುಚಿಯಾಗಿಯೂ ಇದ್ದುವೆಂದು ಯುವಾನ ಚ್ವಾಂಗನು ಹೇಳುತ್ತಾನೆ

ಜನರೆಲ್ಲ ನೀತಿವಂತರು ಹಾಗೂ ಪಾಪಭೀರುಗಳು ಅಲ್ಲದೆ ಕಳ್ಳತನ ಮುಂತಾದುವುಗಳಿಗೆ ಸರಕಾರವು ಕಠಿಣ ಶಿಕ್ಷೆಗಳನ್ನು ವಿಧಿಸಿ, ಕಿವಿ ಮೂಗುಗಳನ್ನು ಕತ್ತರಿಸುತ್ತಿದ್ದುದರಿಂದ, ಅಂಥ ಅಪರಾಧಗಳು ತೀರ ಕಡಿಮೆಯಾಗಿದ್ದುವು

ರಾಜ-ಮಹಾರಾಜರ ಹಾಗೂ ಶ್ರೀಮಂತರ ಉಡಿಗೆ-ತೊಡಿಗೆಗಳು ಬೆಲೆಬಾಳುವ ವಜ್ರ-ರತ್ನ ಚಿನ್ನ-ಬೆಳ್ಳಿಗಳಿಂದ ಮಾಡಿದುವುಗಳಾಗಿದ್ದುವು, ಆದರೆ ಸಾಮಾನ್ಯ ಜನರು ಸರಳಜೀವಿಗಳು ಶುಚಿಗೆ ಜನರು ಬಹಳ ಗಮನ ಕೊಡುತ್ತಿದ್ದರು ಎಂಜಲು, ಮೈಲಿಗೆ ಇತ್ಯಾದಿ ಅಶುಚಿಯಾದ ಪದಾರ್ಥಗಳನ್ನು ತ್ಯಜಿಸುತ್ತಿದ್ದರು ಒಬ್ಬರ ತಟ್ಟೆಯಲ್ಲಿ ಮತ್ತೊಬ್ಬರು ಊಟ ಮಾಡುತ್ತಿರಲಿಲ್ಲ ಮಾಂಸಾಹಾರದ ಬಳಕೆ ತೀರ ಕಡಿಮೆ ಇದ್ದಿತು

ಜಾತಿಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು ವರ್ಜ್ಯವಾದ ಆಹಾರವನ್ನು ಸೇವಿಸುವವರನ್ನು ಅಂತ್ಯಜರೆಂದು ಜಾತಿಯಿಂದ ಹೊರ-ದೂಡುತ್ತಿದ್ದರು

ಹಿಂದೂಧರ್ಮವೇ ದೇಶದ ಮುಖ್ಯ ಧರ್ಮವಾಗಿತ್ತು. ಸಂಭಾಷಣೆಗೂ ಸಾಹಿತ್ಯಕ್ಕೂ ಸಂಸ್ಕೃತವನ್ನೇ ಉಪಯೋಗಿಸುತ್ತಿದ್ದರು ಬೌದ್ಧ-ಧರ್ಮದ ಪ್ರಾಧಾನ್ಯವು ಕಡಿಮೆಯಾಗುತ್ತಿದ್ದುದರಿಂದ, ಬೌದ್ಧರ ಪುಣ್ಯಕ್ಷೇತ್ರಗಳಾಗಿದ್ದ ಬುದ್ಧಗಯೆ, ಕಪಿಲವಸ್ತು ಮುಂತಾದ ನಗರಗಳು ಕ್ಷೀಣಿಸಿ, ಅಲ್ಲೆಲ್ಲ ಬೆಂಗಾಡು ಬೆಳೆದುಬಿಟ್ಟಿತ್ತು ಹೀಗೆ ಬೌದ್ಧಮತವು ಅವನತಿಗೆ ಬರುವುದಕ್ಕೆ ಅದರಲ್ಲಿ ಬೆಳೆದ ಒಡಕುಗಳೇ ಕಾರಣವೆಂದೂ ಸುಮಾರು ಹದಿನೆಂಟು ಪಂಥಗಳು ಹುಟ್ಟಿ ಈ ಮತ್ಸರವನ್ನು ಹೆಚ್ಚಿಸಿದುವೆಂದೂ ಯುವಾನ ಚ್ವಾಂಗನು ಬರೆದಿದ್ದಾನೆ

ಆದರೂ ಕಾಶ್ಮೀರ, ಬಿಹಾರ, ಕಂಚಿಗಳಲ್ಲಿ ನೂರಾರು ಬೌದ್ಧ ವಿಹಾರಗಳಿದ್ದುವು ಅವುಗಳ ಆಸ್ತಿಯನ್ನೆಲ್ಲ ರಾಜರೇ ಭದ್ರವಾಗಿರುವಂತೆ ನೋಡಿಕೊಳ್ಳುತ್ತಿದ್ದರು

ಯುವಾನ ಚ್ವಂಗನು ತನ್ನ ಗ್ರಂಥದಲ್ಲಿ ಇಂಥ ನೂರಾರು ಸಂಗತಿಗಳನ್ನು ಬರೆದಿಟ್ಟು, ನಮಗೆ ಮಹೋಪಕಾರ ಮಾಡಿದ್ದಾನೆ

## ಅಭ್ಯಾಸನಗಳು

೧ ನಾಲಂದ ವಿಶ್ವವಿದ್ಯಾಲಯದ ಬಗಗೆ ಕೆಳಗಿನ ಮಾತುಗಳನ್ನು ಕುರಿತು ಒಂದೊಂದು ವಾಕ್ಯವನ್ನು ಬರೆಯಿರಿ

(ಅ) ಸ್ಥಾಪನೆ (ಆ) ಉಪಕುಲಪತಿ (ಇ) ಪ್ರಾಧ್ಯಾಪಕ (ಈ) ಮುಖ್ಯ ಅಭ್ಯಾಸ (ಉ) ಪ್ರವೇಶ (ಊ) ವಿದ್ಯಾರ್ಥಿಗಳ ಸಂಖ್ಯೆ (ಎ) ವಸತಿಯ ಅನುಕೂಲತೆ (ಏ) ಫೀ (ಐ) ಕಟ್ಟಡ (ಒ) ಗ್ರಂಥಭಾಂಡಾರ (ಓ) ವೆಚ್ಚದ ವ್ಯವಸ್ಥೆ

೨ ಕೆಳಗೆ ಎರಡು ಭಾಗಗಳಿವೆ ಒಂದರಲ್ಲಿಯ ಹೆಸರನ್ನೂ ಎರಡನೆಯ ಭಾಗದಲ್ಲಿಯ ಅದಕ್ಕೆ ಸಂಬಂಧಿಸಿದ ಮಾತನ್ನೂ ಹುಡುಕಿ ಸರಿಯಾಗಿ ಹೊಂದಿಸಿ ಬರಯಿರಿ —

| | |
|---|---|
| ಸಾರನಾಥ | ನಾಲಂದದಲ್ಲಿಯ ಪ್ರಾಧ್ಯಾಪಕ |
| ವಲ್ಲಭಿ | ಗ್ರಂಥಭಾಂಡಾರದ ಮಹಾಮಂದಿರ |
| ಸಿ-ಯು-ಕಿ | ಹೀನಯಾನದ ಬಗ್ಗೆ ಪ್ರಸಿದ್ಧವಾದ ವಿದ್ಯಾಲಯ |
| ವಸುಬಂಧು | ಯುವಾನ ಚ್ವಂಗನು ಬರೆದ ಗ್ರಂಥ |
| ರತ್ನರಂಜಕ | ಪ್ರಸಿದ್ಧ ಬೌದ್ಧ ಕ್ಷೇತ್ರ |

೩ ಯುವಾನ ಚ್ವಂಗನು ಆಗಿನ ಕಾಲದ ಭಾರತದ ಜನಜೀವನವನ್ನು ಕುರಿತು ಹೇಳಿದ ಕೆಲವು ಸಂಗತಿಗಳನ್ನು ಕೆಳಗೆ ಕೊಟ್ಟಿದೆ ಅವುಗಳನ್ನು ಒಂದೊಂದು ವಾಕ್ಯದಲ್ಲಿ ವಿವರಿಸಿರಿ —

(ಅ) ಆಡಳಿತ (ಆ) ಅರಮನೆಯ ಉತ್ಪತ್ತಿಯ ಭಾಗಗಳು (ಇ) ಊರಲ್ಲಿಯ ಮನೆಗಳು (ಈ) ಜನರ ಊಟ-ಉಡಿಗೆ (ಉ) ಜಾತಿಪದ್ಧತಿ (ಊ) ಧರ್ಮ (ಎ) ಬೌದ್ಧ ಕ್ಷೇತ್ರಗಳು

---

# ಗುಪ್ತ ಸಾಮ್ರಾಟರು


ಪ್ರಮಾಣ □ = ೧೦ ವರ್ಷಗಳು
ಕ್ರಿಸ್ತಶಕ ೧೦೦
೧೦೦ ಕುಶಾಣರ ದಾಳಿಗಳು
೧೨೦
ಕನಿಷ್ಕನ ಆಳಿಕೆ
೧೬೨
೧೫೦
೨೦೦
ಉತ್ತರದಲ್ಲಿ ಬಾರಶಿವ - ನಾಗ ಸಂತತಿ ಅರಸರ ಆಳಿಕೆ
ದಕ್ಷಿಣದಲ್ಲಿ ವಾಕಾಟಕ ಮತ್ತು ಶಾತವಾಹನ ಅರಸರು
೩೦೦
ಚಂದ್ರಗುಪ್ತನು ರಾಜ್ಯಕಟ್ಟಿದ್ದು ಗುಪ್ತ ಸಾಮ್ರಾಜ್ಯ ಸ್ಥಾಪನೆ
೩೨೦
೩೩೦
ಸಮುದ್ರಗುಪ್ತನ ದಿಗ್ವಿಜಯ
೩೫೦
೩೭೫
೩೭೫
ಚಂದ್ರಗುಪ್ತ ವಿಕ್ರಮಾದಿತ್ಯ ಗುಪ್ತರ ಸುವರ್ಣಯುಗ
ಫಾಹಿಯಾನನ ಬಾರತಸಂಚಾರ
೪೦೫
೪೧೩
ಕುಮಾರಗುಪ್ತ, ಸ್ಕಂದಗುಪ್ತ ಮೊದಲಾದವರು - ಹೂಣರ ದಾಳಿ
ಹೂಣ ತೋರಮಾನನಮರಣ
೫೦೨
೫೦೦
೫೨೮ ಹೂಣ ಮಿಹಿರಕುಲನ ಸೋಲು
೬೦೦
ಪುಲಕೇಶಿಯು ಪಟ್ಟಕ್ಕೆ ಬಂದದ್ದು
೬೦೯
೬೦೬ ಹರ್ಷವರ್ಧನನ ಸಿಂಹಾಸನಾರೋಹಣ
೬೩೨ ಹರ್ಷ - ಪುಲಕೇಶಿಯರ ಯುದ್ಧ ಹುಯೆನತ್ಸಾಂಗನ ಬಾರತ ಸಂಚಾರ
ಪುಲಕೇಶಿಯ ಮರಣ
೬೪೨
೬೪೮ ಹರ್ಷವರ್ಧನನ ಮರಣ
ಹುಯೆನತ್ಸಾಂಗನ ಮರಣ
೬೬೪
೭೦೦

# ಎರಡನೆಯ ಭಾಗ

## (ಮಧ್ಯಕಾಲ)

### ಮುಸಲ್ಮಾನ ಮತ್ತು ಮರಾಠರ ಆಳಿಕೆ

## ೧ ಹಿನ್ನೋಟ

**ವಿದ್ಯಾರ್ಥಿಗಳಿರಾ!** ಹಿಂದಿನ ಇಯತ್ತೆಯಲ್ಲಿ ನೀವು, ಸಿಂಧುನದಿಯ ತೀರದ ಸಂಸ್ಕೃತಿಯಿಂದ ಮೊದಲುಮಾಡಿ ಶ್ರೀಹರ್ಷ ಹಾಗೂ ಎರಡನೆಯ ಪುಲಿಕೇಶಿಯವರೆಗೆ ಭಾರತದಲ್ಲಿ ನಡೆದ ಸಂಗತಿಗಳನ್ನು ತಿಳಿದುಕೊಂಡಿರಿ, ಅದರಿಂದ, ಹರಪ್ಪ, ಮೊಹೆಂಜೊದಾರೋಗಳ ಅವಶೇಷಗಳ ಚಿತ್ರ ನಿಮ್ಮ ಕಣ್ಮುಂದೆ ಕಟ್ಟಿದಂತಿದೆ, ಆರ್ಯರ ಉದಾರ ಮತ್ತು ದಿವ್ಯಜೀವನದ ರೀತಿ-ನೀತಿಗಳು ನಿಮ್ಮ ಮನಸಿನಲ್ಲಿ ಮೂಡಿವೆ, ಬುದ್ಧನ ಅಹಿಂಸೆಯ ತತ್ತ್ವ ಹಾಗೂ ಅಶೋಕ ಚಕ್ರವರ್ತಿಯ ಹೃದಯಪರಿವರ್ತನೆಗಳು ನಿಮ್ಮಲ್ಲಿ ಅಹಿಂಸೆಯ ಬೀಜವನ್ನು ಬಿತ್ತಿವೆ, ಕನಿಷ್ಕ, ಸಮುದ್ರಗುಪ್ತ, ಹರ್ಷ, ಎರಡನೆಯ ಪುಲಿಕೇಶಿಯವರಂಥ ವೀರ ಸಮ್ರಾಟರ ಚರಿತ್ರಗಳು ನಿಮ್ಮಲ್ಲಿ ಅಚ್ಚೊತ್ತಿದಂತೆ ಉಳಿದು, ನಿಮ್ಮ ಜೀವನವನ್ನು ಹುರಿಗೊಳಿಸಿವೆ, ನಿಜವಾಗಿಯೂ ಗುಪ್ತ-ಸಾಮ್ರಾಜ್ಯದವರು ಮಾಡಿದ ಆರ್ಯಸಂಸ್ಕೃತಿಯ ಪುನರುಜ್ಜೀವನ, ಸುಖ-ಶಾಂತಿಗಳ ಹಚ್ಚಳ, ದೇಶದ ಉತ್ಕರ್ಷ, ಇವುಗಳನ್ನೆಲ್ಲ ಓದಿದರೆ, ಆ ಬಂಗಾರ ಯುಗದ ವರ್ಣನೆಯು ಯಾವನ ಹೃದಯವನ್ನು ಉಕ್ಕಿಸಲಿಕ್ಕಿಲ್ಲ!

**ಅನೈಕ್ಯದ ಕೇಡುಗಾಲ** — ಆದರೆ, ಶ್ರೀಹರ್ಷ ಮತ್ತು ಎರಡನೆಯ ಪುಲಿಕೇಶಿಯವರ ತರುವಾಯ ನಾಲ್ಕುನೂರು ವರ್ಷಕಾಲ ಇಡಿಯ ಭಾರತವನ್ನು ತಮ್ಮ ಅಂಕೆಯಲ್ಲಿಟ್ಟುಕೊಂಡು ಸಮರ್ಥರಾಗಿ ಆಳುವ ಸಮ್ರಾಟರಾಗಲಿ, ತಮ್ಮ ದಿವ್ಯಜೀವನದಿಂದ ಜನರನ್ನು ಸನ್ಮಾರ್ಗಕ್ಕೆ ಹಚ್ಚುವ ಪುಣ್ಯ-ಶಾಲಿಗಳಾಗಲಿ, ಹುಟ್ಟಲಿಲ್ಲ, ಅಂತೆಯೇ, ಉತ್ತರದ ಹಾಗೂ ದಕ್ಷಿಣದ ಎರಡೂ ಸಾಮ್ರಾಜ್ಯಗಳು ಹೋಳಾದುವು, ಅವುಗಳಲ್ಲಿ ಚಿಕ್ಕ ಚಿಕ್ಕ ರಾಜ್ಯಗಳು ಹುಟ್ಟಿದುವು ಇದರ ಪರಿಣಾಮವಾಗಿ, ಅವರಲ್ಲಿ ತಮ್ಮ ಪಂಗಡದ ಅಥವಾ ರಾಜ್ಯದ ಸಂಕುಚಿತ ಅಭಿಮಾನ ಮತ್ತು ಸ್ವಾಮಿನಿಷ್ಠೆಗಳು ಮನೆಮಾಡಿದುವೇ

ಹೊರತು ಏಕರಾಷ್ಟ್ರೀಯತ್ವದ ಎಂದರೆ ಭಾರತೀಯರಾದ ನಾವೆಲ್ಲರೂ ಒಂದೆಂಬ ಭಾವನೆಯು ಯಾರಲ್ಲಿಯೂ ಹುಟ್ಟಲಿಲ್ಲ ಅದರಿಂದ ಅವರಲ್ಲಿ ಹೊಡೆದಾಟಗಳು ನಡೆದುವು ಎಷ್ಟೋ ಮನೆತನಗಳು ಎದ್ದುವು, ಬಿದ್ದುವು ಉತ್ತರದಲ್ಲಿ ಪರಮಾರ, ತೋಮರ, ಚವ್ಹಾಣ, ಚಂದೇಲ ಮೊದಲಾದವರೂ ದಕ್ಷಿಣದಲ್ಲಿ ಚೋಳ, ಚೇರ, ಪಾಂಡ್ಯ, ಪಲ್ಲವ, ಕದಂಬ ಚಾಲುಕ್ಯ, ರಾಷ್ಟ್ರಕೂಟರೂ ತಲೆ ಎತ್ತಿದರು ಆದರೆ ಇವರೆಲ್ಲರೂ ಒಬ್ಬರನ್ನೊಬ್ಬರು ಹತ್ತಿಕ್ಕಲಿಕ್ಕೆ ಯತ್ನಿಸುತ್ತಿದ್ದರು ಎಲ್ಲೆಲ್ಲಿಯೂ 'ನಾವೆಲ್ಲರೂ ಒಂದು, ಒಂದೇ ದೇಶದವರು' ಎಂಬ ಒಕ್ಕಟ್ಟಿನ ಭಾವನೆಯು ಇರಲಿಲ್ಲ, ಅದರಿಂದ, ಅವರು ಒಬ್ಬರಮೇಲೊಬ್ಬರು ಸೇಡು ತೀರಿಸಿಕೊಳ್ಳಲಿಕ್ಕೆ ದಾರಿ ಕಾದಿರುತ್ತಿದ್ದರು ಇಂಥ ದೇ ದ್ರೋಹಿಗಳಿಂದ ಹೊರನಾಡಿನ ದಾಳಿಗಾರರಿಗೆ 'ಇಬ್ಬರ ಜಗಳದಲ್ಲಿ ಮೂರನೆಯವನಿಗೆ ಲಾಭ' ಎಂಬಂತೆ, ಸಮಯ ಸಾಧಿಸಿತು

**ಮುಸಲ್ಮಾನರ ಹೊಂಚು** — ಭಾರತದಲ್ಲಿ ಈ ಬಗೆಯಾಗಿ ಎಲ್ಲರೂ ತಮ್ಮತಮ್ಮೊಳಗೆ ಹೋರಾಡುವ ಕಾಲಕ್ಕೆ, ನಮ್ಮ ವಾಯವ್ಯಕ್ಕಿದ್ದ ಅಫಗಾಣಿಸ್ತಾನ, ಅರಬಸ್ತಾನಗಳಲ್ಲಿ ಧರ್ಮಕ್ರಾಂತಿ ಪ್ರಾರಂಭವಾಗುವುದರಲ್ಲಿತ್ತು ಕ್ರಿ ಶ ೫೭೦ರಲ್ಲಿ ಮಹಮ್ಮದ ಪೈಗಂಬರರು ಮಕ್ಕೆಯಲ್ಲಿ ಹುಟ್ಟಿದರು ಅವರು ತಮ್ಮಲ್ಲಿಯ ಅಲೌಕಿಕಗುಣಗಳಾದ ಪ್ರಾಮಾಣಿಕತನ, ಜಾಣ್ಮೆ, ಸತತೋದ್ಯೋಗ, ದೇವರಲ್ಲಿ ಭಕ್ತಿ-ವಿಶ್ವಾಸಗಳಿಂದ ಹೆಸರುಪಡೆದು, ಅಲ್ಲಿಯ ಜನರಿಗೆ ಮಾರ್ಗದರ್ಶಕರಾದರು ಅರಬರಲ್ಲಿದ್ದ ಮೂಢ ನಂಬಿಗೆ, ಕೆಟ್ಟ ಸಂಪ್ರದಾಯಗಳನ್ನು ಕಿತ್ತುಹಾಕಲು ತಮ್ಮದೇ ಆದ ಇಸ್ಲಾಂ ಮತವನ್ನು ಪ್ರಸಾರ ಮಾಡಿದರು, ಅದಕ್ಕಾಗಿ ಅವರು ಪ್ರಾಣಾಂತಿಕ ಕಷ್ಟಗಳನ್ನು ಅನುಭವಿಸಬೇಕಾಯಿತು, ಮುಂದೆ, ಮಕ್ಕೆಯನ್ನು ಬಿಟ್ಟು, ಮದೀನಾ ಪಟ್ಟಣದಲ್ಲಿಯೇ ಇದ್ದು, ಅಲ್ಲಿಯ ಜನರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು ಮುಸ್ಲಿಂ ರಾಜ್ಯವನ್ನು ಸ್ಥಾಪಿಸಿದರು ಅದು ಚೆನ್ನಾಗಿಯೇ ಬೆಳೆದುದನ್ನು ಕಣ್ಣಾರೆ ನೋಡಿ, ಮಕ್ಕೆಯಲ್ಲಿ ಕ್ರಿ ಶ ೬೩೨ರಲ್ಲಿ ಮರಣಹೊಂದಿದರು ತರುವಾಯ, ಅವರ ಅನುಯಾಯಿಗಳು ಮುಸಲ್ಮಾನ ರಾಜ್ಯವನ್ನು ಪಶ್ಚಿಮ ಖಂಡದಲ್ಲಿ ಸ್ಪೇನಿನವರೆಗೂ, ಪೂರ್ವಖಂಡದಲ್ಲಿ ಭಾರತದ ಬಾಗಿಲಿನವರೆಗೂ ಹಬ್ಬಿಸಿದರು, ಆಗ, ಭಾರತದಲ್ಲಿ ನುಗ್ಗಲು ಹವಣಿಸಹತ್ತಿದರು

**ಮುನ್ನೋಟ** — ಈ ಸಂಕ್ರಾಂತಿಯ ಕಾಲಕ್ಕೆ ಭಾರತದಲ್ಲಿ ಯಾವ ಯಾವ ರಾಜ್ಯಗಳಿದ್ದುವು? ಭಾರತದ ರಾಜಕೀಯ ಹಾಗೂ ಸಾಮಾಜಿಕ ಸ್ಥಿತಿ ಹೇಗಿತ್ತು? ಮುಸಲ್ಮಾನರ ಆಕ್ರಮಣದ ನಂತರ ಯಾವ ಯಾವ ಮಾರ್ಪಾಟುಗಳಾದುವು? ಎಂಬುದನ್ನು ಮುಂದಿನ ಪ್ರಕರಣಗಳಲ್ಲಿ ನೋಡುವಾ!

# ೨ ಮುಸಲ್ಮಾನರ ಆಗಮನಕಾಲಕ್ಕೆ ಭಾರತದ ಸ್ಥಿತಿ

## ರಜಪೂತರು

**ಸಾಮಾಜಿಕಸ್ಥಿತಿ** – ೬ನೆಯ ಶತಮಾನದನಂತರ ಸುಮಾರು ಮುನ್ನೂರು ವರ್ಷಗಳ ವರೆಗೆ ಪರರಾಯರ ದಾಳಿಯ ಭೀತಿ ಅಷ್ಟೊಂದು ಇರಲಿಲ್ಲ, ಆದುದರಿಂದ, ದೇಶದಲ್ಲಿ ಎಚ್ಚರಿಕೆಯ ಲಕ್ಷಣಗಳು ಕಾಣುವುದಿಲ್ಲ ಈ ಕಾಲದಲ್ಲಿ ಭಾರತೀಯರ ವಿಲಾಸಪ್ರಿಯತೆಯು ಬೆಳೆಯಿತು ತಮ್ಮ ಸಂಸ್ಕೃತಿಯಲ್ಲಿದ್ದ ಅಭಿಮಾನವು ತಗ್ಗಿತು ರಾಷ್ಟ್ರೀಯ ಐಕ್ಯದ ಅರಿವಂತೂ ಇರಲೇ ಇಲ್ಲ ಪರರಾಷ್ಟ್ರಗಳ ಸಂಬಂಧ ತಪ್ಪಿದುದರಿಂದ ಭಾರತೀಯರಲ್ಲಿ ಮೆಲ್ಲಗೆ ಸಂಕುಚಿತ ಭಾವನೆಯು ಬಲಿಯತೊಡಗಿತು ಆಸೇತುಹಿಮಾಲಯದ ವರೆಗೆ ಇರುವ ಪ್ರದೇಶವೇ ಮಾತ್ರ ಪುಣ್ಯಭೂಮಿ, ಅದರಾಚೆ ಇರುವವರೆಲ್ಲರು ಮ್ಲೇಂಛರು ಎಂಬ ಮನೋವೃತ್ತಿಯು ಬೆಳೆಯಿತು ಹೊರಗಣ ಪ್ರದೇಶಗಳಲ್ಲಿ ನಡೆದಿರುವ ಧರ್ಮಕ್ರಾಂತಿ, ಆರ್ಥಿಕ ಬದಲಾವಣೆ, ಹಾಗೂ ಯುದ್ಧದ ಹೊಸ ರೀತಿ ಇವುಗಳ ಅರಿವು ಇಲ್ಲದಂತಾಯಿತು, ಎಂದಮೇಲೆ ಅದಕ್ಕೆ ತಮ್ಮಲ್ಲಿಯೂ ಸುಧಾರಣೆಗಳನ್ನು ಮಾಡಿಕೊಳ್ಳಬೇಕೆಂಬ ಬುದ್ಧಿ ಬರುವುದೆಂತು!

ತಮ್ಮ ಪಾಂಡಿತ್ಯದ ಪ್ರದರ್ಶನಕ್ಕಾಗಿ ಪಂಡಿತರು ಒಳ್ಳೊಳ್ಳೆಯ ಕಾವ್ಯಗಳನ್ನು ಸಂಸ್ಕೃತದಲ್ಲಿ ಬರೆದರು ಅದರಿಂದ ಕೆಲಮಟ್ಟಿಗೆ ಪಂಡಿತರ ಮನೋರಂಜನೆ ಆಯಿತು ಧರ್ಮದ ಆಚರಣೆ, ಶೀಲ ಮೊದಲಾದುವುಗಳಲ್ಲಿ ತೋರಿಕೆ ಆಡಂಬರಗಳು ಹೆಚ್ಚಾದುವು ದುರಾಚಾರಗಳು ವಿಶೇಷವಾಗಿ ಸಮಾಜದೊಳಗೆ ಬರತೊಡಗಿದುವು, ಇವುಗಳಿಂದ ಭಾರತವು ತನ್ನ ಆಂತರಿಕ ಶಕ್ತಿಗಳಾದ ಸತ್ಯವಂತಿಕೆ, ಶೀಲ, ಮುಂಧೋರಣೆ ಮತ್ತು ಐಕ್ಯಗಳನ್ನು ಕಳೆದುಕೊಂಡಿತು.

**ರಜಪೂತರ ಮುಖ್ಯಸದ್ಗುಣಗಳು** – ಉತ್ತರದಲ್ಲಿದ್ದ ಚಿಕ್ಕಪುಟ್ಟ ರಜಪೂತ ಅರಸರಲ್ಲಿ ಕೆಲವು ಗುಣಗಳಿದ್ದುವು ಅವುಗಳಲ್ಲಿದ್ದ ಧೈರ್ಯ, ಸ್ವಾಭಿಮಾನ, ಸ್ವಾಮಿನಿಷ್ಠೆ, ಮತ್ತು ಸಾಹಸ ಈ ಗುಣಗಳೇ ಮುಖ್ಯ ಸ್ವಾಮಿಕಾರ್ಯಕ್ಕಾಗಿ ಅವರು ತಮ್ಮ ಪ್ರಾಣವನ್ನೂ ಕೊಡುತ್ತಿದ್ದರು ವೈರಿಗಳನ್ನು ಧರ್ಮಯುದ್ಧದಲ್ಲಿ ಎದುರಿಸಿ ಜಯ ಇಲ್ಲವೆ ವೀರಸ್ವರ್ಗವನ್ನು ಪಡೆಯುತ್ತಿದ್ದರು. ಹೆಂಗಸರು ಯಾವುದೇ ಜಾತಿಯವರಿದ್ದರೂ ಸರಿ, ಅವರ ರಕ್ಷಣೆಯಲ್ಲಿ ಅವರದು ಎತ್ತಿದ ಕೈ ಶತ್ರುಗಳೊಡನೆ ಯುದ್ಧ ಮಾಡುವುದರಲ್ಲಿ ಎಂದೂ ಕಪಟ ಮಾಡುವವರಲ್ಲ ಯುದ್ಧದಲ್ಲಿ ಸೋಲುವುದು ಖಂಡಿತವೆಂದು ಗೊತ್ತಾದ ಕೂಡಲೇ ತಮ್ಮ ಮಾನಕಾಯ್ದುಕೊಳ್ಳಲು ಇವರ ಹೆಂಗಸರು ಬೆಂಕಿಯಲ್ಲಿ

ಹಾರಿಕೊಳ್ಳುತ್ತಿದ್ದರು ಇದಕ್ಕೆ 'ಜೋಹಾರ' ಎಂದು ಹೆಸರು ರಜಪುತ ಹೆಂಗಸರು ರಕ್ಷಾಬಂಧನ(ಕಂಕಣ ಕಟ್ಟುವದು)ದಿಂದ ಯೋಗ್ಯರಾದ ವೀರರನ್ನು ತಮ್ಮ ಸಹೋದರರನ್ನಾಗಿ ಮಾಡಿಕೊಳ್ಳುತ್ತಿದ್ದರು ಇಂತಹ ಹೆಂಗಸರು ಸಂಕಟದಲ್ಲಿ ಸಿಲುಕಿದಾಗ ಅವರನ್ನು ಕಾಯಲಿಕ್ಕ ಜೀವದ ಹಂಗು ತೂರೆದು ಇವರು ಹೋರಾಡುತ್ತಿದ್ದರು

**ಮುಖ್ಯ ದೋಷಗಳು** — ರಜಪೂತರಿಗೆ ರಾಜ್ಯಕಾರ್ಯದ ಜ್ಞಾನವಿರಲಿಲ್ಲ ಅವರಿಗೆ ಮೋಸಗಾರಿಕೆ ಗೊತ್ತಿರಲಿಲ್ಲ ವಸಂತಕಾಲದಲ್ಲಿ ಅವರು ಕ್ರೂರಪಶುಗಳ ಬೇಟೆಯಾಡುವರು ರಾಜಧಾನಿಯಲ್ಲಿರುವಾಗ ಸಂಗೀತ, ನೃತ್ಯ, ವಿಲಾಸಗಳಲ್ಲಿ ಕಾಲಕಳೆಯುವರು ಸುಂದರವಾದ ಉಪವನ, ಹೂದೋಟಗಳನ್ನು ಮಾಡಿಸುವರು ಇವರಲ್ಲಿ ಅಫೂ ತಿನ್ನುವ ಚಟ ವಿಶೇಷವಾಗಿತ್ತು ಯಾರು ಹೇಗಿರುವರು? ಅವರೊಡನೆ ಹೇಗೆ ನಡೆದುಕೊಳ್ಳಬೇಕು? ಎಂಬುದರ ಅರಿವು ಇರಲಿಲ್ಲ ತಾವು ದೊಡ್ಡವರು, ದೊಡ್ಡ ಕುಲದವರೆಂಬ ಒಣ ಅಭಿಮಾನಕ್ಕೆ ಬಿದ್ದು, ತಮ್ಮವರೊಡನೆಯೇ ದ್ವೇಷ ಕಟ್ಟಿಕೊಂಡು, ಮುಸಲ್ಮಾನರಿಗೆ ಆಳಾಗುವ ಹೊತ್ತು ಬಂತು

**ರಾಜಕೀಯಸ್ಥಿತಿ** — ಉತ್ತರಭಾರತದಲ್ಲಿ ಸಮ್ರಾಟ ಶ್ರೀಹರ್ಷವರ್ಧನನು, ದಕ್ಷಿಣದಲ್ಲಿ ಪುಲಿಕೇಶಿಯು, ತೀರ ದಕ್ಷಿಣದಲ್ಲಿ ಪಲ್ಲವರ ನರಸಿಂಹವರ್ಮ ಇವರೆಲ್ಲರೂ ಕ್ರಿ ಶ ೬೩೦ರ ಹೊತ್ತಿಗ ಆಳುತ್ತಿದ್ದರಷ್ಟೇ! ಆ ಮೇಲೆ ನಾಲ್ಕು ನೂರು ವರ್ಷಗಳ ವರೆಗೆ, ಭಾರತವು ಒಂದೇ ಅರಸೊತ್ತಿಗೆಯಲ್ಲಿ ಬರಲಿಲ್ಲ. ಯವನರು, ಕುಶಾನರು, ಶಕರು, ಹೂಣರು ಹೂಡಿದ ದಾಳಿಯ ಹಾವಳಿಯಿಂದ ಭಾರತೀಯರ ಒಕ್ಕಟ್ಟಿಗೆ ಧಕ್ಕೆ ತಗಲಿತ್ತು ಎಲ್ಲೆಡೆಯಲ್ಲಿ ನಿರಾಸೆ ಮುಸುಕಿ ಧೈರ್ಯಶೌರ್ಯಗಳು ಕುಗ್ಗಿಹೋಗಿದ್ದವು ಇಂಥ ಕಾಲದಲ್ಲಿಯೂ ಉತ್ತರದಲ್ಲಿ ರಜಪೂತ ರಾಜವಂಶದವರು ಮತ್ತು ದಕ್ಷಿಣದಲ್ಲಿ ಕನ್ನಡ ಅರಸು ಮನತನದವರಾದ ಚಾಲುಕ್ಯರು ಮತ್ತು ರಾಷ್ಟ್ರಕೂಟರು ಭಾರತಧರ್ಮವನ್ನು, ಭಾರತಶಕ್ತಿಯನ್ನು ಕಾಪಾಡುತ್ತ ಬಂದರು

**ರಜಪೂತರು** — ರಜಪೂತ ಎಂಬ ಶಬ್ದವು ರಾಜಪುತ್ರ ಎಂಬ ಶಬ್ದದ ಸರಲರೂಪವಾಗಿದೆ, ಆದರೆ, ಇದರ ವಿವರಗಳು ಸರಿಯಾಗಿ ಗೊತ್ತಾಗಿಲ್ಲ ಇವರಲ್ಲಿ ಭಿನ್ಮಾಳದ ಪ್ರತೀಹಾರರು, ದಿಲ್ಲಿಯ ತೋಮರರು, ಮಾಳವೆಯ ಪರಮಾರರು, ಬುಂದೇಲಖಂಡದ ಚಂದೇಲರು, ಅಜಮೀರದ ಚವ್ಹಾಣರು ಮತ್ತು ಗುಜರಾಥದ ಚಾಲುಕ್ಯರು ಇವರೇ ಮುಖ್ಯರು

**ಭಿನ್ಮಾಳದ ಪ್ರತೀಹಾರರು** — ಕ್ರಿ ಶ (೭೨೫–೧೦೨೮) ಪ್ರತೀಹಾರರೆಂದರೆ, ಬಾಗಿಲ ಕಾಯುವವರು ಇವರು ಶ್ರೀ ರಾಮನ ತಮ್ಮನಾದ ಲಕ್ಷ್ಮಣನ

ವಂಶದವರೆಂದು ಹೇಳಿಕೊಳ್ಳುತ್ತಾರೆ ಭಿನ್ಮಾಳ ಮತ್ತು ಕನೋಜ ಇವೆರಡೂ ಕಡೆಗಳಲ್ಲಿ ಪ್ರಾನವಾಗಿದ್ದರು ರೋಹಿಲಾದಿ ಎಂಬವನೇ ಈ ಸಂತತಿಯ ಮೂಲಪುರುಷ ಇವರ ಮನೆತನದಲ್ಲಿ ನಾಗಭಟ್ಟನೆಂಬ ಹೆಸರಾದ ಶೂರನು ಮೊದಲು ಜೋಧಪುರವನ್ನು ಗೆದ್ದನು, ತರುವಾಯ ಇಡಿಯ ಮಾರವಾಡ ವನ್ನೇ ತೆಗೆದುಕೊಂಡು, ಅದರ ಮುಂದೆ ಇರುವ ಸಿಂಧಪ್ರಾಂತದಿಂದ ಅರಬ ರನ್ನು ಓಡಿಸಿದನು ಈತನ ಮೊಮ್ಮಗನಾದ ವತ್ಸರಾಜನು ಅತಿ ಶೂರ ಮತ್ತು ಮಹತ್ತ್ವಾಕಾಂಕ್ಷಿ ಇದ್ದನು ಅವನು ಕನೋಜದ ಮೌಖರಿವಂಶದ ಇಂದ್ರಾ ಯುಧನೆಂಬ ಅರಸನನ್ನೂ, ಆತನ ನೆರವಿಗೆ ಬಂದ ಬಂಗಾಲದ ಪಾಲವಂಶದ ಗೋವಿಂದನನ್ನೂ ಸೋಲಿಸಿದನು ಇವನು ಓಡಿನಾದವರೆಗೆ ತನ್ನ ರಾಜ್ಯ ಹಬ್ಬಿಸಿದನು, ಆದರೆ, ಇವನನ್ನು ಕರ್ನಾಟಕದ ರಾಷ್ಟ್ರಕೂಟರ ಧ್ರುವರಾಜನು ಹಣ್ಣುಮಾಡಿದನು

ವತ್ಸರಾಜನ ತರುವಾಯ ಅವನ ಮಗ ೨ನೆಯ ನಾಗಭಟ್ಟನು ಕನೋಜ ವನ್ನು ರಾಜಧಾನಿಮಾಡಿಕೊಂಡು, ಹಿಮಾಲಯದಿಂದ ಸೌರಾಷ್ಟ್ರದವರೆಗೆ ತನ್ನ ರಾಜ್ಯ ಬೆಳೆಸಿದನು ಅವನ ನಂತರ ಕ್ರಿ ಶ ೮೦೫ರಲ್ಲಿ ಇವನ ಮೊಮ್ಮಗ ೧ನೆಯ ಭೋಜನು ಪಟ್ಟವೇರಿದನು

**೧ನೆಯ ಭೋಜ** – ೯ನೆಯ ಶತಮಾನದ ನಡುವಿನ ಕಾಲದಲ್ಲಿ, ಇವನ ಶೌರ್ಯದಿಂದ ಪ್ರತೀಹಾರರಾಜ್ಯವು ಪಂಜಾಬದಿಂದ ಬಂಗಾಲದವರೆಗೆ, ಹಿಮಾಲಯದಿಂದ ನರ್ಮದೆಯ ವರೆಗೆ ಬೆಳೆಯಿತು ಇವನ ಆಳಿಕೆ ವೈಭವ-ಶಾಲಿಯಾಗಿತ್ತು ಈ ದೊರೆಯು ಉತ್ತರದಲ್ಲಿ ರಜಪೂತರ ಆಳಿಕೆಯನ್ನು ಸ್ಥಿರಗೊಳಿಸಿದನು ಇವನ ಪ್ರಭಾವದಿಂದ ರಾಷ್ಟ್ರಕೂಟರ ಆಳಿಕೆಯ ಬೆಳಕು ಮಂದವಾಯಿತು ಇವರ ಮನೆತನದ ರಾಜ್ಯಪಾಲನು ಗಝನಿಯ ಮುಹಮ್ಮದ ನಿಗೆ ಹೆದರಿ ಗಂಗೆಯ ದಂಡೆಯಾಚೆಗೆ ಓಡಿಹೋದನಂತೆ, ಇಲ್ಲಿಗೆ ಅವರ ಆಳಿಕೆ ಮುಗಿಯಿತು.

**ಮಾಳವೆಯ ಪರಮಾರರು** – ಉಪೇಂದ್ರ ಅಥವಾ ಕೃಷ್ಣರಾಜ ಈ ವಂಶದ ಮೂಲಪುರುಷನು ಇವನ ರಾಜಧಾನಿಯು ಧಾರಾಪಟ್ಟಣ ಇವನ ತರುವಾಯ ೨ನೆಯ ವಾಕ್ಪತಿಯು ಸ್ವತಂತ್ರನಾದನು ಈತನಿಗೆ ಮುಂಜ-ರಾಜ ಎನ್ನುತ್ತಿದ್ದರು, ಕಲ್ಯಾಣದ ಚಾಲುಕ್ಯ ತೈಲಪನು ಮುಂಜನನ್ನು ಗೋದಾವರಿಯ ದಂಡೆಯಲ್ಲಾದ ಕಾಳಗದಲ್ಲಿ ಕೊಂದನು, ಆಮೇಲೆ, ಇವನ ಮೊಮ್ಮಗ ಪರಮಾರ ಭೋಜನು ತನ್ನ ರಾಜ್ಯ ವಿಸ್ತರಿಸಿದರೂ, ಅವನು ಯುದ್ಧಪ್ರಿಯನಲ್ಲ ಸ್ವತಃ ವಿದ್ವಾಂಸನೂ, ದೊಡ್ಡ ಕವಿಯೂ ಇದ್ದುದರಿಂದ, ಹಲವು ಕವಿಗಳಿಗೆ ಆಶ್ರಯಕೊಟ್ಟು, 'ಕವಿಕಲ್ಪದ್ರುಮ' ಎಂದು ಹೆಸರಾದನು.

ಇವನ ಆಸ್ಥಾನದಲ್ಲಿ ಮಾಘ, ಹಲಾಯುಧ, ಪದ್ಮಗುಪ್ತ, ಧನಂಜಯ ಮುಂತಾದ ಕವಿಗಳಿದ್ದರು ಧಾರಾನಗರದಲ್ಲಿ ವಿಶ್ವವಿದ್ಯಾಲಯವನ್ನು ಏರ್ಪಡಿಸಿದನು ಇವನು ಸ್ವತಃ ಯೋಗ, ಶಿಲ್ಪ, ವ್ಯಾಕರಣ, ಅಲಂಕಾರ, ಜ್ಯೋತಿಷ, ಸಾಹಿತ್ಯ ಈ ಶಾಸ್ತ್ರಗಳನ್ನು ಕುರಿತು ಗ್ರಂಥಗಳನ್ನು ಬರೆದನಂತೆ ಸಂಸ್ಕೃತ, ಪಾಲಿ, ಹಾಗೂ ಪ್ರಾಕೃತ ಭಾಷೆಗಳಿಗೆ ಇವನ ಆಳಿಕೆಯಲ್ಲಿ ಪ್ರೋತ್ಸಾಹನ ಸಿಕ್ಕಿತು

**ಗುಜರಾಥದ ಚಾಲುಕ್ಯರು** —(ಕ್ರಿ ಶ ೯೪೩-೧೨೪೧) ಈ ವಂಶದ ಮೂಲರಾಜನು ರಾಜ್ಯಕಟ್ಟಿದನು ಅನಹಿಲವಾಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು ಇವನ ರಾಜ್ಯದಲ್ಲಿಯೇ ಸೋಮನಾಥ ದೇವಾಲಯ, ಸುರತ ಮತ್ತು ಭಡೋಚ ಬಂದರಗಳಿದ್ದುವು ಈ ವಂಶದ ಭೀಮದೇವನ ಆಳಿಕೆಯಲ್ಲಿ ಗಝ್ನಿಮಹಮ್ಮದನು ಸೋಮನಾಥ ದೇವಾಲಯವನ್ನು ಹಾಳುಮಾಡಿದನು

**ದಿಲ್ಲಿಯ ತೋಮರರು** —ಈ ವಂಶದ ಮೂಲಪುರುಷ ಅನಂಗಪಾಲನು ದಿಲ್ಲಿಯನ್ನು ಇವನು ಕಟ್ಟಿಸಿ, ತನ್ನ ರಾಜಧಾನಿಯನ್ನು ಮಾಡಿಕೊಂಡನು ಇವನು ಸೌಂದರ್ಯಪ್ರಿಯನು ತನ್ನ ರಾಜಧಾನಿಯಲ್ಲಿ ಹತ್ತು ಹನ್ನೆರಡು ಸುಂದರ ದೇವಾಲಯಗಳನ್ನು ಕಟ್ಟಿಸಿದನು ಇವನ ಮೊಮ್ಮಗನಾದ ಅನಂಗಪಾಲನಿಗೆ ಗಂಡುಮಕ್ಕಳಿಲ್ಲದ್ದರಿಂದ, ತನ್ನ ಮಗಳನ್ನು ಅಜಮೀರದ ೨ನೆಯ ಪೃಥ್ವೀರಾಜನಿಗೆ ಕೊಟ್ಟು, ಅವನಿಗೆ ತನ್ನ ರಾಜ್ಯವನ್ನು ಬಳುವಳಿಯಾಗಿ ಕೊಟ್ಟನು

**ಅಜಮೀರದ ಚವ್ಹಾಣರು** —ಚವ್ಹಾಣರ ಇತಿಹಾಸವು ೯ನೆಯ ಶತಮಾನ ದಿಂದ ಸಿಕ್ಕುತ್ತದೆ ೧೧ನೆಯ ಶತಮಾನದಲ್ಲಿ **ಅಜಯದೇವನು** ಅಜಮೀರ ವನ್ನು ಕಟ್ಟಿಸಿ, ಅಲ್ಲಿಯೇ ತನ್ನ ಸಿಂಹಾಸನವನ್ನು ಸ್ಥಾಪಿಸಿದನು ಈ ಮನೆ ತನದ ವಿಗ್ರಹರಾಜನು ರಾಜ್ಯವನ್ನು ವಿಸ್ತರಿಸಿದನು ಈತನಲ್ಲಿ ಶೌರ್ಯ ಮತ್ತು ವಿದ್ಯಾಭಿರುಚಿ ಇವರಡೂ ಗುಣಗಳಿದ್ದುದರಿಂದ, ಅಜಮೀರದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಪ್ರಾರಂಭಿಸಿದನು ಮಹಮ್ಮದ ಘೋರಿ ಯೊಡನೆ ಯುದ್ಧಮಾಡಿದ ೨ನೇ ಪೃಥ್ವೀರಾಜನು ಈ ಮನೆತನದ ಕೊನೆಯ ಅರಸನು, ಮುಂದೆ, ಇವರ ಮನೆತನ ಮುಗ್ಗಿತು

**ಬುಂದೇಲಖಂಡದ ಚಂದೇಲರು** —(ಕ್ರಿ ಶ ೮೦೦) ಈ ಅರಸುಮನೆ ತನದ ಮೂಲಪುರುಷ ನಾನಕ ಚಂದೇಲನು ಪ್ರತೀಹಾರರ ಕೊನೆಯ ಕಾಲಕ್ಕೆ ಈತನು ಬುಂದೇಲಖಂಡದಲ್ಲಿ ಸ್ವತಂತ್ರನಾಗಿ ಆಳಹತ್ತಿದನು ಇವನ ತರುವಾಯ ಆಳಿದ ಢಂಗ ದೊರೆಯು ಖಾಜೂರಾಹೋ ಎಂಬಲ್ಲಿ

ಸುಂದರ ಮತ್ತು ಶಿಲ್ಪಕಲೆಯಿಂದ ಮೆರೆಯುವ ದೇವಾಲಯವನ್ನು ಕಟ್ಟಿಸಿರುವನು

ಈ ಮೇರೆಗೆ, ಬಂಗಾಲದ ಪಾಲರು, ನವದ್ವೀಪದ ಸೇನರು, ದಾಹಲದ ಚೇದಿಗಳು, ಕನೋಜದ ಗಢವಾಲರು, ಪೂರ್ವಬಂಗಾಲದ ಖಡ್ಗರು, ವಿಕ್ರಮಪುರದ ಚಂದ್ರರು, ಇವರೇ ಮುಂತಾದ ಸಣ್ಣ ಸಣ್ಣ ರಜಪೂತ ಅರಸುಮನೆತನದವರು ಆಳಿದರು

## ಅಭ್ಯಾಸನಗಳು

೧ ಭಾರತೀಯರಲ್ಲಿ ೭ನೆಯ ಶತಮಾನದನಂತರ ಸಂಕುಚಿತ ಮನೋಬಾವ ಉಂಟಾಗಲು ಕಾರಣಗಳೇನು?

೨ ಯಾವುದರಲ್ಲಿ ಆಡಂಬರ ಹೆಚ್ಚಾಯಿತು?

೩ ರಜಪೂತರಲ್ಲಿಯ ಗುಣದೋಷಗಳು ಯಾವುವು? ಅವುಗಳನ್ನು ಚರ್ಚಿಸಿ, ಅವುಗಳಿಂದ ದೇಶಕ್ಕೆ ಆದ ಅಪಾಯವೇನು? ಬರೆಯಿರಿ

೪ ಕೆಳಗ ಕೊಟ್ಟ ರಜಪೂತ ಅರಸರ ಮನೆತನಗಳನ್ನೂ ಅವುಗಳ ಸಂಸ್ಥಾಪಕರ ಹೆಸರುಗಳನ್ನೂ ಹೊಂದಿಸಿ, ಬೇರೆ ಬೇರೆ ವಾಕ್ಯಗಳಲ್ಲಿ ಬರೆಯಿರಿ
ಪರಮಾರ, ಪ್ರತೀಹಾರ, ರೋಹಿಲಾದಿ, ಉಪೇಂದ್ರ, ಚವ್ಹಾಣ, ಚಾಲುಕ್ಯ, ಮೂಲರಾಜ, ಅನಂಗಪಾಲ, ಅಜಯದೇವ, ತೋಮರ

# ೩ ಕನ್ನಡ ಅರಸೊತ್ತಿಗೆಗಳು

## ಚಾಲುಕ್ಯರು ಮತ್ತು ರಾಷ್ಟ್ರಕೂಟರು

**ಕನ್ನಡ ಕುಲ** —ಅತ್ತ, ಉತ್ತರದಲ್ಲಿ ರಜಪೂತ ರಾಜ್ಯಗಳು ಏಳು-ಬೀಳುಗಳನ್ನು ಅನುಭವಿಸುತ್ತಿರುವಾಗ, ಇತ್ತ, ದಕ್ಷಿಣಭಾರತದಲ್ಲಿ ಅನೇಕ ಕನ್ನಡ ರಾಜ್ಯಗಳು ಹುಟ್ಟಿ, ತಲೆ ಎತ್ತಿ ಬಾಳಿದುವು ಕನ್ನಡಕುಲವೆಂದರೆ, ಕನ್ನಡ ನುಡಿಯೇ ತಾಯ್ನುಡಿಯಾಗಿರುವ ಜನಾಂಗ ಈ ಕನ್ನಡಕುಲದ ಬಳ್ಳಿ ಕ್ರಿ ಪೂ ಎರಡು ಮೂರು ಸಾವಿರ ವರುಷಗಳಿಂದಲೂ, ನಡೆದುಬಂದುದು

**ಕನ್ನಡ ರಾಜ್ಯಗಳು** —ಬೌದ್ಧರ ಕಾಲದಲ್ಲಿ ಮೌರ್ಯರು ಕನ್ನಡ ನಾಡನ್ನಾಳುತ್ತಿದ್ದರು ಚಂದ್ರಗುಪ್ತನ ಕಾಲದಲ್ಲಿ ಶಾಲಿವಾಹನರು ಬನವಾಸಿ



ಬನವಾಸಿಯ ಮಧುಕೇಶ್ವರ ದೇವಾಲಯ

ಯನ್ನು ರಾಜಧಾನಿ ಮಾಡಿಕೊಂಡು ಅರಸೊತ್ತಿಗೆಯನ್ನು ನಡೆಸುತ್ತಿದ್ದರೆಂದು "ಪ್ಲಿನಿ" ಎಂಬ ಪಾಶ್ಚಾತ್ಯ ಪ್ರವಾಸಿಯು ಬರೆದಿದ್ದಾನೆ ಕ್ರಿ ಶ ೧೫೦ರ ಒಂದು ಬರೆಹದಲ್ಲಿ 'ಟಾಲೆಮಿ, ಎಂಬ ಇಜಿಪ್ತ ಪ್ರವಾಸಿಯು **ಬಾದಾಮಿ, ಇಂಡಿ, ಆನೇಗೊಂದಿ, ಬನವಾಸಿ, ಮುದಗಲ್ಲು,** ಕಲಕೇರಿ ಮೊದಲಾದ ಊರುಗಳ ಹಾಗೂ **ಹೊನ್ನಾವರ,** ಮಿರ್ಜಾನ ಮುಂತಾದ ಪ್ರಸಿದ್ಧ ಬಂದರಗಳ ಹೆಸರು

ಗಳನ್ನೂ ಕಾಣಿಸಿರುವನು ಆಗ, ಇಲ್ಲೆಲ್ಲ ಸುವ್ಯವಸ್ಥಿತವಾದ ಆಡಳಿತ ಇದ್ದಿತು, ಅಲ್ಲಿಂದ ಮುಂದೆ, **ಮಯೂರವರ್ಮನ ಕದಂಬವಂಶದ** ಇತಿಹಾಸ ಸಿಕ್ಕುತ್ತದೆ, ಅನಂತರ ಗಂಗ ಅರಸರ ರಾಚಮಲ್ಲನ ಕಾಲದಲ್ಲಿ ಶ್ರೇಷ್ಠ ಮಂತ್ರಿಯಾಗಿದ್ದ ಚಾವುಂಡ ರಾಯನು ಕ್ರಿ ಶ ೯೮೩ರಲ್ಲಿ ಸ್ಥಾಪಿಸಿದ **ಶ್ರವಣ ಬೆಳುಗೊಳದ ಗೋಮಟೇಶ್ವರನ** ದಿವ್ಯಮೂರ್ತಿಯು ಈಗಲೂ ಕನ್ನಡದ ಕೀರ್ತಿಧ್ವಜವನ್ನು ಎತ್ತಿ ನಿಲ್ಲಿಸಿದಂತೆ ಅಚ್ಚಳಿಯದ ನಿಂತಿದೆ ತರುವಾಯ ಬಾದಾಮಿಯ ಚಾಲುಕ್ಯರ ವಂಶ ಒರುತ್ತದ


ಶ್ರವಣಬೆಳುಗೊಳದ
ಗೋಮಟೇಶ್ವರ ಮೂರ್ತಿ

**ಚಾಲುಕ್ಯರು** —(ಕ್ರಿ ಶ ೫೫೦ರಿಂದ ೭೫೭) ಬಾದಾಮಿಯ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಗುಜರಾಥದ ಚಾಲುಕ್ಯರು ಹೀಗ ಮೂರು ಸಂದರ್ಭಗಳಲ್ಲಿ ಚಾಲುಕ್ಯರ ಹೆಸರು ಬರುತ್ತದ ಗುಜರಾಥ ಚಾಲುಕ್ಯರ ಬಗಗೆ ರಜಪೂತ ರಾಜಮನೆತನಗಳಲ್ಲಿಯೇ ಹೇಳಲಾಗಿದೆ ಇವರು ಬೇರೆ, ಮತ್ತು ಕನ್ನಡಿಗರ ಕೀರ್ತಿಪತಾಕೆಯನ್ನೆತ್ತಿ ಮೆರೆಯಿಸಿದ ಚಾಲುಕ್ಯರು ಬೇರೆ, ಮುಂದೆ, ಬಾದಾಮಿಯ ಚಾಲುಕ್ಯರ ಅವನತಿಯ ಕಾಲದಲ್ಲಿ ರಾಷ್ಟ್ರಕೂಟರು ಅವರನ್ನು ಸೋಲಿಸಿ ದೊಡ್ಡ ರಾಜ್ಯವನ್ನು ಕಟ್ಟಿದರು ಈ ರಾಷ್ಟ್ರಕೂಟರ ರಾಜ್ಯವು ನಾಶವಾದ ಒಳಿಕ ಬಾದಾಮಿಯ ಚಾಲುಕ್ಯರು ಮತ್ತ ತಲೆಯೆತ್ತಿ ರಾಜ್ಯವನ್ನು ಬಳಿಸಿದರಲ್ಲದ, ತಮ್ಮ ರಾಜಧಾನಿಯನ್ನು ಕಲ್ಯಾಣಕ್ಕೆ ಒಯ್ದರು ಇವರೇ ಕಲ್ಯಾಣದ ಚಾಲುಕ್ಯರೆಂದು ಹೆಸರಾಗಿದ್ದಾರೆ

**ಬಾದಾಮಿಯ ಚಾಲುಕ್ಯರು** — ಈ ಮನೆತನದ ಮೂಲಪುರುಷನ ಹೆಸರು ಜಯಸಿಂಹ. ಇವನೇ ಮೊದಲು ಕರ್ನಾಟಕಕ್ಕೆ ಒಂದವನು ಕರ್ನಾಟಕಕ್ಕೆ ಬರುವ ಮೊದಲು ಜಯಸಿಂಹನು ಅಯೋಧ್ಯೆಯಲ್ಲಿದ್ದನು ಅಲ್ಲಿಂದಲೇ ದಂಡುಕಟ್ಟಿಕೊಂಡು ನರ್ಮದಾ ಹೊಳೆಯ ದಕ್ಷಿಣದಲ್ಲಿದ್ದ ರಾಷ್ಟ್ರಕೂಟರ ಇಂದ್ರನೆಂಬ ಚಿಕ್ಕ ಅರಸನನ್ನು ಸೋಲಿಸಿ, ದಕ್ಷಿಣಕ್ಕಲ್ಲ ದೊರೆಯಾಗಿದ್ದ ಪಲ್ಲವರೊಡನೆ ಕಾಳಗ ನಡೆಸಿ, ಅದರಲ್ಲಿಯೇ ಮಡಿದನು ಆ ಕಾಲಕ್ಕೆ ಅವನ ಹೆಂಡತಿ ದಿನ ತುಂಬಿದವಳು, ಆಕೆಯ ಕನಿಕರದ ಸ್ಥಿತಿಯನ್ನು ನೋಡಿ, ಸೋಮಯಾಜಿ ಎಂಬ ಬ್ರಾಹ್ಮಣನು ತನ್ನ ಮನೆಗ ಕರೆದೊಯ್ದು ಮಗಳಂತೆ ಸಾಕಿ ಸಲುಹಿದನು. ಆಕೆಯ ಹೊಟ್ಟೆಯಿಂದ ಗಂಡು-

ಮಗು ಹುಟ್ಟಿತು ರಾಜಸಿಂಹ ಎಂದು ಹೆಸರಿಟ್ಟಳು ರಾಜಸಿಂಹನು ದೊಡ್ಡವನಾದನು ತಾಯಿಯ ಆಜ್ಞೆಯಂತೆ ತಾನು ಬಲವಾದ ದಂಡು ಸಿದ್ಧಪಡಿಸಿಕೊಂಡು, ಪಲ್ಲವರೊಡನೆ ಹೋರಾಡಿ ಅವರನ್ನು ಸೋಲಿಸಿ, ಅವರ ಮಗಳನ್ನು ಮದುವೆಯಾದನು ಈ ರಾಜಸಿಂಹನ ಮಗನೇ **೧ನೆಯ ಪುಲಿಕೇಶಿ** ರಾಜಸಿಂಹನು ತನ್ನ ರಾಜಧಾನಿಯನ್ನು ಆಗ ಹೈದರಾಬಾದ ರಾಜ್ಯದಲ್ಲಿರುವ ಅಜಂತೆಯನ್ನೇ ಮಾಡಿಕೊಂಡಿದ್ದನು ಅವನ ತರುವಾಯ ೧ನೆಯ ಪುಲಿಕೇಶಿಯಾದರೂ ತಂದೆಗಿಂತ ಒಂದು ತೂಕಹೆಚ್ಚು ಶೂರನಿದ್ದುದರಿಂದ, ಬಾದಾಮಿಯ ಸುತ್ತಲಿನ ದೇಶವನ್ನು ಗೆದ್ದುಕೊಂಡು, ಬಾದಾಮಿಯನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡನು ಅಶ್ವಮೇಧ ಯಜ್ಞವನ್ನು ಮಾಡಿ ಸಾರ್ವಭೌಮನಾದನು ಈತನ ಮುಂದೆ, ಕೀರ್ತಿವರ್ಮ ಮತ್ತು ಮಂಗಳೇಶ ರಾಜ್ಯವಾಳಿದರು ಮಂಗಳೇಶನು ಬಾದಾಮಿಯ ಗುಡ್ಡದೊಳಗೆ ದೊಡ್ಡ ದೊಡ್ಡ ವೈಷ್ಣವ ಗುಡಿಗಳನ್ನು ಕೊರೆಯಿಸಿದನು ಇಂದಿಗೂ ಅವು ಕನ್ನಡಿಗರ ಕಲಾಕೃತಿಗೆ ಸಾಕ್ಷಿಯಾಗಿವೆ

**೨ನೆಯ ಪುಲಿಕೇಶಿ**—ಕಕ್ಕ ಮಂಗಳೇಶನು ತೀರಿಕೊಂಡ ಬಳಿಕ ಕೀರ್ತಿವರ್ಮನ ಮಗನಾದ ೨ನೆಯ ಪುಲಿಕೇಶಿಯು ತನ್ನ ಕೈಗೆ ರಾಜ್ಯಸೂತ್ರಗಳನ್ನು ತೆಗೆದುಕೊಂಡು, ಕನ್ನಡ ನಾಡಿನಲ್ಲಿರುವ ಗಂಗ, ಕದಂಬ ರಾಷ್ಟ್ರಕೂಟರನ್ನು ಸೋಲಿಸಿ, ದಕ್ಷಿಣದಲ್ಲಿ ಆಳುತ್ತಿರುವ ಪಲ್ಲವ, ಕಲಿಂಗ, ಚೋಳ, ಕೇರಳ ರಾಜರನ್ನು ಹತ್ತಿಕ್ಕಿ, ಉತ್ತರದಲ್ಲಿರುವ ಗುರ್ಜರ, ಲಾಟ, ಮಾಳವ, ಕೋಸಲರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡನು, ಇಷ್ಟಕ್ಕೆ ನಿಲ್ಲದೆ ಉತ್ತರ ಭಾರತದಲ್ಲೆಲ್ಲ ಮೆರೆಯುತ್ತಿದ್ದ ಹರ್ಷರಾಜನನ್ನು ನರ್ಮದೆಯ ದಂಡೆಯಲ್ಲಿ ಸೋಲಿಸಿ 'ಪರಮೇಶ್ವರ ಪೃಥ್ವೀವಲ್ಲಭ' ಮುಂತಾದ ಬಿರುದುಗಳನ್ನು ಧರಿಸಿ, ಸಮ್ರಾಟನೆನಿಸಿಕೊಂಡನು ಇವನೇ ತನ್ನ ಆಳಿಕೆಯಲ್ಲಿ ತನ್ನ ಹಿರಿಯರ ಮುಂಚಿನ ರಾಜಧಾನಿಯಾಗಿದ್ದ ಅಜಂತೆಯಲ್ಲಿಯ ಗುಡ್ಡವನ್ನು ಕೊರೆಯಿಸಿ, ಅವುಗಳಲ್ಲಿ ತರತರದ ಚಿತ್ರಗಳನ್ನು ಬರೆಯಿಸಿ, ಆಗಿನ ಜನಜೀವನವನ್ನು ನಮ್ಮ ಕಣ್ಮುಂದೆ ಇಟ್ಟಿರುವನು ಅವು ಇಂದಿಗೂ ಅಚ್ಚಳಿಯದೆ ಉಳಿದಿರುವುವು ಇವನ ಆಳಿಕೆಯೆಂದರೆ, ಕರ್ನಾಟಕಕ್ಕೆ ಭಾಗ್ಯಕಾಲ ಇವನ ಕೀರ್ತಿಯನ್ನು ಕೇಳಿ, ಇರಾಣದ ಬಾದಶಹನಾದ ಖುಸ್ರು ಎಂಬವನು ತನ್ನ ಒಬ್ಬ ರಾಯಭಾರಿಯನ್ನು ಕರ್ನಾಟಕಕ್ಕೆ ಕಳಿಸಿದ್ದನು ಈತನ ಆಳಿಕೆಯಲ್ಲಿ ಕರ್ನಾಟಕಕ್ಕೆ ಬಂದ ಚೀನದ ಪ್ರವಾಸಿ ಹುಯೆನ್‌ತ್ಸಾಂಗನು (ಯುವಾನ-ಚ್ವಾಂಗ) ಕರ್ನಾಟಕದ ಜನರ ಗುಣ-ಶೀಲ-ಸಂಪತ್ತಿಗಳನ್ನೇ ಕುರಿತು ಬಾಯಿತುಂಬ ಹೊಗಳಿದ್ದಾನ

**೧ನೆಯ ವಿಕ್ರಮಾದಿತ್ಯ**—ಇವನು ೨ನೆಯ ಪುಲಿಕೇಶಿಯ ಮಗನು ಪುಲಿಕೇಶಿಯು ಅಸ್ವಸ್ಥನಾಗಿರುವಾಗ ಪಲ್ಲವರ ನರಸಿಂಹವರ್ಮನು ಬಾದಾಮಿಯ ಮೇಲೆ ದಂಡೆತ್ತಿ ಬಂದು ಸುಲಿದನು ಆಗ, ಮಕ್ಕಳು ಅವನ ಹತ್ತಿರ ಇರಲಿಲ್ಲ, ಮುಂದೆ ತಂದೆಯನ್ನು ಮುಪ್ಪಿನ ಕಾಲದಲ್ಲಿ ಕಷ್ಟಕ್ಕೆ ಗುರಿಮಾಡಿದ ಪಲ್ಲವರ ಸೇಡು ತೀರಿಸಿಕೊಳ್ಳಬೇಕೆಂದು, ವಿಕ್ರಮಾದಿತ್ಯನು ಕಂಚಿಯನ್ನು ಮುತ್ತಿ ಪಲ್ಲವರನ್ನು ಹಣ್ಣುಗೊಳಿಸಿದನು, ಆದರೆ, ಈತನು ಬಹು ದಯಾಳುವಾದುದರಿಂದ, ಅಲ್ಲಿಯ ಜನರಿಗೆಲ್ಲ ಬೇಕಾದಷ್ಟು ದಾನ-ಧರ್ಮ ಮಾಡಿ, ದಕ್ಷಿಣ ಮಹಾಸಾಗರದ ದಂಡೆಯ ಮೇಲೆ ತನ್ನ ಜಯಸ್ತಂಭವನ್ನು ನಿಲ್ಲಿಸಿ ಬಂದನು ಈ ಗೆಲವಿನ ನೆನಪಿಗಾಗಿ, ಈತನ ರಾಣಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರು ಪಟ್ಟದಕಲ್ಲಿನಲ್ಲಿ ಲೋಕೇಶ್ವರ ತ್ರೈಲೋಕೇಶ್ವರ ಎಂಬ ಎರಡು ಶಿವಾಲಯಗಳನ್ನು ಕಟ್ಟಿಸಿದರು

**ಅಳಿಗಾಲ**—ಮುಂದೆ, ನಾಲ್ಕೈದು ತಲೆಗಳ ನಂತರ, ೨ನಯ ಕೀರ್ತಿವರ್ಮನ ಆಳಿಕೆಯಲ್ಲಿ ರಾಷ್ಟ್ರಕೂಟರು ಇವರ ರಾಜ್ಯವನ್ನು ಸೆಳೆದುಕೊಂಡರು

## ರಾಷ್ಟ್ರಕೂಟರು

### (ಕ್ರಿ ಶ ೭೫೭ರಿಂದ ೯೭೩)

**ಮಯೂರಖಂಡದ ಮಾಂಡಲಿಕರು** – ರಾಷ್ಟ್ರಕೂಟರು ಮೂಲತಃ ಎಲ್ಲಿಂದ ಬಂದರೆಂಬುದನ್ನು ಹೇಳಲು ಸಬಲ ಆಧಾರಗಳಿಲ್ಲ, ಆದರ ಇವರು ನಾಶಿಕಜಿಲ್ಹೆಯ **ಮಯೂರಖಂಡ** ಎಂಬಲ್ಲಿ ರಾಜಧಾನಿಯನ್ನು ಮಾಡಿಕೊಂಡು ಚಿಕ್ಕ ರಾಜ್ಯವನ್ನು ಆಳುತ್ತಿದ್ದರು ಈ ವಂಶದ ಇಂದ್ರನೆಂಬ ರಾಜನನ್ನು, ಅಯೋಧ್ಯೆಯಿಂದ ಬಂದ ಚಾಲುಕ್ಯವಂಶದ ಜಯಸಿಂಹನು ಸೋಲಿಸಿ, ಹಾಗೆಯೇ ದಕ್ಷಿಣಕ್ಕೆ ಸಾಗಿದನು ಈ ಜಯಸಿಂಹನೇ ಬಾದಾಮಿಯ ಚಾಲುಕ್ಯವಂಶದ ಮೂಲಪುರುಷನಷ್ಟೆ? ಮುಂದ ರಾಷ್ಟ್ರಕೂಟರು ಚಾಲುಕ್ಯರ ಮಾಂಡಲಿಕರಾಗಿ ರಾಜ್ಯವಾಳಹತ್ತಿದ್ದರು ಆದರೆ ತಮ್ಮ ಮೊದಲಿನ ಸೋಲಿನ ಸೇಡು ತೀರಿಸಿಕೊಂಡು, ಚಾಲುಕ್ಯರಿಂದ ತಮ್ಮ ರಾಜ್ಯವನ್ನು ಮರಳಿ ಪಡೆಯಲು ಹೊಂಚುಹಾಕುತ್ತಿದ್ದರು ಅದಕ್ಕ ಮುಂದ ಯೋಗ್ಯಸಮಯವೂ ಒದಗಿತು

**ಸ್ವತಂತ್ರ ರಾಜ್ಯಸ್ಥಾಪನೆ**—ಕ್ರಿ ಶ ೭೫೭ರಲ್ಲಿ ಬಾದಾಮಿಯಲ್ಲಿ ಆಳುತ್ತಿದ್ದ ೨ನೆಯ ಕೀರ್ತಿವರ್ಮ ಚಾಲುಕ್ಯನು ಶೂರನಾಗಿರಲಿಲ್ಲ ಆತನ ರಾಜ್ಯದಾಡಳಿತವೂ ಶಿಥಿಲವಾಗಿತ್ತು ಆಗ ಮಯೂರಖಂಡದಲ್ಲಿ ಚಾಲುಕ್ಯರ

ಮಾಂಡಲಿಕನಾದ, ರಾಷ್ಟ್ರಕೂಟರ ೨ನೆಯ ದಂತಿವರ್ಮನು (ಇವನಿಗೇ ದಂತಿದುರ್ಗನೆಂದೂ ಹೆಸರು) ಕೀರ್ತಿವರ್ಮನನ್ನು ಸೋಲಿಸಿ, ಸ್ವತಂತ್ರವಾದ ರಾಷ್ಟ್ರಕೂಟರ ರಾಜ್ಯವನ್ನು ಸ್ಥಾಪಿಸಿದನು ಇವನು ನಾಲ್ಕೈದು ವರುಷ ಮಾತ್ರ ರಾಜ್ಯವಾಳಿದರೂ ಅಷ್ಟರಲ್ಲಿಯೇ ಪಲ್ಲವ, ಕಳಿಂಗ, ಮಾಳವ, ಲಾಟ, ಕೋಸಲ ಮುಂತಾದ ಪ್ರದೇಶಗಳನ್ನು ಗೆದ್ದು "ಕತ್ತಿಯಬಂಟ"ಎಂದು ಬಿರುದು ಪಡೆದನು

**೧ನೆಯ ಕೃಷ್ಣರಾಜ** – ದಂತಿದುರ್ಗನ ತರುವಾಯ, ಆತನ ಚಿಕ್ಕಪ್ಪನಾದ ೧ನೆಯ ಕೃಷ್ಣರಾಜನೇ ಪಟ್ಟಕ್ಕೆ ಕುಳಿತನು ಈತನು ಶೂರನೂ, ಶಿಲ್ಪ-ಕಲಾ ಪ್ರಿಯನೂ ಆಗಿದ್ದನು ದೌಲತ್ತಾಬಾದ (ದೇವಗಿರಿ) ದಿಂದ ೧೪ ಮೈಲುಗಳ ಅಂತರದ ಮೇಲೆ ಇರುವ **ವೇರೂಳ** (ವೇಳೂರು) ಎಂಬ ಊರ ಹತ್ತಿರದ ಅಖಂಡವಾದ ಬಂಡೆ-ಗಲ್ಲಿನಲ್ಲಿ ಅತ್ಯಂತ ಮನೋಹರವಾದ **ಕೈಲಾಸ** ದೇವಾಲಯವನ್ನು **ವಿಶ್ವಕರ್ಮ** ಎಂಬ ಶಿಲ್ಪಿಯಿಂದ ಮಾಡಿಸಿದನಂತೆ ಒಂದೇ ಒಂದು ಬಂಡೆಯಲ್ಲಿ ಕೊರೆಯಲ್ಪಟ್ಟ, ೧೬೦ ಅಡಿ ಉದ್ದ, ೫೦ ಅಡಿ ಅಗಲ ೯೬ ಅಡಿ ಎತ್ತರದ ಕಲ್ಲೇಶ್ವರ ದೇವಾಲಯವು ಕನ್ನಡ ಶಿಲ್ಪಿಗಳಿಂದ ಬಹು ಸುಂದರವಾಗಿ ನಿರ್ಮಿತವಾಗಿದೆ



ವೇರೂಳದ ದೇವಾಲಯದ ಮುಂಭಾಗ

**ವೀರ ಗೋವಿಂದ** – ಕೃಷ್ಣರಾಜನ ತರುವಾಯ ಆತನ ಮಗ ಧ್ರುವನು ಪಟ್ಟವೇರಿದನು ಅವನನಂತರ ೩ನೆಯ ಗೋವಿಂದನು ಅರಸನಾದನು ಈತನೇ ವೀರಗೋವಿಂದ ಈತನು ಮಾಳವ, ಗುರ್ಜರ, ಕೇರಳ ಮುಂತಾದ ೧೦ ಜನ ರಾಜರನ್ನು ಬಗ್ಗುಬಡಿದನು ಬಂಗಾಲದ ಧರ್ಮಪಾಲನನ್ನು ಮಾಂಡಲಿಕನನ್ನು ಮಾಡಿಕೊಂಡನು ಪಶ್ಚಿಮದಿಂದ ಪೂರ್ವಸಮುದ್ರದ ವರೆಗ, ಮಾಳವೆಯಿಂದ ಕಂಚಿಯವರೆಗೆ ಈತನ ರಾಜ್ಯವು ಹಬ್ಬಿತ್ತು ಈತನು ಸಾಹಸಿ, ಉಪಕಾರಿ ಹಾಗೂ ದೈವಶಾಲಿ ಆಗಿದ್ದನು ಇವನ ಮಗ ನೃಪತುಂಗ

**ನೃಪತುಂಗ** —(ಕ್ರಿ ಶ ೮೧೪—೮೭೭) ತರುವಾಯ **ನೃಪತುಂಗನು** ಪಟ್ಟವೇರಿದನು. ಈತನಿಗೆ **ಅಮೋಘವರ್ಷ** ಎಂಬ ಬಿರುದಿದ್ದಂತೆ ತಿಳಿಯುತ್ತದೆ ಈ ದೊರೆಯು ತನ್ನ ತಂದೆಯ ಅಪೇಕ್ಷೆಯನ್ನು ಪೂರ್ಣಗೊಳಿಸಲು ಮಳಖೇಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಅಲ್ಲಿ ರಾಜಬೀದಿ, ಧರ್ಮಶಾಲೆ, ಸಂತೆಯ ಸಾಲು, ಉಪವನ, ಅಗ್ರಹಾರ, ದೇವಾಲಯಗಳನ್ನು ಕಟ್ಟಿಸಿ, ಇಂದ್ರನ ಅಮರಾವತಿಯ ವೈಭವವನ್ನೇ ಇಳಿಸಿದ್ದನಂತೆ! ತನ್ನ ವಿಶಾಲವಾದ ರಾಜ್ಯದಲ್ಲಿ **ಕೊಂಕಣ, ಮಂತ್ರವಾಡಿ, ಬನವಸೆ, ಕುಂದರಿಗೆ, ಪುಲಿಗೆರೆ** ಮುಂತಾದ ಮಂಡಲಗಳನ್ನು ಮಾಡಿ, ಅವುಗಳ ಮೇಲ್ವಿಚಾರಣೆಗೆ ಮಂಡಲಾಧಿಪರನ್ನು ನಿಯಮಿಸಿದ್ದನು ಈತನಿಗೆ ಅತಿಶಯಧವಳ, ನೀತಿನಿರಂತರ, ಕೃತಕೃತ್ಯ, ಮಲ್ಲವಲ್ಲಭ ಮುಂತಾದ ಬಿರುದುಗಳಿದ್ದುವು ಕೊನೆಗಾಲದಲ್ಲಿ ತನ್ನ ಮಗನಾದ ಕೃಷ್ಣನಿಗೆ ರಾಜ್ಯವನ್ನೊಪ್ಪಿಸಿ ಪರಮಾರ್ಥದಲ್ಲಿ ಕಾಲಕಳೆಯ ತೊಡಗಿದನು

ನೃಪತುಂಗ ದೊರೆಯು ಶಕ್ತಿಯಲ್ಲಿ ಅಪೂರ್ವನಾಗಿರುವಂತೆ, ಸಾಹಿತ್ಯದಲ್ಲಿಯೂ ಅದ್ವಿತೀಯನಾಗಿದ್ದನು ಉತ್ತರ ಪುರಾಣ, ಪಾರ್ಶ್ವ ಅಭ್ಯುದಯ, ಜಯಧವಲ ಮುಂತಾದ ಮಹಾಕಾವ್ಯಗಳು ಈತನ ಪ್ರೇರಣೆಯಿಂದಲೇ ಹುಟ್ಟಿದುವು ಸ್ವತಃ ಈ ರಾಜಕವಿಯು **'ಕವಿರಾಜಮಾರ್ಗ'** ಎಂಬ ಲಕ್ಷಣ ಗ್ರಂಥವನ್ನು ಕನ್ನಡದಲ್ಲಿ ಬರೆದು, ಕನ್ನಡಕ್ಕೆ ಮಹದುಪಕಾರ ಮಾಡಿದ್ದಾನೆ ಈಗ ಸಿಕ್ಕುತ್ತಿರುವ ಕನ್ನಡ ಗ್ರಂಥಗಳಲ್ಲಿ ಇದೇ ಮೊದಲನೆಯದಾಗಿದೆಯೆಂದು ತಿಳಿಯುತ್ತದೆ ಇದರಲ್ಲಿ **ಕಾವೇರಿಯಿಂದ ಗೋದಾವರಿಯ** ವರೆಗಿದ್ದ ಕನ್ನಡದ ಸೀಮೆಯೂ, ತಿರುಳುಗನ್ನಡ ನಾಡೂ, ಕನ್ನಡಿಗರ ವಿದ್ಯಾವೈಭವಗಳೂ ಚೆನ್ನಾಗಿ ವರ್ಣಿತವಾಗಿವೆ ಈತನ ಆಸ್ಥಾನಕ್ಕೆ ಬಂದಿದ್ದ ಸುಲೇಮಾನಾ ಎಂಬ ವರ್ತಕನು, "ಜಗತ್ತಿನಲ್ಲಿ ಇಂದು ಅಮೋಘವರ್ಷನಿಗೆ ಸರಿತೂಗುವಂಥ ಮಹಾರಾಜರು ಮೂವರು ಮಾತ್ರ, ಬಗದಾದದ ಖಲೀಫ, ಚೀನದ ಚಕ್ರವರ್ತಿ ಹಾಗೂ ಕಾನ್‌ಸ್ಟಾಂಟಿನೋಪಲಿನ ರೂಮಿ ಚಕ್ರವರ್ತಿ" ಎಂದು ಬರೆದಿದ್ದಾನೆ

**ಮುಮ್ಮಡಿಕೃಷ್ಣ** —ನೃಪತುಂಗನ ತರುವಾಯ ನಾಲ್ಕೈದು ಮಂದಿ ಅರಸರು ಮಳಖೇಡದಲ್ಲಿ ಆಳಿದರು ಅವರಲ್ಲಿ ಕಡೆಯವನಾದ **ಮುಮ್ಮಡಿ ಕೃಷ್ಣನೇ** ಶ್ರೇಷ್ಠನು. ಈತನು ದಕ್ಷಿಣದ ಅರಸರನ್ನೆಲ್ಲ ಗೆದ್ದು, ಸಿಂಹಲ-ದ್ವೀಪಕ್ಕೆ ನುಗ್ಗಿದನು ಅಲ್ಲಿಯ ಅರಸನು ಇವನಿಗ ಅಂಕಿತನಾದನು ತಿರುಗಿ ಬರುವಾಗ, ರಾಮೇಶ್ವರದ ಹತ್ತಿರ ತನ್ನ ಜಯಸ್ತಂಭವನ್ನು ನಿಲ್ಲಿಸಿ ತಿರುಗಿ ಬಂದನು ಆಮೇಲೆ ಗುರ್ಜರರನ್ನು ಸೋಲಿಸಿದನು ಈತನ ರಾಜ್ಯವು

ಬುಂದೇಲಖಂಡದಿಂದ ತಂಜಾವರದವರೆಗೆ ಹಬ್ಬಿತ್ತು ಈತನು ವಿದ್ಯಾಪಕ್ಷಪಾತಿಯು **ಪೊನ್ನ** ಎಂಬ ಕವಿಯನ್ನು ತನ್ನ ಓಲಗಕ್ಕೆ ಕರೆಯಿಸಿಕೊಂಡು ಅವನಿಗೆ "ಕವಿಚಕ್ರವರ್ತಿ" ಎಂಬ ಬಿರುದನ್ನು ಕೊಟ್ಟು, ಕಾಣಿಕೆಗಳಿಂದ ಮರ್ಯಾದೆ ಮಾಡಿದನು ವಿಜಾಪುರ ಜಿಲ್ಲೆಯ **ಸಾಲೊಟಗಿ** ಎಂಬಲ್ಲಿ **ವಿಶ್ವವಿದ್ಯಾಲಯ**ವನ್ನು ಕಟ್ಟಿಸಿ, ಅಲ್ಲಿ ಸಂಸ್ಕೃತ ಕಲಿಯುವವರಿಗೆ ಊಟ ಉಡಿಗೆಯ ವ್ಯವಸ್ಥೆಯನ್ನು ಇಟ್ಟಿದ್ದನು ಜಗತ್ತಿನಲ್ಲಿ ಆಳುವ ಅರಸರಲ್ಲಿ ರಾಷ್ಟ್ರಕೂಟರ ಹೆಸರು ಮುಖ್ಯವಾಗಿತ್ತು

**ರಾಷ್ಟ್ರಕೂಟರ ಅಳಿಗಾಲ** — ಮುಂದೆ ವೀರರು ಹುಟ್ಟಲಿಲ್ಲ ಇವರ ಬಹುಕಾಲದ ವೈರಿಗಳಾದ ಮಾಳವೆಯ ಅರಸರಲ್ಲಿ ಮುಂಜರಾಜನು ಮಳಖೇಡಕ್ಕೆ ಮುತ್ತಿಗೆಹಾಕಿ, ಕೊಲೆಸುಲಿಗೆಮಾಡಿ ಮಳಖೇಡವನ್ನು ಪೂರ್ಣ ಹಾಳುಗೆಡವಿದನು

## ಕಲ್ಯಾಣದ ಚಾಲುಕ್ಯರು

### (ಕ್ರಿ ವ ೯೭೩ರಿಂದ ೧೧೮೯ರ ವರೆಗೆ)

**ಬಾದಾಮಿಯ ತೈಲಪ** — ಮಳಖೇಡದಲ್ಲಿ ಮುಂಜನು ಮಾಡಿದ ಸುಲಿಗೆಯ ಸುದ್ದಿಯನ್ನು ಕೇಳಿ, ಆಗ ಬಾದಾಮಿಯಲ್ಲಿ ಆಳುತ್ತಿದ್ದ ಚಾಲುಕ್ಯ ತೈಲಪನು ತಪ್ತನಾಗಿ ತನ್ನ ದಂಡನ್ನೆಲ್ಲ ಕೂಡಿಸಿಕೊಂಡು, ಮುಂಜನನ್ನು ಬೆನ್ನಟ್ಟಿದನು ಅವನು ಒಯ್ಯುತ್ತಿದ್ದ ಎಲ್ಲ ಸಂಪತ್ತಿಯನ್ನು ಕಸಿದುಕೊಂಡು ತಿರುಗಿ ಮಳಖೇಡಕ್ಕೆ ಬಂದನು ಆಗತಾನೇ ರಾಜನಾಗಿದ್ದ ಕಕ್ಕಲನನ್ನು ಸೋಲಿಸಿ, ಅವನ ಮಗಳಾದ ಜಾಕವ್ವೆಯನ್ನು ಮದುವೆಯಾದನು, ಮುಂದೆ ಸವದತ್ತಿಯ ರಟ್ಟರನ್ನೂ, ಕೊಂಕಣದ ಶಿಲಾಹಾರರನ್ನೂ, ಗುಜರಾಥ, ಮಾಳವ, ನೇಪಾಳ ರಾಜ್ಯಗಳ ಅರಸರನ್ನೂ, ದಕ್ಷಿಣದಲ್ಲಿ ಚೇರ ಚೋಳ ರಾಜರನ್ನೂ ಗೆದ್ದನು ಮುಂಜನ ಮೇಲಿದ್ದ ಸಿಟ್ಟಿನಿಂದ, ಆತನನ್ನು ಸೆರೆ ಹಿಡಿದು ತಂದನು ಅವನನ್ನು ಮನೆಮನೆಗ ಬಿಕ್ಕೆಬೇಡಿಸಿ, ಆಮೇಲೆ ಕೊಲ್ಲಿಸಿದನು ತೈಲಪನು ಶತ್ರುಗಳಿಗೆ ಹುಲಿಯಾಗಿದ್ದರೂ, ಕವಿಗಳಿಗೆ ಆಶ್ರಯದಾತನು ಮುಧೋಳದ ಬಳೆಗಾರಜಾತಿಯ **ರನ್ನನೆಂಬ** ಕವಿಗೆ ಮರ್ಯಾದೆ ಮಾಡಿದ್ದಲ್ಲದ "ಕವಿಚಕ್ರವರ್ತಿ" ಎಂಬ ಬಿರುದನ್ನು ಕೊಟ್ಟನು

**ಜಯಸಿಂಹ** — ತೈಲಪನ ತರುವಾಯ ಮೂರನೆಯ ತಲೆಯವನಾದ **ಜಯಸಿಂಹ**ನು ರಾಜ್ಯವನ್ನು ಬೆಳೆಸಿದನು ಈತನ ರಾಜ್ಯದಲ್ಲಿ ಇವನ ಅಕ್ಕ "ಅಕ್ಕಾದೇವಿ" ಕಿಸುಕಾಡಿನ ಮಂಡಲೇಶ್ವರಿಯಾಗಿದ್ದಳು ಈಕೆ ರಣಭೈರವಿ ಈಕೆಗೆ **"ಗುಣದ ಬೆಡಂಗಿ" "ಏಕವಾಕ್ಯೆ"** ಎಂಬ ಬಿರುದುಗಳಿದ್ದುವು.

ಈಕೆ ಗೋಕಾವಿಯ ಕೊತವಾಲನನ್ನು ಸೋಲಿಸಿ ಅವನಿಗೆ ಜೀವದಾನ ಕೊಟ್ಟಳು

**ಕಲ್ಯಾಣರಾಜಧಾನಿ** – ಜಯಸಿಂಹನ ಮಗ ೧ನೆಯ **ಸೋಮೇಶ್ವರನು** ತಂದೆಗಿಂತ ಹೆಚ್ಚು ಶೂರ, ಹಾಗೂ ಅಭಿಮಾನಿ ಮಾಳವೆಯ ಮುಂಜರಾಜನ ಮಗ ಭೋಜರಾಜನು ಕರ್ನಾಟಕದ ಮೇಲೆ ಸಾಗಿಬರುವನೆಂಬ ಸುದ್ದಿ ತಿಳಿದ ಕೂಡಲೆ, ತಾನೇ ಅವನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿ, ತಾನಾಳುವ ನಾಡಿನ ನಟ್ಟನಡುವಿರುವ **ಕಲ್ಯಾಣವನ್ನೇ** ರಾಜಧಾನಿಯನ್ನು ಮಾಡಿಕೊಂಡು ಅದನ್ನು ಚೆನ್ನಾಗಿ ಕಟ್ಟಿ, ತಾನು ಅಲ್ಲಿ ಇರಹತ್ತಿದನು ಇವ ನಿಂದಲೇ ಕಲ್ಯಾಣದ ಚಾಲುಕ್ಯರ ರಾಜ್ಯವು ಪ್ರಾರಂಭವಾಯಿತು ಅಷ್ಟರಲ್ಲಿ ಚೋಳರ ಹಾವಳಿ ದಕ್ಷಿಣದಲ್ಲಿ ಹಬ್ಬಿತು ಸೋಮೇಶ್ವರನು **ಅಣ್ಣಿಗೇರಿಯ** ಹತ್ತಿರ ನಡೆದ ಕಾಳಗದಲ್ಲಿ ಚೋಳರನ್ನು ಸೋಲಿಸಿದನು ರಾಜೇಂದ್ರ ಚೋಳನು ಸತ್ತನು

**ವಿಕ್ರಮಾದಿತ್ಯ** – ಈತನು ಸೋಮೇಶ್ವರನ ೨ನೆಯ ಮಗ ತಂದ ಇರುವಾಗಲೇ ಯುದ್ಧಗಳಲ್ಲಿ ಆತನಿಗೆ ನೆರವಾಗಿದ್ದನು ತಂದೆಯ ಅಪ್ಪಣೆ ಪಡೆದು ದಂಡು ತಕ್ಕೊಂಡು, ಕನೋಜಕ್ಕೆ ಹೋಗಿ ಚಂದ್ರದೇವನೆಂಬ ಕನ್ನಡಿಗ ವೀರನನ್ನು ಅಲ್ಲಿ ಪಟ್ಟಕ್ಕೆ ಕುಳ್ಳಿರಿಸಿ, ಬಂಗಾಲಕ್ಕೆ ನಡೆದನು, ಆಗ **ಬಂಗಾಲ, ಬಿಹಾರ, ಆಸಾಮು, ನೇಪಾಳಗಳನ್ನು ಗೆದ್ದು, ನಾನ್ಯದೇವನೆಂಬ** ತನ್ನ ಕನ್ನಡ ದಂಡನಾಯಕನನ್ನು ಸಾಮಂತರಾಜನನ್ನಾಗಿ ಮಾಡಿ, ತನ್ನ ದೇಶಕ್ಕ ಮರಳಿದನು ಹೀಗೆ ಕಣ್ಣಿಗ ಬಿದ್ದ ರಾಜರಿಂದಲ್ಲ ಕಪ್ಪಕಾಣಿಕೆ ಎತ್ತಿ, ಉತ್ತರ ಭಾರತದಲ್ಲಿ ಕನ್ನಡಿಗರ ಪತಾಕೆಯನ್ನು ಹಾರಾಡಿಸಿ, ತಿರುಗಿ ತನ್ನ ಹಳೆಯ ರಾಜಧಾನಿಯಾದ **ಬಳ್ಳಿಗಾವಿಗೆ** ಬಂದನು

**ವಿಕ್ರಮ ಶಕ** – ೧ನೆಯ ಸೋಮೇಶ್ವರನ ಮರಣದನಂತರ ಕೆಲವು ದಿನ ಆತನ ಹಿರಿಯ ಮಗ ಇಮ್ಮಡಿ ಸೋಮೇಶ್ವರನು ರಾಜ್ಯವಾಳುತ್ತ ಕೆಲ ಕಾಲ ಬಳ್ಳಿಗಾವಿಯಲ್ಲಿ, ಕೆಲಕಾಲ ಬಂಕಾಪುರದಲ್ಲಿ, ಹಾಗೂ ಕೆಲಕಾಲ ಕಲ್ಯಾಣದಲ್ಲಿ ಇರುತ್ತಿದ್ದನು ಇವನು ತನ್ನ ತಮ್ಮನಾದ ವಿಕ್ರಮಾದಿತ್ಯನ ಶೌರ್ಯದ ಬಗೆಗೆ ಅಸೂಯೆ, ಅವನಲ್ಲಿ ಅವಿಶ್ವಾಸ ತೋರಿಸುತ್ತ, ಆತನನ್ನು ಕೊಲ್ಲಲು ಯತ್ನ ನಡೆಸಿದನು ವಿಕ್ರಮಾದಿತ್ಯನು ಅಣ್ಣನ ಈ ಒಳಸಂಚನ್ನು ತಿಳಿದು, ಶಿಲಾಹಾರ, ಕದಂಬ, ಕೇರಳ ರಾಜ್ಯಗಳನ್ನು ಗದ್ದು ಚೋಳರ ಮೇಲ ಏರಿ ಹೋದನು ಚೋಳರಾಜನು ಒಪ್ಪಂದ ಮಾಡಿಕೊಂಡು, ತನ್ನ ಮಗಳನ್ನು ವಿಕ್ರಮಾದಿತ್ಯನಿಗೆ ಮದುವೆಮಾಡಿಕೊಟ್ಟನು ಮುಂದೆ ಯುದ್ಧ ಮಾಡಲು ಬಂದ ತನ್ನ ಅಣ್ಣನನ್ನು ಸೋಲಿಸಿ, ಕ್ರಿ ಶ ೧೦೭೬ರಲ್ಲಿ ತಾನೇ ಸಿಂಹಾಸನದ

ಮೇಲೆ ಕುಳಿತು **ವಿಕ್ರಮ ಶಕವನ್ನು** ಪ್ರಾರಂಭಿಸಿದನು ಇವನಿಗೆ ಸೋಲು ಎಂಬುದು ಗೊತ್ತಿರಲಿಲ್ಲ ಕರಾಡದ ಶಿಲಾಹಾರ ರಾಜನ ಮಗಳಾದ **ಚಂದಲ ದೇವಿಯ** ಸ್ವಯಂವರಕ್ಕೆ ಭಾರತದ ನೂರಾರು ಮಂದಿ ಅರಸರು ಬಂದಿದ್ದರು ಚಂದಲದೇವಿಯು ವಿಕ್ರಮಾದಿತ್ಯನಿಗೇ ಮಾಲೆ ಹಾಕಿದಳು ಇವನು ೫೦ ವರುಷ ಆಳಿದನು ಇವನ ಆಳಿಕೆಯೆಂದರೆ ಸುಖದ ಸುಗ್ಗಿ ಇವನಲ್ಲಿ **ವಿಜ್ಞಾನೇಶ್ವರನೆಂಬ** ಧರ್ಮಶಾಸ್ತ್ರ ಪಂಡಿತನೂ, **ಬಿಲ್ಹಣನೆಂಬ** ಸಂಸ್ಕೃತ ಕವಿಯೂ ಇದ್ದರು ಈತನು ಎಲ್ಲ ಜಾತಿ-ಮತದವರನ್ನೂ ಪ್ರೀತಿಯಿಂದ ಪಾಲಿಸುತ್ತಿದ್ದನು

**ಚಾಲುಕ್ಯರ ಕೊನೆ** — ಮುಂದೆ ಮೂವರು ನಾಲ್ವರು ಅರಸರು ಆಳಿದರು ಕೊನೆಗೆ ಮುಮ್ಮಡಿ ತೈಲಪನ ಆಳಿಕೆಯಲ್ಲಿ ದಂಡನಾಯಕನಾದ ಬಿಜ್ಜಳನು ತೈಲಪನನ್ನು ಓಡಿಸಿ, ಚಾಲುಕ್ಯ ಪಟ್ಟವನ್ನು ತಾನೇ ಹಿಡಿದುಕೊಂಡನು

**ಉಳಿದ ಕನ್ನಡ ಅರಸುಮನೆತನಗಳು** — ಬಿಜ್ಜಳನು (ಕ್ರಿ ಶ ೧೧೫೬-೧೧೬೭) **ಕಲಚೂರಿ** ಮನೆತನದ ಅರಸು ಈತ ಜೈನ ಈತನಿಗೆ ಮೊದಲು ಬಲದೇವನೆಂಬವನೂ ಮುಂದ ಶೈವಸಂಪ್ರದಾಯದ ಭಕ್ತಿಭಂಡಾರಿ ಬಸವಣ್ಣನವರೂ ಮಂತ್ರಿಗಳಾಗಿದ್ದರು ಬಸವಣ್ಣನವರು ಧಾರ್ಮಿಕ ಹಾಗೂ ಸಾಮಾಜಿಕ ಕ್ರಾಂತಿಯನ್ನು ಸಾಧಿಸಿ ಕನ್ನಡ ನಾಡಿನಲ್ಲೆಲ್ಲ ನೈತಿಕ ಸುಧಾರಣೆಗಳನ್ನು ಕೈಕೊಂಡು ವೀರಶೈವ ಮತಪ್ರಸಾರ ಮಾಡಿದರು ಆ ಮೇಲೆ **ಹೊಯ್ಸಳ** ಯಾದವ ಅರಸರು (ಕ್ರಿ ಶ ೧೧೮೬—೧೩೪೬) ಬಂದರು ಅವರಲ್ಲಿ ವಿಷ್ಣುವರ್ಧನ ಒಳ್ಳೆಯ ಪ್ರತಾಪಶಾಲಿ ಈತನು ಶ್ರೀರಾಮಾನುಜಾಚಾರ್ಯರಿಂದ ಶ್ರೀವೈಷ್ಣವ ಮತದ ದೀಕ್ಷೆ ಪಡೆದು, ವೀರನಾರಾಯಣ, ವಿಜಯ ನಾರಾಯಣ, ಚೆಲುವ ನಾರಾಯಣ, ಕೀರ್ತಿನಾರಾಯಣ ಮುಂತಾದ ಅನೇಕ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದನು ಈತನ ಮೊಮ್ಮಗನಾದ **ವೀರ ಬಲ್ಲಾಳನ** ಕಾಲದಲ್ಲಿ ಶ್ರೀಮಧ್ವಾಚಾರ್ಯರು ದ್ವೈತ ಮತವನ್ನು ಸ್ಥಾಪಿಸಿದರು

## ಅಭ್ಯಾಸಗಳು

೧ ಕೆಳಗಿನ ಪ್ರವಾಸಿಗಳು ಕನ್ನಡದೇಶಗಳ ಬಗೆಗೆ ಬರೆದ ಮುಖ್ಯ ಸಂಗತಿಗಳನ್ನು ಒಂದು ಅಥವಾ ಎರಡು ವಾಕ್ಯಗಳಲ್ಲಿ ಹೇಳಿರಿ ಪ್ಲಿನಿ, ಟಾಲೆಮಿ, ಯುವಾನ ಚ್ವಂಗ

೨ ಕೆಳಗಿನ ಸಂದರ್ಭಗಳನ್ನು ಅಭಿನಯ ಮಾಡಿರಿ *

---

*ಸೂ —ಶಿಕ್ಷಕರು ಮಾರ್ಗದರ್ಶನ ಮಾಡುತ್ತ ಈ ಪ್ರಸಂಗಗಳ ಸಂಭಾಷಣೆಯನ್ನು ಬಾಲಕರಿಂದ ಹೊರಡಿಸಬೇಕು ಸಾಧ್ಯವೆನಿಸದಿದ್ದರೆ, ಶಿಕ್ಷಕರೇ ಸಂಭಾಷಣೆಯನ್ನು ರಚಿಸಬೇಕು

(ಅ) ಯುದ್ಧದ ಪ್ರಾರಂಭದಲ್ಲಿ ಹರ್ಷವರ್ಧನ ಹಾಗೂ ೨ನೆಯ ಪುಲಿಕೇಶಿ ಇವರ ಭೆಟ್ಟಿ

(ಆ) ಮುಮ್ಮಡಿ ಕೃಷ್ಣನು ಪೊನ್ನನನ್ನು ಸನ್ಮಾನಿಸಿದ್ದು

(ಇ) ತೈಲಪನು ಮುಂಜನನ್ನು ಯುದ್ಧದಲ್ಲಿ ಎದುರಿಸಿದ್ದು

೩ ಕೆಳಗಿನ ವ್ಯಕ್ತಿಗಳು ಮಾಡಿದ ಮಹತ್ಕಾರ್ಯವನ್ನಾಗಲಿ ಅವರ ಗುಣ ವೈಶಿಷ್ಟ್ಯವನ್ನಾಗಲಿ ಹೇಳುವ ಒಂದೊಂದು ಮಾತನ್ನು ಬರೆಯಿರಿ ಅಕ್ಕಾದೇವಿ, ರನ್ನ, ವಿಶ್ವಕರ್ಮ, ದಂತಿದುರ್ಗ, ವಿಜ್ಞಾನೇಶ್ವರ, ಬಸವಣ್ಣ, ವಿಷ್ಣುವರ್ಧನ

೪ ನಿಮ್ಮ ಅಭಿಪ್ರಾಯದಲ್ಲಿ ಕನ್ನಡದ ಕೀರ್ತಿಪತಾಕೆಯನ್ನು ಅತಿ ದೂರ ಹಾರಿಸಿದ ಅರಸು ಯಾರು? ಅವನ ಸಾಹಸದ ಕೃತಿಗಳನ್ನು ಹೇಳುವ ಮೂರು ಮಾತುಗಳನ್ನು ಬರೆಯಿರಿ ಚಾಲುಕ್ಯ ವಿಕ್ರಮಶಕದ ವರ್ಷ ಯಾವುದು?

# ೪ ಅರಬರು ಭಾರತದಲ್ಲಿ ಕಾಲಿಟ್ಟದ್ದು

**ಅನುಕೂಲ ಸಮಯ** – ಭಾರತದಲ್ಲಿ ಪ್ರವೇಶಿಸಲು ಅರಬರು ಹವಣಿಸುತ್ತಿದ್ದರೆಂಬುದನ್ನು ಒಂದನೆಯ ಪ್ರಕರಣದಲ್ಲಿ ಓದಿದಿರಿ ಅವರ ಹವಣಿಕೆಗೆ ಅನುಕೂಲವಾಗುವಂತೆ ಭಾರತದಲ್ಲಿ ಅನೈಕ್ಯ, ಹಾಗೂ ಆಂತರಿಕ ಕಲಹಗಳು ಬೆಳೆಯತೊಡಗಿದ್ದುವು ಪರಕೀಯರು ಗಡಿರಾಜ್ಯಗಳ ಮೇಲೆ ದಾಳಿ ಮಾಡಿ ನುಗ್ಗಿದರೆ, ಎಲ್ಲರೂ ಒಕ್ಕಟ್ಟಾಗಿ ಅವರನ್ನು ಹಿಂದಕ್ಕಟ್ಟುವ ರಾಷ್ಟ್ರೀಯ ಭಾವನೆ ಇಲ್ಲದಾಗಿತ್ತು

**ಮುಹಮ್ಮದ್ ಬಿನ್ ಕಾಸೀಮನ ದಾಳಿ** – ಕ್ರಿ ಶ ೮ನೆಯ ಶತಕದ ಆರಂಭದಲ್ಲಿ, ಅರಬಸ್ತಾನದೊಳಗೆ ಖಲೀಫ ವಲೀದನು ಆಳುತ್ತಿದ್ದನು ಆ ಸಮಯಕ್ಕೆ ಸಿಂಧಪ್ರಾಂತದಲ್ಲಿ **ದಾಹರ**ನೆಂಬ ಅರಸನ ಆಳಿಕೆ ನಡೆದಿತ್ತು **ಸಿಂಹಲ ದ್ವೀಪದ** ಅರಸನು ಅರಬಸ್ತಾನದ **ಖಲೀಫ ವಲೀದ**ನಿಗೆ ಎಂಟು ಹಡಗುಗಳ ತುಂಬ ಬೆಲೆಯುಳ್ಳ ಕಾಣಿಕೆಗಳನ್ನು ಕಳುಹಿದ್ದನು ಆ ಹಡಗುಗಳು ದಾರಿತಪ್ಪಿ ದಾಹರನ ರಾಜ್ಯದ ದೇವಲ ಬಂದರಕ್ಕೆ ಬಂದುವು ಕೆಲವು ಪುಂಡರು ಇವುಗಳನ್ನು ಸುಲಿದರು, ದಾಹರ ದೊರೆಗೆ ಇದಾವುದೂ ತಿಳಿದಿರಲಿಲ್ಲ ಆದರೆ ಖಲೀಫನಿಗೆ ಈ ಸುದ್ದಿ ಹೇಗೋ ತಿಳಿಯಿತು. "ಆ ಹಡಗುಗಳ್ಳರನ್ನು ನಮ್ಮ ವಶಕ್ಕೆ ಕೊಡಬೇಕು, ಮತ್ತು ನಿಮ್ಮ ತಪ್ಪುಗಾಣಿಕೆ ಸಹಿತವಾಗಿ ನಮ್ಮ ಸಂಪತ್ತನ್ನು ನಮಗೆ ಕಳಿಸಬೇಕು" ಎಂದು ದಾಹರನಿಗೆ ಅಪ್ಪಣೆಯನ್ನು ಕಳಿಸಿದನು




ದಾಹರನಿಗೆ ಇದಾವ ಸಂಬಂಧವೂ ಇರಲಿಲ್ಲ ಅದರಿಂದ, "ಹಡಗುಗಳ್ಳರು ಮತ್ತು ನಿಮ್ಮ ಸಂಪತ್ತುಗಳ ಬಗೆಗೆ ನೀವೇ ಏನಾದರೂ ವ್ಯವಸ್ಥೆ ಮಾಡಿಕೊಳ್ಳಿರಿ ತಪ್ಪುಗಾಣಿಕೆಯನ್ನು ಕಳಿಸುವುದಿಲ್ಲ" ಎಂದು ಉತ್ತರ ಕೊಟ್ಟನು ಖಲೀಫನಿಗೆ ಇಷ್ಟೇ ನೆವ ಸಾಕಾಯಿತು ಇರಾಣದ ಹೆಜ್ಜಾಜ ಸುಭೇದಾರನ

ಅಳಿಯನಾದ **ಮುಹಮ್ಮದ್ ಬಿನ್ ಕಾಸೀಮನು** ಕ್ರಿ ಶ ೭೧೨ರಲ್ಲಿ, ೧೫೦೦೦ ದಂಡು ಸಹಿತವಾಗಿ ಸಿಂಧಪ್ರಾಂತಕ್ಕೆ ದಾಳಿಯಿಟ್ಟನು ಇವನು ಸ್ವತಃ ಶೂರ, ಮುತ್ಸದ್ದಿ ಇವನ ರಾಜತಂತ್ರದ ಫಲವಾಗಿ ಕೆವವು ದೇಶದ್ರೋಹಿಗಳು ಇವನಿಗೆ ನೆರವಾದರು, ಅಲ್ಲದೆ ಆ ಕಾಲಕ್ಕೆ ಬೌದ್ಧಭಿಕ್ಷುಗಳು ಪ್ರಾಂತದ ತುಂಬ ಹರಡಿದ್ದರು ಪ್ರತೀಕಾರದ ಇಚ್ಛೆಯೇ ಅವರಲ್ಲಿರಲಿಲ್ಲ ಎಂದಮೇಲೆ ಅಂತಹ ಪ್ರಜೆಗಳಿಂದ ದಾಹರ ರಾಜನಿಗೆ ಯಾವ ಬೆಂಬಲ ದೊರೆಯಬೇಕು? ಮುಹಮ್ಮದ್ ಬಿನ್ ಕಾಸೀಮನು ರಭಸದಿಂದಲೇ ಸಿಂಧ್-ಪ್ರಾಂತವನ್ನು ಹೊಕ್ಕನು

**ದಾಹರನೊಡನೆ ಯುದ್ಧ** — ಅವನು ಮೊದಲು ದೇವಲದಲ್ಲಿ ಜಾಟರನ್ನು ಸೋಲಿಸಿ ತನ್ನ ಪಕ್ಷಕ್ಕೆ ಸೇರಿಸಿಕೊಂಡನು ಮುಂದೆ ದಾಹರನ ಮಗ ಜಯಸಿಂಹನಿಗೂ ಕಾಸೀಮನಿಗೂ ಯುದ್ಧವಾಯಿತು ಅದರಲ್ಲಿ ಜಯ-ಸಿಂಹನು ಸೋತು ಓಡಿಹೋದನು ಕಾಸೀಮನು ಮುಂದಕ್ಕೆ ಸಾಗಿ ದಾಹರ ದೊರೆಗೆ ಇದಿರಾದನು ನಿಕರದ ಯುದ್ಧವು ನಡೆಯಿತು ಈ ಪ್ರಸಂಗದಲ್ಲಿ ಉಳಿದ ಹಿಂದೂ ಅರಸರು ದಾಹರನ ನೆರವಿಗೆ ಬಾರದ ಇದ್ದುದು, ಭಾರತದ ದುರ್ದೈವ ಮೊದ-ಮೊದಲಿಗೆ ಯುದ್ಧದಲ್ಲಿ ದಾಹರನದೇ ಮೇಲ್ಗೈಯಾದರೂ, ಅಕಸ್ಮಾತ್ತಾಗಿ ನಟ್ಟ ಬಾಣದಿಂದ ಗಾಯಾಳುವಾಗಿ ಕೆಳಗ ಬಿದ್ದನು, ಹತ್ತಿರದಲ್ಲಿಯೇ ಇದ್ದ ಅರಬಸೈನಿಕನು ಆತನನ್ನು ಇರಿದುಕೊಂದನು ಈಗ ಅರಬರನ್ನು ಇದಿರಿನುವವರು ಯಾರೂ ಇಲ್ಲದಾಯಿತು ಅವರು ಸಿಕ್ಕ ಸಿಕ್ಕ ಹಾಗೆ ಕೊಲೆ ಸುಲಿಗೆ ನಡೆಸಿದರು ದಾಹರನ ಇಬ್ಬರು ಹೆಣ್ಣುಮಕ್ಕಳು ಕಾಸೀಮನ ಕೈಗೆ ಸಿಕ್ಕರು ಅವನು ಲೂಟಿಯ ಹಣದಲ್ಲಿ ⅕ವನ್ನು ಖಲೀಫರಿಗೆ ಕಳಿಸಿ, ಉಳಿದುದನ್ನು ಸೈನಿಕರಲ್ಲಿ ಹಂಚಿದನು

**ಕಾಸೀಮನ ರಾಜ್ಯವ್ಯವಸ್ಥೆ** — ಕಾಸೀಮನು ಸಿಂಧಪ್ರಾಂತವನ್ನು ಪೂರ್ಣ ಕೈಯಲ್ಲಿ ತೆಗೆದುಕೊಂಡನು, ದಾಹರನ ಮಂತ್ರಿಯನ್ನೇ ಮನವೊಲಿಸಿ ಆ ಪ್ರಾಂತಕ್ಕೆ ಸುಭೇದಾರನನ್ನಾಗಿ ಮಾಡಿದನು ಹಿಂದುಗಳ ಮೇಲೆ ಜಿಝಿಯಾ ಎಂಬ ಭಾರವಾದ ತೆರಿಗೆಯನ್ನು ಹೇರಿದನು

**ಕಾಸೀಮನಿಗೆ ಕೊನೆಗಾಲ** – ಕಾಸೀಮನ ಕೈಯಲ್ಲಿ ದಾಹರನ ಹೆಣ್ಣು-ಮಕ್ಕಳು ಸಿಕ್ಕಿದ್ದರಷ್ಟೇ ಖಲೀಫನ ಪ್ರೀತ್ಯರ್ಥವಾಗಿ ಅವರನ್ನು ರಾಣೀವಾಸಕ್ಕೆ ಕಳುಹಿದನು ಆ ಚತುರ ಸ್ತ್ರೀಯರು ತಂದೆಯ ಕೊಲೆಗಡುಕನಾದ ಕಾಸೀಮನ ಸೇಡು ತೀರಿಸಿಕೊಳ್ಳಲು—"ಕಾಸೀಮನು ನಮ್ಮನ್ನು ಅಪವಿತ್ರಗೊಳಿಸಿದ್ದಾನೆ" ಎಂದು ಖಲೀಫನಿಗೆ ಸುಳ್ಳು ಹೇಳಿದರು. ಕಾಮಾಂಧ ಖಲೀಫನು ಸಿಟ್ಟಾಗಿ, ಕಾಸೀಮನಿಗೆ ಮರಣಶಿಕ್ಷೆಯನ್ನು ವಿಧಿಸಿದನು ಆ ಮೇಲೆ

ಖಲೀಫನು ಆ ಹೆಣ್ಣುಮಕ್ಕಳನ್ನು ವಿಚಿತ್ರ ಕ್ರೂರತನದಿಂದ ಕೊಂದನಂತೆ ಇಷ್ಟಾದ ಮೇಲಾದರೂ ಹಿಂದೂರಾಜ್ಯಗಳು ಒಕ್ಕಟ್ಟಾಗಿದ್ದರೆ ಭಾರತದ ಇತಿಹಾಸವೇ ಬೇರೆಯಾಗುತ್ತಿತ್ತು

ಕಾಸೀಮನ ತರುವಾಯ ಜುನಾಯಿದ್ ಎಂಬುವನು ಕ್ರಿ ವ ೭೨೫ರಲ್ಲಿ ಸಿಂಧಪ್ರಾಂತಕ್ಕೆ ಆಡಳಿತಗಾರನಾಗಿ ಬಂದನು ಅವನು ಗುಜರಾಥ, ಮಾಳವಾಗಳ ಮೇಲೆ ದಂಡೆತ್ತಿಹೋದನು, ಸೋತು ಹಿಂದಿರುಗಿದನು ಅವನ ತರುವಾಯ ತಾಮಿಾಮ ಎಂಬವನು ಆಡಳಿತಗಾರನಾಗಿ ನೇಮಕ ಹೊಂದಿದನು ಅವನು ಮಾಳವಾದೇಶವನ್ನು ಗದ್ದು ದಕ್ಷಿಣಭಾರತಕ್ಕೆ ಕಾಲುಚಾಚಿದನು ಆ ಕಾಲಕ್ಕೆ ದಕ್ಷಿಣಭಾರತದಲ್ಲಿ ಕನ್ನಡ ಕೇಸರಿ ಪರಮೇಶ್ವರ ಪುಲಿಕೇಶಿ ರಾಜ್ಯವಾಳುತ್ತಿದ್ದನು' ಅವನು ಈ ದಾಳಿಗಾರರನ್ನು ದಿಕ್ಕೆಟ್ಟು ಓಡಿಸಿದನು ಸಿಂಧಪ್ರಾಂತವು ಮಾತ್ರ ಅರಬರ ವಶದಲ್ಲಿ ಕ್ರಿ ವ ೭೧೨ರಿಂದ ೧೦೨೫ರ ವರೆಗೂ ಉಳಿಯಿತು ಕ್ರಿ ವ ೧೦೨೫ರ ಸುಮಾರಿಗೆ ಗಝುನೀ ಮಹಮ್ಮೂದನು ಅರಬರನ್ನು ಸೋಲಿಸಿ, ಸಿಂಧಪ್ರಾಂತವನ್ನು ಕೈವಶಮಾಡಿಕೊಂಡನು

**ಸಿಂಧಪ್ರಾಂತ ಸಿಕ್ಕುದರಿಂದ ಅರಬರಿಗಾದ ಅನುಕೂಲತೆಗಳು** —ಸಿಂಧದಲ್ಲಿ ಅರಬರ ಆಳಿಕೆ ಆರಂಭವಾದುದರಿಂದ ವ್ಯಾಪಾರಕ್ಕೆ ಒಳ್ಳೆಯ ಅನುಕೂಲವಾಯಿತು. ಬಗದಾದದ ಖಲೀಫರು ಭಾರತೀಯ ವೈದ್ಯರನ್ನೂ ಜ್ಯೋತಿಷಿಗಳನ್ನೂ ತಮ್ಮ ದರಬಾರಿನಲ್ಲಿಟ್ಟುಕೊಂಡರು, ಅವರಿಂದ ಆಯಾ ಶಾಸ್ತ್ರಗಳ ಜ್ಞಾನ ಮಾಡಿಕೊಂಡರು ಎಷ್ಟೋ ಮುಸಲ್ಮಾನರು ವಿದ್ಯೆಯ ಹಂಬಲದಿಂದ ಭಾರತದ ವಿಶ್ವವಿದ್ಯಾಲಯಗಳಲ್ಲಿ ಕಲಿಯತೊಡಗಿದರು ಅಬೂ ಮಸ್ಹಾರ ಎಂಬ ಅರಬೀ ಜ್ಯೋತಿಷಿಯು, ಕಾಶಿಯಲ್ಲಿ ಹತ್ತು ವರುಷಗಳ ಕಾಲ ಇದ್ದು ಆ ಶಾಸ್ತ್ರದ ಅಭ್ಯಾಸವನ್ನು ಮಾಡಿದನು ಈ ಕಾರಣಗಳಿಂದ ಅರಬರ ಸಂಸ್ಕೃತಿ ಸುಧಾರಣೆಗೆ ಎಷ್ಟೋ ಅನುಕೂಲವಾಯಿತು

## ಅಭ್ಯಸನಗಳು

೧ ಸಿಂಧಪ್ರಾಂತಕ್ಕೆ ದಾಳಿಯಿಡಲು ಮುಹಮ್ಮದ್ ಬಿನ್ ಕಾಸೀಮನಿಗೆ ಯಾವ ನೆವ ಸಿಕ್ಕಿತು?

೨ ದಾಹರನಿಗೆ ದೈವವು ಪ್ರತಿಕೂಲವಾಗಿತ್ತೆಂದು ಯಾವ ಮಾತಿನಿಂದ ತಿಳಿಯುತ್ತದೆ?

೩ ಅರಬರನ್ನು ಸೋಲಿಸಿದ ಕನ್ನಡದ ಕಡುಗಲಿ ಯಾರು?

೪ ಕೆಳಗಿನವುಗಳ ಬಗ್ಗೆ ನಿಮಗೆ ಗೊತ್ತಿದ್ದ ಒಂದೊಂದು ಮಾತನ್ನು ಬರೆಯಿರಿ ಜೆಝಿಯಾ, ತಾಮಿಾಮ, ಅಬೂ ಮಸ್ಹಾರ, ಖಲೀಫ ವಲೀದ

# ೫ ಮುಸಲ್ಮಾನ ಆಡಳಿತದ ಆರಂಭ

## ಗಝನಿ ಅರಸರು

ಭಾರತದ ಪಶ್ಚಿಮಕ್ಕೆ ಇದ್ದ ರಾಷ್ಟ್ರಗಳೆಲ್ಲ ಒಂದೊಂದಾಗಿ ಇಸ್ಲಾಂ ಧರ್ಮವನ್ನು ಸ್ವೀಕಾರಮಾಡಿ, ಮುಸಲ್ಮಾನ ರಾಜರ ಕೈಕೆಳಗ ಬಂದಾಗ, ವಾಯವ್ಯಪ್ರಾಂತದ ಕಣಿವೆಗಳ ಮೂಲಕ ಅವರ ಸೈನ್ಯಗಳು ಧರ್ಮದ ಪ್ರಚಾರಕ್ಕಾಗಿಯೂ ರಾಜ್ಯಸ್ಥಾಪನೆಗಾಗಿಯೂ ಭಾರತದೊಳಕ್ಕೆ ನುಗ್ಗಲು ಪ್ರಾರಂಭ ಮಾಡಿದುವು **ಆಲಪ್ತಗೀನ** ಎಂಬವನು, ಭಾರತದ ಗಡಿಯ ತೀರ ಹತ್ತಿರದ ಅಫಗಾನಿಸ್ತಾನದಲ್ಲಿ ಕಾಬೂಲಿ ಜನರನ್ನು ಕೂಡಿಕೊಂಡು ಒಂದು ರಾಜ್ಯವನ್ನು ಸ್ಥಾಪಿಸಿದನು, ಗಝನಿ ಪಟ್ಟಣವನ್ನು ರಾಜಧಾನಿಯನ್ನು ಮಾಡಿಕೊಂಡನು ಮುಂದೆ ಪಂಜಾಬದ ವರೆಗೂ ತನ್ನ ರಾಜ್ಯವನ್ನು ಬೆಳೆಸಿದನು ತರುವಾಯ ಈತನ ಅಳಿಯನಾದ **ಸಬಕ್ತಗೀನನು** ಕ್ರಿ ಶ ೯೭೭ರಲ್ಲಿ ಪಟ್ಟವೇರಿದನು ಇವನೂ ಭಾರತದ ಕಡೆಗೆ ಹೊರಳಿದನು

ಸಬಕ್ತಗೀನನು ಸೈನ್ಯಸಹಿತವಾಗಿ ಕಾಶ್ಮೀರವನ್ನು ಹೊಕ್ಕನು ಈ ಕಾಲಕ್ಕೆ **ಜಯಪಾಲ**ನೆಂಬ ಶಾಹೀ ಅರಸನು, ಕಾಶ್ಮೀರದಿಂದ ಮುಲ್ತಾನದವರೆಗ ಆಳುತ್ತಿದ್ದನು ಅವನು ಸಬಕ್ತಗೀನನನ್ನು ತಡೆಹಿಡಿದನು ಜಯಪಾಲನು ಅಜಮೀರ, ಕನೋಜ ಕಲಿಂಜರ ರಜಪೂತ ಅರಸರನ್ನು ಕಲೆಹಾಕಿಕೊಂಡಿದ್ದನು ಈ ಬಲಾಢ್ಯ ಸೈನ್ಯದ ಇದಿರಿಗೆ ಮುಸಲ್ಮಾನರ ಆಟ ಸಾಗುವಂತಿರಲಿಲ್ಲ, ಆದರೆ ಸಬಕ್ತಗೀನನ ಮಗನಾದ **ಮಹಮ್ಮೂದನು** ಒಳ್ಳೇ ಕಲಿತನದಿಂದ ಕಾದಿದನು ಜಯಪಾಲನಿಗೆ ಜಯವಾಗಲಿಲ್ಲ, ರಜಪೂತರೆಲ್ಲ ಓಡಿಹೋದರು ಜಯಪಾಲನು ತನ್ನ ಮಗನಾದ ಅನಂಗಪಾಲನಿಗ ರಾಜ್ಯವನ್ನು ಕೊಟ್ಟು ಅಗ್ನಿಪ್ರವೇಶ ಮಾಡಿದನು ಮಹಮ್ಮೂದನು ಸಿಂಧೂನದಿಯ ವರೆಗ ತನ್ನ ರಾಜ್ಯವನ್ನು ಬೆಳೆಸಿದನು ಖೈಬರ ಘಟ್ಟದಲ್ಲಿ ಹತ್ತು ಸಾವಿರ ಸೈನ್ಯವನ್ನು ಇಟ್ಟು ಸುಲಿಗೆಯ ಸಂಪತ್ತಿನೊಡನೆ ಗಝನಿಗ ತಿರುಗಿದನು!

**ಮಹಮ್ಮೂದನ ದಾಳಿಗಳು** — ಮಹಮ್ಮೂದನಿಗ ಈಗ ಭಾರತದ ಹೊನ್ನಿನ ರಾಶಿಯ ಕನಸುಗಳೇ ಕಾಣಹತ್ತಿದುವು, ಏಕೆಂದರೆ, ಭಾರತದ ದೊಡ್ಡ ದೊಡ್ಡ ದೇವಾಲಯಗಳಲ್ಲಿ ಅಗಣಿತ ಐಶ್ವರ್ಯವಿರುವುದಾಗಿ ಅವನಿಗ ತಿಳಿದಿತ್ತು ಇದೆಲ್ಲವನ್ನೂ ದೋಚಿಕೊಂಡು ಹೋಗುವುದೇ ಅವನ ಹಿರಿಯ ಹಂಬಲ ಅದಕ್ಕಾಗಿ ಭಾರತದ ಮೇಲೆ ಹದಿನೇಳು ಸಲ ದಾಳಿಯಿಟ್ಟನು **ಮುಲ್ತಾನ, ನಗರಕೋಟೆ, ಮಥುರಾ, ಸೋಮನಾಥ**ಗಳಲ್ಲಿಯಂತೂ ಸಂಪತ್ತಿನ ಕಣಿಯೇ ಕೈಗೆ ಸಿಕ್ಕಂತಾಯಿತು ಮಥುರಾದಾಳಿಯ ಬಗೆಗೆ ‹ಉಲ್ಬಿ’

ಎಂಬ ಆತನ ಆಸ್ಥಾನವಿದ್ವಾಂಸನು ಬರೆದಿರುವುದೇನೆಂದರೆ – "ಮಥುರೆಯು ಹಿಂದುಗಳ ಪರಮ ಪವಿತ್ರವಾದ ದೇವಸ್ಥಾನ ಆ ನಗರದ ಶಿಲ್ಪಸೌಂದರ್ಯ ವನ್ನು ನೋಡಿದರೆ, ಅದು ಸ್ವರ್ಗದಿಂದ ಭೂಮಿಗೆ ಬಂದಂತೆ ತೋರುತ್ತಿದ್ದಿತು, ಭಾರವಾದ ಕಲ್ಲುಗಳ ನೆಲಗಟ್ಟಿನ ಮೇಲೆ ಪಟ್ಟಣ ಕಟ್ಟಿದೆ ಸುತ್ತಲೂ ಸಾವಿರಾರು ಕಲ್ಲಿನ ಕೋಟೆಗಳಿವೆ ನಗರದ ನಡುವೆ ಮುಗಿಲನ್ನು ಮುದ್ದಿ ಡುವ ದೇವಾಲಯವಿದ ಅದರ ಶಿಲ್ಪಸೌಂದರ್ಯದ ಬೆಡಗುಗಳನ್ನು ಬಣ್ಣಿಸು ವುದಕ್ಕೆ ಲೇಖಕನ ಲೆಕ್ಕಣಿಕೆಗಾಗಲಿ ಚಿತ್ರಕಾರನ ಕುಂಚಕ್ಕಾಗಲಿ ಶಕ್ತಿ ಸಾಲದು" ಸ್ವತಃ ಸುಲ್ತಾನನೇ ಬರೆದಿಟ್ಟಿರುವ ತನ್ನ ನೆನಪಿನ ಬರೆಹದಲ್ಲಿ "ಇಂತಹ ಕಲಾಪೂರ್ಣ ಮಂದಿರವನ್ನು ಕಟ್ಟಬೇಕಾದರೆ, ಸಾವಿರ 'ದೀನಾರ' ಗಳನ್ನುಳ್ಳ ಚೀಲಗಳನ್ನು, ನೂರಾರು ಸಾವಿರಗಟ್ಟಲೆ ವೆಚ್ಚ ಮಾಡಬೇಕಾಗುವುದು, ಒಳ್ಳೆಯ ಕುಶಲಶಿಲ್ಪಿಗಳು ಎರಡುನೂರು ವರ್ಷಗಳ ವರೆಗೆ ದಣಿವಿಲ್ಲದೆ ದುಡಿಯಬೇಕು," ಎಂದಿದ್ದಾನೆ



ಸೋಮನಾಥ ದೇವಾಲಯ

ಇಂತಹ ಹಲವಾರು ದೇವಾಲಯಗಳ ಸುಲಿಗೆಯಿಂದ ಮಹಮ್ಮದ ನಿಗೆ ಅಪಾರ ಸಂಪತ್ತು ಸಿಕ್ಕಿತು ಕ್ರಿ ಶ ೧೦೨೪ರಲ್ಲಿ ಸೌರಾಷ್ಟ್ರದಲ್ಲಿರುವ ಸುಪ್ರಸಿದ್ಧ ಸೋಮನಾಥ ದೇವಾಲಯದ ಮೇಲೆ ದಾಳಿಯಿಟ್ಟನು ಈ ದೇವಾಲಯವು ಸಮುದ್ರದ ದಂಡೆಯ ಮೇಲೆ ರಮ್ಯವಾದ ಪ್ರದೇಶದಲ್ಲಿದೆ ಭಾರತದ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಸೋಮನಾಥ ಲಿಂಗವೂ ಒಂದಾ ಗಿದೆ ಅದಕ್ಕಾಗಿ ಭಕ್ತರ ಸಂಖ್ಯೆಯೂ ಭೂಮಿ-ಕಾಣಿಕೆಗಳೂ ಹೇಳತೀರ ದಷ್ಟು ಇದ್ದುವು ದೇವರ ವೆಚ್ಚಕ್ಕೆ ಸುಮಾರು ಹತ್ತು ಸಾವಿರ ಹಳ್ಳಿಗಳ ಉತ್ಪನ್ನ

ವಿದ್ದಿತು. ಭಕ್ತರು ಕೊಟ್ಟ ಬಂಗಾರದ ಸರವಳಿಯ ಗಂಟೆಗಳು ಅವೆಷ್ಟೋ! ದೇವರ ಅರ್ಚನೆ ಮಾಡುವುದಕ್ಕೆ ಸಾವಿರ ಜನರು! ಉತ್ಸವಕಾಲಕ್ಕೆ ನರ್ತನ-ಸೇವೆಯನ್ನು ಸಲ್ಲಿಸುವುದಕ್ಕೆ ಐನೂರು ಜನ ನರ್ತಕಿಯರು! ಎಂತಹ ದಿವ್ಯ ವೈಭವ! ಈ ವೈಭವಕ್ಕೆ ತಕ್ಕಂತೆ ಗುಡಿಯಲ್ಲಿಯ ಮೂರ್ತಿಯೂ ಮನೋಹರ ವಾಗಿಯೇ ಇದ್ದಿತು! ಲಿಂಗಾಭಿಷೇಕಕ್ಕೆ ನಿತ್ಯವೂ ಏಳುನೂರೈವತ್ತು ಮೈಲು ಅಂತರದ ಮೇಲಿರುವ ಗಂಗಾನದಿಯ ಪವಿತ್ರಜಲವನ್ನು ತರುತ್ತಿದ್ದರು! ಕಾಶ್ಮೀರದಿಂದ ಹೂ-ಪತ್ರಗಳು ಬರುತ್ತಿದ್ದುವು! ಲಿಂಗಾರ್ಚನೆಗೆ ಉಪಯೋಗಿ ಸುವ ಉಪಕರಣಗಳೆಲ್ಲ ಬಂಗಾರದುವು! ಒಟ್ಟಾರೆ, ಸೋಮನಾಥ ದೇವಾ ಲಯವೆಂದರೆ ಕುಬೇರನ ಬೊಕ್ಕಸವೇ ಆಗಿತ್ತು! ಸುಮಾರು ಮೂವತ್ತು ಕೋಟಿ ರೂಪಾಯಿ ಅದರ ಆಸ್ತಿಯಿದ್ದಿತೆಂದು ಇತಿಹಾಸಕಾರರ ಮತವಿದೆ ಆದರೆ, ಆ ದೇವಸ್ಥಾನವನ್ನೂ ಅದರೊಳಗಿನ ಐಶ್ವರ್ಯವನ್ನೂ ಶತ್ರುಗಳಿಂದ ರಕ್ಷಿಸಲು ಬೇಕಾದ ಒಕ್ಕಟ್ಟೂ ರಣಕೌಶಲ್ಯವೂ ಜನರಲ್ಲಿರಲಿಲ್ಲ

ಸಂಪತ್ತನ್ನು ಸ್ವಾಧೀನದಲ್ಲಿಟ್ಟುಕೊಂಡು ಹಿಂತಿರುಗುತ್ತಿದ್ದ ಮುಹಮ್ಮೂ-ದನನ್ನು ಪರಮಾರ ರಾಜನೂ ಸಿಂಧದ ಜಾಟರೂ ಚಾಲುಕ್ಯ ಭೀಮದೇವನೂ ಕಚ್ಛದ ರಾಣಾನೂ ಪ್ರತ್ಯೇಕವಾಗಿ ಅಡ್ಡಗಟ್ಟಿದರೆಂದು ತಿಳಿಯುತ್ತದೆ ಆದರ ಸುಲಿಗೆಯನ್ನು ಸೆಳೆದುಕೊಳ್ಳುವುದಕ್ಕೆ ಯಾರಿಂದಲೂ ಆಗಲಿಲ್ಲ.

**ಗಝ್ನಿ ಮುಹಮ್ಮೂದನ ತರುವಾಯ** –ಗಝ್ನಿ ಮುಹಮ್ಮೂದನು ಕ್ರಿ ಶ ೧೦೩೦ರಲ್ಲಿ ಮಡಿದನು ಮುಂದೆ ಗಝ್ನಿ ಮನೆತನದ ಬಗೆಗ ಹೆಚ್ಚಿನ ಸಂಗತಿಗಳು ತಿಳಿಯುವುದಿಲ್ಲ ಘೋರಿ ಮನೆತನದ ಪಠಾಣರು ಈ ರಾಜ್ಯ ವನ್ನು ಆಕ್ರಮಿಸಿ ಅಫಗಾಣಿಸ್ತಾನದಲ್ಲಿ ಪ್ರಬಲರಾದರು ಆದರೆ ಕ್ರಿ ಶ ೧೧೯೧ರಲ್ಲಿ ಘೋರಿ ಮುಹಮ್ಮೂದನು ಭಾರತಕ್ಕೆ ಬರುವ ವರೆಗೂ ಸುಮಾರು ನೂರಾಅರುವತ್ತು ವರುಷಗಳಲ್ಲಿ ನಮ್ಮ ದೇಶದ ಮೇಲೆ ಮುಸಲ್ಮಾನರ ದಾಳಿ ಗಳಾಗಲಿಲ್ಲ

## ಘೋರಿ ಮತ್ತು ಗುಲಾಮ ಮನತನಗಳು

**ಮುಹಮ್ಮೂದ ಘೋರಿ** – ಘೋರ ಎಂಬುದು ಅಫಗಾನಿಸ್ತಾನದಲ್ಲ ಗುಡ್ಡ ಗಾಡಿನ ಒಂದು ಚಿಕ್ಕ ಪ್ರಾಂತ ಗಝ್ನಿ ಮುಹಮ್ಮೂದನ ಆಳಿಕೆಯಲ್ಲಿ ಘೋರದ ಪಠಾಣರು ಅಧಿಕಾರಸ್ಥಾನಗಳಲ್ಲಿ ಇದ್ದರು ಮುಂದೆ ಅವರಲ್ಲಿ ಒಬ್ಬನಾದ ಶಹಾಬುದ್ದೀನನು ಗಝ್ನಿಯ ಅರಸರನ್ನು ಕಿತ್ತೊಗದು ತಾನೇ ಒಡೆಯನಾದನು ಇವನೇ **ಘೋರಿ ಮುಹಮ್ಮೂದ**ನೆಂದು ಪ್ರಸಿದ್ಧನಾಗಿದ್ದಾನ-

ಈತನು ಭಾರತದ ವಾಯವ್ಯ ಗಡಿಯಲ್ಲಿ ಕಾಣಿಸಿಕೊಳ್ಳುವಾಗ, ರಜಪೂತಸ್ಥಾನದಲ್ಲಿ ಬಲಾಢ್ಯ ರಾಜರು ಆಳುತ್ತಿದ್ದರು. ಗುಜರಾಥದಲ್ಲಿ ಜಯಸಿಂಹ ಸಿದ್ಧರಾಜ, ಉತ್ತರಭಾಗದಲ್ಲಿ ಚವ್ಹಾಣರು, ಅಜಮೀರದಲ್ಲಿ ವಿಶಾಲದೇವ, ಸೋಮೇಶ್ವರ, ಪೃಥ್ವೀರಾಜ ಮೊದಲಾದವರು, ದಿಲ್ಲಿಯಲ್ಲಿ ತೋಮರರು, ಬುಂದೇಲಖಂಡದಲ್ಲಿ ಚಂದೇಲರು ಮುಂತಾದ ಮಹಾ ಮಹಾ ವೀರರು ಇದ್ದರು. ಇತ್ತ ಕನೋಜದಲ್ಲಿ ರಾಠೋಡವಂಶದ ಜಯಚಂದನು ಸುತ್ತಲಿನ ನಾಡಿಗೆಲ್ಲ ಒಡೆಯನಾಗಿದ್ದನು. ಇಂತಹ ಶೂರ-ಧೀರರ ನಾಡಿನಲ್ಲಿ ಹೆರವರು ಹೊರನಾಡಿನಿಂದ ಕಾಲಿಡುವುದಕ್ಕೆ ಆಸ್ಪದವೇ ಇರಬಾರದಾಗಿತ್ತು. ಆದರೆ, ಅವರವರಲ್ಲಿಯ ಒಳಜಗಳಗಳು ಹೊರನಾಡಿನವರ ಪ್ರವೇಶಕ್ಕೆ ಹಾದಿಯನ್ನು ಮಾಡಿಕೊಟ್ಟುವು.

**ರಜಪೂತರ ಒಳಜಗಳ** — ೧೨ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ರಜಪೂತ ವೀರರೆಂದರೆ, ಅಜಮೀರದ **ಪೃಥ್ವೀರಾಜ ಚವ್ಹಾಣ** ಮತ್ತು ಕನೋಜದ **ಜಯಚಂದ ರಾಠೋಡ**. ಇವರಿಬ್ಬರೂ ದಿಲ್ಲಿಯ ತೋಮರ ವಂಶದ ಅನಂಗಪಾಲನ ಮೊಮ್ಮಕ್ಕಳು. ಅನಂಗಪಾಲನಿಗ ಗಂಡುಮಕ್ಕಳಿರಲಿಲ್ಲ. ಅದರಿಂದ ಪೃಥ್ವೀರಾಜನಿಗೇ ರಾಜ್ಯವನ್ನು ಕೊಟ್ಟನು, ಏಕೆಂದರೆ ಆ ಕಾಲದಲ್ಲಿ ಶೌರ್ಯ-ಧೈರ್ಯ-ಸೌಂದರ್ಯಗಳಲ್ಲಿ ಆತನನ್ನು ಸರಿಗಟ್ಟುವವರು ಯಾರೂ ಇರಲಿಲ್ಲ. ಇದು ಜಯಚಂದನಿಗೆ ಸೇರಲಿಲ್ಲ. ತಾನೂ ಅನಂಗಪಾಲನ ಮೊಮ್ಮಗನಲ್ಲವೇ? ಈ ಕಾರಣದಿಂದಾಗಿ ಪೃಥ್ವೀರಾಜ-ಜಯಚಂದರಲ್ಲಿ ಹಗೆತನ ಹುಟ್ಟಿತು.


ಪೃಥ್ವೀರಾಜ

**ರಜಪೂತರರಿಂದ ಪರಾಣರ ಪರಾಜಯ** — ಘೋರಿ ಮಹಮ್ಮೂದನು ಈ ಮೊದಲೇ ಮುಲ್ತಾನ ಲಾಹೋರಗಳನ್ನು ಗದ್ದು, ಸಿಂಧ ಪಂಜಾಬ ಪ್ರಾಂತಗಳಲ್ಲಿ ತಳವೂರಿದ್ದನು, ಮುಂದೆ ರಜಪೂತ ರಾಜ್ಯದಲ್ಲಿ ಕಾಲುಚಾಚಲು ಸಮಯವನ್ನು ಕಾಯುತ್ತಿದ್ದನು. ಈ **ರಜಪೂತರ** ಒಳಜಗಳದ ಸುದ್ದಿ ತಿಳಿಯಿತು. ಕೂಡಲೆ ಕ್ರಿ ಪ ೧೧೯೧ರಲ್ಲಿ ದಂಡೆತ್ತಿ ಬಂದನು. ಪೃಥ್ವೀರಾಜನು ಎರಡು ಲಕ್ಷ ಕುದುರೆಸವಾರರೊಂದಿಗೂ ಮೂರು ಸಾವಿರ ಆನೆಗಳೊಂದಿಗೂ ಸ್ಥಾನೇಶ್ವರದ ಹತ್ತಿರ ಅವನನ್ನು ಇದಿರಿಸಿದನು! ನಿಕರದ ಕಾಳಗವೆಸಗಿತು. ರಜಪೂತರ ಕೆಚ್ಚೆದೆಯ ಹೊಡೆತಕ್ಕೆ ಮುಸಲ್ಮಾನರು

ಮೆತ್ತಗಾದರು! ಮರಮರ ಮರುಗುತ್ತ ಘೋರಿ ಮಹಮ್ಮದನು ಮುಲ್ತಾನಕ್ಕೆ ಹೊರಟುಹೋದನು!

**ಸಂಯುಕ್ತೆಯ ಸ್ವಯಂವರ** — ಇದೇ ಸಮಯಕ್ಕೆ, ಉರಿಯುವ ಬಂಕಿಯಲ್ಲಿ ತುಪ್ಪವನ್ನು ಚೆಲ್ಲಿದಂತೆ ಜಯಚಂದನಿಗೆ ಬೇಡವಾದ ಮತ್ತೊಂದು ಸಂಗತಿಯೂ ನಡೆಯಿತು ಜಯಚಂದನಿಗೆ ಸಂಯುಕ್ತೆಯೆಂಬ ರೂಪವತಿಯಾದ ಮಗಳಿದ್ದಳು ತಂದೆಯು ರಜಪೂತರ ಕ್ಷಾತ್ರಪದ್ಧತಿಯಂತ ಮಗಳ ಸ್ವಯಂವರವನ್ನು ಸಾರಿದನು ಎಲ್ಲ ರಾಜಕುಮಾರರಿಗೂ ಆಮಂತ್ರಣಗಳು ಹೋದುವು ಪೃಥ್ವೀರಾಜನಿಗ ಮಾತ್ರ ಕಳಿಸಲಿಲ್ಲ, ಮತ್ತು ಅವನ ಅಪಮಾನ ಮಾಡಬೇಕೆಂದು ಸ್ವಯಂವರಮಂಟಪದ ದ್ವಾರದಲ್ಲಿ ಪೃಥ್ವೀರಾಜನ ಗೂಂಬಯನ್ನು ನಿಲ್ಲಿಸಿದ್ದನು ಸಂಯುಕ್ತೆ ಪೃಥ್ವೀರಾಜನ ಶೌರ್ಯ, ಧೈರ್ಯ, ಸೌಂದರ್ಯಗಳಿಗೆ ಮನಸೋತಿದ್ದಳು ಅವಳು ಸ್ವಯಂವರಮಂಟಪದಲ್ಲಿ ಒಂದಳು, ನೇರವಾಗಿ ಹೋಗಿ (ಪೃಥ್ವೀರಾಜನ) ಬೊಂಬೆಗೇ ಮಾಲೆಯನ್ನು ಹಾಕಿದಳು ಅಲ್ಲಿಯೇ ಮರೆಯಲ್ಲಿದ್ದ ಪೃಥ್ವೀರಾಜನು ಕೂಡಲೆ ಅವಳನ್ನು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಅಜಮೀರಕ್ಕೆ ನಾಗಿದನು

ಇದರಿಂದ ಪೃಥ್ವೀರಾಜ-ಜಯಚಂದರಲ್ಲಿ ಹಗತನವು ಬಳೆಯುತ್ತಿದ್ದಿತು

**ಯುದ್ಧಸಿದ್ಧತೆ** — ಅತ್ತಕಡೆಗೆ ಘೋರೀಮುಹಮ್ಮದನ ಎದೆಯಲ್ಲಿ ಹಿಂದಿಸ ಅಪಜಯದ ಬೆಂಕಿ ಉರಿಯುತ್ತಲೇ ಇತ್ತು ರಜಪೂತರ ಸುಧಾರಿಸಿದ ಯುದ್ಧಪದ್ಧತಿಯನ್ನು ಪಠಾಣರು ಕಂಡಿದ್ದರು ಅದರಂತೆ ತಾವೂ ಸುಸಜ್ಜಿತವಾದ ಸೈನ್ಯವನ್ನು ಸಿದ್ಧಗೊಳಿಸಿದರು, ಸಂಖ್ಯೆಯನ್ನೂ ಬಳೆಸಿದರು ಘೂರಿಯ ಸುಲ್ತಾನನು ಗುಟ್ಟಾಗಿ ಜಯಚಂದನ ಸ್ನೇಹವನ್ನು ಬಯಸಿದನು ಜಯಚಂದನಿಗೂ ಪೃಥ್ವೀರಾಜನ ಮೇಲೆ ಸೇಡುತೀರಿಸಿಕೊಳ್ಳಬೇಕಾಗಿತ್ತು ಯುದ್ಧಕಾಲದಲ್ಲಿ ಪೃಥ್ವೀರಾಜನಿಗೆ ಸಹಾಯ ಮಾಡುವುದಿಲ್ಲವೆಂದು ಸುಲ್ತಾನನಿಗ ಹೇಳಿ ಕಳುಹಿದನು ಪಠಾಣರ ಸಿದ್ಧತೆಯು ಇಮ್ಮಡಿ ಹುರುಪಿನಿಂದ ಸಾಗಿತು

ಇತ್ತ, ಪೃಥ್ವೀರಾಜನು ಹಿಂದೂರಾಜ್ಯ ಮತ್ತು ಹಿಂದೂಧರ್ಮರಕ್ಷಣೆಗ ಸಹಾಯ ಮಾಡಬೇಕೆಂದು ಸುತ್ತಲಿನ ರಜಪೂತ ಅರಸರಿಗೆಲ್ಲ ಪತ್ರಗಳನ್ನು ಬರೆದನು ಸಮರಸಿಂಹ, ರಾವ ಮುಂತಾಗಿ ನೂರೈವತ್ತು ಜನ ಶೂರ ಅರಸರೆಲ್ಲರೂ ಒಪ್ಪಿಗೆಯನ್ನು ಕೊಟ್ಟರು ಪೃಥ್ವೀರಾಜನ ಪರಿಶ್ರಮವು ಸಾರ್ಥಕವಾಯಿತು ಭರದಿಂದ ಸಮರಸಿದ್ಧತೆಯು ಸಾಗಿತು

**ಸ್ಥಾನೇಶ್ವರದ ೨ನೆಯ ಯುದ್ಧ** — ೧೧೯೩ನೆಯ ವರ್ಷ ಘೂರಿ ಮುಹಮ್ಮದನು ದೊಡ್ಡ ದಂಡಿನೊಡನೆ ಸ್ಥಾನೇಶ್ವರ ಸಮರಭೂಮಿಯಲ್ಲಿ ಬೀಡುಬಿಟ್ಟನು ಪೃಥ್ವೀರಾಜನು ಪ್ರಬಲ ಸೈನ್ಯಸಹಿತವಾಗಿ ಪಠಾಣರಿಗೆ

ಇದಿರಾದನು ಆದರೆ, ರಾತ್ರಿ ರಜಪೂತರು ಮೈಮರೆತಿರುವಾಗ, ಒಮ್ಮೆಲೆ ಅವರ ಮೇಲೆ ದೊಡ್ಡ ದಂಡಿನೊಡನೆ ಸುಲ್ತಾನನು ಏರಿಬಂದನು ರಜಪೂತರು ಕಕ್ಕಾವಿಕ್ಕಿಯಾದರು ಅನೇಕ ರಾಜರು ಮಡಿದರು, ಪೃಥ್ವೀರಾಜನೂ ಹತನಾದನು

**ದೇಶದ್ರೋಹಿಗೆ ಶಿಕ್ಷೆ** – ಈ ಜಯದಿಂದ ಮಹಮ್ಮದನಿಗೆ ಇದಿರಾಳಿಗಳೇ ಇಲ್ಲದಂತಾಯಿತು ಅಜಮೀರದ ಕಡೆಗೆ ಸಾಗಿ ಅದನ್ನು ಸುಲಿದನು ದೇವಾಲಯಗಳಿಂದ ಅಪಾರ ಹಣವನ್ನು ಸಂಗ್ರಹಿಸಿದನು ಸ್ವಜನದ್ರೋಹ ಸ್ವದೇಶದ್ರೋಹ ಮಾಡಿದ್ದಕ್ಕೆ ಜಯಚಂದನಿಗೆ ತಕ್ಕ ಶಿಕ್ಷೆಯಾಗಬೇಕಲ್ಲವೇ? ಘೋರೀಮಹಮ್ಮದನು ಯುದ್ಧದಲ್ಲಿ ತನಗೆ ಸಹಾಯಮಾಡಿದ ಜಯಚಂದನ ಉಪಕಾರವನ್ನು ನೆನೆಯದೆ, ಅವನನ್ನು ಕೊಂದು ಕನೋಜವನ್ನು ಸೂರೆಮಾಡಿ ರಾಜ್ಯವನ್ನು ವಶಪಡಿಸಿಕೊಂಡನು, ಹೀಗೆ, ಕಾಬೂಲದಿಂದ ಕಾಶಿಯವರೆಗೂ ಘೋರೀಮುಹಮ್ಮದನು ರಾಜ್ಯವಿಸ್ತಾರ ಮಾಡಿದನು ಭಾರತದಲ್ಲಿಯ ತನ್ನ ಸಾಮ್ರಾಜ್ಯಭಾಗವನ್ನು ಭದ್ರಗೊಳಿಸಲು ಅವನು ತನ್ನ ಪ್ರೀತಿಯ ಗುಲಾಮನಾದ ಕುತುಬುದ್ದೀನನನ್ನು ನಿಯಮಿಸಿದನು ಅನಂತರ ಸ್ವದೇಶಕ್ಕೆ ಹಿಂತಿರುಗುವಾಗ, ಪಂಜಾಬದ ನೆರೆಯ ಖೋಕರರೆಂಬ ಗುಡ್ಡಗಾಡಿನವರು ಅವನನ್ನು ಕೊಂದರು (ಕ್ರಿ ವ ೧೨೦೬)

**ಕುತುಬುದ್ದೀನ** – ಕುತುಬುದ್ದೀನನು ಚಿಕ್ಕವನಿರುವಾಗ ಇವನನ್ನು ಒಬ್ಬ ಸರದಾರನು ಕೊಂಡಿದ್ದನು ಆ ಸರದಾರನು ಈತನ ಬುದ್ಧಿಚಾತುರ್ಯ-ಧೈರ್ಯಗಳನ್ನು ಕಂಡು, ಈತನನ್ನು ಮಹಮ್ಮದ ಘೋರಿಗೆ ಒಪ್ಪಿಸಿದನು. ಮುಂದೆ ಸ್ವಲ್ಪ ಕಾಲದಲ್ಲಿಯೇ ಕುತುಬುದ್ದೀನನು ಸರದಾರನಾದನು


ಕುತುಬುದ್ದೀನ

ಕುತುಬುದ್ದೀನನು ಸಮಯ ಸಾಧಿಸಿ ಚಿತ್ತೂರು-ದಿಲ್ಲಿಗಳನ್ನು ಗೆದ್ದು ಒಡೆಯನ ರಾಜ್ಯವನ್ನು ಬಳೆಸಿದನು, ಮುಂದ ಈತನಿಗೆ ಸಹಾಯಕನಾಗಿ **ಬಖ್ತಿಯಾರ ಖಿಲಜಿ** ಎಂಬ ಶೂರ ಸೇನಾಪತಿಯು ದೊರೆತನು ಇಬ್ಬರೂ ಕೂಡಿ ಬಂಗಾಲ ಬಿಹಾರಗಳ ವರೆಗೂ ರಾಜ್ಯವನ್ನು ಬೆಳೆಸಿದರು ಈ ಕಾಲಾವಧಿಯಲ್ಲಿ ಪಠಾಣ ಜನಾಂಗಕ್ಕೆಲ್ಲ ಕುತುಬುದ್ದೀನನ ಬುದ್ಧಿಚಾತುರ್ಯ, ಶೌರ್ಯ-ಧೈರ್ಯ, ದೊಡ್ಡ ಮನಸ್ಸುಗಳ ಪರಿಚಯವು ಚೆನ್ನಾಗಿ ಆಯಿತು

ಘೋರೀ ಮಹಮ್ಮೂದನ ತರುವಾಯ ೧೨೦೬ರಲ್ಲಿ ಕುತುಬುದ್ದೀನನೇ ದಿಲ್ಲಿಯ ದೊರೆಯಾದನು ಆ ಸಿಂಹಾಸನವನ್ನೇರಿದ ಪರಕೀಯರಾಜರಲ್ಲಿ ಈತನೇ ಮೊದಲಿಗನೆಂದು ಹೇಳಬಹುದು. ಈತನಿಂದಲೇ "ಗುಲಾಮ" ಬಾದಶಾಹೀ ಮನೆತನವು ಆರಂಭವಾಯಿತು ಮುಂದೆ, ಕುತುಬುದ್ದೀನನಂತೆ ಗುಲಾಮರಾಗಿದ್ದವರೇ ಇಬ್ಬರು ದಿಲ್ಲಿಯ ಬಾದಶಹರಾದರು



ಕುತುಬಮಿನಾರ

ಕುತುಬುದ್ದೀನನು ಶಾಂತಿ-ನಮತೆಗಳಿಂದ ರಾಜವನ್ನು ಆಳಿದನು ದಿಲ್ಲಿಯಲ್ಲಿ ಇವನು ಕುತುಬಮಸೀದೆ, ಕುತುಬಮಿನಾರಗಳನ್ನು ಕಟ್ಟಿಸಿದನು ಈ ಮಿನಾರವು ೨೩೮ ಅಡಿ ಎತ್ತರವಾಗಿದ್ದು, ಮೇಲಿನ ಎರಡೂ ಅಂತಸ್ತುಗಳ ನಾಲ್ಕೂ ಗೋಡೆಗಳ ಮೇಲೆ ಕುರಾನದ ವಾಕ್ಯಗಳು ಬರೆದಿವೆ ಕುತುಬುದ್ದೀನನು ಕೊಡುಗೈ ದೊರೆಯಾಗಿದ್ದನು ಅವನಿಗೆ "ಲಕ್ಕಬಕ್ಷ್" ಎಂದರೆ ಲಕ್ಷಲಕ್ಷವಾಗಿ ದಾನಮಾಡುವವನು ಎಂಬ ಹೆಸರಿತ್ತು

**ಅಲ್ತಮಶಹನ ಆಳಿಕೆ** —(೧೨೧೧—೧೨೩೬) ಕುತುಬುದ್ದೀನನ ತರುವಾಯ ಅಳಿಯನಾದ **ಅಲ್ತಮಶಹನು** ಸಿಂಹಾಸನವನ್ನೇರಿದನು ಅಲ್ತಮಶಹನು ಚಿಕ್ಕಂದಿನಲ್ಲಿಯೇ ಕುತುಬುದ್ದೀನನ ಗುಲಾಮನಾಗಿದ್ದನು ಇವನು ಬುದ್ಧಿವಂತನೂ ಧೈರ್ಯಶಾಲಿಯೂ ಆಗಿದ್ದನು ಅದರಿಂದ ಕುತುಬುದ್ದೀನನು ಈತನಿಗೇ ಮಗಳನ್ನು ಮದುವೆಮಾಡಿ ಕೊಟ್ಟನು ಕುತುಬುದ್ದೀನನಿಗೆ ಗಂಡುಮಕ್ಕಳಿರಲಿಲ್ಲ ಆದುದರಿಂದ ತುರ್ಕೀ ಅಮೀರರು ಅಲ್ತಮಶಹನನ್ನೇ ಪಟ್ಟಕ್ಕೆ ಕುಳ್ಳಿರಿಸಿದರು

ಈತನು ತನ್ನ ಶೌರ್ಯದಿಂದ ಮಧ್ಯಭಾರತದ ಉಜ್ಜಯಿನಿಯ ವರೆಗೂ ತನ್ನ ರಾಜ್ಯವನ್ನು ವಿಸ್ತರಿಸಿದನು. ಈತನ ೨೬ ವರ್ಷಗಳ ಆಳಿಕೆಯು

ಕೊನೆಯಲ್ಲಿ ಸಿಂಧುನದಿಯಿಂದ ಗಂಗಾನದಿಯ ವರೆಗೂ ರಾಜ್ಯವಿಸ್ತಾರ ವಾಗಿತ್ತು

**ರೇಜಿಯಾ ಬೇಗಂ** — ಅಲ್ತಮಶಹನ ಮಕ್ಕಳಲ್ಲಿ ಅರಸನಾಗುವ ಯೋಗ್ಯತೆ ಯಾರಲ್ಲಿಯೂ ಇರಲಿಲ್ಲ 'ರೇಜಿಯಾ ಬೇಗಂ' ಎಂಬ ಮಗಳು ಮಾತ್ರ ಸಮರ್ಥಳಾಗಿದ್ದಳು ಅವಳು ಮೂರು ವರ್ಷಗಳ ಕಾಲ ಅಧಿಕಾರದಲ್ಲಿದ್ದಳು. ಆಕೆಯ ಆಳಿಕೆ ಒಳ್ಳೆಯದಾಗಿತ್ತು ಆದರೆ ಹೆಂಗಸನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಗೌರವಿಸಲು ಅನೇಕರು ಒಪ್ಪಲಿಲ್ಲ ರಾಜ್ಯದಲ್ಲಿ ಬಂಡಾಯಗಳು ಎದ್ದುವು ೧೨೪೦ರಲ್ಲಿ ಸರದಾರರೇ ಆಕೆಯನ್ನು ಕೊಂದರು ತರುವಾಯ ಆಕೆಯ ಅಣ್ಣ ನಾಸಿರ್‌ಉದ್ದೀನನು ೧೨೪೦ರಿಂದ ೧೨೬೬ರ ವರೆಗೆ ರಾಜ್ಯವಾಳಿ ಮರಣಹೊಂದಿದನು ಆಮೇಲೆ ಅಮೀರರೆಲ್ಲ ಒಟ್ಟಾಗಿ **ಬಲ್ಬನ್** ಎಂಬ ಗುಲಾಮ ಸೇನಾಪತಿಯನ್ನು ಸಿಂಹಾಸನಕ್ಕೆ ತಂದರು



ಸುಲ್ತಾನಾ ರೇಜಿಯಾ ಬೇಗಂ

**ಬಲ್ಬನ್** —(೧೨೬೬–೧೨೮೬) ಬಲ್ಬನ್ನನು ತನ್ನ ಬುದ್ಧಿಶೌರ್ಯಗಳಿಂದ ಒಡೆಯನಾದ ಅಲ್ತಮಶಹನ ಹಾಗೂ ಸರದಾರರ ಮೆಚ್ಚುಗೆಯನ್ನು ಪಡೆದಿದ್ದನು

ಬಲ್ಬನ್ನನು ಒರಿಯ ಬಿಗುವಿನಿಂದ ರಾಜ್ಯದಲ್ಲಿ ವ್ಯವಸ್ಥೆಯನ್ನು ಕಾಯ್ದುಕೊಂಡನು ರಾಜ್ಯದಲ್ಲಿದ್ದ ಬಂಡುಗಳನ್ನು ಅಡಗಿಸುವುದೇ ಈತನ ಕೆಲಸವಾಯಿತು ಮಧ್ಯ ಏಶಿಯಾದಿಂದ ಮಂಗೋಲ್ ಎಂಬ ಕ್ರೂರ ಅನಾಗರಿಕ ಜನರು ಭಾರತದಲ್ಲಿ ನುಗ್ಗಿ ಕೊಲೆ-ಸುಲಿಗೆ ಮಾಡಹತ್ತಿದರು ಬಲ್ಬನ್ನನು ಸಾಹಸದಿಂದ ಅವರನ್ನು ಹಿಮ್ಮೆಟ್ಟಿಸಿದನು ಚಂದೇರಿ, ಮಾಳವಾ, ಗ್ವಾಲ್ಹೇರ ರಾಜ್ಯಗಳನ್ನು ಈತನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು ಈ ಸುಲ್ತಾನನು ೧೨೮೬ರಲ್ಲಿ ಸತ್ತನು ಮುಂದೆ ಖಿಲಜಿ ಅರಸರು ದಿಲ್ಲಿಯ ಸಿಂಹಾಸನವನ್ನು ಆಕ್ರಮಿಸಿದರು

**ಆ ಕಾಲದ ದಕ್ಷಿಣದ ಅರಸರು** — ಆ ಕಾಲದಲ್ಲಿ ದಕ್ಷಿಣದಲ್ಲಿ, ದೇವಗಿರಿಯ ಯಾದವ ರಾಮದೇವರಾಯ, ದ್ವಾರಸಮುದ್ರದ ಹೊಯ್ಸಳ ವೀರಬಲ್ಲಾಳರು ಆಳುತ್ತಿದ್ದರು ಉತ್ತರದಲ್ಲಾದ ಮುಸಲ್ಮಾನರ ದಾಳಿಗಳು ಮುಂದೆ ತಮ್ಮ ಮೇಲೆಯೂ ಬರಬಹುದೆಂಬ ತಿಳಿವಳಿಕೆ ಅವರಿಗೆ ಇರಲಿಲ್ಲ.

## ಅಭ್ಯಸನಗಳು

೧ ಪೃಥ್ವೀರಾಜ-ಜಯಚಂದರಲ್ಲಿ ಹಗೆತನವನ್ನು ಉಂಟುಮಾಡಿದ ಎರಡು ಮಹತ್ತ್ವದ ಸಂಗತಿಗಳು ಯಾವುವು?

೨ ಸ್ಥಾನೇಶ್ವರದ ಮೊದಲನೆಯ ಯುದ್ಧದಲ್ಲಿ ಪೃಥ್ವೀರಾಜನಿಗೆ ಜಯವೇಕಾಯಿತು? ಎರಡನೆಯ ಯುದ್ಧದಲ್ಲಿ ಅಪಜಯವೇಕಾಯಿತು?

೩ ಮಹಮ್ಮೂದ ಘೋರಿಗೆ ಸಹಾಯಮಾಡಿದ್ದಕ್ಕಾಗಿ ಮುಂದೆ ಜಯಚಂದನಿಗೆ ಯಾವ ಪ್ರತಿಫಲ ಸಿಕ್ಕಿತು? ಅದರಿಂದ ನಾವು ಯಾವ ಪಾಠವನ್ನು ಕಲಿತುಕೊಳ್ಳಬೇಕು?

೪ ಕೆಳಗಿನ ವ್ಯಕ್ತಿಗಳ ಬಗೆಗೆ ನಿಮಗೆ ಗೊತ್ತಿದ್ದ ಮಹತ್ತ್ವದ ಒಂದೊಂದು ಸಂಗತಿಯನ್ನು ಬರಯಿರಿ
**ಉಲ್ಪೆ, ರೇಜಿಯಾ ಬೇಗಂ, ಒಲ್ಬನ್**

೫ ‹ಲಕ್ಕಬಕ್ಷ್› ಎಂದು ಯಾರಿಗೆ ಹೆಸರಿತ್ತು? ಯಾಕೆ?

೬ ಯಾವ ಯಾವ ಮುಸಲ್ಮಾನ ಅರಸರು ಭಾರತದ ಮೇಲೆ ದಾಳಿಮಾಡಿದರು? ಯಾಕೆ?

೭ ನೀವೇ ಸೋಮನಾಥದ ಆಗಿನ ಒಬ್ಬ ಪೂಜಾರಿಯೆಂದು ತಿಳಿದು, ಸೋಮನಾಥ ದೇವಾಲಯದ ವರ್ಣನೆಯನ್ನೂ ಅದರ ಮೇಲೆ ಆದ ದಾಳಿಯನ್ನೂ ನಿಮ್ಮ ಮಾತುಗಳಲ್ಲಿ ಹೇಳಿರಿ

---

# ೬ ಖಿಲಜಿ ಹಾಗೂ ತಗಲಖ ಅರಸರು

## ಖಿಲಜಿ ಅರಸರು

ಹೇಡಿಗಳಾದ ಕೊನೆಯ ಗುಲಾಮ ಅರಸರ ಕಾಲದಲ್ಲಿ ಸರದಾರನಾಗಿದ್ದ **'ಜಲಾಲುದ್ದೀನ ಖಿಲಜಿ'**ಯು ಬಂಡನ್ನೆಬ್ಬಿಸಿ, ದಿಲ್ಲಿಯ ಸಿಂಹಾಸನವನ್ನು ಹಿಡಿದುಕೊಂಡನು ಈತನಿಂದಲೇ ಖಿಲಜಿ ಮನೆತನವು ಮೊದಲಾಯಿತು ಆದರೆ, ಈತನು ಪಟ್ಟಕ್ಕೆ ಬಂದಾಗ ೭೦ ವರುಷಗಳ ಮುದುಕನಿದ್ದನು. ಅದರಿಂದ ತಮ್ಮನ ಮಗನಾದ ಅಲ್ಲಾಉದ್ದೀನನಿಗೆ ರಾಜ್ಯಭಾರವನ್ನೊಪ್ಪಿಸಿ ಸುಖದಿಂದ ಕಾಲ ಕಳೆಯತೊಡಗಿದನು

**ಅಲ್ಲಾಉದ್ದೀನನು ಅರಸನಾದುದು** — ಅಲ್ಲಾಉದ್ದೀನನು ತುಂಬಾ ಮಹತ್ವಾಕಾಂಕ್ಷಿ ಕೈಯಲ್ಲಿ ಅಧಿಕಾರ ಸಿಕ್ಕುತ್ತಲೇ ದಕ್ಷಿಣಭಾರತಕ್ಕೆ ದಂಡೆತ್ತಿ ಹೋಗಿ ದೇವಗಿರಿಗೆ ದಾಳಿಯನ್ನಿಟ್ಟನು ಮೈಮರೆತ ದೇವಗಿರಿಯ ಯಾದವ ರಾಜನಾದ ರಾಮದೇವನು ಹೆದರಿ ಒಪ್ಪಂದಮಾಡಿಕೊಂಡನು. ಇದರಿಂದ ಅಲ್ಲಾಉದ್ದೀನನಿಗೆ ಹೇರಳವಾದ ಹಣವೂ ಎಲಿಚಪುರ ಪ್ರಾಂತವೂ ಸಿಕ್ಕುವು (೧೨೯೬—೧೩೧೬)

ಈ ಗೆಲವಿನಿಂದ ಅಲ್ಲಾಉದ್ದೀನನಿಗೆ ಅರಸೊತ್ತಿಗೆಯ ಆಸೆ ಹೆಚ್ಚಿತು. ರಾಜಧಾನಿಗೆ ಬರುತ್ತಲೇ ಕಕ್ಕನನ್ನು ಕೊಂದು ಪಟ್ಟಕ್ಕೆ ಕುಳಿತನು ತುಸು ದಿವಸಗಳಲ್ಲಿಯೇ ಸುತ್ತಲಿನ ಮಂಗೋಲ ಮೊದಲಾದವರ ಬಂಡುಗಳನ್ನು ಮುರಿದು ಆಳಿಕೆಯನ್ನು ಗಟ್ಟಿಗೊಳಿಸಿದನು

**ರತನಭೋರ ಮುತ್ತಿಗೆ** —(೧೩೦೧) ಅಲ್ಲಾಉದ್ದೀನನಿಗೆ ರಾಜ್ಯವನ್ನು ಬೆಳೆಸಬೇಕೆಂಬ ಹಂಬಲು ಬಲವಾಯಿತು ಎರಡನೆಯ ಅಲೆಕ್ಝಾಂಡರನೆಂದೆನಿಸಿ ಕೊಳ್ಳಬೇಕೆಂದೂ ಭಾರತದಲ್ಲಿಯ ಮುಸಲ್ಮಾನರಿಗೆಲ್ಲ ತಾನೇ ಧರ್ಮಾಧಿ-ಕಾರಿಯಾಗಬೇಕೆಂದೂ ಬಯಸಿದನು ಅದಕ್ಕಾಗಿ ಮೊದಲು **ರತನಭೋರ** ಅಥವಾ **ರಣತಂಭೋರ**ದತ್ತ ಸಾಗಿದನು

ಅಲ್ಲಿ ರಾಣಾ ಅಮೀರದೇವನು ರಾಜನಾಗಿದ್ದನು ಅವನು ಮಹಾ-ವೀರನು ಆದರೆ, ಬರಲಿರುವ ಸಂಕಷ್ಟಗಳ ಅರಿವಿಲ್ಲದೆ ಮೈಮರೆತಿದ್ದನು. ನೆರೆಹೊರೆಯ ರಾಜರಿಂದಲೂ ಸಹಾಯ ಬರದಿದ್ದುದರಿಂದ ಅವನ ಆಟ ಸಾಗ ಲಿಲ್ಲ ಈ ಸಂಗತಿ ರಜಪೂತ ನಾರಿಯರಿಗೆಲ್ಲ ತಿಳಿಯಿತು ಅವರು ಜೋಹಾರ್ ಮಾಡಿದರು. ರಾಣಾನು ರಣರಂಗದಲ್ಲಿಯೇ ಮಡಿದನು

**ಚಿತ್ತೂರ ಮುತ್ತಿಗೆ** —(೧೩೦೩) ರತನಭೋರ ವಿಜಯದ ತರುವಾಯ ಅಲ್ಲಾಉದ್ದೀನನು ಚಿತ್ತೂರ ಮೇಲೆ ದಾಳಿಯಿಟ್ಟನು ಅಲ್ಲಿಯ ದೊರೆ

ರಾಣಾ ಭೀಮದೇವನು ಆತನ ಹೆಂಡತಿ ಪದ್ಮಿನೀ ರಾಣಿಯು ಬಲು ಚೆಲುವೆ ಆಕೆಯನ್ನು ವಶಪಡಿಸಿಕೊಳ್ಳುವುದೇ ಈ ದಾಳಿಯ ಮುಖ್ಯ ಉದ್ದೇಶ ವಾಗಿತ್ತು

ರಾಣಾ ಭೀಮದೇವನು ಈ ಮುತ್ತಿಗೆಯಲ್ಲಿ ಅಲ್ಲಾಉದ್ದೀನನನ್ನು ಮಿತ್ರಗೆ ಮಾಡಿದನು ಖಿಲಜಿಯು ಒಪ್ಪಂದಕ್ಕೆ ಸಿದ್ಧನಾದನು, ಆದರೆ ಪದ್ಮಿನಿ ಯನ್ನು ಒಮ್ಮೆ ನೋಡಬೇಕೆಂಬ ಹಂಬಲವನ್ನು ಪ್ರಕಟಿಸಿದನು ರಾಣಾ ಒಪ್ಪಿದನು, ಅವಳ ಪ್ರತಿಬಿಂಬವನ್ನು ಕನ್ನಡಿಯಲ್ಲಿ ತೋರಿಸಿದನು ಅವನನ್ನು ಬೀಳ್ಕೊಡಲು ರಾಣಾನು ಕೋಟೆಯ ಹೊರಗ ಬಂದನು ಕೂಡಲೇ ಅಲ್ಲಾ-ಉದ್ದೀನನ ಸೈನಿಕರು ಭೀಮದೇವನನ್ನು ಬಂಧಿಸಿದರು, ಶಿಬಿರಕ್ಕೆ ಒಯ್ದರು ಪದ್ಮಿನೀರಾಣಿಯನ್ನು ತನ್ನ ವಶಕ್ಕೆ ಕೊಟ್ಟರೆ ಅವನನ್ನು ಬಿಡುವುದಾಗಿ ಅಲ್ಲಾ-ಉದ್ದೀನನು ಹೇಳಿದನು

**ಪದ್ಮಿನಿಯ ಪ್ರಸಂಗಾವಧಾನ** – ಪದ್ಮಿನೀರಾಣಿಗ ಈ ಸುದ್ದಿ ತಿಳಿಯಿತು, ಆಕೆ ಒಂದು ಹಂಚಿಕೆಯನ್ನು ಹುಡುಕಿದಳು "ಐದು ನೂರು ದಾಸೀಜನ ಮತ್ತು ತಕ್ಕ ಸಂಪತ್ತು ಸಹಿತವಾಗಿ ಪರದೆಯ ಪಲ್ಲಕ್ಕಿಗಳಲ್ಲಿ ಹೊರಡುವೆನು ನಿನ್ನ ಸೈನಿಕರಾರೂ ನಮ್ಮನ್ನು ನೋಡಕೂಡದು ಇದಕ್ಕೆ ಒಪ್ಪಿದರೆ ನಿನ್ನ ರಾಣಿಯಾಗುವೆನು" ಎಂದು ಅಲ್ಲಾಉದ್ದೀನನಿಗ ಹೇಳಿಕಳುಹಿದಳು ಅದ ರಂತೆಯೇ ವ್ಯವಸ್ಥೆಯಾಯಿತು ಪದ್ಮಿನೀರಾಣಿಯು ೩೫೦೦ ಜನ ಶೂರ ಸೈನಿಕ ರಿಗೆ ಸ್ತ್ರೀವೇಷ ಹಾಕಿ ಕರೆದುಕೊಂಡು ಹೊರಟಳು ಶಿಬಿರವನ್ನು ಮುಟ್ಟು ತ್ತಲೇ ಸೈನಿಕರು ಶಸ್ತ್ರಸಹಿತ ಹೊರಬಿದ್ದರು ಎರಡೂ ಸೈನ್ಯಗಳ ಈ ಗಡಿ-ಬಿಡಿಯಲ್ಲಿ ರಾಜ-ರಾಣಿಯರು ಪಾರಾದರು ಅಲ್ಲಾಉದ್ದೀನನು ಹತಾಶ ನಾಗಿ ದಿಲ್ಲಿಗೆ ಹಿಂತಿರುಗಿದನು ಇಷ್ಟಾದ ಮೇಲಾದರೂ ರಜಪೂತರೆಲ್ಲ ಒಟ್ಟಾಗಿ ಯುದ್ಧದ ಸಿದ್ಧತೆ ಮಾಡಿಕೊಳ್ಳಬೇಕಾಗಿತ್ತು, ಹಾಗೆ ಮಾಡದ ಮೈಮರೆತು ಕುಳಿತರು

**ಚಿತ್ತೂರಿನ ದುರಂತ** – ಅಲ್ಲಾಉದ್ದೀನನು ಈ ಅಪಮಾನದ ಸೇಡನ್ನು ತೀರಿಸಿಕೊಳ್ಳಲು ಮರುವರುಷ ಮತ್ತೆ ಚಿತ್ತೂರನ್ನು ಮುತ್ತಿದನು ರಜಪೂತರ ಆಟ ನಾಗಲಿಲ್ಲ ಭೀಮದೇವನು ಅಡವಿಯನ್ನು ಸೇರಿದನು ಅಲ್ಲಾ ಉದ್ದೀನನು ಅರಮನೆಯನ್ನು ಹೊಕ್ಕನು **ಪದ್ಮಿನೀರಾಣಿಯು** ರಜಪೂತ ಸ್ತ್ರೀಯರೊಡನೆ ಜೋಹಾರ ಮಾಡಿದಳು! ಅಲ್ಲಾಉದ್ದೀನನು ಮಾಲವದೇವ ನೆಂಬ ರಜಪೂತನನ್ನು ಅಲ್ಲಿ ನಿಯಮಿಸಿ ದಿಲ್ಲಿಗೆ ತಿರುಗಿದನು

**ದಕ್ಷಿಣದ ದಿಗ್ವಿಜಯ** – ದೇವಗಿರಿಯು ಅಲ್ಲಾಉದ್ದೀನನಿಗ ಅಂಕಿತವಾದ ಮೇಲೆ ದಕ್ಷಿಣದೇಶಗಳ ಮೇಲೆ ಅವನ ದೃಷ್ಟಿ ಬಿದ್ದಂತೆಯೇ ಆಗಿತ್ತು ಈ

ಅರಸರು ಅಲ್ಲಾಉದ್ದೀನನ ಹೂರತನ ಕ್ರೂರತನಗಳನ್ನು ಕೇಳಿದ್ದರೂ, ದಿಲ್ಲಿಯ ಸೈನ್ಯಬಲವೆಷ್ಟೆಂಬುದನ್ನು ಅರಿತಿರಲಿಲ್ಲ ಇವರನ್ನು ಗೆಲ್ಲುವುದಕ್ಕೆ ಅಲ್ಲಾಉದ್ದೀನನು ತನ್ನ ಶೂರ ಸೇನಾಪತಿಯಾದ **ಮಲಿಕಕಾಫುರನನ್ನು** ದೊಡ್ಡ ದಂಡಿನೊಡನೆ ಕಳಿಸಿಕೊಟ್ಟನು ಮಲಿಕಕಾಫುರನು ಗುಜರಾಥದ ಮುತ್ತಿಗೆಯಲ್ಲಿ ಸಿಕ್ಕ ಗುಲಾಮನು ಇವನು ತನ್ನ ಶೌರ್ಯ-ಧೈರ್ಯಗಳಿಂದ ಅಲ್ಲಾಉದ್ದೀನನ ಪ್ರೀತಿಯನ್ನು ಸಂಪಾದಿಸಿದ್ದನು ಈತನು ಸೈನ್ಯಸಹಿತವಾಗಿ ಮೊದಲು ಒರುಗಲ್ಲು (ವರಂಗಲ್ಲು) ರಾಜ್ಯವನ್ನು ಹೊಕ್ಕನು ಅಲ್ಲಿಯ **ಕಾಕತೀಯ** ಅರಸು ಸೋತು ಕಪ್ಪ-ಕಾಣಿಕೆಗಳನ್ನು ಕೊಟ್ಟನು ಆ ಮೇಲೆ ಅವನು ದ್ವಾರಸಮುದ್ರದ **ಹೊಯ್ಸಳ ವೀರಬಲ್ಲಾಳ, ಮಧುರೆಯ ಪಾಂಡ್ಯ** ರಾಜರನ್ನು ಸೋಲಿಸುತ್ತ, ರಾಮೇಶ್ವರದ ವರೆಗೂ ರಾಜ್ಯವನ್ನು ವಿಸ್ತರಿಸಿದನು, ಸಾವಿರ ಒಂಟೆಗಳ ಮೇಲೆ ಹೇರಿದ ಹೇರಳ ಸಂಪತ್ತಿಯೊಡನೆ ದಿಲ್ಲಿಗೆ ಮರಳಿದನು ಈ ದಿಗ್ವಿಜಯದಿಂದ ಅಲ್ಲಾಉದ್ದೀನನ ಒಡೆತನವು ದಿಲ್ಲಿಯಿಂದ ರಾಮೇಶ್ವರದ ವರೆಗೂ ಪಸರಿಸಿತು

**ಆಳಿಕೆಯ ವೈಶಿಷ್ಟ್ಯ** — ಇವನು ಗೂಢಚಾರರನ್ನು ನಿಯಮಿಸಿ ತನ್ನ ವಿರುದ್ಧ ಒಳಸಂಚುಮಾಡುವವರನ್ನು ಗೊತ್ತುಹಚ್ಚುತ್ತಿದ್ದನು ಸರಕಾರದ ಅಧಿಕಾರಿಗಳು ತಪ್ಪು ಮಾಡಿದಲ್ಲಿ ಅವರನ್ನು ನಿರ್ದಾಕ್ಷಿಣ್ಯವಾಗಿ ಶಿಕ್ಷಿಸುತ್ತಿದ್ದನು. ದೊಡ್ಡ ಸೈನ್ಯವೊಂದನ್ನು ಕೂಡಿಸಿ ತಕ್ಕ ಶಿಕ್ಷಣ ಕೊಡಿಸಿ, ಸದಾ ಸಿದ್ಧವಾಗಿರುವಂತೆ ವ್ಯವಸ್ಥೆ ಮಾಡಿದ್ದನು ರಾಜ್ಯದಲ್ಲಿ ಅವ್ಯವಸ್ಥೆಯನ್ನು ಹುಟ್ಟಿಸುವ ಕುಡುಕತನ, ಜೂಜಾಟ, ಅಧಿಕಾರಿಗಳ ಅಬ್ಬರ ಮೊದಲಾದುವುಗಳನ್ನು ಶಾಸನಗಳಿಂದಲೇ ನಿಲ್ಲಿಸಿದನು ಯಾರೂ ನಿರ್ಭೀತಿಯಿಂದ ಮುತ್ತು-ರತ್ನಗಳ ವ್ಯಾಪಾರವನ್ನು ಕೂಡ ಮಾಡಬಹುದಿತ್ತು ಸರಕುಗಳ ಹಾಗೂ ಜನರ ಸಾಗಾಟಕ್ಕೆ ರಾಜಮಾರ್ಗಗಳನ್ನು ಮಾಡಿಸಿದ್ದನು ಕಾಳುಕಡಿಗಳ ಧಾರಣೆಯೂ ಅಲ್ಪವಾಗಿಯೇ ಇತ್ತು ಅವುಗಳ ಬೆಲೆಯನ್ನು ನಿಶ್ಚಿತಗೊಳಿಸಿದ್ದನು ಸರದಾರರ ಮನೆಯಲ್ಲಿ ಮಂಗಲಕಾರ್ಯ ನಡೆಯಬೇಕಾದರೂ ರಾಜನ ಅಪ್ಪಣೆಯನ್ನು ಪಡೆಯಬೇಕಾಗಿತ್ತು

**ಅಲ್ಲಾಉದ್ದೀನನ ಮರಣ** — ಇವನು ಇಪ್ಪತ್ತು ವರುಷಗಳ ವರೆಗೆ ಬಿಗುವಿನಿಂದಲೇ ರಾಜ್ಯಭಾರ ಮಾಡಿ ೧೩೧೬ರಲ್ಲಿ ಮಡಿದನು ಆ ಮೇಲೆ ಇವನ ಮಗನಾದ ಕುತುಬುದ್ದೀನ ಮುಬಾರಕನು ಪಟ್ಟವೇರಿದನು

**ಖಿಲಜಿಗಳ ಕೊನೆಗಾಲ** — ಕುತುಬುದ್ದೀನ ಮುಬಾರಕನು ಬಹಳ ವಿಲಾಸಿ! ಬೆಡಗಿನ ಬಟ್ಟೆಗಳನ್ನು ಹಾಕಿಕೊಂಡು ಸರದಾರರ ಮನೆಗಳಲ್ಲಿ ಗಾನ-ನರ್ತನಗಳನ್ನು ಮಾಡಿಸುವುದು ಇವನಿಗೆ ಪ್ರೀತಿಯ ವಿಷಯ, ಖಿಲಜಿಗಳ ಕೊನೆಗಾಲವು

ಇದೇ. ಮುಂದೆ ದಿಲ್ಲಿಯ ಸಿಂಹಾಸನವನ್ನು ತಗಲಖ ವಂಶದವರು ಆಕ್ರಮಿಸಿದರು.

## ತಗಲಖ ಅರಸರು

**ತಗಲಖ ಮನೆತನದ ಮೂಲ** —ತಗಲಖ ಅರಸುಮನೆತನದ ಮೂಲ-ಪುರುಷನು ಗಿಯಾಸುದ್ದೀನನು. ಈತನು ಬಲ್ಬನ್ನನ ಗುಲಾಮನಾಗಿದ್ದು ಬುದ್ಧಿಬಲದಿಂದ ಸಣ್ಣ ಅಧಿಕಾರವನ್ನು ಸಂಪಾದಿಸಿದನು ಅಲ್ಲಾಉದ್ದೀನನ ಕಾಲದಿಂದ ಪಂಜಾಬದ ಸುಭೇದಾರನಾದನು ಖಿಲಜಿ ಮನೆತನಕ್ಕೆ ಅವನತಿ-ಯುಂಟಾದ ಸಮಯಸಾಧಿಸಿ ದಿಲ್ಲಿಯ ದೊರೆಯಾದನು

**ಗಿಯಾಸುದ್ದೀನ ತಗಲಖ** —ಗಿಯಾಸುದ್ದೀನ ತಗಲಖನು ನ್ಯಾಯ ನೀತಿ ಶಾಂತತೆಗಳಿಂದಲೇ ಆಡಳಿತವನ್ನು ಸಾಗಿಸಿದನು ಪ್ರಜೆಗಳ ಮೇಲಿನ ಭಾರವಾದ ಕರ-ಕಂದಾಯಗಳನ್ನು ತೆಗೆದುಹಾಕಿ, ವ್ಯಾಪಾರದ ವೃದ್ಧಿಯಾಗುವಂತೆ ಮಾಡಿದನು ಸೈನ್ಯಶಕ್ತಿಯಿಂದ ಶತ್ರುಗಳ ಬಾಧೆಯನ್ನು ತಪ್ಪಿಸಿದನು ಹಿಂದುಗಳನ್ನು ಹಿಂಸಿಸಲಿಲ್ಲ ವಿದ್ವಾಂಸರಿಗೆ ಆಶ್ರಯಕೊಟ್ಟಿದ್ದನು ಅಮಿರ್‌ಖುಸ್ರು ಎಂಬ ಆಸ್ಥಾನಕವಿಗೆ ಅವನು ತಿಂಗಳೊಂದಕ್ಕೆ ಸಾವಿರ ಟಂಕ ಸಂಬಳ ಕೊಡುತ್ತಿದ್ದನು ಈತನು ೧೩೨೫ರಲ್ಲಿ ಮಡಿದ ಮೇಲೆ, ಮಗನಾದ ಮಹಮ್ಮದನು ಪಟ್ಟಕ್ಕೆ ಬಂದನು

**ಮಹಮ್ಮದ ತಗಲಖನ ಯೋಗ್ಯಾಯೋಗ್ಯತೆ** — ಈತನು ಅತ್ಯಂತ ಬುದ್ಧಿಶಾಲಿ, ಚತುರ, ವಿದ್ವಾಂಸ ಸಾಹಿತ್ಯ, ಸಂಗೀತ, ಶಿಲ್ಪ, ಜ್ಯೋತಿಷ, ವೈದ್ಯಕ, ಗಣಿತ, ತತ್ತ್ವಜ್ಞಾನ ಮುಂತಾಗಿ ಎಲ್ಲ ಶಾಸ್ತ್ರಗಳನ್ನೂ ಆಳವಾಗಿ ಅಭ್ಯಾಸ ಮಾಡಿದ್ದನು ಗ್ರೀಕ ವಿದ್ವಾಂಸನಾದ ಅರಿಸ್ಟಾಟಲನ ತರ್ಕಪದ್ಧತಿ, ತತ್ತ್ವಜ್ಞಾನಗಳ ಪರಿಚಯವನ್ನೂ ಮಾಡಿಕೊಂಡಿದ್ದನು ಅಂತಿಂತಹ ವಿದ್ವಾಂಸರು ವಾದದಲ್ಲಿ ಈತನಿಗೆ ಇದಿರಾಗುತ್ತಿರಲಿಲ್ಲ ಇದರಿಂದ 'ಸೃಷ್ಟಿಯ ವಿಲಕ್ಷಣ ಮೂರ್ತಿ' ಎಂದು ಇತಿಹಾಸಕಾರರು ಈತನನ್ನು ಹೊಗಳಿದ್ದಾರೆ. ಈತನಲ್ಲಿ ಬುದ್ಧಿಯ ಬಲವಿದ್ದಂತೆ ಮನಸ್ಸೂ ಮಿದುವಾಗಿದ್ದಿತು ಹಿಂದುಗಳನ್ನು ಹಿಂಸಿಸುತ್ತಿರಲಿಲ್ಲ ಸಹಗಮನ ಪದ್ಧತಿಯನ್ನು ನಿಲ್ಲಿಸಲು ಪ್ರಯತ್ನಿಸಿದನು. ಸೆರೆ-ಸಿಂದಿಗಳನ್ನು ನಿರ್ಬಂಧಿಸಿದನು

ಆದರೆ, ಈ ಮಿತಿಮಿರಿದ ಯೋಗ್ಯತೆಯೇ ಅವನ ಅಯೋಗ್ಯತೆಗೆ ಕಾರಣವಾಯಿತೆಂದು 'ಇಬ್ನಬತೂತ್' ಎಂಬ ಆಸ್ಥಾನ ಇತಿಹಾಸಕಾರನು ಬರೆಯುತ್ತಾನೆ. ಮಹಮ್ಮದನಿಗೆ ತನ್ನ ವಿಚಾರದ ಮೇಲೆಯೇ ವಿಶ್ವಾಸ. ಹೆರವರು ಹೇಳಬಂದರೆ ತಲೆತಿರುಕತನದ ಸಿಟ್ಟು-ಸೆಡವುಗಳನ್ನು ತೋರಿಸುತ್ತಿ

ದ್ದನು ಈ ಸ್ವಚ್ಛಂದವೃತ್ತಿಯಿಂದಲೇ ಅವನಿಗೆ ಅನೇಕರು ಶತ್ರುಗಳಾದರು ಅವನನ್ನು 'ಹುಚ್ಚು ದೊರೆ' ಎಂದು ತಿರಸ್ಕರಿಸಹತ್ತಿದರು

**ಹುಚ್ಚು ಹಂಬಲಗಳು** — ಅಷ್ಟೊಂದು ವಿಶಾಲವಾದ ರಾಜ್ಯದಲ್ಲಿ ನೆಮ್ಮದಿ ಉಳಿಸುವುದಕ್ಕಾಗಿ ಅದನ್ನು ೨೩ ಭಾಗ ಮಾಡಿ ಅಧಿಕಾರಿಗಳನ್ನು ನಿಯಮಿಸಿದನು ಆಡಳಿತದ ವೆಚ್ಚ ಬೆಳೆಯಿತು ಅದೇ ಹೊತ್ತಿನಲ್ಲಿ ಉತ್ತರದ ಮಂಗೋಲರು ದಾಳಿಯಿಟ್ಟರು ಅವರಿಗೆ ಹೇರಳ ಹಣವನ್ನು ಕೊಟ್ಟು ಕಳಿಸಿದನು ಅಲ್ಲದೆ, ಅಫಗಾನಿಸ್ತಾನದ ಉತ್ತರದ ಹಲವು ಪ್ರಾಂತಗಳನ್ನು ಸುಲಭದಲ್ಲೇ ಗೆಲ್ಲಬಹುದೆಂಬ ಆಸೆಯಿಂದ ಅದಕ್ಕಾಗಿ ೩,೭೦,೦೦೦ ಸೈನಿಕರನ್ನು ಸೇರಿಸಿ, ಒಂದು ವರ್ಷದವರೆಗೆ ತಡೆದನು ಕಡೆಗೆ ಪರಿಸ್ಥಿತಿ ವಿಷಮಿಸಿದುದನ್ನು ಕಂಡು, ಆ ಸೈನಿಕರನ್ನೆಲ್ಲ ತಮ್ಮ ತಮ್ಮ ಮನೆಗೆ ಕಳುಹಿದನು ಹೀಗಾಗಿ ಬೊಕ್ಕಸವು ಬರಿದಾಯಿತು ಅದರಿಂದ ಪ್ರಜೆಗಳ ಮೇಲೆ ಭಾರವಾದ ಕರ-ತೆರಿಗೆಗಳನ್ನು ಹೇರಿದನು ಆ ಮೇಲೆ ಬರುಹೋಗುವ ಸರಕುಗಳ ಮೇಲೆ ಭಾರವಾದ ಸುಂಕವನ್ನು ಹೇರಿದನು ಪ್ರಜೆಗಳ ಕಷ್ಟಕ್ಕೆ ಎಣೆಯಿಲ್ಲದಾಯಿತು ಅಷ್ಟರಲ್ಲಿ ಭಯಂಕರ ಬರಗಾಲ ಬಿತ್ತು! ಜನರು ಕೂಳು ಇಲ್ಲದೆ ಸಾಯಹತ್ತಿದರು!

**ದಿಲ್ಲಿಯಿಂದ ದೇವಗಿರಿಗೆ** — ಮುಹಮ್ಮದನು ಅಲ್ಲಾ ಉದ್ದೀನ ಖಿಲಜಿಯಂತೆ ದಕ್ಷಿಣಕ್ಕೆ ದಾಳಿ ಇಟ್ಟು, ವಿಂಧ್ಯದಿಂದ ಕೃಷ್ಣಾನದಿಯವರೆಗಿನ ಪ್ರದೇಶಗಳನ್ನು ಸ್ಥಿರವಾಗಿ ತನ್ನ ಆಡಳಿತಕ್ಕೆ ಸೇರಿಸಲು ಬಯಸಿದನು ಇದಕ್ಕೆ ದಿಲ್ಲಿಗಿಂತ, ಉತ್ತರ-ದಕ್ಷಿಣಭಾರತಗಳೆರಡಕ್ಕೂ ನಡುವೆ ಇರುವ ದೇವಗಿರಿಯೇ ತಕ್ಕ ರಾಜಧಾನಿ ಎಂದು ಅವನಿಗೆ ಎನಿಸಿತು ಅದಕ್ಕಾಗಿ, ದಿಲ್ಲಿಯಿಂದ ತನ್ನ ಸರದಾರರನ್ನೂ ಬಂಧುಮಿತ್ರರನ್ನೂ ದೇವಗಿರಿಗೆ ಸಾಗಿಸಿದನು ಆದರೆ ಅವನ ಆಶಯವು ಈಡೇರಲಿಲ್ಲ, ಮತ್ತೆ, ಅವರನ್ನೆಲ್ಲ ದೇವಗಿರಿಯಿಂದ ದಿಲ್ಲಿಗೇ ಸಾಗಿಸಬೇಕಾಯಿತು ಇದರಿಂದ ಅಪಾರ ಹಾನಿಯಾಯಿತು ಜನರಿಗೂ ತಾಪವಾಯಿತು

**ತಾಮ್ರದ ರೂಪಾಯಿಗಳು** — ಹೀಗಾಗಿ, ದುಡ್ಡಿನ ಕೊರತೆ ದಿನದಿನಕ್ಕೆ ಹೆಚ್ಚಾಯಿತು ಅದರಿಂದ, ಬಂಗಾರ-ಬೆಳ್ಳಿಯ ನಾಣ್ಯಗಳ ಬದಲು ತಾಮ್ರದ ರೂಪಾಯಿಗಳನ್ನು ಬಳಕೆಯಲ್ಲಿ ತಂದನು ಈಗ ನಾವು ಕಾಗದದ ರೂಪಾಯಿಗಳನ್ನು ಬಳಕೆಗೆ ತಂದಿರುವುದಿಲ್ಲವೆ? ಹಾಗೆಯೇ ಆಗಿನ ಕಾಲದಲ್ಲಿ ಚೀನದೇಶದಲ್ಲಿ ತಾಮ್ರದ ತಗಡಿನ ಮೇಲೆ ಹೆಚ್ಚಿನ ಹಣದ ಮುದ್ರೆಯನ್ನೊತ್ತಿ ಅದನ್ನೇ ಆ ಹೆಚ್ಚು ಬೆಲೆಯ ಸಂಕೇತವಾಗಿ ಉಪಯೋಗಿಸುತ್ತಿದ್ದರು ಅದನ್ನೇ ಮುಹಮ್ಮದನು ಅನುಸರಿಸಿದನು ಆದುದರಿಂದ ಮುಹಮ್ಮದನ ಉಪಾಯವು

ಸೂಕ್ತವಾಯಿತು, ಆದರೆ, ಜನರು ಅದಕ್ಕ ತಕ್ಕ ಬೆಂಬಲವನ್ನು ಕೊಡಲಿಲ್ಲ ಅಲ್ಲದೆ ಕಳ್ಳರೂ, ಮೋಸಗಾರರೂ ತಮ್ಮ ಮನೆಗಳಲ್ಲಿಯೇ ಇಂತಹ ರೂಪಾಯಿಗಳನ್ನು ಅಲ್ಪವೆಚ್ಚದಿಂದ ಮಾಡುತ್ತಿದ್ದರು, ಹೊರನಾಡಿನವರು ಈ ನಾಣ್ಯಗಳನ್ನು ಹಿಡಿಯಲಿಲ್ಲ ಆಗ ವ್ಯಾಪಾರವೇ ಕಟ್ಟಾಗಹತ್ತಿತು! ಅರಸು ಮತ್ತೆ ಮೊದಲಿನಂತೆ ನಾಣ್ಯಗಳನ್ನು ಬಳಕೆಯಲ್ಲಿ ತಂದನು ತಾಮ್ರದ ರೂಪಾಯಿಗಳನ್ನೆಲ್ಲ ಬೊಕ್ಕಸಕ್ಕೆ ತರಿಸಿ, ಅವುಗಳ ಬದಲು ಬೆಳ್ಳಿಯ ನಾಣ್ಯಗಳನ್ನೇ ಕೊಟ್ಟನು ಇದರಿಂದ ಅವನಿಗೆ ಮತ್ತೆ ನಷ್ಟವಾಯಿತು

**ಹೊಸ ರಾಜ್ಯಗಳ ಉದಯ** — ಮಹಮ್ಮದನ ರಾಜ್ಯದ ಆಡಳಿತವಲ್ಲ ಸಡಿಲಾಯಿತು ಹಿಮಾಲಯದ ತಪ್ಪಲಿನ ಹಲವು ರಾಜರು ದಂಗೆ ಎಬ್ಬಿಸಿದರು ಅತ್ತ ಕಳುಹಿಸಿದ ಸೈನ್ಯವು ಬೆಟ್ಟ-ಗುಡ್ಡಗಳ ನಡುವೆ ನಾಶವಾಯಿತು ಅಲ್ಲಲ್ಲಿ ಶೂರ ಮಾಂಡಲಿಕರು, ಪಾಳೆಯಗಾರರು, ಸುಭೇದಾರರು ಸ್ವತಂತ್ರರಾಗಹತ್ತಿದರು ದಕ್ಷಿಣದಲ್ಲಿ ಯಾದವವಂಶದ ಸಂಗಮರಾಜನ ಮಕ್ಕಳಾದ **ಹುಕ್ಕ-ಬುಕ್ಕರೆಂಬ ರಾಜಕುಮಾರರು, ೧೩೩೬ರ ಸುಮಾರಿಗೆ ತುಂಗಭದ್ರಾ ತೀರದಲ್ಲಿ ವಿಜಯನಗರ ರಾಜ್ಯವನ್ನು ಸ್ಥಾಪಿಸಿದರು,** ಅದರಂತೆ **ಕಲಬುರ್ಗೆ**ಯಲ್ಲಿ **ಹಸನನೆಂಬ ಮುಸಲ್ಮಾನ ಸರದಾರನು ಬಾಹಮನೀ ರಾಜ್ಯವನ್ನು ಸ್ಥಾಪಿಸಿದನು ಈ ಹೊಸ ರಾಜ್ಯಗಳ ಹುಟ್ಟಿನ** ಇತಿಹಾಸವು ಮುಂದೆ ವಿವರವಾಗಿ ಬರುವುದು

**ಮುಹಮ್ಮದನ ಮರಣ** — ಇದೇ ಹೊತ್ತಿಗೆ ಬಂಗಾಲ, ಗುಜರಾಥ, ದೇವಗಿರಿಗಳಲ್ಲಿ ಬಂಡಾಯಗಳೆದ್ದುವು ಗುಜರಾಥದ ಬಂಡಾಯವನ್ನು ಮುರಿದು ತಿರುಗಿ ಬರುವಾಗ, ೧೩೫೧ರಲ್ಲಿ ಈ ಮಹಮ್ಮದನು ಮರಣಹೊಂದಿದನು ಮುಂದೆ ಫಿರೂಝನು ಪಟ್ಟವೇರಿದನು

**ಫಿರೂಝ ತಗಲಖ** —(೧೩೫೧—೧೩೮೮) ಫಿರೂಝ ತಗಲಖನು ಮಹಮ್ಮದನ ಅಣ್ಣನ ಮಗನು ಈತ ಚಂಚಲನು, ಧರ್ಮದ ದುರಭಿಮಾನಿ, ಯುದ್ಧ ಬೇಡಾದವ, ಆದರೂ ಇವನ ಹೆಸರು ಇತಿಹಾಸದಲ್ಲಿ ಮನ್ನಣೆ ಹೊಂದಿದೆ ಒಕ್ಕಲುತನಕ್ಕೆ ಒಳಿತಾಗಿ ಲಕ್ಷ್ಯಕೊಟ್ಟುದೇ ಇವನ ಆಳಿಕೆಯ ಮಹತ್ತ್ವದ ವಿಷಯ

**ಪ್ರಜಾಪ್ರೇಮದ ಕಾರ್ಯಗಳು** — ಒಕ್ಕಲುತನದ ಅಭಿವೃದ್ಧಿಗಾಗಿ ಘೋಗ್ರಾ ಮತ್ತು ಯಮುನಾನದಿಗಳಿಂದ ಅನೇಕ ಕಡೆಗೆ ನೀರಾವರಿಯ ಯೋಜನೆಗಳನ್ನು ಮಾಡಿಸಿದನು ಆಗಿನ ಕಾಲದ ಪಂಜಾಬದ ನೀರಾವರಿಯ ಪದ್ಧತಿಯಂತೂ ಇಂದಿಗೂ ಆದರ್ಶವಾಗಿದೆ ಸಾರ್ವಜನಿಕರ ಆರೋಗ್ಯರಕ್ಷಣೆಗಾಗಿ ಅಲ್ಲಲ್ಲಿ ಔಷಧಾಲಯಗಳು ಸ್ಥಾಪಿಸಲ್ಪಟ್ಟುವು ದಾರಿಕಾರರಿಗೆ ಧರ್ಮ

ಶಾಲೆಗಳಾದುವು. ದಿಲ್ಲಿಯ ಸುತ್ತಲೂ ಸುಮಾರು ೧೨೦೦ ಉದ್ಯಾನವನಗಳು ನಿರ್ಮಿಸಲ್ಪಟ್ಟುವು ಈತನು ೧೩೮೮ರಲ್ಲಿ ಮಡಿದನು.

**ತೈಮೂರನ ದಾಳಿ** —ಫಿರೂಝುನ ತರುವಾಯ ಮೂರು ನಾಲ್ಕು ಜನರು ಆಳಿದರೂ ಎಲ್ಲರೂ ಅಸಮರ್ಥರು ಅದರಿಂದ ರಾಜ್ಯದಲ್ಲಿ ಸಣ್ಣ ಪುಟ್ಟ ಸುಭೇದಾರರು ಸಹ ಸ್ವತಂತ್ರರಾಗಹತ್ತಿದರು ಇಂತಹ ಸ್ಥಿತಿಯಲ್ಲಿ ಭಾರತದ ಮೇಲೆ ತಾರ್ತರವಂಶದ ತೈಮೂರನ ಕ್ರೂರ ದಾಳಿಯಾಯಿತು ತೈಮೂರನು ಮಧ್ಯಏಶಿಯದ ಕೀಶ ಪ್ರಾಂತದ ಸುಭೇದಾರನ ಮಗನು ಎಂತಹ ಹಿಂಸೆಗೂ ಅವನ ಮನಸ್ಸು ಹೇಸುತ್ತಿರಲಿಲ್ಲ, ಅವನು ಇಪ್ಪತ್ತೈದನೆಯ ವಯಸ್ಸಿಗೇ ಇಡೀ ತಾರ್ತರ ದೇಶಕ್ಕೆ ದೊರೆಯಾದನು ಮಧ್ಯ ಏಶಿಯವನ್ನೆಲ್ಲ ಆಕ್ರಮಿಸಿ, ಭಾರತದ ಮೇಲೆ ಬಿರುಗಾಳಿಯಂತೆ ದಾಳಿಯನ್ನು ಮಾಡಿದನು (೧೩೯೮)

ಈತನ ಅಪಾರ ಸೇನೆಯನ್ನು ತರುಬುವ ಶಕ್ತಿಯು ಆಗಿನ ಯಾವ ಅರಸರಲ್ಲಿಯೂ ಇರಲಿಲ್ಲ ದಿಲ್ಲಿಯನ್ನು ಮುಟ್ಟುವವರೆಗೆ ದಾರಿಯಲ್ಲಿ, ಕೊಲೆ-ಸುಲಿಗೆ-ಕೊಳ್ಳೆಗಳನ್ನು ಮನಬಂದಂತೆ ನಡೆಸಿದನು ಜನರು ಎದೆಯೊಡೆದು ಅಡವಿಯನ್ನು ಸೇರಿದರು ತೈಮೂರನು ದಿಲ್ಲಿಯನ್ನು ಸಮೀಪಿಸಿದಾಗ, ದಿಲ್ಲಿಯ ಅರಸನು ಸ್ವತಃ ಅವನನ್ನು ತಡೆಯಹೋದನು, ಆದರೆ ತೈಮೂರನು ನಗರವನ್ನು ಹೊಕ್ಕು ಭಂಡಾರವನ್ನು ಪೂರ್ಣ ಕೈವಶಮಾಡಿಕೊಂಡನು, ಜನರನ್ನು ಸಿಕ್ಕಂತೆ ಸುಲಿದು ಲಕ್ಷಾಂತರ ಜನರನ್ನು ಕಣ್ಣೆದಿರಿಗೇ ಕೊಲ್ಲಿಸಿದನು ಅಲ್ಲಿಂದ ಮಿರತ, ಹರಿದ್ವಾರ, ನಗರಕೋಟ, ಜಮ್ಮು, ಲಾಹೋರಗಳನ್ನು ಸುಲಿಯುತ್ತ ತನ್ನ ದೇಶಕ್ಕೆ ಹೋದನು ತಾನು ಗೆದ್ದ ರಾಜ್ಯಕ್ಕೆ ಸೈಯದ ಖಿಜರ್‌ಖಾನನನ್ನು ಅಧಿಕಾರಿಯನ್ನಾಗಿ ನಿಯಮಿಸಿದನು ಮುಂದೆ ದಿಲ್ಲಿಗೆ ಸೈಯದರೇ ಒಡೆಯರಾದರು.

**ಸೈಯದ ಅರಸರು** —(೧೪೧೪—೧೪೫೦) ಈ ಮುಂದಿನ ಕಾಲದಲ್ಲಿ ದಿಲ್ಲಿಯ ಅರಸರ ಅಳಿಗಾಲಕ್ಕೆ ಆರಂಭವಾಯಿತು ಮುಂದೆ 'ಬಹಲೂಲ್ ಖಾನ ಲೋದಿ' ಎಂಬ ಸರದಾರನು ದಿಲ್ಲಿಯ ಸಿಂಹಾಸನವನ್ನು ಆಕ್ರಮಿಸಿ ಲೋದಿವಂಶವನ್ನು ಪ್ರಾರಂಭಮಾಡಿದನು

**ಲೋದಿವಂಶ** —(೧೪೫೦-೧೫೨೬) ಲೋದಿ ವಂಶದ ಕೊನೆಯ ಅರಸನಾದ **ಇಬ್ರಾಹಿಮ ಲೋದಿಯ** ಕಾಲದಲ್ಲಿಯೇ ತೈಮೂರನ ವಂಶಸ್ಥನಾದ ಶೂರ **ಬಾಬರನು** ಭಾರತಕ್ಕೆ ಬಂದನು **೧೫೨೬**ರಲ್ಲಿ **ಪಾನಿಪತ** ರಣಭೂಮಿಯ ಮೇಲೆ ಬಾಬರನಿಗೂ ಇಬ್ರಾಹಿಮನಿಗೂ ಕಾಳಗವಾಯಿತು ಇಬ್ರಾಹಿಮನು ಕಾಳಗದಲ್ಲಿ ಸತ್ತನು ಬಾಬರನು ದಿಲ್ಲಿಯ ಸಿಂಹಾಸನಕ್ಕೆ ದೊರೆಯಾದನು. ಇಲ್ಲಿಗೆ ಪಠಾಣರ ಆಳಿಕೆಯು ನಿಂತುಹೋಯಿತು.

## ಅಭ್ಯಸನಗಳು

೧. ಬಿಟ್ಟ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿ ಬರೆಯಿರಿ.

(ಅ) ದೇವಗಿರಿಯ ನು ಹೆದರಿ ಒಪ್ಪಂದ ಮಾಡಿಕೊಂಡದ್ದರಿಂದ ಅಲ್ಲಾಉದ್ದೀನನಿಗೆ ಮತ್ತು ಪ್ರಾಂತ ಸಿಕ್ಕವು

(ಆ) ಅಲ್ಲಾಉದ್ದೀನನು ದಕ್ಷಿಣದ ರಾಜ್ಯಗಳನ್ನು ಗೆಲ್ಲುವುದಕ್ಕ ನನ್ನು ಕಳುಹಿದನು

(ಇ) ಕ್ಕೆ ಹೆಚ್ಚು ಲಕ್ಷ್ಯ ಕೊಟ್ಟದ್ದೇ ಫಿರೋಜನ ಆಳಿಕೆಯ ಮಹತ್ತ್ವದ ವಿಷಯ

(ಈ) ತೈಮೂರನು ತಾನು ಗೆದ್ದ ರಾಜ್ಯದಲ್ಲಿ ನನ್ನು ನಿಯಮಿಸಿದನು

(ಉ) ನೆಯ ಇಸವಿಯಲ್ಲಿ . ರಣಭೂಮಿಯ ಮೇಲೆ ಗೂ ಇಬ್ರಾಹಿಮ ಲೋದಿಗೂ ಕಾಳಗವಾಯಿತು ನು ಕಾಳಗದಲ್ಲಿ ಸತ್ತನು ನು . ಯ ಸಿಂಹಾಸನಕ್ಕೆ ದೊರೆಯಾದನು

೨ ಮಹಮ್ಮದ ತಗಲಖನ ಮೂರು ಮೂರ್ಖತನದ ಕೃತಿಗಳನ್ನು ಮೂರು ಮಾತುಗಳಲ್ಲಿ ಬರೆಯಿರಿ

೩. ಕೆಳಗ ಕೊಟ್ಟವುಗಳು ಯಾವ ಸಂದರ್ಭಗಳಲ್ಲಿ ಬಂದಿವೆ?
ರತನಭೋರ, ಗಿಯಾಸುದ್ದೀನ, ಇಬ್ನಬತೂತ, ಸೃಷ್ಟಿಯ ವಿಲಕ್ಷಣ ಮೂರ್ತಿ

೪ ಪದ್ಮಿನೀದೇವಿಯ ಪ್ರಸಂಗಾವಧಾನವನ್ನು ಸ್ವಲ್ಪದರಲ್ಲಿ ವರ್ಣಿಸಿರಿ (ಹೆಣ್ಣು ಮಕ್ಕಳ ಶಾಲೆಯಲ್ಲಿ ಈ ಪ್ರಸಂಗವನ್ನು ನಾಟಕವಾಡಿಸಬಹುದು )

# ೭ ವಿಜಯನಗರ ಸಾಮ್ರಾಜ್ಯ

(ಕ್ರಿ ಶ ೧೩೩೬-೧೫೬೫)

**ಹುಕ್ಕ ಅಥವಾ ಹರಿಹರ** —(ಕ್ರಿ ಶ ೧೩೩೬-೧೩೫೪) **ದ್ವಾರ ಸಮುದ್ರದ** ಹೊಯ್ಸಳ ಬಲ್ಲಾಳ ರಾಯನ ಆಳಿಕೆಯಲ್ಲಿ ಮಹಾ ದುರಂಧರರೆಂದು ಹೆಸರು ಪಡೆದ **ಹುಕ್ಕ-ಬುಕ್ಕರು,** ಆ ರಾಜ್ಯವು ಹಾಳಾದ ಬಳಿಕ ತಮ್ಮದೇ ಒಂದು ರಾಜ್ಯವನ್ನು ತುಂಗಭದ್ರಾ ತೀರದ ಹಂಪೆಯ ಬಳಿಯಲ್ಲಿ ಕಟ್ಟಿ, ಅದಕ್ಕೆ **ವಿಜಯ ನಗರ** ಎಂದು ಹೆಸರಿಟ್ಟರು ಇವರ ಮಹತ್ಕಾರ್ಯಕ್ಕೆ ಶ್ರೀವಿದ್ಯಾರಣ್ಯರಂತಹ ಮಹಾತಪಸ್ವಿಗಳ ಆಶೀರ್ವಾದ ದೊರೆಯಿತು ವಿಜಯನಗರದ ಮೊದಲ ನೆಯ ಅರಸನಾದ ಹುಕ್ಕ ಅಥವಾ ಹರಿಹರನಿಗೆ, ಕ್ರಿ ಶ ಸು ೧೩೩೬ರಲ್ಲಿ ಪಟ್ಟವಾಯಿತು ಹರಿಹರರಾಯನಿಗೆ ತಮ್ಮನಾದ ಬುಕ್ಕನೇ ಸೇನಾಪತಿಯಾಗಿ ಇದ್ದನು ಅಲ್ಲದೆ ಕಂಪಣ್ಣ, ಮಾರಪ್ಪ, ಮುದ್ದಪ್ಪ ಮೊದಲಾದ ತಮ್ಮಂದಿರು ಕಡಪೆ, ನೆಲ್ಲೂರುಗಳನ್ನೂ, ಬನವಾಸಿಯ ಕಡೆಯ ರಾಜ್ಯದ ವ್ಯವಸ್ಥೆಯನ್ನೂ ನೋಡುತ್ತಿದ್ದರು ಉತ್ತರದಿಂದ ಬರುತ್ತಿದ್ದ ಮುಸಲ್ಮಾನರ ದಾಳಿಯನ್ನು ತಡೆದು, ಹಿಂದೂರಾಜ್ಯವನ್ನು ಹುಕ್ಕ-ಬುಕ್ಕರು ಸ್ಥಾಪಿಸಿದ್ದಕ್ಕಾಗಿ, ಹಿಂದುಗಳೆಲ್ಲರೂ ಅವರಿಗೆ ಸಹಾಯ ಮಾಡಿದರು ಕಂಪಣ್ಣನು ಕನ್ಯಾಕುಮಾರಿಯ ವರೆಗೆ ದಿಗ್ವಿಜಯಕ್ಕಾಗಿ ಹೊರಟು, ಮಧುರೆಯಲ್ಲಿ ನೆಲೆಸಿದ್ದ ಮುಸಲ್ಮಾನ ನವಾಬರ ವಂಶವನ್ನು ನಿರ್ಮೂಲಗೊಳಿಸಿದನು ದ್ವಾರಸಮುದ್ರದ ಹೊಯ್ಸಳ ವೀರಬಲ್ಲಾಳದೇವನನ್ನು ಈ ನವಾಬನೇ ಕಾಳಗದಲ್ಲಿ ಸೋಲಿಸಿ ಕೊಂದಿದ್ದನು ಆದುದರಿಂದ ಕಂಪಣ್ಣನ ವಿಜಯಯಾತ್ರೆಯ ಫಲವಾಗಿ, ತುಂಗಭದ್ರೆ-ಕೃಷ್ಣಾನದಿಗಳ ದಕ್ಷಿಣಕ್ಕೆ ಹಿಂದೂಸಾಮ್ರಾಜ್ಯವೇ ನೆಲೆಗೊಂಡ ಹಾಗಾಯಿತು ತನ್ನಾಳಿಕೆಯಲ್ಲಿ ಹರಿಹರನು ಕರ್ನಾಟಕವನ್ನೂ ಆಂಧ್ರದ ಕೆಲ ಭಾಗವನ್ನೂ ಗೆದ್ದನು ಇವನು ಸುಪ್ರಸಿದ್ಧವಾದ **ವಿರೂಪಾಕ್ಷ ದೇವರ ಗುಡಿಯನ್ನು** ಕಟ್ಟಿಸಿದನು

**ಬುಕ್ಕರಾಯ** —(ಕ್ರಿ ಶ. ೧೩೫೪-೧೩೭೭) ಹರಿಹರನ ತರುವಾಯ ಬುಕ್ಕನು ಪಟ್ಟಕ್ಕೆ ಕುಳಿತನು ಇವನು ಅಣ್ಣನಂತೆ ವೀರನಿದ್ದುದರಿಂದ, ರಾಮೇಶ್ವರದ ವರೆಗೆ ರಾಜ್ಯವನ್ನು ಹಬ್ಬಿಸಿದನು ಬುಕ್ಕಸಮುದ್ರ, ಬುಕ್ಕಸಾಗರ ಎಂದೂ ಈಗಲೂ ಪ್ರಸಿದ್ಧವಾಗಿರುವ ಅನೇಕ ಕೆರೆಗಳನ್ನು ದಕ್ಷಿಣದೇಶದ ಅನೇಕ ಕಡೆಗಳಲ್ಲಿ ಇವನು ಕಟ್ಟಿಸಿದನು ಇವನ ತರುವಾಯ **ಇಮ್ಮಡಿ ಹರಿಹರನು** ಪಟ್ಟವೇರಿದನು ಇಮ್ಮಡಿ ಹರಿಹರನು ವಿದ್ಯಾಪ್ರಿಯನಿದ್ದುದರಿಂದ, ಅವನಿಗೆ **ವಿದ್ಯಾವಿಲಾಸ** ಎಂಬ ಬಿರುದು ಉಂಟಾಯಿತು ಇವನ

ಕಾಲದಲ್ಲಿ ಶ್ರೀ ವಿದ್ಯಾರಣ್ಯರು ದೇಹವಿಟ್ಟರು ಬಳಿಕ ಅವರ ತಮ್ಮಂದಿರಾದ **ಸಾಯಣಾಚಾರ್ಯರು** ಮಂತ್ರಿಗಳಾದರು. ಇವರು ವೇದಕ್ಕೆ ಭಾಷ್ಯ ಬರೆದು,




ಸಾಯಣಾಚಾರ್ಯ ವಿದ್ಯಾರಣ್ಯ ಹುಕ್ಕರಾಜ

ಸನಾತನ ಧರ್ಮದ ಪುನರುದ್ಧಾರಕ್ಕೆ ಮಾರ್ಗದರ್ಶಕರಾದರು ಆಮೇಲೆ **ಒಂದನೆಯ ದೇವರಾಯನು** ಪಟ್ಟವೇರಿದನು. ಇವನು ವಿಜಯನಗರದ ಸುತ್ತಲೂ ಕೋಟೆಯ ಗೋಡೆಯನ್ನು ಕಟ್ಟಿಸಿದನಲ್ಲದೆ ನಗರದಲ್ಲಿ ತುಂಗ-ಭದ್ರೆಯ ಕಾಲುವೆಯನ್ನು ಮಾಡಿಸಿದನು ನದಿಗೆ ದೊಡ್ಡ ಒಡ್ಡು ಹಾಕಿಸಿದನು ಇವನ ಆಳಿಕೆಯಲ್ಲಿ ಶ್ರೀವಿದ್ಯಾರಣ್ಯರ ಸೋದರಳಿಯ **ಲಕ್ಷ್ಮೀಧರನೆಂಬ** ಪಂಡಿತನು ಮಂತ್ರಿಯಾಗಿದ್ದನು ಬಾಹಮನಿ ರಾಜನಿಗೂ ಇವನಿಗೂ ಮುದಗಲ್ಲಿನ ದೆಸೆಯಿಂದ ಯುದ್ಧವಾಗಿ ದೇವರಾಯನು ಸೋತನು ಆ ಮೇಲೆ ಪ್ರೌಢದೇವರಾಯನ ಆಳಿಕೆ ನಡೆಯಿತು ಬಾಹಮನಿಯ ಅರಸರೆಂದರೆ ಇವನಿಗೆ ನಿರಂತರ ಎದುರಾಳಿಗಳು ಅವರಿಂದ ಇವನು ತನ್ನ ರಾಜ್ಯವನ್ನು ಕಾಯ್ದುಕೊಂಡು, ಅದನ್ನು ಬಲಿಸಿದನು. ತನ್ನ ದಂಡಿನಲ್ಲಿ ಮುಸಲ್ಮಾನರನ್ನು ಇಟ್ಟುಕೊಂಡನು ಅವರಿಗಾಗಿ ಮಸೀದೆಗಳನ್ನು ಕಟ್ಟಿಸಿಕೊಟ್ಟನು. ಇವನಿಗೆ

ವೀರಶೈವ ಮತದಲ್ಲಿ ವಿಶ್ವಾಸವಿದ್ದುದರಿಂದ, ಲಕ್ಕಣ್ಣ ದಂಡೇಶನು ಇವನ ಮಂತ್ರಿಯಾಗಿದ್ದನು ಇದೇ ಕಾಲದಲ್ಲಿ ಗದುಗಿನ ನಾರಣಪ್ಪನು ಕುಮಾರವ್ಯಾಸ ಎಂಬ ಹೆಸರಿನಿಂದ ಕನ್ನಡ ಮಹಾಭಾರತವನ್ನು ರಚಿಸಿದನು ಪ್ರೌಢದೇವರಾಯನು ವಿದ್ಯಾಪ್ರಿಯನೂ ರಸಿಕನೂ ವೀರನೂ ಆಗಿದ್ದನು ಇವನ ತರುವಾಯ ವಿರೂಪಾಕ್ಷನು ಪಟ್ಟಕ್ಕೆ ಬಂದನು ಆದರೆ, ಸಾಳ್ವನರಸಿಂಹನಾಯಕ ಎಂಬವನು ವಿರೂಪಾಕ್ಷನನ್ನು ಪಟ್ಟದಿಂದ ತಳ್ಳಿ ತಾನೇ ಅರಸನಾದನು. ಇಲ್ಲಿಗೆ ಸಂಗಮ ಮನೆತನವು ನಿಂತಿತು (೧೪೮೬)



ಇಂದಿನ ವಿಜಯನಗರದ ಒಂದು ದೃಶ್ಯ

**ಸಾಳ್ವ ಮತ್ತು ತುಳುವಂಶ** —(ಕ್ರಿ ಶ ೧೪೮೬—೧೫೬೫) ಸಾಳ್ವ ಮನೆತನದ ಅರಸರಾರೂ ಗಟ್ಟಿಗರಿಲ್ಲದ್ದರಿಂದ, ಒಂದೆರಡು ತಲೆಗಳಲ್ಲಿಯೇ ಆ ಮನೆತನದ ಪುಣ್ಯವು ಮುಗಿದು, **ತುಳುವಂಶದ ನರಸದಂಡನಾಯಕನು** ರಾಜ್ಯವನ್ನು ತಾನೇ ಆಳತೊಡಗಿದನು ಈ ತುಳುವಂಶದೊಳಗೆ **ಕೃಷ್ಣದೇವರಾಯ**ನೆಂಬ ಮಹಾಪ್ರತಾಪಿಯಾದ ಅರಸನು ಆಳಿದನು (ಕ್ರಿ ಶ ೧೫೦೯-೧೫೩೦) ಇವನ ಕಾಲದಲ್ಲಿ ವಿಜಯನಗರ ರಾಜ್ಯವು ಒಳ್ಳೆಯ ಘನತೆಗೇರಿತು ಬಾಹಮನಿ ಸಾಮ್ರಾಜ್ಯವು ಕೃಷ್ಣದೇವರಾಯನ ಕಾಲಕ್ಕೆ ಒಡೆದು, ಐದು ಭಾಗವಾಗಿ ಖಿಲವಾದುದರಿಂದ, ರಾಜನಿಗೆ ಅವರನ್ನು ಹಿಮ್ಮೆಟ್ಟಿಸಲು ತುಂಬ ಅನುಕೂಲವಾಯಿತು ಕೃಷ್ಣದೇವರಾಯನು ಮೂರು ಮುಖ್ಯ ವಿಜಯಯಾತ್ರೆಗಳನ್ನು

ಮಾಡಿದನು. ವಿಜಯನಗರದಿಂದ ಶಿವನಸಮುದ್ರ, ಶ್ರೀರಂಗಪಟ್ಟಣಗಳ ವರೆಗಿನದು ಮೊದಲನೆಯದು. ಪೂರ್ವತೀರದ ಉದಯಗಿರಿಯಿಂದ ಉತ್ತರಕ್ಕೆ ಇದ್ದ ಒಡಿಸಾದ ಪ್ರತಾಪರುದ್ರದೇವನ ಮೇಲೆ ದಂಡೆತ್ತಿಹೋಗಿ ಅವನಿಂದ ಕಪ್ಪ-ಕಾಣಿಕೆಗಳನ್ನು ಪಡೆದುದು ಎರಡನೆಯದು. ರಾಯಚೂರನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡುದು ಮೂರನೆಯದು. ಇವನು ವಿಜಾಪುರದ ಅರಸನನ್ನೂ ಸೋಲಿಸಿದನು. ಇವನಿಗೆ ಪೂರ್ವ-ಪಶ್ಚಿಮ-ದಕ್ಷಿಣ ಸಮುದ್ರಾಧೀಶ್ವರ, ಕರ್ನಾಟಕ ರಾಜ್ಯ ರಮಾರಮಣ ಎಂಬ ಬಿರುದುಗಳಿದ್ದುವು. ಇವನ ಆಳಿಕೆಯಲ್ಲಿ ವಿಜಯವಿಟ್ಠಲನ ಗುಡಿ, ಹಜಾರ ರಾಮನ ಗುಡಿ, ವಿರೂಪಾಕ್ಷದೇವರ ಗುಡಿಯ ಪೂರ್ವ ಉತ್ತರ ಗೋಪುರಗಳು, ಬಸವಣ್ಣನ ಕಾಲುವೆ ಇವು ಕಟ್ಟಲ್ಪಟ್ಟುವು.



ವಿಜಯವಿಟ್ಠಲನ ಗುಡಿ

**ವಿದ್ಯಾಪ್ರಿಯತೆ** — ಈ ಅರಸನ ಕಾಲಕ್ಕೆ ಕನ್ನಡ-ತೆಲುಗು ಕವಿಗಳಿಗೆ ಹೆಚ್ಚಾಗಿ ರಾಜಾಶ್ರಯವು ದೊರೆಯಿತು. **ತಿಮ್ಮಣ್ಣ**ನೆಂಬ ಕವಿ, ಕುಮಾರವ್ಯಾಸನ ದಶಪರ್ವಭಾರತವನ್ನು ಮುಂದೆ ಸಾಗಿಸಿ ಮುಗಿಸಿದನು. ಕನ್ನಡ ದಾಸರಲ್ಲಿ ಸುಪ್ರಸಿದ್ಧರೆನಿಸಿದ **ಪುರಂದರದಾಸರು** ಇವನ ರಾಜಧಾನಿಯಲ್ಲಿಯೇ ಇದ್ದರು. ಅಪ್ಪಯ್ಯ ದೀಕ್ಷಿತರೆಂಬ ತೆಲುಗು ವಿದ್ವಾಂಸರು ಸಂಸ್ಕೃತದಲ್ಲಿ ಹಲವು ಸಾಹಿತ್ಯಗ್ರಂಥಗಳನ್ನು ಬರೆದರು. ಆಂಧ್ರಕವಿ ಪಿತಾಮಹ ಎಂಬ ಬಿರುದಿನಿಂದ ಕೀರ್ತಿವೆತ್ತ ಅಲ್ಲಸಾನಿ ಪೆದ್ದಣ್ಣನನ್ನು ಈ ದೊರೆಯು

ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರವಣಿಗೆ ಮಾಡಿಸಿ, ಗೌರವಿಸಿದನು ತೆನ್ನಾಲಿ ರಾಮಕೃಷ್ಣನೆಂಬ ವಿದೂಷಕನು ಈ ದೊರೆಯಲ್ಲಿಯೇ ಪ್ರಶಸ್ತಿಯನ್ನು ಪಡೆದಿದ್ದನು ಮುಂದೆ ಅಳಿಯ ರಾಮರಾಜನ ಆಳಿಕೆ ಆರಂಭವಾಯಿತು

**ರಾಮರಾಯ** —(ಕ್ರಿ ಶ ೧೫೫೪-೧೫೬೫) ಕೃಷ್ಣರಾಯನ ತರುವಾಯ **ಅಚ್ಯುತರಾಯ, ಸದಾಶಿವರಾಯ** ಇವರು ರಾಜ್ಯವಾಳಲು ಯೋಗ್ಯರಿಲ್ಲದುದರಿಂದ, ಕೃಷ್ಣರಾಯನ ಅಳಿಯನಾದ **ರಾಮರಾಯನೇ** ಆಳಹತ್ತಿದನು ಇವನು ಶೂರನಿದ್ದುದರಿಂದ ದಕ್ಷಿಣದ ಮುಸಲ್ಮಾನ ರಾಜರು ಒಬ್ಬರಿಲ್ಲೊಬ್ಬರು ಇವನ ಸಹಾಯ ಕೋರುತ್ತಿದ್ದರು ಅದರಂತೆ ಇವನೂ ಸಹಾಯ ಮಾಡುತ್ತಿದ್ದನು ಹೀಗೆ ಎಷ್ಟೋ ದಿವಸ ಎಲ್ಲರಿಗೆ ಬೇಕಾದವನಾಗಿದ್ದನು ಮುಂದೆ ಅಹಮ್ಮದನಗರದ ಹುಸೇನ ನಿಜಾಮಶಹನಿಗೂ, ವಿಜಾಪುರದ ಅಲೀ ಆದಿಲಶಹನಿಗೂ ಬಹಳ ವಿರೋಧವುಂಟಾಯಿತು ಆಗತಾನೇ ಅದೇ ರಾಮರಾಯನ ಮಗನು ತೀರಿಕೊಂಡುದರಿಂದ ಅವನು ದುಃಖದಲ್ಲಿದ್ದನು ಈ ಸಂಧಿ ಸಾಧಿಸಿ ಅಲೀ ಆದಿಲಶಹನು ರಾಮರಾಯನೊಡನೆ ಸ್ನೇಹ ಬೆಳೆಸಲು ವಿಜಯನಗರಕ್ಕೆ ಹೋದನು ರಾಮರಾಯನು ಆದಿಲಶಹನ ಪ್ರೇಮವನ್ನು ನೋಡಿ ಸಂತೋಷಪಟ್ಟು, ತನ್ನ ತಾಯಿಹೆಂಡರುಮಕ್ಕಳ ಭೆಟ್ಟಿಮಾಡಿಸಿದನು ಆದಿಲಶಹನು ಮಗನಂತೆ ರಾಮರಾಯನೊಡನೆ ನಡೆದುಕೊಂಡನು. ಅವನೂ ಎರಡು ಮೂರು ದಿನ ಇಟ್ಟುಕೊಂಡು ಔತಣ ಮಾಡಿಸಿದನು. ಮುಂದೆ ಮಾತಿಗೆ ಮಾತು ಬಂದಾಗ ಆದಿಲಶಹನು ನಿಜಾಮಶಹನ ಸೊಕ್ಕಿನ ನಡೆಯ ಸುದ್ದಿಯನ್ನು ಹೇಳಿ, ತನಗೆ ಸಹಾಯಮಾಡಬೇಕೆಂದು ಕೇಳಿದನು ರಾಮ-ರಾಯನು ಒಪ್ಪಿಕೊಂಡನು ಅನಂತರ ನಿಜಾಮಶಹನ ಮೇಲೆ ಆದಿಲಶಹನೊಡನೆ ರಾಮರಾಯನ ಸೈನಿಕರು ದಂಡೆತ್ತಿ ಹೋಗಿ ಅಹಮ್ಮದನಗರವನ್ನು ಹಾಳುಮಾಡಿದರು ರಾಮರಾಯನು ತನಗೆ ಸಹಾಯಮಾಡಿದುದಕ್ಕಾಗಿ ಆದಿಲಶಹನು ಆತನಿಗೆ ಬಾಗಿಲಕೋಟೆ, ಯಾದಗಿರಿ ಕೋಟೆಗಳನ್ನು ಕೊಟ್ಟನು ಹಿಂದೂರಾಜನ ವಿಜಯಪರಂಪರೆಯನ್ನು ನೆನೆದು ಮುಸಲ್ಮಾನ ಅರಸರು ತಮ್ಮ ಅಂತಃಕಲಹವನ್ನು ಮರೆತರು.

**ರಕ್ಕಸಗಿ-ತಂಗಡಗಿ-ಕಾಳಗ** —(ಕ್ರಿ ಶ ೧೫೬೫) ಮುಂದೆ **ನಿಜಾಮಶಹ, ಕುತುಬಶಹ, ಆದಿಲಶಹರು** ಒಂದಾದರು. 'ಒಕ್ಕಟ್ಟೇ ಬಲ' ಎಂಬ ಮಾತು ಸತ್ಯ ರಾಮರಾಯನಿಗೂ ಬಹಳ ಗರ್ವ ಬಂದಿತ್ತು ನಿಜಾಮಶಹನಿಗೆ ರಾಮ-ರಾಯನ ಮೇಲೆ ಬಹಳ ಕಣ್ಣು ಇತ್ತು ಆದುದರಿಂದ ರಾಮರಾಯನನ್ನು ಮುರಿಯಲು ಹಂಚಿಕೆಹಾಕಹತ್ತಿದನು ಈ ಗುಜು ಗುಜು ನಡೆದುದು ರಾಮರಾಯನ ಕಿವಿಗೆ ಬಂತು ಆದಿಲಶಹನಿಂದ ಬಂದ ದೂತನನ್ನು ಸಿಟ್ಟಿನ

ಭರದಲ್ಲಿ ಅವಮಾನಮಾಡಿದನು ಒಳಗೆ ಹೊತ್ತುತ್ತಿದ್ದ ಬೆಂಕಿಯು ಯುದ್ಧ ರೂಪದಿಂದ ಹೊರಬಿತ್ತು ಮುಂದೆ (ವಿಜಾಪುರದ ಜಿಲ್ಹೆಯಲ್ಲಿ) ರಕ್ಕಸಗಿ ತಂಗಡಿಗಿಗಳ ನಡುವೆ ಮುಸಲ್ಮಾನರಿಗೂ, ರಾಮರಾಯನಿಗೂ ಘನಘೋರ ಯುದ್ಧವಾಯಿತು ರಾಮರಾಯನ ಸೈನ್ಯ ದೊಡ್ಡದು ಕರ್ನಾಟಕದೊಳಗಿನ ಎಲ್ಲ ಪಾಳ್ಯಗಾರರು, **ಮಧುರೆಯ ನಾಯಕರು, ಬಂಕಾಪುರದ ನಾಯಕರು** ಸಹಾಯಕ್ಕೆ ಬಂದಿದ್ದರು ಮೊದಲು ರಾಮರಾಯನಿಗ ಜಯವಾಯಿತು, ಆದರೆ ಜಯವಾದ ಆನಂದದೊಳಗೆ ಲೋಲಾಡುತ್ತಿರುವಾಗಲೇ, ಮುಸಲ್ಮಾನರು ಒಮ್ಮಿಂದೊಮ್ಮೆ ರಾಮರಾಯನ ದಂಡಿನವರ ಮೇಲೆ ಬಿದ್ದರು ವಿಜಯ-ನಗರದ ಸೈನಿಕರು ಗಾಬರಿಯಾದರು ಲಕ್ಷಗಟ್ಲೆ ಜನರು ಸತ್ತರು ರಾಮ ರಾಯನೂ ಇದೇ ಕಾಲಕ್ಕೆ ಮಡಿದನು ಇಲ್ಲಿಗೆ ವಿಜಯನಗರ ರಾಜ್ಯವು ನಷ್ಟವಾಯಿತು ಮುಸಲ್ಮಾನರು ವಿಜಯನಗರವನ್ನು ಹೊಕ್ಕು ಒಂದೇ ಸವನೇ ಆರು ತಿಂಗಳ ವರೆಗೆ ನುಲಿಗೆಮಾಡಿ, ಪಟ್ಟಣವನ್ನು ಬೀಳುಗೆಡವಿ, ಕೋಟಿಗಟ್ಲೆ ಹಣ ಒಯ್ದರು

**ಮುಂದಿನ ಅರಸರು – ಸದಾಶಿವರಾಯನು** ತನ್ನ ಹೆಂಡಿರು-ಮಕ್ಕಳನ್ನೆಲ್ಲ ಕಟ್ಟಿಕೊಂಡು ನೂರಾರು ಆನೆಗಳ ಮೇಲೆ ಕೈಗೆ ಸಿಕ್ಕಷ್ಟು ದ್ರವ್ಯವನ್ನೆಲ್ಲ ತಗೆದು ಕೊಂಡು, ಪನುಗೊಂಡೆಯ ಕೋಟೆಗೆ ಹೋಗಿ, ಅಲ್ಲಿಯೇ ಕೆಲದಿನ ಇದ್ದನು ಮುಂದೆ **ವೆಂಕಟಪತಿರಾಯನು ಚಂದ್ರಗಿರಿಗೆ** ಹೋದನು ಈ ವಂಶದ **ರಂಗ ರಾಯನಿಂದ** ಕ್ರಿ ಶ ೧೬೪೦ರಲ್ಲಿ ಇಂಗ್ಲಿಷರು ಚನ್ನಪಟ್ಟಣವನ್ನು (ಮದ್ರಾಸ) ಕೊಂಡರು

ಅಂತು, ೩೦೦ ವರ್ಷಗಳ ವರಗೆ ಬಾಹಮನಿ ಸಾಮ್ರಾಜ್ಯದ ಒತ್ತಡವನ್ನು ತಡೆದು, ವಿಜಯನಗರದ ಅರಸರು ಹಿಂದೂ ಧರ್ಮವನ್ನೂ ಹಿಂದೂ ಸಂಸ್ಕೃತಿ ಯನ್ನೂ ಸುರಕ್ಷಿತವಾಗಿ ಕಾಪಾಡಿ ಬೆಳೆಸಿದರು ಮುಂದೆ ಇದೇ ಪರಂಪರೆ ಯನ್ನು ಶಿವಾಜಿ ಛತ್ರಪತಿಯೂ ಪೇಶ್ವೆಗಳೂ ಭಾರತದಲ್ಲಿ ಮುಂದುವರಿ ಸಿದರು

**ಪರದೇಶೀಯ ಪ್ರವಾಸಿಕರ ಅಭಿಪ್ರಾಯ** — ಇಟಲೀದೇಶದ ವ್ಹೆನಿಸಪಿಂದ **ನಿಕೊಲೊ ಕೊಂಟಿ** ಎಂಬ ಪ್ರವಾಸಿಯು ವಿಜಯನಗರಕ್ಕೆ ಬಂದಿದ್ದನು ತಾನು ಕಣ್ಣಾರೆ ಕಂಡದ್ದನ್ನು ಈತನು ಬರೆದಿಟ್ಟಿರುವನು ಅದರ ಸಾರಾಂಶ — "ವಿಜಯನಗರದ ಸುತ್ತಳತೆ ಅರುವತ್ತು ಮೈಲು ಇದ್ದು, ಊರಲ್ಲಿ ದೊಡ್ಡ ದೊಡ್ಡ ಕಾಲುವೆಗಳು ಹಾಯ್ದಿರುತ್ತವೆ ದೇಶವು ತೋಟ-ಪಟ್ಟಿಗಳಿಂದ ತುಂಬಿದೆ ಇಲ್ಲಿ ಭತ್ತ, ಕಬ್ಬು ವಿಪುಲವಾಗಿ ಬೆಳೆಯುತ್ತವೆ. ದೇವಸ್ಥಾನ, ಪಾಠಶಾಲೆ, ಅರಮನೆ ಮುಂತಾದುವುಗಳು ಸಿರಿವಂತಿಕೆಯಿಂದ ತುಂಬಿರುತ್ತವೆ.

ಪಗಡೀಪಟ್ಟದ ಪೇಟೆಯಿಂದ ಊರು ಮೆರೆಯುತ್ತದೆ ಒಂದು ಲಕ್ಷ ಜನ ಸೈನಿಕರು ಊರಲ್ಲಿರುವರು ಅರಸನು ಹತ್ತುಲಕ್ಷದ ವರೆಗೆ ಸೈನ್ಯವನ್ನು ಕೂಡಿಸಬಲ್ಲನು"

**ಅಬ್ದುರ್ ರಜ್ಜಾಕ್** – ಇವನು ಇರಾಣದ ವಕೀಲನು ಕೃಷ್ಣದೇವ-ರಾಯನ ಆಳಿಕೆಯಲ್ಲಿ ಬಂದಿದ್ದನು ಇವನು ಬರೆದುದು —"ಭಾರತದೊಳಗೆ ಇವನಷ್ಟು ಬಲಾಢ್ಯರಾದ ಅರಸರು ಬೇರೆ ಯಾರೂ ಇಲ್ಲ ಈ ಊರೆಂದರೆ ಗುಲಾಬಿ ಹೂವಿನ ಬನವು. ಪೇಟೆಯಲ್ಲಿ ಮುತ್ತು, ರತ್ನ, ಮಾಣಿಕ್ಯ ವೈಡೂರ್ಯಗಳ ದೊಡ್ಡ ವ್ಯಾಪಾರವು ನಡೆಯುವುದು ಇಲ್ಲಿಯ ರಾಯನಲ್ಲಿ ಹನ್ನೊಂದುಲಕ್ಷ ದಂಡು ಇದೆ ಕಾಲುವೆ ಕಾರಂಜಿಗಳಿಂದ ಊರು ಬಹು ಮನೋಹರವಾಗಿದೆ. ನವರಾತ್ರಿಯ ಉತ್ಸವವನ್ನು ರಾಜಧಾನಿಯಲ್ಲಿ ಬಹಳ ವಿಜೃಂಭಣೆಯಿಂದ ಜರುಗಿಸುತ್ತಾರೆ"

**ಮಾಂಡಲಿಕ ರಾಜ್ಯಗಳು** — ವಿಜಯನಗರ ಸಾಮ್ರಾಜ್ಯವು ಹಾಳಾದ ಮೇಲೆ ಮೈಸೂರು, ಕೆಳದಿ, ಬೀಳಗಿ, ಸ್ವಾದಿ, ಚಿತ್ರದುರ್ಗ ಮೊದಲಾದ ಮಾಂಡಲಿಕ ರಾಜ್ಯಗಳು ಕೆಲ ದಿನ ನಡೆದಿದ್ದುವು ಅವುಗಳಲ್ಲಿ ಕೆಳದಿ, ಸ್ವಾದಿ ಚಿತ್ರದುರ್ಗ, ಬೀಳಗಿಯ ಚಿಕ್ಕ ರಾಜ್ಯಗಳು ೧೯ನೆಯ ಶತಮಾನದಲ್ಲಿ ಮುಳುಗಿದುವು

**ರಾಜಕೀಯ** — ರಾಜರೆಲ್ಲರೂ ಬಲಾಢ್ಯರು ಅವರಲ್ಲಿ ಹೆಚ್ಚಾದ ಸಂಖ್ಯೆಯಲ್ಲಿ ಚತುರಂಗ ಸೈನ್ಯವಿರುತ್ತಿತ್ತು ಮಂತ್ರಿಗಳೂ ಸೇನಾಪತಿಗಳೂ ರಾಜ್ಯದ ಸುವ್ಯವಸ್ಥೆಯನ್ನು ಕಾಯುತ್ತಿದ್ದರು ಕುದುರೆಸವಾರರು ಖಡ್ಗ, ಢಾಲು, ಚಪ್ಪಗೂಡಲಿಗಳನ್ನು ಉಪಯೋಗಿಸುತ್ತಿದ್ದರು, ಕಾಲ್ದಳದ ಸೈನಿಕರು ಕೈಗತ್ತಿ (ಜಂಬಿಯಾ)ಗಳನ್ನೂ ಬಿಲ್ಲು-ಬಾಣಗಳನ್ನೂ ಬಳಸುತ್ತಿದ್ದರು

**ಒಕ್ಕಲುತನ** — ದೇಶದಲ್ಲಿ ಅಲ್ಲಲ್ಲಿ ಕೆರೆ ಹೊಳೆಗಳಿಂದ ನೀರಾವರಿಯ ಅನುಕೂಲತೆಯಾಗಿತ್ತು ಗೋದಿ, ಬತ್ತ, ಹತ್ತಿ, ಕಬ್ಬು, ಜೋಳ, ಸಣ್ಣ ಕಾಳುಗಳು ಬೇಕಾದಷ್ಟು ಬೆಳೆಯುತ್ತಿದ್ದುವು ಒಕ್ಕಲಿಗರಲ್ಲಿ ಎಮ್ಮೆ ಆಕಳುಗಳ ಸಂಖ್ಯೆ ಹೆಚ್ಚು

**ವ್ಯಾಪಾರ** — ವ್ಯಾಪಾರಕ್ಕಾಗಿ ಬೆಳ್ಳಿ, ಬಂಗಾರ, ತಾಮ್ರಗಳ ನಾಣ್ಯಗಳು ಬಳಕೆಯಲ್ಲಿದ್ದುವು. ಅರಿವೆ, ಅಕ್ಕಿ, ಕಬ್ಬಿಣ, ಸಕ್ಕರೆ, ಮಸಾಲೆಯ ಪದಾರ್ಥಗಳು, ಹೊರನಾಡುಗಳಿಗೆ ಹೋಗುತ್ತಿದ್ದುವು ಕುದುರೆ, ಆನೆ, ಮುತ್ತು, ತಾಮ್ರ, ಹವಳ, ಪಾರಜ, ಇಂಗು, ಚೀನೀ ರೇಶಿಮೆಗಳು ಹೊರಗಿನಿಂದ ಬರುತ್ತಿದ್ದುವು ಹಣ್ಣುಹಂಪಲು ಕಾಯಿಪಲ್ಲೆ ಮೊದಲಾದುವು ರಾಜ್ಯದಲ್ಲಿಯೇ ಬೆಳೆಯುತ್ತಿದ್ದುವು. ಹಾಲು-ಹೈನಗಳ ವ್ಯಾಪಾರ ಅಗ್ಗಳತೆಯಲ್ಲಿಯೇ ಸಾಗುತ್ತಿತ್ತು

ಚಂದನ, ಕೇಶರ, ಕಸ್ತೂರಿ, ಸುಗಂಧಗಳನ್ನು ಮನೆಮನೆಗೂ ಕೊಳ್ಳುತ್ತಿದ್ದರು. ಆಗ ತಾನೆ ಹೊಸದಾಗಿ ಭಾರತಕ್ಕೆ ಬಂದು ಗೋವೆಯಲ್ಲಿ ನೆಲೆಸಿದ್ದ ಪೋರ್ತು-ಗೀಜರ ಮೂಲಕ, ವಿಜಯನಗರದ ಅರಸರು ಅರಬಸ್ತಾನ-ಇರಾಣಗಳಿಂದ ತಂದ ಕುದುರೆಗಳನ್ನು ಕೊಂಡುಕೊಳ್ಳುತ್ತಿದ್ದರು

ಸಾಗಾಟದ ಸಾಧನಗಳು — ಚಕ್ಕಡಿಗಳೇ ಆಗಿನ ದೊಡ್ಡ ಸಾಧನಗಳು ಎತ್ತು ಕುದುರೆಗಳ ಮೇಲೆಯೂ ತಲೆಹೊರೆ ಕಾವಡಿಗಳಿಂದಲೂ ಸಾಮಾನುಗಳನ್ನು ಸಾಗಿಸುತ್ತಿದ್ದರು ಹಡಗುಗಳೂ ಉಪಯೋಗದಲ್ಲಿದ್ದುವು.

ಕಲೆ-ಕೈಗಾರಿಕೆಗಳು — ಕಲೆ-ಕೈಗಾರಿಕೆಗಳು ಒಳ್ಳೇ ಊರ್ಜಿತ ಸ್ಥಿತಿಯಲ್ಲಿದ್ದುವು ವಿಜಯನಗರದ ಅರಸರು ತಿರುಪತಿ, ಕಾಳಹಸ್ತಿ, ಕಂಚಿ, ರಾಮೇಶ್ವರ, ಮಧುರ, ಶ್ರೀರಂಗ ಮುಂತಾದ ದಕ್ಷಿಣದ ಎಲ್ಲ ಪುಣ್ಯಸ್ಥಳಗಳನ್ನೂ ಊರ್ಜಿತಗೊಳಿಸಿ, ಅಲ್ಲಲ್ಲಿಯ ದೇವಸ್ಥಾನಗಳನ್ನು ಜೀರ್ಣೋದ್ಧಾರ ಮಾಡಿ, ಗಗನದೆತ್ತರದ ಗೋಪುರಗಳನ್ನು ಕಟ್ಟಿಸಿ ಸಿಂಗರಿಸಿದರು ದರಬಾರದಲ್ಲಿಯ ವಿಲಾಸಸಾಮಗ್ರಿಗಳು ಮಾತ್ರ ಪರದೇಶಗಳಿಂದ ಬರುತ್ತಿದ್ದುವು ಬಟ್ಟೆಯ ಕಾರಖಾನೆಗಳು ಬಹಳವಾಗಿದ್ದುವು ಮುತ್ತು ರತ್ನಗಳ ಕೆತ್ತಿಗೆಯ ಕೆಲಸವೂ ಕುಂದಣದ ಕಲೆಯೂ ಒಳ್ಳೇ ಮನೋಹರವಾಗಿದ್ದುವು 'ಯುದ್ಧದ ಶಸ್ತ್ರಾಸ್ತ್ರಗಳನ್ನೂ ಮನೆಯುಪಯೋಗದ ಒಡವೆಗಳನ್ನೂ ಧಾತುಗಳಿಂದಲೇ ಮಾಡುತ್ತಿದ್ದರು.

## ಅಭ್ಯಸನಗಳು

೧ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ.

(ಅ) ವಿಜಯನಗರದ . ನೆಯ ಅರಸನಾದ ಹುಕ್ಕ ಅಥವಾ ... .ನಿಗೆ ಕ್ರಿ ಶ ರಲ್ಲಿ ಪಟ್ಟವಾಯಿತು

(ಆ) ಪ್ರೌಢದೇವರಾಯನ ಆಳಿಕೆಯಲ್ಲಿ ವ್ಯಾಸನು .. ...ಭಾಷೆಯಲ್ಲಿ ಮಹಾಭಾರತವನ್ನು ಎಂಬ ಊರಲ್ಲಿ ಬರೆದನು.

(ಇ) ವಂಶದ ಕೃಷ್ಣರಾಯನಿಗೆ . ಮತ್ತು.. .. ಎಂಬೆರಡು ಬಿರುದುಗಳಿದ್ದುವು

(ಈ) ರಕ್ಕಸಗಿ . ಕಾಳಗವು ಮತ್ತು ಮುಸಲ್ಮಾನರ ನಡುವೆ ಕ್ರಿ. ಶ ರಲ್ಲಿ ಆಯಿತು

(ಉ) ಇಟಲಿ ದೇಶದ ದಿಂದ .. ಎಂಬ. .. .ಯು ವಿಜಯನಗರಕ್ಕೆ ಬಂದಿದ್ದನು

೨ ಕೆಳಗೆ ಒಂದೆಡೆಗೆ ಹಲವು ಹೆಸರುಗಳನ್ನೂ ಇನ್ನೊಂದೆಡೆಗೆ ಅವರ ಬಗ್ಗೆ ಸಂಗತಿಯನ್ನೂ ಕೊಟ್ಟಿದೆ ಎರಡೂ ಭಾಗಗಳನ್ನು ಸರಿಯಾಗಿ ಹೊಂದಿಸಿ ಬರೆಯಿರಿ

| | |
|---|---|
| ಇಮ್ಮಡಿ ಹರಿಹರ | ಒಂದನೆಯ ದೇವರಾಯನ ಮಂತ್ರಿ |
| ತೆನ್ನಾಲಿ ರಾಮಕೃಷ್ಣ | ಕುಮಾರವ್ಯಾಸನ ಭಾರತವನ್ನು ಮುಗಿಸಿದನು |
| ಲಕ್ಕಣ್ಣ ದಂಡೇಶ | ಕೃಷ್ಣದೇವರಾಯನ ಕಾಲದ ವಿದೂಷಕ |
| ಲಕ್ಷ್ಮೀಧರ | 'ವಿದ್ಯಾವಿಲಾಸ' ಎಂಬ ಬಿರುದುಳ್ಳವ |
| ತಿಮ್ಮಣ್ಣ | ಪ್ರೌಢದೇವರಾಯನ ಪ್ರಧಾನ |

೩ ವಿಜಯನಗರ ರಾಜ್ಯವನ್ನು ಕುರಿತು ಕೆಳಗಿನವುಗಳ ಬಗೆಗೆ ಒಂದೊಂದು ವಾಕ್ಯವನ್ನು ಬರೆಯಿರಿ

(ಅ) ಹೊರನಾಡಿನಿಂದ ಬರುವ ಸರಕುಗಳು (ಆ) ಸಾಗಾಟದ ಸಾಧನಗಳು (ಇ) ವಿಜಯನಗರದ ಅರಸರು ಜೀರ್ಣೋದ್ಧಾರ ಮಾಡಿದ ದೇವಾಲಯಗಳು (ಈ) ಮಾಂಡಲಿಕ ರಾಜ್ಯಗಳು (ಉ) ಒಕ್ಕಲುತನ

೪ ಕೃಷ್ಣದೇವರಾಯನ ಕಾಲದ ಅವನ ಪ್ರಜೆಗಳಲ್ಲೊಬ್ಬನು ನಿಮಗೆ ಕನಸಿನಲ್ಲಿ ಭೆಟ್ಟಿಯಾದರೆ, ನಿಮ್ಮ ಅವನ ನಡುವೆ ನಡೆಯಬಹುದಾದ ಸಂಭಾಷಣೆ ಏನು? (ಶಿಕ್ಷಕರು ವಿದ್ಯಾರ್ಥಿಗಳನ್ನು ಆಯ್ದುಕೊಂಡು ಅಭಿನಯ ಮಾಡಿಸಬಹುದು)

---

# ೮ ಬಾಹಮನೀ ರಾಜ್ಯ

**ದಕ್ಷಿಣದಲ್ಲಿ ಮುಸಲ್ಮಾನರ ರಾಜ್ಯಸ್ಥಾಪನೆ** — ಮಹಮ್ಮದ ತಗಲಖನು ದಕ್ಷಿಣಭಾರತದಲ್ಲಿ ಮುಸಲ್ಮಾನರ ಆಡಳಿತವನ್ನು ಬಲವಡಿಸಲು ಪ್ರಯತ್ನಿಸಿದನು ಆದರೆ ಅವನ ತರುವಾಯ ದಕ್ಷಿಣಭಾರತದ ಮುಸಲ್ಮಾನ ಸರದಾರರು ಸ್ವತಂತ್ರವಾಗಿ ತಮ್ಮದೇ ಒಂದು ರಾಜ್ಯವನ್ನು ಸ್ಥಾಪಿಸಲು ಹವಣಿಸಿದರು ಅದೇ ಕಾಲಕ್ಕೆ ಹಿಂದುಗಳೂ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿದರು

**ಬಾಹಮನೀ ರಾಜ್ಯ** — ತಗಲಖ ಮಹಮ್ಮದನು ದೌಲತಾಬಾದದಿಂದ ದಿಲ್ಲಿಗೆ ತಿರುಗುವಾಗ, ಅಲ್ಲಿಯ ಆಡಳಿತಕ್ಕೆ **ಕುತಲಘಖಾನ** ಎಂಬ ಸರದಾರನನ್ನಿಟ್ಟಿದ್ದನು ಆತನ ಕೈಯಲ್ಲಿ **ಅಲ್ಲಾಉದ್ದೀನ ಹಸನನು** ನಂಬಿಗೆಯ ಅಧಿಕಾರಿಯಾಗಿದ್ದನು ಈತನಿಗೆ ಬೆಳಗಾವಿ ಜಿಲ್ಹೆಯೊಳಗೆ ಕುಡಚಿ-ರಾಯಬಾಗಗಳು ಜಹಗೀರುಗಳಾಗಿದ್ದುವು ಮುಂದೆ ದಕ್ಷಿಣದ ಸುಭೇದಾರರು ಸ್ವತಂತ್ರರಾಗಲು ಪ್ರಯತ್ನಿಸಹತ್ತಿ ಬಂಡನ್ನೆಬ್ಬಿಸಿದರು ಬಾದಶಹನು ಅಲ್ಲಾಉದ್ದೀನ ಹಸನನನ್ನೇ ಅವರ ಮೇಲೆ ಕಳುಹಿದನು. ಈತನು ಶೌರ್ಯದಿಂದ ಅವರನ್ನು ಬಗ್ಗುಬಡಿದನು ಆದರೆ, ಅಲ್ಲಿಯ ಜನರು ಬಾದಶಹನ ಹುಚ್ಚು ಆಡಳಿತಕ್ಕೆ ಬೇಸತ್ತಿದ್ದರು, ಹೊಸ ಆಳಿಕೆಯನ್ನು ಬೇಡುತ್ತಿದ್ದರು ಅಲ್ಲಾಉದ್ದೀನ ಹಸನನು ಸ್ವತಂತ್ರನಾಗಿ, ಕಲಬುರ್ಗೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು, ಮತ್ತು ತಾನು **ಅಲ್ಲಾಉದ್ದೀನ ಹಸನ ಗಂಗೂ ಬಾಹಮನಿ** ಎಂಬ ಹೊಸ ಹೆಸರನ್ನು ಧರಿಸಿದನು ಹೀಗ ಬಾಹಮನಿ ರಾಜ್ಯವು ಕ್ರಿ ಶ ೧೩೪೭ರಲ್ಲಿ ಆರಂಭವಾಯಿತು

**ರಾಜ್ಯವಿಸ್ತಾರ** — ಬಳಿಕ ಇವನು ಅಕ್ಕಲಕೋಟ, ಮುಂಡರಗಿ, ಮುಧೋಳ, ಬಾಗಿಲುಕೋಟೆ, ಮಿರ್ಜಿ, ಜಮಖಂಡಿ ಇವುಗಳನ್ನು ಗದ್ದು ರಾಜ್ಯವನ್ನು ಹಬ್ಬಿಸಿದನು

**ಯೋಗ್ಯತೆ** — ಅಲ್ಲಾಉದ್ದೀನನ ಆರಂಭದ ಆಳಿಕೆ ಹಿಂದುಗಳಿಗೆ ಹಿತಕರವಾಗಿಯೇ ಇತ್ತು ಮುಂದೆ ಮಾತ್ರ ಅರಸನಲ್ಲಿ ಧರ್ಮದ ದುರಭಿಮಾನವು ಉಂಟಾಯಿತು ಅದರಿಂದ ರಾಜ್ಯದಲ್ಲಿ ಅವ್ಯವಸ್ಥೆಯುಂಟಾಯಿತು ಕೃಷ್ಣಾ-ತುಂಗಭದ್ರಾ ನದಿಗಳ ನಡುವಣ ಪ್ರದೇಶವಾದ "ರಾಯಚೂರ ದೋಆಬ"ದ ಸಲುವಾಗಿ ಬಾಹಮನಿಯರೂ ವಿಜಯನಗರದ ಅರಸರೂ ಕಾದಾಡಿದರು. ಅಷ್ಟರಲ್ಲಿಯೇ ಅಲ್ಲಾಉದ್ದೀನ ಹಸನನು ಮರಣಹೊಂದಿದ್ದನು (೧೩೫೮)

**ವಿಜಯನಗರ ಮತ್ತು ಬಾಹಮನಿ ರಾಜ್ಯಗಳು** – ವಿಜಯನಗರ, ಬಾಹಮನಿ ರಾಜ್ಯಗಳು ನೆರೆಯ ನಾಡುಗಳು, ಮತ್ತು ಒಂದೇ ಕಾಲದುವು ಇವುಗಳ ರಾಜರು ಒಬ್ಬರನ್ನೊಬ್ಬರು ಆಕ್ರಮಿಸಲು ಪ್ರಯತ್ನಿಸುತ್ತಿದ್ದರು. ಆದರೆ ವಿಜಯನಗರದ ಪ್ರಚಂಡ ಶಕ್ತಿ-ಸೈನ್ಯಗಳ ಇದಿರಿಗೆ ಬಾಹಮನಿ ಬಾದಶಹರ ಆಟ ನಡೆಯುತ್ತಿರಲಿಲ್ಲ ಆರನೆಯ ಬಾದಶಹನಾದ ಫಿರೋಜಶಹನು ವಿಜಯ-ನಗರದ ದೇವರಾಯನನ್ನು ಸೋಲಿಸಿದನು

**ಮುಹಮ್ಮದಶಹ** —(೧೪೬೩-೧೪೮೨) ಬಾಹಮನಿ ಅರಸರಲ್ಲಿ ಈತನೇ ಒಳ್ಳೆಯ ಶೂರ, ವಿದ್ಯಾಪ್ರಿಯ ವಿದ್ಯಾವಂತ ಈತನಲ್ಲಿ **ಮುಹಮ್ಮದ ಗವಾನ** ನೆಂಬ ಗುಣಶಾಲಿಯಾದ ಶೂರ ಮಂತ್ರಿಯಿದ್ದನು ಈತನ ಮುತ್ಸದ್ದಿತನದಿಂದ ರಾಜ್ಯದ ವಿಸ್ತಾರವಾಯಿತು ರಾಜ್ಯದಲ್ಲಿ ಶಾಂತಿಯುಂಟಾಯಿತು ತೆರಿಗೆ, ಭೂಕಂದಾಯ, ಆಡಳಿತದ ವ್ಯವಸ್ಥೆ ಇವೆಲ್ಲವೂ ನ್ಯಾಯಬದ್ಧವಾಗಿ ಇದ್ದುವು. ಕೆಲಕಾಲ ಬಾದಶಹನೂ ಮಂತ್ರಿಯೂ ಒಮ್ಮತದಿಂದ ನಡೆದರು ಇದು ಕೆಲವರಿಗೆ ಸಹನವಾಗಲಿಲ್ಲ ಮಂತ್ರಿಯ ಮೇಲೆ ಇಲ್ಲದ ಆರೋಪ ಹೊರಿಸಿದರು ಬಾದಶಹನು ಗವಾನನಂತಹ ಸತ್ಪುರುಷನನ್ನು ಹಿಂದು-ಮುಂದಿನ ವಿಚಾರವಿಲ್ಲದೆ ಕೊಲ್ಲಿಸಿಬಿಟ್ಟನು ಈ ಕೃತ್ಯದ ಫಲವಾಗಿ ರಾಜ್ಯದಲ್ಲಿ ಒಡಕು-ತೊಡಕುಗಳು ಹುಟ್ಟಿದುವು, ಸರದಾರರು ತಲೆಯೆತ್ತಿದರು

**ಬಾಹಮನಿ ರಾಜ್ಯದಲ್ಲಿ ಭಾಗಗಳು** —ಮುಂದಿನ ಅರಸುಗಳ ಕಾಲದಲ್ಲಿ ಸರದಾರರು ಪ್ರಬಲರಾದರು ಕೊನೆಗೆ ಒಬ್ಬೊಬ್ಬರು ಒಂದೊಂದು ಸ್ವತಂತ್ರ ಭಾಗವನ್ನು ಮಾಡಿಕೊಂಡರು ಹೀಗೆ, **ಇಮಾದಶಾಹಿ, ಬರೀದಶಾಹಿ, ಕುತುಬಶಾಹಿ, ನಿಜಾಮಶಾಹಿ, ಆದಿಲಶಾಹಿ** ಎಂದು ಬಾಹಮನಿರಾಜ್ಯವು ಅಯ್ದು ಭಾಗಗಳಾಗಿ ಒಡೆಯಿತು ಇದರಿಂದ, ವಿಜಯನಗರದ ಅರಸರಿಗೆ ಅನುಕೂಲವಾಯಿತು ಇವುಗಳಲ್ಲಿ ಬೀದರ, ಗೋವಳಕೊಂಡ ರಾಜ್ಯಗಳು ಔರಂಗಜೇಬನ ಕಾಲದ ವರೆಗೆ ನಡೆದುವು ಕೊನೆಗೆ ಮೊಗಲ ಮಹಾಸಾಗರದಲ್ಲಿ ಮುಳುಗಿ ಹೋದುವು ಅಹಮ್ಮದನಗರದ **ನಿಜಾಮಶಾಹಿ**ಯನ್ನು **ನಿಜಾಮ ಉಲ್ಮುಲ್ಕ** ಎಂಬವನು ಸ್ಥಾಪಿಸಿದನು ಈ ಮನೆತನವು ಹೆಸರಾಗಿ ಬಾಳಿತು ವಿಜಯ-ನಗರದ ಅಳಿಗಾಲಕ್ಕೆ ಕಾರಣವಾದ ರಕ್ಕಸಗಿ-ತಂಗಡಿಗಿಯ ಯುದ್ಧದಲ್ಲಿ ನಿಜಾಮಶಹನೇ ಮುಸಲ್ಮಾನರ ಮುಖ್ಯ ನಾಯಕನಾಗಿದ್ದನು. ನಿಜಾಮಶಹನ ಮಗಳು **ಚಾಂದಬೀಬಿ** ಇತಿಹಾಸಪ್ರಸಿದ್ಧಳಾಗಿದ್ದಾಳೆ ಈ ರಾಜ್ಯವು ಶಾಹೇಜಹಾನನ ಆಳಿಕೆಯ ವರೆಗೂ ಸಾಗಿತು

**ಆದಿಲಶಾಹಿ ಮನೆತನ** —(೧೪೯೦-೧೭೦೧) ಆದಿಲಶಾಹಿ ರಾಜ್ಯವನ್ನು ಸ್ಥಾಪಿಸಿದವನು **ಯೂಸುಫ್ ಆದಿಲಶಹನು.** ಈತನು ಬಾಹಮನಿ ರಾಜ್ಯದಲ್ಲಿ

ಸುಭೇದಾರನಾಗಿದ್ದನು ಮುಂದೆ ಸ್ವತಂತ್ರನಾಗಿ ವಿಜಾಪುರದಲ್ಲಿ ಸಿಂಹಾಸನವನ್ನು ಸ್ಥಾಪಿಸಿದನು ಈತನ ತರುವಾಯ **ಇಸ್ಮಾಯಿಲ ಆದಿಲಶಹನು** ಪಟ್ಟವೇರಿದನು

**ಇಸ್ಮಾಯಿಲ ಆದಿಲಶಹ** —(೧೫೧೦-೧೫೩೪) ಇವನು ಪಟ್ಟವೇರಿದಾಗ ಕಮಾಲಖಾನ ಮುಂತಾದ ಸರದಾರರು ಇವನನ್ನು ಕೊಲ್ಲಲು ಪವಣಿಸಿದರು ಆಗ ಮುಧೋಳದ ಹಿಂದು ಅರಸನೇ ಈತನನ್ನು ಉಳಿಸಿದನು ಅಂದಿನಿಂದಲೇ **ಆದಿಲಶಾಹಿ** ಮನೆತನಕ್ಕೂ ಹಿಂದುಗಳಿಗೂ ದಿನದಿನಕ್ಕೆ ಸಖ್ಯ ಬೆಳೆಯತೊಡಗಿತು ಇಸ್ಮಾಯಿಲನ ತರುವಾಯ ಹೆಸರಾದ ಬಾದಶಹನೆಂದರೆ, **ಅಲ್ಲೀ ಆದಿಲಶಹನೇ**

**ಅಲ್ಲೀ ಆದಿಲಶಹ** ---(೧೫೫೮-೧೫೭೯) ಈತನ ಕಾಲದಲ್ಲಿ ವಿಜಾಪುರ ರಾಜ್ಯದ ವೈಭವವು ಎಲ್ಲ ರೀತಿಯಿಂದಲೂ ಬೆಳೆಯಿತು ನಿಜಾಮಶಹನ ಮಗಳಾದ ಇತಿಹಾಸಪ್ರಸಿದ್ಧ **ಚಾಂದಬೀಬಿ** ವೀರರಾಣಿಯೇ ಈತನ ಹೆಂಡತಿ ಈ ದೊರೆಯ ಕಾಲಕ್ಕೆ ವಿಜಯನಗರದ ಕೊನೆಯು ರಕ್ಕಸಗಿ-ತಂಗಡಿಗಿಯ ಕಾಳಗದಿಂದ ಆಯಿತು ಇದರಲ್ಲಿ ರಾಮರಾಯನ ಕೊಲೆಯನ್ನು ಅಲ್ಲೀ ಆದಿಲಶಹನೇ ಮಾಡಿದನೆಂದು ಹೇಳುತ್ತಾರೆ ಇವರಿಬ್ಬರಲ್ಲಿ ಮೊದಲು ತಂದ-ಮಕ್ಕಳ ಪ್ರೇಮವಿದ್ದಿತು ಆ ದುರ್ಘಟನೆಗೆ ಕಾರಣವೇನಾಯಿತೋ ಎಂಬದು



ವಿಜಾಪುರದ ಬೋಲಗುಮಟ

ಗೊತ್ತಾಗಿಲ್ಲ ಈತನ ತರುವಾಯ ೨ನಯ ಇಬ್ರಾಹಿಮಶಹನ ಮಗನಾದ **ಮುಹಮ್ಮದ ಆದಿಲಶಹನು** ಪಟ್ಟವೇರಿದನು

ಮುಹಮ್ಮದ ಆದಿಲಶಹ — ಇವನ ರಾಜ್ಯವನ್ನು ಭದ್ರಪಡಿಸುವುದಕ್ಕೆ ಹಿಂದು ಅಧಿಕಾರಿಗಳೇ ಕಾರಣರಾಗಿದ್ದರು ಈತನೇ ವಿಜಾಪುರದ ಪ್ರಸಿದ್ಧವಾದ ಭವ್ಯ ಬೋಲಗುಮಟವನ್ನೂ ಇನ್ನಿತರ ಕೆಲವು ಇಮಾರತಿಗಳನ್ನೂ ಕಟ್ಟಿಸಿದನು ಬೋಲಗುಮಟದಂತಹ ಭವ್ಯಕಟ್ಟಡವು ಇಡೀ ಜಗತ್ತಿನಲ್ಲಿಯೇ ಇಲ್ಲ ಅದನ್ನು ಕಟ್ಟಿದ ಕನ್ನಡ ಶಿಲ್ಪಿಗಳು ಅಮರಕೀರ್ತಿಯನ್ನು ಗಳಿಸಿದ್ದಾರೆ ಈತನ ತರುವಾಯ ಎರಡನೆಯ ಅಲ್ಲೀ ಆದಿಲಶಹನು ಪಟ್ಟಕ್ಕೆ ಬಂದನು

**ಎರಡನೆಯ ಅಲ್ಲೀ ಆದಿಲಶಹ** — ಈತನಲ್ಲಿ ಅಫಝುಲ್‌ಖಾನನೆಂಬ ಶೂರ ಸರದಾರನಿದ್ದನು ಈ ಕಾಲಕ್ಕೆ ಮಹಾರಾಷ್ಟ್ರದಲ್ಲಿ **ಶಿವಾಜಿಯೆಂಬ** ಧೀರ ಹಿಂದೂ ತರುಣನು ಸ್ವತಂತ್ರ ಹಿಂದು ರಾಜ್ಯವನ್ನು ಕಟ್ಟಲು ಹವಣಿಸಿದನು ಅವನನ್ನು ಬಗ್ಗುಒಡಿಯಲು ಅಫಝುಲ್‌ಖಾನನು ಹೋಗಿ ಶಿವಾಜಿಯ ತಂತ್ರಕ್ಕೆ ಬಲಿಯಾದನು ಕೊನೆಗೆ ಔರಂಗಜೇಬನ ಕಾಲದಲ್ಲಿ ಆದಿಲಶಾಹಿಯು ಮೊಗಲರ ವಶವಾಯಿತು

## ಅಭ್ಯಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ವಾಕ್ಯದಲ್ಲಿ ಉತ್ತರ ಬರೆಯಿರಿ

(ಅ) ಬಾಹಮನೀ ರಾಜ್ಯವನ್ನು ಯಾರು ಸ್ಥಾಪಿಸಿದರು? ಯಾವ ಇಸ್ವಿಯಲ್ಲಿ?

(ಆ) 'ರಾಯಚೂರ ದೋಆಬ' ಎಂದರೆ ಯಾವ ಪ್ರದೇಶ? ಅದಕ್ಕಾಗಿ ಯಾರು ಯಾರು ಕಾದಾಡಿದರು?

(ಇ) ಬಾಹಮನೀ ರಾಜ್ಯಗಳು ಒಡೆದು ಯಾವ ಯಾವ ರಾಜ್ಯಗಳಾದುವು?

(ಈ) ಆದಿಲಶಾಹಿ ಮನೆತನಕ್ಕೂ ಹಿಂದುಗಳಿಗೂ ಸಖ್ಯವು ಯಾವಾಗ ಬೆಳೆಯತೊಡಗಿತು?

(ಉ) ಬೋಲಗುಮಟವನ್ನು ಯಾರು ಕಟ್ಟಿಸಿದರು?

೨ ಕುತಲಘುಖಾನ, ಮುಹಮ್ಮದಗವಾನ, ಚಾಂದಬೀಬಿ, ಅಫಝುಲ್‌ಖಾನ, ನಿಜಾಮ ಉಲ್‌ಮುಲ್ಕ ಈ ಹೆಸರುಗಳು ಇತಿಹಾಸದಲ್ಲಿ ಬಂದ ಸಂದರ್ಭಗಳನ್ನು ಒಂದೊಂದು ವಾಕ್ಯದಲ್ಲಿ ಹೇಳಿರಿ

---

# ಭಾರತದಲ್ಲಿ ಮುಸಲ್ಮಾನ ಸತ್ತಾರಂಭ

# ೯ ಮೊಗಲ ಸಾಮ್ರಾಜ್ಯದ ಸ್ಥಾಪನೆ

## ಬಾಬರ, ಹುಮಾಯೂನ, ಶೇರಶಹಾ

**ಪಾದಶಾಹ-ಇ-ಹಿಂದ್** —ಪಾದಶಾಹ-ಇ-ಹಿಂದ್ ಎಂದರೆ ಹಿಂದುಸ್ತಾನದ ಸಮ್ರಾಟ ಈ ಪದವಿಯನ್ನು ಪಡೆದ ಭಾಗ್ಯಶಾಲಿಯಾದ **ಬಾಬರನಿಂದಲೇ** ಮೊಗಲ ಸಾಮ್ರಾಜ್ಯವು ಆರಂಭವಾಯಿತು

**ಬಾಬರನ ಜನ್ಮ** —ಈ ಮೊದಲು ಭಾರತದ ಮೇಲೆ ದಾಳಿಯನ್ನು ಮಾಡಿದ ತೈಮೂರನ ವಂಶದಲ್ಲಿ, ಕ್ರಿ ಶ ೧೪೮೩ರಲ್ಲಿ ಬಾಬರನ ಜನ್ಮವಾಯಿತು ಆತನ ಮೂಲಹೆಸರು **ಜಹಿರುದ್ದೀನ ಮುಹಮ್ಮದ,** ಆದರೆ ತಾಯಿಯ ತಂದೆ ಮೊಮ್ಮಗನ ಮುಖಲಕ್ಷಣವನ್ನು ನೋಡಿ 'ಬಾಬರ' ಎಂದರೆ ಸಿಂಹ ಎಂದು ಹೆಸರಿಟ್ಟನು ಮುಂದೆ ಅದೇ ಹೆಸರಿನಿಂದ ಆತನು ಬೆಳೆದು ಬಾಳಿದನು



ಬಾಬರ

ತಂದೆಯು ತೀರಿಕೊಂಡಾಗ ಬಾಬರನಿಗೆ ೧೩ ವರ್ಷ ಮಾತ್ರ ಇಂತಹ ಎಳತನದಲ್ಲಿ ಕಾಬೂಲದ ಪರಘಾನಾ ಪ್ರಾಂತದ ಪಟ್ಟವನ್ನು ಏರಿದನು ೧೪ ವರ್ಷದವನಿರುವಾಗಲೇ ಸಮರಕಂದವನ್ನು ಗೆದ್ದನು ಕಡೆಗೆ ಕಾಬೂಲಕ್ಕೆ ಬಂದನು ಮುಂದೆ ೧೫ ವರ್ಷಗಳ ವರೆಗೆ ಅಲ್ಲಿಯೇ ಇದ್ದನು

ಅಲ್ಲಿ ಬಾಬರನ ಜೀವಕ್ಕೆ ತುಸು ವಿಶ್ರಾಂತಿ ಸಿಕ್ಕಿತು ನಡುನಡುವೆ ಭಾರತವನ್ನು ಸೇರಿ ಸುಲಿಗೆಯನ್ನು ಮಾಡಿಕೊಂಡು ಮರಳುವುದು ಆತನ ಕೆಲಸವಾಯಿತು ೧೫೨೬ನೆಯ ಇಸವಿಯಲ್ಲಿ ಭಾರತದ ಮೇಲೆ ದಂಡೆತ್ತಿ ಬಂದುದು ಆರನೆಯ ಸಲ! ಈಗ ಉದ್ದೇಶವು ಮೊದಲಿನಂತೆ ಸುಲಿಗೆಯದಾಗಿರಲಿಲ್ಲ, ಸಾಮ್ರಾಜ್ಯವನ್ನು ಸ್ಥಾಪಿಸುವುದಾಗಿತ್ತು

**ಬಾಬರನು ಕಂಡ ಭಾರತ** —(೧೫೨೬) ಬಾಬರನು ಭಾರತವನ್ನು ಹಿಡಿದುಕೊಳ್ಳಬೇಕೆನ್ನುವ ಹೊತ್ತಿಗೆ ಇಲ್ಲಿ ಎರಡು ಪ್ರಬಲ ಶಕ್ತಿಗಳಿದ್ದುವು **ಇಬ್ರಾಹಿಮ ಲೋದಿಯು** ದಿಲ್ಲಿಯಲ್ಲಿ ಆಳುತ್ತಿದ್ದನು ಅವನು ಶೂರನಿದ್ದಂತೆ ಕ್ರೂರನೂ ಆಗಿದ್ದನು ಈ ಕ್ರೂರತನಕ್ಕಾಗಿ ಸರದಾರರು ಒಳಗೊಳಗೇ ಹಲ್ಲು ಮಸೆಯುತ್ತಿದ್ದರು ಅವರಲ್ಲಿ **ದೌಲತಖಾನನೆಂಬ** ಸರದಾರನು ಸಂಚುಮಾಡಿ ಬಾಬರನಿಗೆ ಪತ್ರವನ್ನು ಬರೆದನು ದಂಡೆತ್ತಿ ಬಂದರೆ ತಾನು ಸಹಾಯಮಾಡುವುದಾಗಿ

ಗುಪ್ತವಾಗಿ ತಿಳಿಸಿದನು ಇಬ್ರಾಹಿಮ ಲೋದಿಗೆ ಇದಾವುದೂ ತಿಳಿದಿರಲಿಲ್ಲ; ತನ್ನ ಶೌರ್ಯದ ಸೊಕ್ಕಿನಲ್ಲಿಯೇ ಮೈಮರೆತಿದ್ದನು

ಇನ್ನೊಂದು ಪ್ರಬಲಶಕ್ತಿಯೆಂದರೆ ಮೇವಾಡದ **ರಾಣಾ ಸಂಗರಾಜ** ಆತನ ಮೈಮೇಲೆ ಬೇರೆ ಬೇರೆ ಯುದ್ಧಗಳಲ್ಲಾದ ೮೦ ಗಾಯಗಳಿದ್ದುವಂತೆ, ಆತನು ಅತ್ಯಂತ ಶೂರನು, ಆದರೂ ಇಬ್ರಾಹಿಮನನ್ನು ಇದಿರಿಸುವಷ್ಟು ಸೈನ್ಯ-ಸಾಮುಗ್ರಿ ಆತನ ಹತ್ತಿರ ಇದ್ದಿಲ್ಲ, ಆದರೆ, ಹೇಗಾದರೂ ಮಾಡಿ ಲೋದಿ ಮನೆತನವನ್ನು ಬೀಳಿಸಬೇಕೆಂಬುದು ಆತನ ಇಚ್ಛೆ ಈ ಮೊದಲು ಬಾಬರನು ಭಾರತದ ಸುಲಿಗೆಯನ್ನು ಮಾಡಿಕೊಂಡು ಕಾಬೂಲಕ್ಕೆ ಮರಳಿ ಹೋಗುತ್ತಿದ್ದನೆಂಬ ಸಂಗತಿ ಆತನಿಗೆ ತಿಳಿದಿತ್ತು ಮತ್ತು ತಾನು ಈಗ ಇಬ್ರಾಹಿಮ ಲೋದಿಯ ಮೇಲೆ ಏರಿಹೋದರೆ, ಸಂಗರಾಜನು ಆತನಿಗೆ ನೆರವಾಗುವುದಿಲ್ಲವೆಂಬದು ಬಾಬರನಿಗೆ ತಿಳಿಯಿತು

**ಪಾನಿಪತದ ೧ನೆಯ ಯುದ್ಧ** —(೧೫೨೬) ಬಾಬರನು ಮೊದಲು ಸೈನ್ಯ ಸಹಿತವಾಗಿ ಸೇನಾಪತಿಗಳನ್ನು ಕಳಿಸಿ, ಹಿಂದುಗಡೆ ದೊಡ್ಡ ದಂಡಿನೊಡನೆ ತಾನೂ ಬಂದನು ಅವರಿಗೆ ಪಾನಿಪತ ರಣಭೂಮಿಯಲ್ಲಿ ಇಬ್ರಾಹಿಮ ಲೋದಿಯು ಇದಿರಾದನು ಬಾಬರನು ಮೊತ್ತಮೊದಲು ರಣರಂಗದಲ್ಲಿ ತೋಫುಗಳನ್ನು ಉಪಯೋಗಿಸಿದನು ಇಬ್ರಾಹಿಮನ ಆಟವು ನಿಂತಿತು ಅವನು ರಣಭೂಮಿಯಲ್ಲಿಯೇ ಮಡಿದನು ಬಾಬರನು ಜಯಶಾಲಿಯಾದನು ದಿಲ್ಲಿಯ ದೊರೆತನವನ್ನು ಪಡೆದನು

**ದಿಲ್ಲಿಯ ಸಮ್ರಾಟ** —ಬಳಿಕ ಆಗ್ರಾದ ಮೇಲೆ ದಾಳಿಯನ್ನು ಮಾಡಿದನು ಅಲ್ಲಿ ಆತನಿಗೆ ಜಗತ್ಪ್ರಸಿದ್ಧ **ಕೊಹಿನೂರ್** ರತ್ನ ಸಿಕ್ಕಿತು! ಆ ಮೇಲೆ ಆತನು ಸುತ್ತಲಿನ ಶತ್ರುಗಳನ್ನು ಬಗ್ಗುಬಡಿಯಲು ಆರಂಭಿಸಿದನು

**ಕಾನುವಾದ ಕಾಳಗ** —(೧೫೨೭) ಬಾಬರನು ದಿಲ್ಲಿಯ ದೊರೆಯಾದುದು ಸಂಗರಾಣಾನಿಗೆ ಸೇರಲಿಲ್ಲ ಪಾನಿಪತ್ತದ ಯುದ್ಧದಲ್ಲಿ ತಾನು ಲೋದಿಗೆ ಸಹಾಯ ಮಾಡದಿದ್ದುದು ತಪ್ಪೆಂದು ಈಗ ಆತನಿಗ ತಿಳಿಯಿತು ಅದರಿಂದ ಈ ವಿಚಾರವನ್ನು ರಜಪೂತ ರಾಜರಿಗೆಲ್ಲ ತಿಳಿಸಿದನು ಅವರೂ ಒಪ್ಪಿಕೊಂಡು ಆತನಿಗೆ ಬೆಂಬಲ ಕೊಡಲು ಒಪ್ಪಿದರು ಹಲವು ಅಫಗಾನ ಸುಭೇದಾರರೂ ಸಂಗರಾಣಾನನ್ನು ಕೂಡಿಕೊಂಡರು ಬಾಬರನೂ ಸೈನ್ಯವನ್ನು ಸಜ್ಜು ಮಾಡಿಕೊಂಡು ಹೊರಟನು **ಕಾನುವಾದ** ಹತ್ತಿರ ಸಂಗರಾಣಾನಿಗೂ ಬಾಬರನಿಗೂ ಕೈಗೆ ಕೈ ಹತ್ತಿತು

ಸಂಗರಾಣಾನ ವೀರಾವೇಶಕ್ಕೆ ಮೊಗಲರ ಸೈನ್ಯ ಹಿಮ್ಮೆಟ್ಟಹತ್ತಿತು! ತನ್ನ ಕುಡುಕತನವೇ ತನ್ನ ಅಪಜಯಕ್ಕೆ ಕಾರಣವೆಂದು ಬಾಬರನಿಗೆ ಹೊಳೆ

ಯಿತು ಕೂಡಲೆ, ಸರಾಯಿಯನ್ನು ನೆಲಕ್ಕೆ ಸುರುವಿ ಪಾತ್ರಗಳನ್ನು ಒಡೆದನು, ಇನ್ನೆಂದೂ ಕುಡಿಯಲಿಕ್ಕಿಲ್ಲವೆಂದು ಅಲ್ಲಾನ ಹೆಸರಿನಿಂದ ಆಣೆ ಮಾಡಿದನು ಗಾಳಿಯ ಓಟದಿಂದ ರಣಭೂಮಿಯಲ್ಲಿ ಸಂಚರಿಸಹತ್ತಿದನು ಸಂಗ-ರಾಣಾನು ಸೋತನು ಬಾಬರನಿಗೆ ದಿಲ್ಲಿಯ ದೊರೆತನವು ಸ್ಥಿರವಾಯಿತು

**ಬಾಬರನ ಪುತ್ರಪ್ರೇಮ** — ಬಾಬರನು ಭಾರತದಲ್ಲಿ ಹೋರಾಡುತ್ತಿದ್ದಾಗ ಕಾಬೂಲದಲ್ಲಿ ದಂಗೆ ಎದ್ದಿತು ಅದನ್ನು ಅಡಗಿಸಲು ಬಾಬರನ ಹಿರಿಯ ಮಗ ಹುಮಾಯೂನನು ಹೊರಟನು ಅವನು ಜಯಶಾಲಿಯಾಗಿ ಬಂದನು, ಆದರ ಬೇನೆಯಿಂದ ಹಾಸಿಗೆಯನ್ನು ಹಿಡಿದನು ಎಷ್ಟು ಉಪಚರಿಸಿದರೂ ಗುಣವಾಗಲಿಲ್ಲ ಆಗ ಬಾಬರನು ಮಡಿಒಟ್ಟಿಯುಟ್ಟು ಮಗನ ಹಾಸಿಗೆಯ ಹತ್ತಿರ ಕುಳಿತು 'ದೇವಾ, ನನ್ನ ಪ್ರಾಣವನ್ನು ತೆಗೆದುಕೊಂಡು ಮಗನನ್ನು ಉಳಿಸು' ಎಂದು ಬೇಡಿಕೊಂಡನು ಅದೇನು ಆಶ್ಚರ್ಯವೋ! ಮುಂದೆ ಹುಮಾಯೂನನು ಹಾಸಿಗೆಯಿಂದ ಎದ್ದನು, ಬಾಬರನು ಹಾಸಿಗೆಹಿಡಿದನು, ಕ್ರಿ. ಶ ೧೫೩೦ರಲ್ಲಿ ಮರಣಹೊಂದಿದನು

**ಬಾಬರನ ಯೋಗ್ಯತೆ** — ಅಂತ್ಯಕಾಲದಲ್ಲಿ ಬಾಬರನು ತನ್ನ ಮಗನ ಕೈಗೆ ಒಂದು ಪತ್ರವನ್ನು ಕೊಟ್ಟು, ಅವನಿಗೆ ತನ್ನ ರಾಜ್ಯಭಾರ ನೀತಿಯ ರಹಸ್ಯವನ್ನು ತಿಳಿಸಿದ್ದನಂತೆ ಅದರಲ್ಲಿ "ಈ ದೇಶವು ವಿಶೇಷವಾಗಿ ಹಿಂದು ಮತದವರಿಂದ ತುಂಬಿರುವುದು ಅವರ ಪ್ರೀತಿಯನ್ನು ಗಳಿಸುವುದು ಅತ್ಯಾವಶ್ಯಕ ಬೆದರಿಕೆಯಿಂದ ಇದು ಸಾಧ್ಯವಾಗಲಾರದು ಉದಾರಭಾವನೆಯಿಂದ ಅವರ ಮುಖಂಡರನ್ನು ಗೌರವಿಸು" ಎಂದು ಬರೆದಿದ್ದನು ಬಾಬರನು ಉದಾರಹೃದಯಿ, ವಿದ್ಯಾವಂತ ಸ್ವತಃ **'ಬಾಬರನಾಮಾ'** ಎಂಬ ತನ್ನ ಚರಿತ್ರವನ್ನು ಬರೆದಿಟ್ಟಿದ್ದಾನೆ

**ಹುಮಾಯೂನ** — (೧೫೩೦ – ೧೫೫೬) ಬಾಬರನ ಮರಣದ ನಂತರ ಹಿರಿಯ ಮಗನಾದ ಹುಮಾಯೂನನು ಪಟ್ಟವೇರಿದನು ಈತನಿಗೆ **ಕಾಮರಾನ, ಹಿಂಡಾಲ, ಅಸ್ಕರಿ** ಎಂಬ ತಮ್ಮಂದಿರಿದ್ದರು ಹುಮಾಯೂನನು ಶೂರನು, ಆದರೆ ಮೆಲ್ಲೆದೆಯ ಮನುಷ್ಯನು ಅವನ ಮಿದುವು ಮನಸ್ಸೇ ಅವನಿಗೆ ಮೂಲವಾಯಿತು

**ಸಂಕಟಗಳು** — ತಂದೆಯ ಮರಣದ ಕಾಲಕ್ಕೆ ತಮ್ಮಂದಿರನ್ನು ಒಳ್ಳೆಯ ರೀತಿಯಿಂದ ಕಾಪಾಡುವುದಾಗಿ ವಚನಕೊಟ್ಟಿದ್ದನು ಅದಕ್ಕೆ ತಕ್ಕಂತೆ ಕಾಮರಾನನನ್ನು ಕಾಬೂಲ ಪಂಜಾಬ ಪ್ರಾಂತಗಳಿಗೂ, ಹಿಂಡಾಲನನ್ನು ಸಂಬಳ ಪ್ರಾಂತಕ್ಕೂ ಮಿರ್ಝಾ ಅಸ್ಕರಿಯನ್ನು ಮೇವಾಡ ಪ್ರಾಂತಕ್ಕೂ ಅಧಿಕಾರಿಗಳನ್ನಾಗಿ ಮಾಡಿದನು ಆದರೆ ಕಾಮರಾನನು ವಿಶ್ವಾಸಘಾತಕಿ

ಸಾಧಿಸಿದರೆ ದಿಲ್ಲಿಯ ದೊರೆಯಾಗಬೇಕೆನ್ನುವವನು ಉಳಿದಿಬ್ಬರಿಗೆ ಅಣ್ಣನಲ್ಲಿ ಅಭಿಮಾನವಿರಲಿಲ್ಲ ಇದರಿಂದ ಹುಮಾಯೂನನಿಗೆ ಆಡಳಿತದ ಆರಂಭ ವಲ್ಲಿಯೇ ಬಂಧುಗಳ ಬಲವಿಲ್ಲದಂತಾಯಿತು

ಇದ್ದ ರಾಜ್ಯದಲ್ಲಿಯೇ ಅಲ್ಲಲ್ಲಿ, ಹಿಂದಿನ ಲೋದಿ ದೊರೆಗಳ ಅಫಗಾನ ಸರದಾರರು ಸೈನ್ಯವನ್ನು ಸಜ್ಜುಮಾಡಿ ಸಮಯವನ್ನು ಕಾಯುತ್ತಿದ್ದರು ಗುಜರಾಥದ ಸರದಾರನು ಪ್ರಬಲನಾಗಿದ್ದು ದಿಲ್ಲಿಯ ಸಿಂಹಾಸನದ ಸಲುವಾಗಿ ಹೊಂಚುಹಾಕುತ್ತಿದ್ದನು ರಜಪೂತ ದೊರೆಗಳನ್ನು ಅಡಗಿಸುವ ಕೆಲಸವೂ ಉಳಿದಿತ್ತು


ಹುಮಾಯೂನ

**ಯಶಸ್ವಿಯಾದ ಹೋರಾಟ** — ಪ್ರಬಲ ರಾಜಪುತ್ರರನ್ನೇ ಮೊದಲು ಅಡಗಿಸಬೇಕೆಂದು ಹುಮಾಯೂನನು **ಕಲಿಂಜರದ** ಕೋಟೆಯನ್ನು ಮುತ್ತಿದನು ಆದರೆ, ಅಷ್ಟರಲ್ಲಿ ಅಫಗಾನರು ಒಟ್ಟಾಗಿ ಬಿಹಾರ ಪ್ರಾಂತದಲ್ಲಿ ಜೋನಪುರವನ್ನು ತೆಗೆದುಕೊಂಡರು ಅದರಿಂದ ಕಲಿಂಜರದ ಮುತ್ತಿಗೆಯನ್ನು ಕಿತ್ತು ಜೋನಪುರಕ್ಕೆ ಹೋಗಿ ಅದನ್ನು ವಶಪಡಿಸಿಕೊಂಡನು ಹಾಗೆಯೇ ಬರುವಾಗ ಚುನಾರಗಡದ ಶೇರಖಾನನನ್ನೂ ಗುಜರಾಥದ ಬಹಾ-ದ್ದೂರಶಹನನ್ನೂ ಸೋಲಿಸಿದನು ಬಹಾದ್ದೂರಶಹನು ಓಡಿಹೋಗಿ ಪೋರ್ತುಗೀಜರ ಆಶ್ರಯ ಪಡೆದನು ಅವನ ರಾಜ್ಯವೆಲ್ಲ ಹುಮಾಯೂನನ ವಶವಾಯಿತು ಶೇರಖಾನನು ಅಂಕಿತನಾಗಿದ್ದರಿಂದ ಚುನಾರಗಡ ರಾಜ್ಯವನ್ನು ಅವನಿಗೇ ಬಿಟ್ಟುಕೊಟ್ಟನು

**ಬೆಳೆಯುವ ಅರಾಜಕತೆ** — ರಾಜ್ಯದಲ್ಲಿ ಮತ್ತೆ ಬಂಡುಗಳೆದ್ದುವು ಅದರಂತೆ ಮಾಳವಾದಲ್ಲಿಯೂ ದಂಗೆಗಳಾದುವು ಮೇವಾಡದ ಸುಭೇದಾರನಾಗಿದ್ದ ಅಸ್ಕರಿಯು ಅಲ್ಲಿಯೇ ಸ್ವತಂತ್ರನಾದನು ಗುಜರಾಥವೂ ಕೈಬಿಟ್ಟು ಹೋಯಿತು ಇಷ್ಟರಲ್ಲಿ ಶೇರಖಾನನು ತಲೆಯೆತ್ತಿ ಮೆರೆದಾಡಹತ್ತಿದನು ಅವನನ್ನು ಅಡಗಿಸಬೇಕೆಂದು ಹುಮಾಯೂನನು ಆಗ್ರಾಕ್ಕೆ ಹೊರಟನು ತುಸು ದಿನಗಳಲ್ಲಿಯೇ ಮಾಳವ ಪ್ರಾಂತವೂ ದಿಲ್ಲಿಯ ಸಂಬಂಧವನ್ನು ತಪ್ಪಿಸಿಕೊಂಡಿತು ಈ ಗಡಿಬಿಡಿಗೆಲ್ಲ ಶೇರಖಾನನೆಂಬ ಅಫಗಾನ್ ಸುಭೇದಾರನೇ ಮುಖ್ಯ ಕಾರಣ

**ಶೇರಖಾನ** — ಜೋನಪುರ ರಾಜ್ಯದಲ್ಲಿ ಮುಂದೆ ಅಯ್ದು ನೂರು ಸವಾರರ ಮೇಲಿದ್ದ ಸೂರವಂಶದ ಸರದಾರನೊಬ್ಬನ ಮಗನೇ ಶೇರಖಾನನು. ಈತನ ಮೂಲ ಹೆಸರು ಫರೀದ. ಚಿಕ್ಕಂದಿನಿಂದಲೂ ಶೂರನು, ವಿದ್ಯಾವಂತನು. ಪಾರ್ಸಿ ಭಾಷೆಯಲ್ಲಿಯೂ ಸಾಹಿತ್ಯದಲ್ಲಿಯೂ ತುಂಬಾ ನುರಿತವನು. ಗುಲಿಸ್ತಾನ್ ಹಾಗೂ ಸಿಕಂದರ್‌ನಾಮಾ ಎಂಬ ಎರಡು ಮಹಾಕಾವ್ಯಗಳನ್ನು ಕಂಠಪಾಠ ಮಾಡಿದ್ದನು. ಅವನಿಗೆ ತಂದೆಯು ತನ್ನ ಎರಡು ಪರಗಣೆಗಳ ಅಧಿಕಾರವನ್ನು ಕೊಟ್ಟಿದ್ದನು, ಆದರೆ ತಂದೆಯು ಅವುಗಳನ್ನು ಕಸಿದುಕೊಳ್ಳಲು ತಂದೆಯೊಂದಿಗೆ ಜಗಳತೆಗೆದು, ಇವನು ಮನೆಬಿಟ್ಟು ಇಬ್ರಾಹಿಮ ಲೋದಿಯಲ್ಲಿ ಸೇರಿಕೊಂಡನು.



ಶೇರಶಹ

ಕೆಲವು ವರ್ಷಗಳ ನಂತರ, ತಂದೆಯು ಮರಣ ಹೊಂದಿದ ಮೇಲೆ, ಜೋನಪುರದಲ್ಲಿಯೇ ವಾಸ ಮಾಡಿದನು, ಬಿಹಾರಪ್ರಾಂತದ ಸುಭೇದಾರನಿಗೆ ಪ್ರೀತಿಪಾತ್ರನಾದನು. ಒಮ್ಮೆ ಇವರಿಬ್ಬರೂ ಬೇಟೆಗ ಹೋಗಿದ್ದರು, ಆಗ ಏರಿಬರುತ್ತಿರುವ ಹುಲಿಯನ್ನು ಫರೀದನು ತನ್ನ ಕತ್ತಿಯ ಒಂದೇ ಏಟಿನಿಂದ ತುಂಡರಿಸಿದನು. ಅಂದಿನಿಂದಲೇ ಸುಭೇದಾರನು ಫರೀದನಿಗೆ 'ಶೇರಖಾನ್' ಎಂದು ಪದವಿಯನ್ನು ಕೊಟ್ಟನು. ಚುನಾರಗಡದ ಕಿಲ್ಲೇದಾರನಾದನು. ಹುಮಾಯೂನನು ಈ ಕಿಲ್ಲೆಯನ್ನು ಮುತ್ತಿ ಮರಳಿ ಅವನಿಗೇ ಕೊಟ್ಟಿದ್ದನಷ್ಟೇ. ಸೈನ್ಯವನ್ನು ಬಲಿಸಿಕೊಂಡು, ಸಮಯವನ್ನು ನೋಡಿ ಬಂಗಾಲದ ರಾಜಧಾನಿಯಾದ ಗೌರವನ್ನು ಮುತ್ತಿದನು.

**ಹುಮಾಯೂನ ಶೇರಖಾನರ ಯುದ್ಧ** — ಶೇರಖಾನನ ಮುತ್ತಿಗೆಯ ಸುದ್ದಿ ತಿಳಿಯುತ್ತಲೇ ಹುಮಾಯೂನನು ಅತ್ತ ದಂಡೆತ್ತಿ ಹೋದನು, ದಾರಿಯಲ್ಲಿ ಚುನಾರಗಡವನ್ನು ಮುತ್ತಿ ವಶಪಡಿಸಿಕೊಂಡನು. ತರುವಾಯ ಬಂಗಾಲವನ್ನು ಹೊಕ್ಕು ಅದನ್ನು ವಶಪಡಿಸಿಕೊಂಡನು, ಅಲ್ಲಿಯೇ ಕೆಲಕಾಲ ನಿಂತನು. ಈ ಸಂಧಿಯಲ್ಲಿ ಶೇರಖಾನನು ಕಾಶಿಯಿಂದ ಕನೋಜದ ವರೆಗೆ ರಾಜ್ಯವನ್ನು ವಶಪಡಿಸಿಕೊಂಡು, ಹುಮಾಯೂನನು ಆಗ್ರಾಕ್ಕೆ ಹೋಗದಂತೆ ಹಾದಿಯನ್ನು ಕಟ್ಟುಮಾಡಿದನು. ಇಷ್ಟರಲ್ಲಿಯೇ ಬಂಗಾಲದಲ್ಲಿ ದೊಡ್ಡ ಮಳೆಯಾಯಿತು. ಅದರಿಂದ ಮೊಗಲರ ಸೈನ್ಯಕ್ಕೆ ಬಹಳ ಹಾನಿಯಾಯಿತು. ಆ ಮೇಲೆ ಹುಮಾಯೂನನು ಅಲ್ಲಿಂದ ಹೊರಟು, ಗಂಗಾನದಿಯ ದಂಡೆಯ ಮೇಲೆ ಬೀಡು ಬಿಟ್ಟನು. ಇದೇ ಹೊತ್ತಿಗೆ, ಶೇರಖಾನನು ಸೈನ್ಯಸಹಿತವಾಗಿ ಮತ್ತೊಂದು

ದಂಡೆಯ ಮೇಲೆ ತಳವೂರಿದನು ನದಿಯನ್ನು ದಾಟಿಬರಲು ಇಬ್ಬರಿಗೂ ಧೈರ್ಯವಾಗಲಿಲ್ಲ, ಒಪ್ಪಂದದ ಮಾತುಕತೆ ನಡೆದುವು ಹುಮಾಯೂನನೂ ಅವನ ಸೈನ್ಯವೂ ನಿಶ್ಚಿಂತೆಯಿಂದ ಉಳಿದುವು ಇಂತಹ ಸಮಯದಲ್ಲಿ ಶೇರ್ ಖಾನನು ಒಮ್ಮೆಲೆ ಅವನ ದಂಡನ್ನು ಮುತ್ತಿ ಕೈಗೆ ಸಿಕ್ಕವರನ್ನು ಕೊಲ್ಲ ಹತ್ತಿದನು ಹುಮಾಯೂನನು ಹೇಗೋ ಪಾರಾಗಿ ಆಗ್ರಾಕ್ಕೆ ಓಡಿಹೋದನು ಇದು ಬಕ್ಸಾರ ಹತ್ತಿರ ಇರುವ **ಚೌನ್ಸಾಯುದ್ಧ**ವೆಂದು ಹೆಸರಾಗಿದೆ (೧೫೩೯)

**ಶೇರಖಾನನು ದೊರೆಯಾದದ್ದು** – ಹುಮಾಯೂನನು ತನ್ನ ತಮ್ಮಂದಿರ ನೆರವನ್ನು ಕೇಳಿದನು ಯಾರೂ ಒಪ್ಪಲಿಲ್ಲ ಮತ್ತೆ ತಾನೇ ಸಣ್ಣ ಸೈನ್ಯ ದೊಡನೆ ಶೇರಖಾನನಿಗೆ ಇದಿರಾಗಿ, ಸೋತು ದೇಶಭ್ರಷ್ಟನಾದನು ಶೇರಖಾನನು ದಿಲ್ಲಿಯ ದೊರೆಯಾದನು, ಶೇರಶಹ ಎಂಬ ಹೆಸರನ್ನು ಇಟ್ಟುಕೊಂಡನು

**ಶೇರಶಹನ ದಿಗ್ವಿಜಯ** – ಶೇರಶಹನು ಅರಸನಾದ ಮೇಲೆ ದಿಗ್ವಿಜಯಕ್ಕೆ ದಂಡಾಳುಗಳನ್ನು ಕಳುಹಿದನು, ಸ್ವತಃ ರಜಪೂತಸ್ಥಾನಕ್ಕೆ ದಂಡೆತ್ತಿಸಾಗಿ ದನು ಜೋಧಪುರ, ಚಿತ್ತೂರ, ಗ್ವಾಲ್ಹೇರ, ರತನಭೋರಗಳನ್ನು ವಶಪಡಿಸಿ ಕೊಂಡನು ಆ ಮೇಲೆ **ಕಲಿಂಜರ** ಕೋಟೆಯನ್ನು ಮುತ್ತಿದನು

**ಕೊನೆಗಾಲ** – ಕಲಿಂಜರವು ಭದ್ರವಾದ ಕೋಟೆ ಅಲ್ಲಿಯ ರಾಜನಾದ **ಕಿರಾತಸಿಂಗನು** ಶೂರನು ಮದ್ದು-ಗುಂಡು-ಸೈನ್ಯಸಾಮಗ್ರಿಗಳನ್ನು ಸರಿಯಾ ಗಿಟ್ಟುಕೊಂಡಿದ್ದನು ಕೋಟೆ ಶೇರಶಹನಿಗೆ ಬೇಗನೆ ವಶವಾಗುವ ಲಕ್ಷಣ ತೋರಲಿಲ್ಲ ತೋಫಿನ ಗುಂಡುಗಳಿಂದ ಅದನ್ನು ಹಾರಿಸಲು ಅಪ್ಪಣೆಕೊಟ್ಟನು. ತಾನು ಮದ್ದಿನ ಮನೆಯ ಹತ್ತಿರ ನಿಂತು ಅವರನ್ನು ಹುರಿದುಂಬಿಸುತ್ತಿದ್ದನು ಅಕಸ್ಮಾತ್ತಾಗಿ ಮದ್ದಿನ ಮನಗೆ ಬೆಂಕಿ ಹತ್ತಿತು ಶೇರಶಹನು ಸುಟ್ಟುಕೊಂಡು ಸತ್ತನು (೧೫೪೫)

**ಶೇರಶಹನ ಸುಧಾರಣೆಗಳು** – (೧೫೪೦-೧೫೪೫) ಶೇರಶಹನು ಅಯ್ದೇ ವರ್ಷಗಳ ಅತ್ಯಲ್ಪಕಾಲದ ಆಳಿಕೆಯಲ್ಲಿ, ಎಂದೂ ಮರೆಯದ ಅರಸನಾಗಿ ದ್ದಾನೆ ಬುದ್ಧಿಚಾತುರ್ಯ, ಆಡಳಿತಕ್ರಮದಲ್ಲಿಯ ಸುಧಾರಣೆಗಳು, ಸೈನ್ಯ ಯೋಜನೆ, ನ್ಯಾಯಪದ್ಧತಿಗಳಿಂದ ಭಾರತವನ್ನು ಆಳಿದ ಒಳ್ಳೆಯ ಅರಸರಲ್ಲಿ ಈತನ ಎಣಿಕೆಯಿದೆ

**ಒಕ್ಕಲುತನಕ್ಕೆ ಉತ್ತೇಜನ** – ಒಕ್ಕಲುತನದ ಒಳಿತಿಗಾಗಿ ಈತನು ಒಂದು ಹೊಸ ಪದ್ಧತಿಯನ್ನೇ ಬಳಕೆಯಲ್ಲಿ ತಂದನು. ಮುಂದ ಅಕಬರನ ಕಾಲದಲ್ಲಿ ಪ್ರಖ್ಯಾತಿಗಳಿಸಿದ ತೋಡರಮಲ್ಲನು ಶೇರಶಹನ ಮುಖ್ಯ ಅಧಿಕಾರಿಯಾಗಿ ಕೆಲಸಮಾಡಿದನು ಪ್ರತಿ ಹಂಗಾಮಿನಲ್ಲಿ ಹೊಲಗಳ ಅಳತೆಯನ್ನು ಮಾಡಿಸಿ, ತೆರಿಗೆಯನ್ನು ಗೊತ್ತುಪಡಿಸುವಂತೆ ಶೇರಶಹನು ವ್ಯವಸ್ಥೆಮಾಡಿದ್ದನು ಹುಟ್ಟು

ವಳಿಯ ಮೂರರಲ್ಲೊಂದು ಭಾಗ ಕಂದಾಯವೆಂದು ಸರಕಾರಕ್ಕೆ ಸಲ್ಲುತ್ತಿತ್ತು ಅದನ್ನು ಆಯಾ ಸುಗ್ಗಿಯ ಸಮಯಕ್ಕೆ ತೆಗೆದುಕೊಳ್ಳುತ್ತಿದ್ದರು ಅದರಿಂದ ರೈತರಿಗ ತೆರಿಗೆಯು ತಲೆಹೊರೆಯೆನಿಸುತ್ತಿರಲಿಲ್ಲ ಯಾವ ಅಧಿಕಾರಿಯೂ ರೈತರನ್ನು ಹಿಂಸಿಸದಂತೆ, ಹೆಚ್ಚು ತೆರಿಗೆಯನ್ನು ತಕ್ಕೊಳ್ಳದಂತೆ ವ್ಯವಸ್ಥೆಯಿಟ್ಟಿದ್ದನು ಬರಗಾಲದ ಪ್ರಸಂಗದಲ್ಲಿ ತೆರಿಗೆಯನ್ನು ಸೂಟುಬಿಡುತ್ತಿದ್ದನು, ಮತ್ತು ಒಕ್ಕಲುತನಕ್ಕೆ ಬೇಕಾಗುವ ಅನುಕೂಲತೆಗಳನ್ನು ಒದಗಿಸಿಕೊಡುತ್ತಿದ್ದನು ಅಧಿಕಾರಿಗಳ ದರ್ಪವು ಹೆಚ್ಚಬಾರದೆಂದು ಆಗಾಗ ಅವರನ್ನು ಸ್ಥಳಾಂತರಿಸುತ್ತಿದ್ದನು

**ನ್ಯಾಯವಿಭಾಗ** —ಮಹತ್ತ್ವದ ಪ್ರಸಂಗದಲ್ಲಿ ತಾನೇ ನ್ಯಾಯನಿರ್ಣಯ ಮಾಡುತ್ತಿದ್ದನು

**ಸೈನ್ಯಖಾತೆ** – ಅಲ್ಲಾ ಉದ್ದೀನ ಖಿಲಜಿಯಂತೆ ಈ ಶೇರಶಹನ ರಾಜ್ಯದಲ್ಲಿ ಸೈನ್ಯಸಿದ್ಧತೆಯು ಸದಾ ಸಜ್ಜಾಗಿಯೇ ಇರುತ್ತಿತ್ತು ಪ್ರತಿವರ್ಷವೂ ಶಹನೇ ಅದರ ಮೇಲ್ವಿಚಾರಣೆ ಮಾಡುತ್ತಿದ್ದನು ಇದರಲ್ಲಿ ಅರ್ಧಸೈನ್ಯವನ್ನು ತನ್ನೊಡನೆ ದಿಗ್ವಿಜಯಕ್ಕೆ ಒಯ್ಯುತ್ತಿದ್ದನು, ಉಳಿದರ್ಧವನ್ನು ತನ್ನ ರಾಜ್ಯದ ವ್ಯವಸ್ಥೆಯನ್ನು ಕಾಯುವುದಕ್ಕೆ ಇಡುತ್ತಿದ್ದನು ಅದರಿಂದ ಸೈನಿಕರಿಗೆ ವಿಶ್ರಾಂತಿ ದೊರೆತಂತಾಗಿ ಅವರು ಯಾವಾಗಲೂ ಹುರುಪಿನಲ್ಲಿಯೇ ಇರುತ್ತಿದ್ದರು ಸೈನ್ಯಭರತಿಯ ಕಾರ್ಯದಲ್ಲಿ ತಾನೇ ಲಕ್ಷ್ಯವನ್ನು ಪೂರಯಿಸುವುದಲ್ಲದೆ ಸಂಬಳದ ನಿರ್ಣಯವನ್ನೂ ತಾನೇ ಮಾಡುತ್ತಿದ್ದನು ಮೋಸಕ್ಕೆ ಆಸ್ಪದವಿರಲಿಲ್ಲ ಸೈನ್ಯದ ಕುದುರೆಗಳಿಗೆ ಕೂಡ ಗುರುತು ಹಾಕಿಸುತ್ತಿದ್ದನು ರೈತರ ಸಂರಕ್ಷಣೆಯ ಬಗೆಗೆ ಸೈನಿಕರಿಗೆ ಕಟ್ಟಪ್ಪಣೆಯನ್ನು ಕೊಟ್ಟಿದ್ದನು

**ಪ್ರಜಾಹಿತದ ಕಾರ್ಯಗಳು** — ದಿಲ್ಲಿಯಲ್ಲಿ ಹಲವು ಹೊಸ ಸುಂದರವಾದ ಮಂದಿರಗಳನ್ನು ಕಟ್ಟಿಸಿದನು ವ್ಯಾಪಾರ ಉದ್ಯೋಗಗಳ ಬೆಳವಣಿಗೆಗಾಗಿ ತನ್ನ ನಾಣ್ಯಗಳನ್ನು ಮುದ್ರಿಸಿದನು ಸಾಗಾಟದ ಅನುಕೂಲತೆಗಾಗಿ ಬಂಗಾಲದಿಂದ ಪಂಜಾಬದವರೆಗೆ ರಾಜಮಾರ್ಗಗಳನ್ನುಮಾಡಿಸಿದನು ರಸ್ತೆಯ ಎರಡೂ ಮಗ್ಗಲು ನಾಲುಮರಗಳನ್ನು ಹಚ್ಚಿಸಿದನು ಅಲ್ಲಲ್ಲಿಗೆ ಬಾವಿಗಳನ್ನು ಕಡಿಸಿದನು ಧರ್ಮಶಾಲೆಗಳನ್ನು ಕಟ್ಟಿಸಿದನು. ಹಿಂದುಗಳಿಗಾಗಿ ಕಟ್ಟಿಸಿದ ಮುಸಾಫಿರ್‌ಖಾನೆಗಳಲ್ಲಿ ಬ್ರಾಹ್ಮಣ ಪರಿಚಾರಕರನ್ನು ನೇಮಿಸಿದನು. ಕುದುರೆಗಳ ಮೇಲೆ ಟಪಾಲು ಮುಟ್ಟಿಸುವ ವ್ಯವಸ್ಥೆಮಾಡಿದನು ಹುಕುಂನಾಮೆಗಳೂ ಫರ್ಮಾನುಗಳೂ ಸಂಸ್ಕೃತ ಹಾಗೂ ಪಾರ್ಸೀ ಭಾಷೆಯಲ್ಲಿ ಬರೆಯಲ್ಪಡುತ್ತಿದ್ದುವು

**ಆಡಳಿತ ವಿಭಾಗ** — ರಾಜ್ಯಕಾರಭಾರದ ಅನುಕೂಲತೆಗಾಗಿ ಸರಕಾರ ಎಂದರೆ ಪ್ರಾಂತ, ಪರಗಣೆ ಎಂದರೆ ತಾಲೂಕುಗಳನ್ನು ಮಾಡಿ, ಯೋಗ್ಯ ಅಧಿಕಾರಿಗಳನ್ನು ನಿಯಮಿಸಿದನು ಹಿಂದುಗಳಿಗೆ ದೊಡ್ಡದೊಡ್ಡ ಅದಿಕಾರಗಳನ್ನು ಕೊಟ್ಟನು ಹೀಗ ಅಯ್ದೇ ವರುಷಗಳ ಆಳಿಕೆಯಲ್ಲಿ ಚಿರಸ್ಮರಣೀಯವಾದ ಕೆಲಸಗಳು ಶೇರಶಹನಿಂದಾದುವು ಯಾವ ಧರ್ಮದವನಾದರೇನು? ಉತ್ತಮ ಗುಣ ಹಾಗೂ ಉತ್ತಮಕಾರ್ಯಗಳಿಗೆ ಮನ್ನಣೆ ಇದ್ದೇ ಇದೆ ಶೇರಶಹನನ್ನು ಎಲ್ಲರೂ ರೈತರ ಬಂಧು' ಎಂದು ಕೊಂಡಾಡಿದರು

**ಶೇರಶಹನ ತರುವಾಯ** — ಈತನ ತರುವಾಯ ಮಗನಾದ ಸಲೀಮಶಹನು ಪಟ್ಟಕ್ಕೆ ಬಂದನು ಈತನು ತಂದೆಯ ರಾಜ್ಯವನ್ನು ಕಾಯ್ದುಕೊಂಡು ಹೋದನು ಮುಂದಿನ ಅರಸರ ಕಾಲಕ್ಕೆ ಬಳಜಗಳಗಳು ಹುಟ್ಟಿದುವು

**ಹುಮಾಯೂನನು ಮತ್ತೆ ಬಂದುದು** — ಶೇರಖಾನನಿಂದ ಸೋತು ಹುಮಾಯೂನನು ದೇಶಭ್ರಷ್ಟನಾದನಷ್ಟೆ! ಅಲ್ಲಿಂದ ತಮ್ಮಂದಿರ ಹತ್ತಿರ ಹೋಗಿ ಹೇಳಿಕೊಂಡನು ಯಾರೂ ಮಾತನ್ನು ಕೇಳಲಿಲ್ಲ ಒಂಟಿಗನಾಗಿ ಸಿಂಧಪ್ರಾಂತದಲ್ಲಿ ತಿರುಗಹತ್ತಿದನು ಯಾರಾದರೂ ಬೆಂಬಲ ಕೊಡಬಹುದೇ, ರಾಜ್ಯವು ಮತ್ತೆ ದಕ್ಕಬಹುದೇ? — ಎಂದು ಆಸೆ ಈತನಿಗೆ! ಕೊನೆಗೆ ಉಮರಕೋಟದ ಅಮಲದಾರನಲ್ಲಿ ನಿಲ್ಲಲಿಕ್ಕೆ ನೆಲೆ ಸಿಕ್ಕಿತು ಹತ್ತಿರ ಸರದಾರರಿಲ್ಲ, ಸೈನಿಕರಿಲ್ಲ, ಗಂಡ-ಹೆಂಡತಿ ಇಬ್ಬರೇ ಇಬ್ಬರು! ಅಲ್ಲಿಯೇ ಬಹುದಿನ ಉಳಿದರು ಆ ಕಾಲಕ್ಕೆ, ೧೫೪೨ರಲ್ಲಿ **ಉಮರಕೋಟ**ದೊಳಗೆ ಅವರಿಗೆ ಒಂದು ಗಂಡು ಮಗು ಹುಟ್ಟಿತು ಆತನೇ ಮುಂದೆ **ಅಕಬರ** ಎಂಬ ಹೆಸರಿನಿಂದ ಸುಪ್ರಸಿದ್ಧ ಮೊಗಲ ಚಕ್ರವರ್ತಿಯಾದನು ಪುತ್ರೋತ್ಸವದ ಸಮಯದಲ್ಲಿ ಅತಿಥಿ-ಅಭ್ಯಾಗತರಿಗ ಕೊಡಲು ಅವನ ಹತ್ತಿರ, ಒಂದು ಭರಣಿಯಲ್ಲಿದ್ದ ಸ್ವಲ್ಪ ಕಸ್ತೂರಿಯ ಹೊರತು ಮತ್ತೇನೂ ಇರಲಿಲ್ಲ ಅದನ್ನೇ ತುಸು ತುಸು ಎಲ್ಲರಿಗೂ ಇತ್ತನಂತೆ ಆ ಮೇಲ ಹುಮಾಯೂನನು ಹೆಂಡತಿ ಮಕ್ಕಳನ್ನು ಕಂದಹಾರದಲ್ಲಿಟ್ಟು, ತಾನು ಇರಾಣಕ್ಕ ನಡೆದನು ಇರಾಣದ ಶಹನ ನೆರವು ಪಡೆದು, ಕಂದಹಾರ ಕಾಬೂಲಗಳನ್ನು ಕೈವಶ ಮಾಡಿಕೊಂಡನು, ಸೈನ್ಯವನ್ನು ಬೆಳೆಸಿದನು ಹೀಗೆ ಹದಿನೈದು ವರುಷಗಳ ತನಕ ಹುಮಾಯೂನನು ಸಿಂಹಾಸನಭ್ರಷ್ಟನಾಗಿ ಊರೂರು ತಿರುಗುತ್ತಿದ್ದನು

ಮುಂದೆ ಸೂರ ಮನೆತನದವರೊಳಗೆ ಕೊನೆಯ ಅರಸನಾದ ಸಿಕಂದರನ ಮೇಲೆ ಹುಮಾಯೂನನು ದಂಡೆತ್ತಿ ಹೋಗಿ, ಸೋಲಿಸಿ ದಿಲ್ಲಿಯ ಒಡೆತನವನ್ನು ಮರಳಿ ಪಡೆದನು ಆ ಮೇಲೆ ಹೆಂಡತಿ-ಮಕ್ಕಳೊಡನೆ ಸಂಭ್ರಮದಿಂದ

ದಿಲ್ಲಿಯನ್ನು ಪ್ರವೇಶಿಸಿದನು (೧೫೫೫) ಈ ಕೊನೆಗಾಲದಲ್ಲಿ **ಬೈರಾಮು ಖಾನ**ನೆಂಬ ಸರದಾರನು ಅವನಿಗೆ ಬಹಳ ಸಹಾಯ ಮಾಡಿದನು

**ಕೊನೆ** — ಹುಮಾಯೂನನು ದಿಲ್ಲಿಯ ದೊರೆಯಾಗಿ ಮುಂದೆ ಬಹು ದಿವಸ ಆಳಲಿಲ್ಲ ಒಂದೇ ಒಂದು ವರ್ಷ ಅರಸೊತ್ತಿಗೆಯ ಆನಂದವನ್ನು ಪಡೆದನು ೧೫೫೬ರಲ್ಲಿ ತನ್ನ ಗ್ರಂಥಾಲಯದ ಮೆಟ್ಟಿಲನ್ನು ಇಳಿಯುವಾಗ, ಕಾಲುಜಾರಿ ಬಿದ್ದು ಪ್ರಾಣ ನೀಗಿದನು ಆ ಮೇಲೆ ಹದಿನಾಲ್ಕು ವರ್ಷದ ಅಕಬರನು ಪಟ್ಟವೇರಿದನು

## ಅಭ್ಯಸನಗಳು

೧ ಒಂದೊಂದೇ ವಾಕ್ಯದಲ್ಲಿ ಉತ್ತರಕೊಡಿರಿ

(ಅ) ಬಾಬರನಿಂದ ನೀವು ಯಾವ ಯಾವ ಗುಣಗಳನ್ನು ಕಲಿತುಕೊಳ್ಳ ಬಹುದು?

(ಆ) ಹಿಂದುಸ್ತಾನದಲ್ಲಿ ರಾಜ್ಯವನ್ನು ಸ್ಥಾಪಿಸಲು ಬಾಬರನಿಗೆ ಸಿಕ್ಕ ಅನುಕೂಲ ಪ್ರಸಂಗವು ಯಾವುದು?

(ಇ) ಹುಮಾಯೂನನು ರಾಜ್ಯಭ್ರಷ್ಟನಾಗಲಿಕ್ಕೆ ಅವನಲ್ಲಿದ್ದ ಯಾವ ಗುಣವು ಕಾರಣವಾಯಿತು?

(ಈ) ಮುಂದೆ ತನ್ನಲ್ಲಿದ್ದ ಯಾವ ಗುಣಗಳ ಮೂಲಕ ತನ್ನ ರಾಜ್ಯವನ್ನು ತಿರುಗಿ ಸಂಪಾದಿಸಿದನು?

೨. ಭಾರತವು ಶೇರಶಹನನ್ನು ಅವನ ಯಾವ ಯಾವ ಕೃತಿಗಳಿಗಾಗಿ ನೆನಸ ಬೇಕು?

೩ ಕೆಳಗೆ ಕೊಟ್ಟವುಗಳಿಗೆ ಸಂಬಂಧಿಸಿದ ಒಂದೊಂದು ವಾಕ್ಯವನ್ನು ಬರೆಯಿರಿ

ದೌಲತಖಾನ, ರಾಣಾಸಂಗ, ಕೊಹಿನೂರ್, ಬಾಬರನಾಮಾ, ಕಾಮರಾನ, ಚೌಸಾ, ಉಮರಕೋಟೆ, ಬೈರಾಮಖಾನ

## ೧೦ ಘನವಂತನಾದ ಅಕಬರ

**ಅಕಬರನ ಪಟ್ಟಾಭಿಷೇಕ**—(೧೫೫೬) ಹುಮಾಯೂನನ ಮರಣ ಕಾಲಕ್ಕೆ ಅಕಬರನಿಗೆ ಕೇವಲ ಹದಿನಾಲ್ಕು ವರುಷಗಳು ಈತನ ಮೂಲ ಹೆಸರು ಜಲಾಲುದ್ದೀನ ಮಹಮ್ಮದ ಅಕಬರ ಎಂದರೆ ಘನವಂತ ತನ್ನ ಮಗನ ಭವಿಷ್ಯತ್ತು ಬೆಳಕಿನದಾಗಲಿ ಎಂದು ತಂದೆ ಈ ಹೆಸರಿನಿಂದ ಕರೆಯುತ್ತಿದ್ದ ಪಟ್ಟಕ್ಕೆ ಬಂದ ಮೇಲೆ 'ಅಕಬರ' ಎಂಬ ಹೆಸರೇ ಮುಂದೆ ಬಂದಿತು ಹುಮಾಯೂನನಿಗ ನೆರವನ್ನಿತ್ತ ಬೈರಾಮಖಾನನೇ ಈತನಿಗೆ ಮುಖ್ಯಮಂತ್ರಿಯಾಗಿದ್ದನು



ಅಕಬರ

**ಅಕಬರನ ಶಿಕ್ಷಣ**—ಬಾಬರ ಮತ್ತು ಹುಮಾಯೂನರು ದೊಡ್ಡ ವಿದ್ವಾಂಸರಾಗಿದ್ದರು ಆ ವಿದ್ಯಾವಂತಿಕೆಯ ಪರಿಣಾಮವು ಅಕಬರನಲ್ಲಿ ರಕ್ತಗತವಾಗಿಯೇ ಬಂದಿತ್ತು, ಆದರೆ ಸ್ವತಃ ಶಿಕ್ಷಣ ಪಡೆಯುವದಕ್ಕೆ ಈತನಿಗೆ ಅನುವು ಇರಲಿಲ್ಲ ಹುಟ್ಟಿದುದು ಹುಮಾಯೂನನ ವನವಾಸ ಕಾಲದಲ್ಲಿ, ಬೆಳೆದುದು ಎಲ್ಲೆಲ್ಲಿಯೋ ಅಜ್ಞಾತವಾಸದಲ್ಲಿ ಮುಂದೆ ತುಸು ದಿನಗಳಲ್ಲಿಯೇ ಪಟ್ಟಕ್ಕೆ ಬಂದ ಆದುದರಿಂದ ಶಿಕ್ಷಣಸಂಸ್ಕಾರಕ್ಕೆ ಆಸ್ಪದವೇ ಆಗಲಿಲ್ಲ ಆದರೆ ಬುದ್ಧಿ ಬಲು ಚುರುಕು ಮುಂದೆ ವಿದ್ವಾಂಸರನ್ನು ಕೆಲಸಕ್ಕೆ ನಿಯಮಿಸಿಕೊಂಡು ಅವರ ಸಹವಾಸದಲ್ಲಿಯೇ ವಿದ್ಯಾವ್ಯಾಸಂಗ ಮಾಡಿದನು, ವಿದ್ಯೆಯ ಅಭಿಮಾನಿ ಎಂದು ಹೆಸರಾದನು

**ರಾಜ್ಯಭಾರ**—ಅಕಬರ ಬಾದಶಹನು ಪಟ್ಟಕ್ಕೆ ಬಂದಾಗ ದಿಲ್ಲಿಯ ಸಿಂಹಾಸನದ ಮೇಲೆ ಬಲಿಷ್ಠರೆಲ್ಲರ ಕಣ್ಣು ಇದ್ದುವು ಅವರಲ್ಲಿ **ಹೇಮೂ** ಎಂಬ ಹಿಂದೂರಾಜನು ಆಗ್ರಾವನ್ನು ವಶಪಡಿಸಿಕೊಂಡನು ಆ ಮೇಲೆ ದಿಲ್ಲಿಯನ್ನು ಆಕ್ರಮಿಸಿ, ತಾನೇ ದೊರೆಯೆಂದು ಸಾರಿದನು, ತನ್ನ ಹೆಸರಿನ ನಾಣ್ಯಗಳನ್ನು ಮುದ್ರಿಸಿದನು

**ಪಾನಿಪತದ ಎರಡನೆಯ ಯುದ್ಧ**—(೧೫೫೬) ಈ ಕಾಲಕ್ಕೆ ಅಕಬರನು ಬೈರಾಮಖಾನನೊಡನೆ ಜಲಂಧರದಲ್ಲಿದ್ದನು ಹೇಮೂ ದೊರೆಯಾದ ಸುದ್ದಿಯನ್ನು ಕೇಳಿದ ಕೂಡಲೆ, ಆತನಿಗಿದಿರಾಗಲು ಸಿದ್ಧತೆಯನ್ನು ನಡೆಸಿದನು,

ಹೇಮೂ ಸಾಮಾನ್ಯನಲ್ಲ. ಇಪ್ಪತ್ತೆರಡು ಯುದ್ಧಗಳಲ್ಲಿ ವಿಜಯಿಯಾಗಿದ್ದನು. ಈತನ ಸೈನ್ಯವೂ ಬಲಾಢ್ಯವಾಗಿತ್ತು. ಅಕಬರನ ಪರವಾಗಿ ಬೈರಾಮಖಾನನು ಸಕಲ ಸಿದ್ಧತೆಯನ್ನು ಮಾಡಿಕೊಂಡು, ಪಾನಿಪತ ರಣಭೂಮಿಯಲ್ಲಿ ಹೇಮೂವಿಗೆ ಇದಿರಾದನು. ಯುದ್ಧವು ಒಳ್ಳೆ ನಿಕರಕ್ಕೆ ಬಂದಿತ್ತು. ಮೊಗಲರು ಹಣ್ಣಾಗಹತ್ತಿದ್ದರು. ಅಷ್ಟರಲ್ಲಿ ಹೇಮೂವಿಗೆ ಬಾಣದಿಂದ ಬಲವಾದ ಗಾಯವಾಯಿತು. ಅರಿವುತಪ್ಪಿ ಅವನು ಅಂಬಾರಿಯಲ್ಲಿ ಬಿದ್ದುಕೊಂಡನು. ಸೈನಿಕರು ಸಿಕ್ಕ ಸಿಕ್ಕತ್ತ ಓಡಿದರು.

**ದಿಲ್ಲಿಯ ದೊರೆತನ**.--ಆ ಮೇಲೆ ಅಕಬರ ಬಾದಶಹನು ಸಂಭ್ರಮದಿಂದ ದಿಲ್ಲಿಯನ್ನು ಪ್ರವೇಶಮಾಡಿದನು. ಬೈರಾಮಖಾನನಿಗೆ 'ಖಾನ್-ಇ-ಖಾನಾನ್' ಎಂಬ ಪದವಿಯನ್ನು ಕೊಟ್ಟನು. ಆತನಿಗೇ ಎಲ್ಲ ಆಡಳಿತವನ್ನು ಒಪ್ಪಿಸಿದನು. ಆಗ ಪಂಜಾಬ, ಆಗ್ರಾ, ದಿಲ್ಲಿಗಳ ಮಟ್ಟಿಗ ಬಾದಶಹನ ಬಾಧ್ಯತೆಯಿದ್ದಿತು. ಮರುವರುಷವೇ ಅಜಮೀರ, ಗ್ವಾಲೇರ, ಜೋಧಪುರಗಳು ದಿಲ್ಲಿಯ ರಾಜ್ಯಕ್ಕೆ ಸೇರಿದುವು.

**ಆಡಳಿತವನ್ನು ಸ್ವತಃ ಸ್ವೀಕರಿಸಿದುದು** — ಈ ಹೊತ್ತಿಗೆ ನಾಲ್ಕೈದು ವರುಷಗಳು ಕಳೆದುವು. ಅಕಬರನಿಗೆ ರಾಜ್ಯಭಾರದ ಅನುಭವ ಬಂದಿತ್ತು, **ಬೈರಾಮಖಾನನಿಗೆ** ಸರ್ವಾಧಿಕಾರಿಯೆಂಬ ಸೊಕ್ಕೂ ಬಂದಿತ್ತು. ಇತ್ತೀಚೆಗೆ ಬೈರಾಮನ ಮನಸ್ಸಿನಲ್ಲಿಯೂ ಅರಸೊತ್ತಿಗೆಯ ಆಸೆ ಹುಟ್ಟಿದ್ದಿತೆಂದು ಅಕಬರನಿಗೆ ತೋರಿತು, ಆದುದರಿಂದ ಅವನನ್ನು ಅಕಬರ ಬಾದಶಹನು ಕಾವಲಿನ ಕಟ್ಟಿನಲ್ಲಿ ಮಕ್ಕಾಯಾತ್ರೆಗ ಕಳಿಸಿಕೊಟ್ಟು, ಆಡಳಿತವನ್ನು ಸ್ವತಃ ಸ್ವೀಕರಿಸಿದನು.

**ರಾಜ್ಯವಿಸ್ತಾರ** — ಮಾಳವಾ ಪ್ರಾಂತಕ್ಕೆ ಆಗ **ಬಾಜಬಹದ್ದೂರ**ನು ದೊರೆಯಾಗಿದ್ದನು. ಅವನು ಸಂಗೀತಗಾರ. ಕೇವಲ ವಿಲಾಸದಲ್ಲಿಯೇ ವೇಳೆ ಕಳೆಯುತ್ತಿದ್ದ. ಅವನನ್ನು ಎಚ್ಚರಿಸಲು ಅಕಬರ ಬಾದಶಹನು ಆದಮ್‌ಖಾನನೆಂಬ ಸರದಾರನನ್ನು ಕಳಿಸಿದನು. ಇವನು ಬಾಜಬಹದ್ದೂರನನ್ನು ಸೋಲಿಸಿ ಓಡಿಸಿ, ಆತನ ರಾಣಿಯನ್ನು ಸೆರೆಹಿಡಿದನು. ಆಕೆ ಆತ್ಮಹತ್ಯೆ ಮಾಡಿಕೊಂಡಳು. ಆಗ ಅಕಬರನು ದುಷ್ಟನಾದ ಆದಮ್‌ಖಾನನನ್ನು ಓಡಿಸಿ ಮಾಳವರಾಜ್ಯವನ್ನು ತನ್ನ ರಾಜ್ಯಕ್ಕೆ ಕೂಡಿಸಿದನು.

**ಗೊಂಡವನ ದಂಡಯಾತ್ರೆ** —(೧೫೬೧) ಗೊಂಡವನದ ರಾಜ್ಯವು ರಾಣೀ **ದುರ್ಗಾವತಿಯ** ಆಳಿಕೆಗೆ ಒಳಪಟ್ಟಿತ್ತು. ಗೊಂಡವನದ ದಂಡಯಾತ್ರೆ ಮಾಡಲು **ಅಸಫಖಾನ**ನೆಂಬ ಸರದಾರನನ್ನು ಕಳಿಸಿದನು. ರಾಣೀ ದುರ್ಗಾವತಿಯು ಧೈರ್ಯವತಿ, ಚತುರೆ, ಸ್ವಾಭಿಮಾನಿ. ಕಾರಣವಿಲ್ಲದೆ ಕಾಲು ಕೆದರಿದ

ಮೊಗಲ ಸೈನ್ಯಕ್ಕೆ ಇದಿರಾದಳು. ರಾಣಿಯು ಸ್ವತಃ ಆನೆಯ ಮೇಲೆ ಕುಳಿತು, ಯುದ್ಧ ಮಾಡುತ್ತಿದ್ದಳು. ಅಕಸ್ಮಾತ್ತಾಗಿ ಆಕೆಯ ಕಣ್ಣಿನಲ್ಲಿ ಬಾಣ ನೆಟ್ಟಿತು. ಯುದ್ಧ ಮಾಡುವುದು ಶಕ್ಯವಾಗದೆ, ಕಿರುಗತ್ತಿಯಿಂದ ಇರಿದುಕೊಂಡು ಪ್ರಾಣ ಬಿಟ್ಟಳು. ಮುಂದೆ ಆಕೆಯ ಮಗನಾದ ವೀರನಾರಾಯಣನೂ ಯುದ್ಧವನ್ನು ಮಾಡುತ್ತ ಮಡಿದನು. ಗೊಂಡವನವು ಮೊಗಲರಾಜ್ಯಕ್ಕೆ ಸೇರಿತು.

**ಹಿಂದುಗಳ ಬಗ್ಗೆ ಉದಾರ ಧೋರಣೆ**—'ಇನ್ನುಳಿದ ರಜಪೂತರಾಜರನ್ನು ಖಡ್ಗಬಲದಿಂದಲೇ ಗೆಲ್ಲುವುದಾದರ, ತನ್ನ ಸಾಮ್ರಾಜ್ಯವು ಶಾಂತರೀತಿಯಿಂದ ಉಳಿಯಲಾರದು' ಎಂಬದು ಅಕಬರನಿಗೆ ತಿಳಿದಿತ್ತು. ಆದುದರಿಂದ ಹಿಂದು-ಗಳೊಡನೆ ಸ್ನೇಹವನ್ನು ಬೆಳೆಸಬೇಕೆಂದು ಪ್ರಯತ್ನಿಸಿದನು.

ಈ ಉದ್ದೇಶವನ್ನಿಟ್ಟುಕೊಂಡೇ **ಖ್ವಾಜಾ ಮುಯಿನುದ್ದೀನ** ಎಂಬ ಸತ್ಪು-ರುಷನ ಗೋರಿಯ ದರ್ಶನಕ್ಕೆ ಹೊರಟನು. ದಾರಿಯಲ್ಲಿ ಅಂಬರ ಸಂಸ್ಥಾನದ **ರಾಜಾ ಬಿಹಾರಿಮಲ್ಲನು** ಬಾದಶಹನನ್ನು ಸ್ವಾಗತಿಸಿದನು, ಕಾಣಿಕೆ ಸಹಿತ ವಾಗಿ **ಜಯರಾಣಿ**ಯೆಂಬ ಮಗಳನ್ನು ಮದುವೆಮಾಡಿ ಕೊಟ್ಟನು. ಹಿಂದು-ಗಳೊಡನೆ ಈ ರೀತಿ ರಕ್ತಸಂಬಂಧವಾದುದು ಇದೇ ಮೊದಲು. ಅಕಬರನೂ ಒಳ್ಳೇ ಮನಸ್ಸಿನಿಂದಲೇ ನಡೆದುಕೊಂಡನು. ಇದರ ಪರಿಣಾಮವಾಗಿಯೇ **ಬೀರಬಲ, ರಾಜಾ ತೋಡರಮಲ್ಲ**ರಂತಹ ಬುದ್ಧಿವಂತರು ಬಾದಶಹನ ಆಳಿಕಗೆ ಒಳಗಾದರು.

**ಚಿತ್ತೂರಿನ ಮುತ್ತಿಗೆ** – (೧೫೬೭ – ೧೫೬೮) – ರಜಪೂತ ರಾಜರಲ್ಲಿ ಚಿತ್ತೂರಿನ **ರಾಣಾ ಉದಯಸಿಂಗನು** ಹೆಸರಾದ ಶೂರನು, ಒಳ್ಳೇ ಅಭಿಮಾನಿಯು. ಆತನು ಅಕಬರನನ್ನು ಸ್ವಾಗತಿಸಲಿಲ್ಲ. ಇದನ್ನು ತಿಳಿದು, ರಾಣಾ ಉದಯಸಿಂಗನು ಸಹಜವಾಗಿ ತನಗೆ ವಶವಾಗಲಾರನೆಂದು **ಅಕಬರನು** ಚಿತ್ತೂರಿನ ಮುತ್ತಿಗೆಯನ್ನು ಆರಂಭಿಸಿದನು.



ರಾಣಾ ಉದಯಸಿಂಗನು

ರಾಣಾ ಉದಯಸಿಂಗನು ಸೇನಾಪತಿ **ಜಯಮಲ್ಲನಿಗೆ** ಎಂಟು ಸಾವಿರ ಸೈನ್ಯವನ್ನು ಕೊಟ್ಟು, ಚಿತ್ತೂರನ್ನು ರಕ್ಷಿಸಲು ಕಳಿಸಿದನು. ಚಿತ್ತೂರು ಬಲು ಭದ್ರವಾದ **ಕೋಟೆ**. ನಾಲ್ಕು ತಿಂಗಳ ವರೆಗೆ ಹೋರಾಡಿದರೂ ಅದು ವಶವಾಗಲಿಲ್ಲ. ಒಂದು ದಿನ ರಾತ್ರಿ ಕೋಟೆಯ ವ್ಯವಸ್ಥೆಯನ್ನು ನೋಡುತ್ತಿದ್ದಾಗ ಜಯ

ಮಲ್ಲನು ಅಕಬರನ ಗುಂಡಿಗೆ ಆಹುತಿಯಾದನು ಹೆಣ್ಣುಮಕ್ಕಳು ಜೋಹಾರ್ ಮಾಡಿದರು ರಜಪೂತ ದಂಡಾಳುಗಳು ಕೋಟೆಯ ಬಾಗಿಲನ್ನು ತೆರೆದು ಹೊರಬಿದ್ದರು, ಕಾದುತ್ತ ಕಾದುತ್ತ ರಣರಂಗದಲ್ಲಿ ಮಡಿದರು ಚಿತ್ತೂರು ಅಕಬರನ ಕೈವಶವಾಯಿತು ಆದರೆ ಉದಯಸಿಂಗನು ತಪ್ಪಿಸಿಕೊಂಡು ಅರವಲಿ ಬೆಟ್ಟಕ್ಕೆ ಓಡಿದನು ಅವನೆಂದಾದರೂ ಶರಣುಬರಬಹುದೆಂದು ಭಾವಿಸಿ ಅಕಬರನು ಅವನ ಬೆನ್ನಟ್ಟಲಿಲ್ಲ

**ಬೇರೆ ರಾಜ್ಯಗಳು** — ಉದಯಸಿಂಗನ ಗತಿಯು ಎಲ್ಲ ಅರಸರ ಎದೆಯನ್ನು ಒಡೆಸಿತು ಅವರು ನದ್ದಿಲ್ಲದೆ ಬಾದಶಹನ ಮಾಂಡಲಿಕರಾಗಹತ್ತಿದರು ಜಯಪುರ, ರಣತಂಬೋರ, ಕಲಿಂಜರಗಳು ಕೈವಶವಾದುವು ಜೋಧಪುರದ ಕಲ್ಯಾಣಮಲ್ಲನು ಮಗಳನ್ನು ಕೊಟ್ಟು ಮನಸಬದಾರನಾದನು ಆಮೇಲೆ ಗುಜರಾಥ ಬಂಗಾಲ ಬಿಹಾರ ಓಡಿಸಾ ಸಿಂಧ ಕಾಶ್ಮೀರ ಕಾಬೂಲಗಳೂ ಒಂದೊಂದಾಗಿ ಮೊಗಲರಾಜ್ಯಕ್ಕೆ ಕೂಡಿದುವು

**ಉದಯಪುರದ ಸ್ಥಾಪನೆ** — ಚಿತ್ತೂರಿನ ಮುತ್ತಿಗೆಯಲ್ಲಿ ಉದಯ-ರಾಣಾನು ಅರವಲೀ ಬೆಟ್ಟಕ್ಕೆ ಓಡಿಹೋಗಿದ್ದನಷ್ಟೇ! ಅಲ್ಲಿಯೇ **ಉದಯಪುರ** ಎಂಬ ಹೊಸ ಪಟ್ಟಣವನ್ನು ಕಟ್ಟಿಸಿಕೊಂಡು ರಾಜ್ಯಭಾರ ಮಾಡಹತ್ತಿದನು ಚಿತ್ತೂರನ್ನು ಮತ್ತೆ ತೆಗೆದುಕೊಳ್ಳಬೇಕೆಂದು ಸೈನ್ಯವನ್ನು ನಜ್ಜುಗೊಳಿಸಹತ್ತಿದನು ಈ ಪ್ರಯತ್ನದಲ್ಲಿರುವಾಗಲೇ ಆತನ ಅಂತ್ಯವಾಯಿತು ಮುಂದೆ ಅವನ ಮಗನಾದ ಪ್ರತಾಪಸಿಂಗನು ಉದಯಪುರದ ಪಟ್ಟವನ್ನೇರಿದನು



ರಾಣಾ ಪ್ರತಾಪಸಿಂಹ

**ನರವೀರ ಪ್ರತಾಪಸಿಂಗ** — ಪ್ರತಾಪಸಿಂಗನ ಪ್ರಭಾವವು ತಂದೆಗಿಂತಲೂ ಮಿಗಿಲಾದುದು ಆತನು ಸ್ವಾಭಿಮಾನಿ ಮುಸಲ್ಮಾನರಿಗೆ ಎಂದೂ ತಲೆಬೊಗ್ಗಿಸಲಿಲ್ಲ ತನ್ನ ರಾಜ್ಯವನ್ನು ಮತ್ತೆ ತೆಗೆದುಕೊಳ್ಳಲು ಸಿದ್ದತೆಯನ್ನು ನಡೆಸಿದನು ಅಕಬರನು ಅವನ ಮನವೊಲಿಸಲು **ರಾಜಾ ಮಾನಸಿಂಗ**ನನ್ನು ಕಳಿಸಿದನು ಪ್ರತಾಪಸಿಂಗನು ಅವನನ್ನು ಅವಮಾನಮಾಡಿ ಕಳಿಸಿದನು ಇನ್ನು ಯುದ್ಧದ ಹೊರತು ಬೇರೆ ಉಪಾಯವೇ ಉಳಿಯಲಿಲ್ಲ. ಅಕಬರನು ಪ್ರಚಂಡ ಸೈನ್ಯಸಿದ್ಧತೆಯನ್ನು

ನಡೆಸಿದನು ಪ್ರತಾಪಸಿಂಗನೂ ತನ್ನ ಸಣ್ಣ ಸೈನ್ಯಕ್ಕೆ ಇಕ್ಕಟ್ಟಿನ ಯುದ್ಧವೇ ಒಳಿತೆಂದು ಭಾವಿಸಿ, **ಹಳದೀಘಟ್ಟದ** ಇರುಕಿನಲ್ಲಿ ಸೈನ್ಯದ ಬೀಡುಬಿಟ್ಟನು

**ಹಳದೀಘಟ್ಟದ ಯುದ್ಧ**—(೧೫೭೬) ಹಳದೀಘಟ್ಟದ ಹೋರಾಟದಲ್ಲಿ ಅಕಬರನ ಬೆಂಬಲಕ್ಕೆ ಪ್ರಬಲವಾದ ಮೊಗಲ ಸೇನೆಯಲ್ಲದೆ, ಆತನ ಬೀಗರಾದ ರಜಪೂತ ರಾಜರೂ ಸೈನ್ಯಸಹಿತವಾಗಿ ಬಂದಿದ್ದರು, ಉಳಿದ ಮಾಂಡಲಿಕ ರಾಜರೂ ಇದ್ದರು ರಜಪೂತರಲ್ಲಿಯ ಅನೈಕ್ಯವು ಅಕಬರನಿಗ ಅನುಕೂಲ ವಾಯಿತು ಇದಿರಾಳಿಯಾಗಿ ಪ್ರತಾಪಸಿಂಗನೊಬ್ಬನೇ ಎಷ್ಟೋ ವೀರಾವೇಶ ದಿಂದ ಕಾದಿ, ಉಪಾಯವಿಲ್ಲದೆ ರಣರಂಗದಿಂದ ಕಾಲ್ದೆಗೆದನು! ಅವನ ಹೆಂಡತಿ ಹಾಗೂ ಸಣ್ಣ ಮಗು ಅಮರಸಿಂಗ ಅವನೊಡನೆಯೇ ಅಲೆಯುತ್ತಿದ್ದರು! ಆ ಸಂಕಟಸಮಯದಲ್ಲಿ **ಭಾಮಾಸಾ** ಮಂತ್ರಿಯೇ ಅವನಿಗೆ ಜೀವದ ಮಿತ್ರ ನಾದನು ಮುಂದೆ ಆದ ಮಂತ್ರಿಯ ನೆರವಿನಿಂದಲೇ ಮೊಗಲರನ್ನು ಕೆಣಕಿ, ಮೇವಾಡ ಪ್ರಾಂತವನ್ನೆಲ್ಲ ಗದ್ದುಕೊಂಡನು, ಚಿತ್ತೂರು ಮಾತ್ರ ಆತನಿಗೆ ಕೊನೆಗೂ ಕೈವಶವಾಗಲಿಲ್ಲ! ಸಾಯುವ ಕಾಲಕ್ಕೆ ಚಿತ್ತೂರಿನ ಸ್ವಾತಂತ್ರ್ಯ ವನ್ನು ಕಾಯ್ದುಕೊಳ್ಳಿರಿ" ಎಂದು ನರದಾರರಿಗ ತನ್ನ ಸಂದೇಶವನ್ನು ಕೊಟ್ಟು ಮರಣಹೊಂದಿದನು ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಏಕಾಕಿಯಾಗಿಯೂ ಹೋರಾಡಿದ ಈ ನರವೀರ ಪ್ರತಾಪಸಿಂಹನ ಹೆಸರನ್ನು ಯಾರು ಮರೆಯ ಬಹುದು!

**ದಕ್ಷಿಣದ ದಾಳಿಗಳು**—ಈ ವರೆಗ ಅಫಗಾನಿಸ್ಥಾನದಿಂದ ಹಿಡಿದು ಪೂರ್ಣ ಉತ್ತರ ಭಾರತವು, ಮೊಗಲ ರಾಜ್ಯಕ್ಕ ಸೇರಿತ್ತೆಂದು ಹೇಳಬಹುದು

ಉತ್ತರದ ರಜಪೂತ ರಾಜ್ಯಗಳೊಳಗ ಇಷ್ಟು ಹಾಹಾಕಾರ ಎದ್ದರೂ ದಕ್ಷಿಣದ ರಾಜರಿಗೆ ಅದರ ಅರಿವೇ ಇರಲಿಲ್ಲ ಅಹಮ್ಮದನಗರದ ರಾಜ್ಯವು ಪ್ರಬಲವಾಗಿತ್ತು! ಆದರೆ ಅಲ್ಲಿ ಐಕ್ಯವಿರಲಿಲ್ಲ ಆಗ ಮಂತ್ರಿಯಾದ **ಮಿಯಾ ಮಂಜು** ಎಂಬವನು ತನ್ನ ಪರವಾಗಿ ಅಕಬರನ ಸಹಾಯವನ್ನು ಕೇಳಿದನು ಅಕಬರನಿಗ ಇದಿಷ್ಟೇ ನೆವ ಸಾಕಾಯಿತು ಮಗನಾದ ಮುರಾದನೊಡನೆ ದೊಡ್ಡ ದಂಡನ್ನು ಕೊಟ್ಟು ಅಹಮ್ಮದನಗರಕ್ಕೆ ಕಳಿಸಿದನು

**ಅಹಮ್ಮದನಗರದ ಮುತ್ತಿಗೆ**—(೧೬೦೦) **ಮುರಾದನು** ಒಮ್ಮೆಲೆ ಅಹಮ್ಮದ ನಗರಕ್ಕೆ ಮುತ್ತಿಗೆಯನ್ನು ಹಾಕಿದನು ಆಗ ನಿಜಾಮಶಹನ ಮಗಳಾದ **ಚಾಂದಬೀಬಿ** ಆತನಿಗೆ ಇದಿರಾದಳು, ಮೊಗಲರನ್ನು ಮೆತ್ತಗೆ ಮಾಡಿದಳು ಮುರಾದನು ಅವಳೊಡನೆ ಒಪ್ಪಂದ ಮಾಡಿಕೊಂಡನು, ಆದರೆ ತೀವ್ರದಲ್ಲಿಯೇ ಅಕಬರನು ತಾನೇ ದಂಡೆತ್ತಿ ಬಂದನು. ಈ ಸಮರದಲ್ಲಿ ಅಂತರಂಗದ ಜಗಳಗಳಿಂದ ಚಾಂದಬೀಬಿಯ ಕೊಲೆಯಾಯಿತು ಸ್ವಾಮಿದ್ರೋಹಿಯೂ

ದೇಶದ್ರೋಹಿಯೂ ಆದ ಮಿಯಾ ಮಂಚುವಿನ ಫಿತೂರಿಯಿಂದ ಅಹಮ್ಮದ ನಗರವು ಅಕಬರನ ಕೈಸೇರಿತು

**ಇಕ್ಕೇರಿ ಸಂಕಣ್ಣನಾಯಕನಿಗೆ ಉಡುಗೊರೆ** — ಕರ್ನಾಟಕದಲ್ಲಿ ಇಕ್ಕೇರಿ **ನಾಯಕರು** ಮಹಾ ಪ್ರತಾಪಿಗಳು ಈ ಸುದ್ದಿಯು ಅಕಬರನಿಗೂ ಗೊತ್ತಿತ್ತು ಈ ಸಮಯದಲ್ಲಿ **ಸಂಕಣ್ಣ**ನು ಕಾಶೀಯಾತ್ರೆ ಮುಗಿಸಿಕೊಂಡು ದಿಲ್ಲಿಯ ವೈಭವವನ್ನು ನೋಡಲು ಇಳಿದಿದ್ದನು ಬಾದಶಹನು ನಾಯಕನನ್ನು ದರ-ಬಾರಕ್ಕೆ ಕರೆಸಿದನು **'ಅಂಕುಶಖಾನ'**ನು ಅಕಬರನಲ್ಲಿ ಆಸ್ಥಾನಮಲ್ಲ, ಜಗ-ಜಟ್ಟಿಯೆಂದು ಹೆಸರಾಗಿದ್ದ ಇವನಿಗೂ ಸಂಕಣ್ಣನಾಯಕನಿಗೂ ಮಲ್ಲ-ಯುದ್ಧವಾಯಿತು ಸಂಕಣ್ಣನು ಮಲ್ಲಯುದ್ಧಚಾತುರ್ಯದಿಂದ ಅಂಕುಶ ಖಾನನನ್ನು ಸೋಲಿಸಿದನು ಅಕಬರಬಾದಶಹನು ತುಂಬ ಸಂತೋಷದಿಂದ ಸಂಕಣ್ಣನಾಯಕನಿಗೆ ಉಡುಗೊರೆಯನ್ನು ಕೊಟ್ಟನು ಇಕ್ಕೇರಿಯು ಮೊಗಲರಿಗ ಮಿತ್ರರಾಜ್ಯವಾಗಿ ಉಳಿಯಿತು

**ಉಳಿದ ದಕ್ಷಿಣದ ರಾಜ್ಯಗಳು** — ಅಕಬರನ ಅಬ್ಬರವು ಎಲ್ಲಲ್ಲಿಯೂ ಹೆಚ್ಚಾಯಿತು ಗೋವಳಕೊಂಡದ ಬಾದಶಹನು ಮಾಂಡಲಿಕನಾದನು ಹೀಗ ದಕ್ಷಿಣದ ಎಷ್ಟೋ ಭಾಗವು ಮೊಗಲ ಸಾಮ್ರಾಜ್ಯಕ್ಕೆ ಅಂಕಿತವಾಯಿತು

**ಅಕಬರನ ಅಂತ್ಯ** – (೧೬೦೫) ಇಷ್ಟೆಲ್ಲ ವ್ಯವಸ್ಥೆ ಮಾಡಿ ಅಕಬರನು ಆಗ್ರಾಕ್ಕೆ ಬಂದನು ಇವನ ಅಂತ್ಯಸಮಯ ಮಾತ್ರ ಸುಖಕರವಾಗಲಿಲ್ಲ ಇಬ್ಬರು ಮಕ್ಕಳು ಮತ್ತು ಸೆಲೀಮನು ತಂದೆಯ ವಿರುದ್ಧ ಬಂಡಸ್ನೆಬ್ಬಿಸಿದರು ಅಲ್ಲದೆ, ಸೆಲೀಮನು ಅಕಬರನ ಪ್ರೀತಿಯ ಮಂತ್ರಿ **ಅಬುಲ್ ಫಜಲ**ನನ್ನು ಕೊಲ್ಲಿಸಿದನು ಈ ಮನೋವ್ಯಥೆಯಿಂದಲೇ ಅಕಬರನು ೧೬೦೫ರಲ್ಲಿ ಮರಣ ಹೊಂದಿದನು

**ಆದರ್ಶ ಆಡಳಿತ** — ಅಕಬರ ಬಾದಶಹನ ಆಯುಷ್ಯದ ಬಹುಭಾಗವು ಕಾಳಗಗಳಲ್ಲಿಯೇ ಕಳೆಯಿತೆಂದು ಹೇಳಬಹುದು ತನ್ನ ವಿಸ್ತೃತರಾಜ್ಯದಲ್ಲಿ ಒಳ್ಳೆಯ ಆಳಿಕೆಯನ್ನಿಡದಿದ್ದರೆ ಶಾಂತಿ ಉಳಿಯುವಂತಿರಲಿಲ್ಲ ಅದಕ್ಕಾಗಿ ದಕ್ಷರಾದ ಅಧಿಕಾರಿಗಳನ್ನು ಜಾತಿ-ಮತಭೇದವಿಲ್ಲದೆ ವಕೀಲ್, ವಜೀರ್, ಬಕ್ಷಿ, ದಿವಾನ್ ಇತ್ಯಾದಿ ನೌಕರಿಗಳಲ್ಲಿ ನಿಯಮಿಸಿದನು ಅವರಲ್ಲಿ ಅವನ ವಜೀರನಾಗಿದ್ದ ಅಬುಲ್‌ಫಜಲ್ ಎಂಬುವನು ಅಕಬರನ ಜೀವನಚರಿತ್ರೆಯನ್ನೂ ಆಡಳಿತದ ವ್ಯವಸ್ಥೆಗಳನ್ನೂ ಕುರಿತು ಒಂದು ದೊಡ್ಡ ಗ್ರಂಥವನ್ನು ಬರೆದಿದ್ದಾನೆ. ಅವನ ತಮ್ಮ ಅಬುಲ್‌ಫೈಜಿ ಹೆಸರಾದ ಆಸ್ಥಾನಕವಿಯಾಗಿದ್ದನು. ತಾನ್‌ಸೇನ ಎಂಬುವನು ಆಸ್ಥಾನದ ಗಾಯಕರಲ್ಲಿ ಅಗ್ರಗಣ್ಯನು. ರಾಜಾ ತೋಡರಮಲ್ಲನು ಆಡಳಿತ ಸುಧಾರಣೆಯಲ್ಲಿ, ಅಕಬರನ ಬಲಗೈ

ಯಂತೆ ಇದ್ದನು ರಾಜಾ ಮಾನಸಿಂಗ, ರಾಜಾ ಬೀರಬಲಾ ಮುಂತಾದವರು ಆಕಬರನ ಸೇನಾನಿಗಳಾಗಿದ್ದರು


ರಾಜಾ ತೋಡರಮಲ್ಲ


ಅಬುಲ್‌ಫಜಲ್

**ರಾಜ್ಯವ್ಯವಸ್ಥೆ — ಕೃಷಿಸುಧಾರಣೆಗಳು** — ಒಕ್ಕಲುತನದ ಬೆಳವಣಿಗೆಯ ಕೆಲಸಕ್ಕೆ ರಾಜಾ ತೋಡರಮಲ್ಲನ ನೇಮಕವಾಗಿತ್ತು ಈತನು ಕೃಷಿ-ಸುಧಾರಣೆಯ ಬಗೆಗೆ— ೧ ಹೊಲಗಳನ್ನು ಅಳೆಯುವುದು ೨ ಬೆಳೆಗಳ ಸ್ಥಿತಿಯಂತೆ ಅವುಗಳ ತರಗತಿಯನ್ನು ಗೊತ್ತುಮಾಡುವುದು ೩ ಭೂಮಿಯ ತರಗತಿಯಂತೆ ತೆರಿಗೆಯನ್ನು ಗೊತ್ತುಮಾಡುವುದು, ಮುಂತಾಗಿ ಮೂರು ಮುಖ್ಯ ಕಾರ್ಯಗಳನ್ನು ಮಾಡಿದನು ಬೆಳೆಯ ಮೂರರಲ್ಲೊಂದು ಭಾಗ ತೆರಿಗೆಯೆಂದು ಗೊತ್ತಾಯಿತು ಇದರಿಂದ ಇಪ್ಪತ್ತುಕೋಟಿ, ಹಾಗೂ ಸುಂಕ ಮೊದಲಾಗಿ ಇಪ್ಪತ್ತುಕೋಟಿ ಉತ್ಪನ್ನ ಬರುತ್ತಿತ್ತು

**ಸೈನ್ಯ ಸಂಘಟನೆ** — ಈ ಮೊದಲಿದ್ದ ಜಹಗೀರದಾರ ಪದ್ಧತಿಯನ್ನು ನಿಲ್ಲಿಸಿ, ಮನಸಬದಾರ ಪದ್ಧತಿಯನ್ನು ಆರಂಭ ಮಾಡಿದನು ಇವರೆಲ್ಲ ಸೈನ್ಯಾಧಿಕಾರಿಗಳೇ ಇವರ ಮೇಲೆ ಅಮೀರರೆಂಬ ಅಧಿಕಾರಿಗಳು. ಈ ಎಲ್ಲರಿಗೂ ಯೋಗ್ಯತೆಗೆ ತಕ್ಕಂತೆ ಸಂಬಳವಿರುತ್ತಿತ್ತು ಅದರಿಂದ ಸೈನಿಕರೂ ಸೈನ್ಯಾಧಿಕಾರಿಗಳೂ ಯಾವಾಗಲೂ ರಾಜನಿಷ್ಠರಾಗಿ ಸಿದ್ಧತೆಯಲ್ಲಿಯೇ ಇರುತ್ತಿದ್ದರು ಇದಲ್ಲದೆ, ಈ ಮನಸಬದಾರರಲ್ಲಿ ಬಹುಸಂಖ್ಯಾಕರು ರಜಪೂತರಿದ್ದರೆಂಬುದನ್ನು ನೆನಪಿಡುವಂತಿದೆ

**ಸುಭೆಗಳು** — ಆಡಳಿತದ ಅನುಕೂಲತೆಗಾಗಿ ರಾಜ್ಯದಲ್ಲಿ ೧೫ ಸುಭೆಗಳನ್ನು ಮಾಡಿದ್ದನು ಅದರಲ್ಲಿ ಮತ್ತೆ ಪರಗಣೆ ಮತ್ತು ಸರಕಾರ ಎಂಬ

ಭಾಗಗಳು ಸುಭೆಗೆ ಸುಭೇದಾರನೇ ಸರ್ವಾಧಿಕಾರಿಯು ಮುಖ್ಯಮಂತ್ರಿಯ ಕಡೆಗೆ ಆದಾಯ-ವ್ಯಯಗಳ ಸಂಪೂರ್ಣ ಹೊಣೆಗಾರಿಕೆಯಿದ್ದಿತು ಶಾಂತಿಯನ್ನು ಕಾಯುತವನು ಫೌಜದಾರನು ಆತನ ಕೈಕೆಳಗೆ ಕೊತವಾಲನು




**ನ್ಯಾಯದಾನ**—ಬಾದಶಹನೇ ಮುಖ್ಯ ನ್ಯಾಯಾಧೀಶನು ಕುರಾನದ ನೀತಿಯಂತೆ ಮತ್ತು ಕಾಜಿ ಉಲ್ಮಾಗಳ ಹೇಳಿಕೆಯಂತೆ ನ್ಯಾಯನಿರ್ಣಯವಾಗುತ್ತಿದ್ದಿತು ಕಾಜಿಗಳು ಹಿಂದೂಜನರ ನಡೆನುಡಿಗಳನ್ನು ಬಲ್ಲವರಾಗಿ

ಇದ್ದರು ಜಾತಿ-ಮತ-ಪಂಥಗಳ ಭೇದವಿಲ್ಲದೆ ನ್ಯಾಯವಿಚಾರವಾಗು ತ್ತಿತ್ತು

**ದಿನ್ ಇಲಾಹಿ ಧರ್ಮಸ್ಥಾಪನೆ** —ಹಿಂದು-ಮುಸಲ್ಮಾನರಿಬ್ಬರೂ ಧರ್ಮದ ಹೆಸರಿನಿಂದ ಬಡಿದಾಡುವುದು ಅಕಬರನಿಗ ಸೇರಲಿಲ್ಲ ಅದರಿಂದ ಎಲ್ಲ ಜನಾಂಗಗಳಿಗೂ ಸಮ್ಮತವಾಗುವಂತೆ ಎಲ್ಲ ಧರ್ಮಗಳ ಸತ್ಯತತ್ತ್ವಗಳನ್ನು ಆಯ್ದುಕೊಂಡು **'ದಿನ್ ಇಲಾಹಿ'** (ದೇವರ ಧರ್ಮ) ಎಂಬ ಹೊಸ ಧರ್ಮವನ್ನು ಸ್ಥಾಪಿಸಿದನು ಈ ಕಾರ್ಯದಲ್ಲಿ ಆತನ ಆಸ್ಥಾನಪಂಡಿತರಾದ ಅಬುಲ್ ಫಜಲ್ ಮತ್ತು ಫೈಜಿ ಎಂಬ ಪಂಡಿತರು ಬಹಳ ಸಹಾಯಮಾಡಿದರು ಈ ಹೊಸ ಧರ್ಮದ ಸ್ಮಾರಕಕ್ಕಾಗಿ ಫತ್ತೇಪುರ ಸಿಕ್ರಿಯಲ್ಲಿ "ಇಬಾದತ್ ಖಾನಾ" ಎಂಬ ಒಂದು ಭವ್ಯ ಮಂದಿರವನ್ನು ಕಟ್ಟಿಸಿದನು ಪ್ರತಿ ಗುರುವಾರ ಅಲ್ಲಿ ಧರ್ಮದ ಬಗಗೆ ಚರ್ಚೆ ನಡೆಯುತ್ತಿತ್ತು ಬೌದ್ಧಭಿಕ್ಷುಗಳೂ, ಜೈನಯತಿ ಗಳೂ, ಕ್ರೈಸ್ತ ಪಾದ್ರಿಗಳೂ, ಸೂಫಿಪಂಥದ ಯೋಗಿಗಳೂ, ಮುಸಲ್ಮಾನ್ ಮೌಲ್ವಿಗಳೂ, ಪಾರ್ಸಿ ಧರ್ಮಬೋಧಕರೂ, ಅಲ್ಲಿ ಕಲೆತು ಧರ್ಮಚರ್ಚೆ ಮಾಡುತ್ತಿದ್ದರು ಕಡೆಗ ಅವೆಲ್ಲವನ್ನೂ ಸಮನ್ವಯಗೊಳಿಸಿ ಅಕಬರನು 'ದಿನ್ ಇಲಾಹಿ' ಎಂಬ ತನ್ನ ಪಂಥವನ್ನು ರೂಪುಗೊಳಿಸಿದನು ಸ್ವತಃ ಅಕಬರನು ಅದರಂತೆ ಆಚರಿಸುತ್ತಿದ್ದನು ಆದರೆ ಬಾದಶಹನು ಯಾರನ್ನೂ ಬಲವಂತಪಡಿಸಲಿಲ್ಲ ಆದುದರಿಂದ ಈ ಧರ್ಮವನ್ನು ಕೆಲವರು ಮಾತ್ರ ಸ್ವೀಕರಿಸಿದರು ಆತನ ತರುವಾಯ ಅದು ಉಳಿಯಲೇ ಇಲ್ಲ

**ಅಕಬರನ ದಿನಚರಿ** —ಅಕಬರನಿಗೆ ದೇವ-ಧರ್ಮಗಳ ಮೇಲ ತುಂಬಾ ನಂಬುಗೆ ಸಿಕ್ರಿಯಲ್ಲಿರುವಾಗ ನಿತ್ಯವೂ ಬೆಳಗ್ಗೆ ಸೂರ್ಯನಿಗೆ ನಮಸ್ಕಾರ ಮಾಡುತ್ತಿದ್ದನು ಕ್ರೈಸ್ತ ದೇವಾಲಯಗಳಿಗೂ ಹೋಗುತ್ತಿದ್ದನು ತನ್ನ ಅಂತಃಪುರದ ಹಿಂದೂ ರಾಣಿಯರ ಪೂಜಗಳಲ್ಲಿ ಭಾಗವಹಿಸುತ್ತಿದ್ದನು ಬೆಳಗಿನ ಎಂಟು ಗಂಟೆಗ ಕಿಡಕಿಯ ಬಳಿ ನಿಂತು ಪ್ರಜೆಗಳಿಗೆಲ್ಲ ದರ್ಶನ ಕೊಡುತ್ತಿದ್ದನು ಆ ಮೇಲೆ ದರಬಾರವನ್ನು ಕೂಡಿಸಿ ಹೊಸಬರನ್ನು ಕಾಣು ತ್ತಿದ್ದನು ನ್ಯಾಯವಿಚಾರಣೆ ಮಾಡುತ್ತಿದ್ದನು ಮಧ್ಯಾಹ್ನದಲ್ಲಿ ಊಟ-ಉಡಿಗೆ ತೀರಿಸಿಕೊಂಡು, ಸಾಯಂಕಾಲ ಮತ್ತ ಧರ್ಮಾಚರಣೆ ಮತ್ತು ಆಟ ಗಳಲ್ಲಿ ಕಾಲಕಳೆಯುತ್ತಿದ್ದನು

**ಸ್ವಭಾವ ಮತ್ತು ಸುಧಾರಣೆ** —ಅಕಬರ ಬಾದಶಹನು ಮೊದಲಿಗೆ ವಿದ್ಯಾವಂತನಲ್ಲದಿದ್ದರೂ ಮುಂದೆ ವಿದ್ವಜ್ಜನರ ಸಹವಾಸದಿಂದ, ಹಾಗೂ ಸ್ವಂತ ವ್ಯಾಸಂಗದಿಂದ ಶಾಸ್ತ್ರಗಳ ಸಾರವನ್ನು ಸಂಗ್ರಹಿಸಿದನು. ಚಿತ್ರಕಲೆ ಗಾಯನಕಲೆಗಳಲ್ಲಿ ತುಂಬಾ ಪ್ರೀತಿ ಇತ್ತು ಬೀರಬಲನೊಡನೆ ವಿನೋದ

ದಲ್ಲಿ ಕಾಲಕಳೆಯುತ್ತಿದ್ದನು ಪ್ರಜೆಗಳಲ್ಲಿ ಹಿಂದೂ ಮುಸಲ್ಮಾನರೆಂಬ ಭೇದ ಮಾಡುತ್ತಿರಲಿಲ್ಲ ರವಿವಾರದ ದಿನ ಯಾರೂ ಪ್ರಾಣಿಗಳನ್ನು ಕೊಲ್ಲ ಬಾರದೆಂದು ಕಟ್ಟಪ್ಪಣೆ ಮಾಡಿದ್ದನು 'ಸತಿ' ಹೋಗುವ ಪದ್ಧತಿಯನ್ನು ನಿಲ್ಲಿಸಲು ಪ್ರಯತ್ನಿಸಿದನು ಮುಸಲ್ಮಾನರಲ್ಲದ ಎಲ್ಲ ಮತೀಯರ ಮೇಲೂ ಅದುವರೆಗೂ ಹೇರಿದ್ದ ಜಿಜಿಯಾ ಎಂಬ ಕರವನ್ನು ತೆಗೆದುಬಿಟ್ಟನು ಎಲ್ಲ ಧರ್ಮದವರಿಗೂ ಧರ್ಮಾಚರಣೆಯ ಸ್ವಾತಂತ್ರ್ಯವನ್ನು ಕೊಟ್ಟಿದ್ದನು ಈ ಎಲ್ಲ ಕಾರಣಗಳಿಂದ, ಅಕಬರ ಬಾದಶಹನನ್ನು ಆದರ್ಶ ಅರಸು ಎಂದು ಹೇಳ ಬಹುದು "ನ್ಯಾಯವಾದ ರಾಜ್ಯಭಾರವೇ ಅರಸನು ದೇವರಿಗೆ ತೋರಿಸ ಬೇಕಾದ ಕೃತಜ್ಞತೆ, ವಿಧೇಯತೆಯಿಂದ ವರ್ತಿಸುವುದೇ ಪ್ರಜೆಗಳು ರಾಜನಿಗೆ ತೋರಿಸಬೇಕಾದ ಕೃತಜ್ಞತೆ" ಎಂದು ಅಕಬರನು ಹೇಳುವನು

## ಅಭ್ಯಸನಗಳು

೧ ಕೆಳಗಿನ ವ್ಯಕ್ತಿಗಳ ಬಗೆಗೆ ನೀವು ಓದಿದ ಒಂದೊಂದು ಐತಿಹಾಸಿಕ ಸಂಗತಿಯನ್ನು ಬರೆಯಿರಿ

ಹೇಮೂ, ಬೈರಾಮಖಾನ, ರಾಣೀ ದುರ್ಗಾವತೀ, ತೋಡರಮಲ್ಲ, ಪ್ರತಾಪ ಸಿಂಹ, ಚಾಂದಬೀಬಿ, ಅಬುಲ್‌ಫಜಲ್, ತಾನಸೇನ.

೨ ಇಕ್ಕೇರಿ ಸಂಕಣ್ಣನಾಯಕನನ್ನು ಬರಮಾಡಿಕೊಂಡ ಪ್ರಸಂಗದಲ್ಲಿ ಅಕಬರನಿಗೂ ಆತನಿಗೂ ನಡೆದಿರಬಹುದಾದ ಸಂಭಾಷಣೆ ಏನು?

(ಶಿಕ್ಷಕರು ಈ ಪ್ರಸಂಗದ ಸಂಭಾಷಣ ಮಾಡಿಸಬೇಕು)

೩ ಹಿಂದುಸ್ತಾನದ ಬಾಹ್ಯರೇಷೆಯ ನಕಾಶ ತೆಗೆದು, ಅದರಲ್ಲಿ, ಅಕಬರನ ರಾಜ್ಯ ವಿಸ್ತಾರ ಹಾಗೂ ಸುಭೆಗಳನ್ನು ತೋರಿಸಿರಿ

೪ ಅಕಬರನಲ್ಲಿದ್ದ ಯಾವ ಗುಣಗಳು ಅವನಿಗೊದಗಿದ ತೊಂದರೆಗಳ ನಿವಾರಣೆಗೆ ಸಹಾಯಕವಾದುವು?

೫ ಅಕಬರನ ಯಾವ ಯಾವ ಕಾರ್ಯಗಳನ್ನು ನೀವು ಮೆಚ್ಚುತ್ತೀರಿ? ಯಾಕೆ?

# ೧೧ ಜಹಾಂಗೀರ ಮತ್ತು ಶಾಹೇಜಹಾನ

**ಜಹಾಂಗೀರನ ಜನ್ಮ** – ಅಕಬರ ಬಾದಶಹನ ಮಕ್ಕಳು ಬದುಕುತ್ತಿರಲಿಲ್ಲ ಆದುದರಿಂದ ಅವನು ಸಿಕ್ರಿಯ ಶೇಖಸಲೀಮನಿಗೆ ಭಕ್ತಿಯಿಂದ ನಡೆಕೊಳ್ಳು ತ್ತಿದ್ದನು ಆ ಮೇಲೆ ಹುಟ್ಟಿ ಬದುಕಿದ (೧೫೬೯) ಮಗನೇ ಸಲೀಮನು


ಜಹಾಂಗೀರ

ಬಹರಾಮನ ಮಗನಾದ **ಅಬ್ದುರ್ ರಹಮಾನನು** ಅಕಬರನ ದರಬಾರದ ಲ್ಲಿಯೇ ಇದ್ದನು ಈತನು ಒಳ್ಳೇ ವಿದ್ವಾಂಸನು ಈತನಲ್ಲಿಯೇ ಸಲೀಮನ ಶಿಕ್ಷಣ ಆಯಿತು ತುರ್ಕಿ, ಹಿಂದಿ ಭಾಷೆಗಳ ಲ್ಲಿಯೂ, ಕುರಾನವನ್ನು ಒದುವುದ ರಲ್ಲಿಯೂ ರಾಜಕಾರಣದಲ್ಲಿಯೂ ಒಳ್ಳೇ ಶಿಕ್ಷಣ ಸಿಕ್ಕಿತು

ಹದಿನೈದು ವರುಷದವನಾಗುತ್ತಲೇ **ಅಂಬರದ ಬಗವಾನದಾಸನ** ಮಗಳಾದ **ಮಾನಬಾಯಿ** ಯೊಡನೆ ಸಲೀಮನ ಮದುವೆ ಆಯಿತು ಮುಂದೆ **ಜೋಧಬಾಯಿ** ಯೊಡನೆ ಲಗ್ನವಾಯಿತು

**ಸಿಂಹಾಸನಾರೋಹಣ** — (೧೬೦೫) ಅಕಬರ ಬಾದಶಹನ ತರುವಾಯ ಸಲೀಮನು ಸಿಂಹಾಸನವನ್ನೇರಿದನು ಈತನು ಬಲು ವಿಲಾಸಿ ಈತನ ಮಗನಾದ ಖುಸ್ರು ರಾಜನಾಗಲು ತಕ್ಕವನಾಗಿದ್ದನು ಅವನನ್ನೇ ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಮಾನಸಿಂಗ ಮೊದಲಾದವರು ಪ್ರಯತ್ನ ನಡೆಸಿದರು ಅದರಿಂದ ಸಲೀಮನು ಖುಸ್ರುವನ್ನು ಸೆರೆಯಲ್ಲಿಟ್ಟನು ಅವನು ತಂದಯ ಕ್ಷಮೆಯನ್ನು ಕೋರಿ, ಪಾರಾಗಿ ಮಥುರೆಯ ಕಡೆಗೆ ಓಡಿಹೋಗಿ, ಅಲ್ಲಿ ತಂದೆಯ ವಿರುದ್ಧ ಸಂಚು ನಡೆಸಿದನು ಶೀಖರ ಗುರು **ಅರ್ಜುನಸಿಂಗನು** ಆತನಿಗೆ ಧನ-ಸಹಾಯ ಮಾಡಿದನು ಆದರೆ ಗುರು ಅರ್ಜುನಸಿಂಗನನ್ನು ಜಹಾಂಗೀರನ ಸುಭೇದಾರನೊಬ್ಬನು ಸೆರೆಹಿಡಿದು ಕೊಂದನು ಆದುದರಿಂದ, ಶೀಖರೆಲ್ಲರೂ ಮೊಗಲ ಸಿಂಹಾಸನದ ಕಡುವೈರಿಗಳಾದರು ಖುಸ್ರು ತಂದಯ ಕೈಯಲ್ಲಿ ಮತ್ತೆ ಸೆರೆ ಸಿಕ್ಕನು ಕೊನೆಗೆ ಅಲ್ಲಿಯೇ ಪ್ರಾಣಬಿಟ್ಟನು ಆ ಮೇಲೆ ಸಲೀಮಶಹನು 'ನೂರುದ್ದೀನ ಮಹಮ್ಮದ ಜಹಾಂಗೀರ' ಎಂಬ ಹೆಸರಿನಿಂದ ಆಳಹತ್ತಿದನು 'ಜಹಾಂಗೀರ' ಎಂದರೆ ಜಗತ್ತನ್ನು ಗೆಲ್ಲುವವ

**ಮೇವಾಡದ ವಿಜಯ** – ಪ್ರತಾಪಸಿಂಹನ ತರುವಾಯ ಆತನ ಮಗ **ಅಮರಸಿಂಹನು** ಪಟ್ಟವೇರಿದನು ಅವನಾದರೂ ತಂದೆಯಂತೆ ವೀರನು ತಂದೆಯ ಪ್ರತಿಜ್ಞೆಯನ್ನು ಪೂರಯಿಸುವುದಕ್ಕಾಗಿ ಸೈನ್ಯವನ್ನು ಸಜ್ಜುಮಾಡಿ-ಕೊಂಡು ಸಮಯ ಕಾಯುತ್ತಿದ್ದನು ಇದು ಜಹಾಂಗೀರನಿಗ ತಿಳಿಯಿತು. ಕೂಡಲೆ ತನ್ನ ಮಗ ಖುರ್ರಮನ ಕೈಕೆಳಗ ದೊಡ್ಡ ದಂಡನ್ನು ಕೊಟ್ಟು ಚಿತ್ತೂರಿಗ ಮುತ್ತಿಗೆ ಹಾಕಿಸಿದನು ಅಮರಸಿಂಹನ ಸೈನ್ಯ ನಣ್ಣದು, ಆದರೂ ಮೊಗಲರಿಗೆ ಹಣಿಯಲಿಲ್ಲ ಕಡೆಗೆ ಅಮರಸಿಂಹನಿಗೂ ಜಹಾಂಗೀರನಿಗೂ ಒಪ್ಪಂದವಾಯಿತು ಮೊಗಲರಿಗೂ ಅಷ್ಟೇ ಬೇಕಾಗಿತ್ತು ಯಾವ ಅವಮಾನ ಕಾರಕ ಶರ್ತುಗಳನ್ನೂ ಹಾಕದ ಅವನನ್ನು ಮಾಂಡಲಿಕನನ್ನಾಗಿ ಮಾಡಿ ಕೊಂಡರು

**ದಕ್ಷಿಣದ ಗೆಲವು** – ಅಹಮ್ಮದನಗರವು ಈ ಮೊದಲೇ ಮೊಗಲರಿಗ ಅಂಕಿತವಾಗಿತ್ತು ಮತ್ತೆ **ಮಲಿಕ ಅಂಬರ**ನೆಂಬ ಸರದಾರನು ಸುತ್ತಲಿನ ಮರಾಠಾ ಸೈನಿಕರನ್ನು ಕೂಡಿಕೊಂಡು, ಮೊಗಲರ ಮೇಲೆ ಏರಿಹೋಗುವ ಸಿದ್ಧತೆಯನ್ನು ನಾಗಿಸಿದನು ಆಗ ಖುರ್ರಮನೇ ಅಹಮ್ಮದನಗರಕ್ಕೆ ದಂಡೆತ್ತಿ ಹೋಗಿ ಅವರನ್ನು ಸೋಲಿಸಿದನು ಆ ರಾಜ್ಯವು ಮೊಗಲರಿಗೆ ಪೂರಾ ಅಂಕಿತ ವಾಯಿತು (೧೬೧೭) ಈ ಎರಡೂ ಗೆಲವುಗಳಿಂದ ಸಂತುಷ್ಟನಾಗಿ ಜಹಾಂಗಿರನು ಮಗನಾದ ಖುರ್ರಮನಿಗ 'ಶಾಹೇಜಹಾನ' ಎಂದರೆ ಜಗದರಸು ಎಂಬ ಪದವಿಯನ್ನು ಕೊಟ್ಟನು

**ನೂರಜಹಾನ** – ನೂರಜಹಾನಳು ಒಬ್ಬ ಇರಾಣಿ ವ್ಯಾಪಾರಸ್ಥನ ಮಗಳು. ಆಕೆಯ ಮೊದಲ ಹೆಸರು **ಮೆಹರ್ ಉನ್ನೀಸಾ** ಅವಳನ್ನು ಬಂಗಾಲದ ಜಹಾಗೀರದಾರ ಶೇರ್ ಅಫಗಾನನಿಗ ಕೊಟ್ಟಿತ್ತು. ಕೈಯಲ್ಲಿ ಅಧಿಕಾರ ಬರುತ್ತಲೇ ಜಹಾಂಗೀರನು ಶೇರ್ ಅಫಗಾನನನ್ನು ಕೊಲ್ಲಿಸಿ ಅವನ ಹೆಂಡತಿಯನ್ನು ಹಿಡಿತರಿಸಿದನು ಮುಂದೆ ನಾಲ್ಕು ವರುಷಗಳ ಮೇಲೆ ಅವಳು ಬಾದಶಹನನ್ನು ಮದುವೆಯಾದಳು ಆ ಮೇಲ ಅವಳಿಗೆ 'ನೂರಜಹಾನ ಎಂದರೆ ಜಗಜ್ಜ್ಯೋತಿ ಎಂದು ಹೆಸರನ್ನಿಟ್ಟನು ಅವಳು ಚತುರೆಯಾಗಿದ್ದಳು. ಆದರಿಂದ ರಾಜ್ಯದ ಕಾರಭಾರವೆಲ್ಲ ಅವಳ ಕೈಸೇರಿತು ತನ್ನ ತಂದೆ-ಅಣ್ಣಂದಿರಿಗ ದೊಡ್ಡ ದೊಡ್ಡ ಅಧಿಕಾರ ಗಳನ್ನು ಕೊಟ್ಟಳು


ನೂರಜಹಾನ

**ಸರ್ ಥಾಮಸ್ ರೋ** – ಈ ಸಮಯಕ್ಕೆ ಪೋರ್ತುಗೀಜರು ಜಹಾಂಗೀರನ

ಅಪ್ಪಣೆಯನ್ನು ಪಡೆದು, ಭಾರತದಲ್ಲಿ ವ್ಯಾಪಾರ ಮಾಡುತ್ತಿದ್ದರು ಆ ಮೇಲೆ ಇಂಗ್ಲಿಷರು ಕ್ಯಾಪ್ಟನ್ ಹಾಕಿನ್ಸ್ ಎಂಬವನನ್ನು ವ್ಯಾಪಾರದ ಒಪ್ಪಿಗೆ ಪಡೆಯಲು ಮೊಗಲ ದರಬಾರಕ್ಕೆ ಕಳಿಸಿದರು, ಆದರೆ, ಪೋರ್ತುಗೀಜರು ಅವರ ಉದ್ದೇಶವನ್ನು ಈಡೇರಗೊಡಲಿಲ್ಲ ಮತ್ತೆ **ಸರ್ ಥಾಮಸ್ ರೋ** ಎಂಬ ಚತುರ ರಾಯಭಾರಿಯು, ಬೆಲೆಯುಳ್ಳ ಕಾಣಿಕೆಯೊಡನ ಬಾದಶಹನನ್ನು ಕಂಡನು, ಆತನ ಮನವೊಲಿಸಿ, ಎಲ್ಲಿ ಬೇಕಾದಲ್ಲಿ, ವ್ಯಾಪಾರ ಮಾಡಬಹುದೆಂಬ ಅಪ್ಪಣೆಯನ್ನು ಪಡೆದನು ಅಹಮದಾಬಾದ, ಸುರತ, ಭಡೋಚ, ಮಚ್ಛಲೀಪಟ್ಟಣ ಮುಂತಾದ ಊರುಗಳಲ್ಲಿ ಇಂಗ್ಲಿಷರು ವ್ಯಾಪಾರಕೇಂದ್ರಗಳನ್ನು ಸ್ಥಾಪಿಸಿದರು

**ಶಾಹೇಜಹಾನನ ಬಂಡು** – ನೂರಜಹಾನಳು ಒಬ್ಬ ಮಹತ್ವಾಕಾಂಕ್ಷಿಣಿ ತನ್ನ ಮೊದಲಿನ ಗಂಡನಿಂದಾದ ಮಗಳನ್ನು ಶಹರಿಯಾರನಿಗೆ ಕೊಟ್ಟು, ಅವನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಲು ಹವಣಿಸಿದಳು ಇದರಿಂದ ಶಾಹೇಜಹಾನನು ಬಂಡನ್ನು ಹೂಡಿದನು, ಆದರೆ, ನೂರಜಹಾನಳ ಸೈನ್ಯದ ಮುಂದೆ ಅವನ ಆಟ ಸಾಗಲಿಲ್ಲ ಈ ಅಂತಃಕಲಹದಿಂದ ಜಹಾಂಗೀರನ ಮನಸ್ಸಿಗೆ ತಾಪವೆನಿಸಿತು ಅವನ ಪ್ರಕೃತಿ ಕೆಟ್ಟು ೧೬೨೭ರಲ್ಲಿ ಮರಣ ಹೊಂದಿದನು ನೂರಜಹಾನಳು ಹೃದ್ರೋಗದಿಂದ ಸತ್ತಳು ಶಾಹೇಜಹಾನನು ಪಟ್ಟವೇರಿದನು

**ಜಹಾಂಗೀರನ ಯೋಗ್ಯತೆ** – ಜಹಾಂಗೀರನು ಬುದ್ಧಿವಂತ, ಶೂರ, ಆದರೆ ವಿಲಾಸಿ ಅವನು ಸ್ವತಃ ಸುಪ್ರಸಿದ್ಧ ಚಿತ್ರಗಾರನೂ ಗಾಯಕನೂ ಆಗಿದ್ದನು ಎಲ್ಲರಿಗೂ ನ್ಯಾಯವನ್ನು ಬೇಡಲು ಅನುಕೂಲವಾಗಬೇಕೆಂದು ದರಬಾರದ ಹೊರಮಗ್ಗಲು ಚಿನ್ನದ ಸರಪಳಿಯ ಗಂಟೆಯನ್ನು ತೂಗುಬಿಡಿಸಿದ್ದನು ನ್ಯಾಯವನ್ನು ಬೇಡುವವರು ಅದನ್ನು ಬಾರಿಸಬಹುದಿತ್ತು ಜಗಳಕ್ಕೆ ಆಸ್ಪದವೇ ಇರುತ್ತಿರಲಿಲ್ಲ, ಆದರೆ ಅವನ ವಿಲಾಸಪ್ರಿಯತೆಯಲ್ಲಿ ಅವನ ಆಳಿಕೆಯು, ಮೊಗಲ ಸಾಮ್ರಾಜ್ಯದ ಏಳ್ಗೆಗೆ ಹೆಚ್ಚು ಆಸ್ಪದ ಕೊಡಲಿಲ್ಲ ಈತನ ಕಾಲದಲ್ಲಿ ಇದ್ದ **ತುಳಸೀದಾಸ ಗೋಸ್ವಾಮಿಯು** ಪ್ರಸಿದ್ಧ ಹಿಂದೀ ಕವಿ ಮತ್ತು ಸತ್ಪುರುಷನಾಗಿದ್ದನು

## ಶಾಹೇಜಹಾನ

**(೧೬೨೭–೧೬೫೮)**

**ಶಾಹೇಜಹಾನನು ಸಿಂಹಾಸನವೇರಿದುದು** — ನೂರಜಹಾನಳ ಆಳಿಕೆಯ ಪರಿಣಾಮವಾಗಿ ಜಹಾಂಗೀರನ ಮಕ್ಕಳೆಲ್ಲ ಎಲ್ಲೆಲ್ಲಿಯೋ ನೆಲೆಸಿದ್ದರು. ಶಾಹೇಜಹಾನನು ದಕ್ಷಿಣದಲ್ಲಿದ್ದನು ಬಾದಶಹನ ಮರಣವಾಗುತ್ತಲೇ

ನೂರಜಹಾನಳ ಅಣ್ಣನಾದ ಅಸಫಖಾನನು ಸಿಂಹಾಸನದ ನಿಷ್ಠೆಯಿಂದ ಶಾಹೇ ಜಹಾನನನ್ನು ಕರೆಕಳುಹಿದನು ಶಾಹೇಜಹಾನನು ದಿಲ್ಲಿಗೆ ಬಂದನು, ಮಾವನ ನೆರವಿನಿಂದಲೇ ಸಿಂಹಾಸನವನ್ನು ಏರಿದನು ಪಟ್ಟಾಭಿಷೇಕವನ್ನು ಅತಿ ವೈಭವದಿಂದ ನೆರವೇರಿಸಿದನು ಅನೇಕ ಪಂಡಿತರಿಗೂ ಶೂರ ಸರದಾರರಿಗೂ ನೆರವಿಗರಿಗೂ ಶ್ರೇಷ್ಠ-ಕಾಣಿಕೆಗಳನ್ನು ಕೊಟ್ಟನು


ಶಾಹೇಜಹಾನ

**ಶಾಹೇಜಹಾನನ ಸದ್ಗುಣಗಳು** — ಶಾಹೇ-ಜಹಾನನಿಗೆ ಎಳತನದಲ್ಲಿಯೇ ಒಳ್ಳೆಯ ಶಿಕ್ಷಣವು ಸಿಕ್ಕಿತ್ತು, ಮತ್ತು ಸ್ವಭಾವತಃ ಶೂರನು ಈತನು ವಿಲಾಸ-ವೈಭವಗಳಿಗೆ ಮನಸೋಲದಿದ್ದರೆ ಅಕಬರನಿಗಿಂತಲೂ ಹೆಚ್ಚಾಗಿ ಹೆಸರಾಗಬಹುದಿತ್ತು ತಂದೆಯ ಕಾಲದ ಅವ್ಯವಸ್ಥೆಯನ್ನು ಅಡಗಿಸುವುದರಲ್ಲಿಯೇ ಈತನ ಆಳಿಕೆ ಮುಗಿಯಿತು ಅಲ್ಲದೆ, ಮಗನಾದ ಔರಂಗಜೇಬನ ಮಹತ್ವಾಕಾಂಕ್ಷೆಯೂ ಈತನಿಗೆ ಮುಳುವಾಯಿತು

**ಪೋರ್ತುಗೀಜರನ್ನು ಹೊರಗೆ ಹಾಕಿದುದು** — ಹುಗಳಿಯಲ್ಲಿ ೧೫೭೫ರ ಸುಮಾರಿಗೆ ಠಾಣ್ಯವನ್ನು ಹಾಕಿದ್ದ ಪೋರ್ತುಗೀಜರು, ಜಹಾಂಗೀರನ ಆಳಿಕೆಯ ಅವ್ಯವಸ್ಥೆಯಲ್ಲಿ ಸ್ವತಂತ್ರರಾಗಿಯೇ ವರ್ತಿಸಹತ್ತಿದರು ಬರುಹೋಗುವ ಸರಕುಗಳ ಮೇಲೆ ಸುಂಕವನ್ನು ತೆಗೆದುಕೊಳ್ಳತೊಡಗಿದರು ಆಮೇಲೆ ಬಂಗಾಲ ಉಪಸಾಗರದಲ್ಲಿ ಪ್ರವಾಸಮಾಡುವ ಹಿಂದೂ-ಮುಸಲ್ಮಾನರನ್ನು ಹಿಡಿದು ಕ್ರಿಶ್ಚಿಯನ್ ಧರ್ಮದೀಕ್ಷೆಕೊಡುವ ಮತ್ತು ಕೆಲವರನ್ನು ಗುಲಾಮರಂತೆ ಮಾರಾಟಮಾಡುವ ದುಷ್ಟವ್ಯವಹಾರಕ್ಕೆ ಕೈಹಾಕಿದರು ಈ ಎಲ್ಲ ಕಾರಣಗಳಿಂದ ಬಾದಶಹನು ಹುಗಳಿಯ ಮೇಲೆ ದಂಡೆತ್ತಿ ಹೋಗಿ ಅವರನ್ನೆಲ್ಲ ಸೆರೆಯಲ್ಲಿಟ್ಟನು

**ಮುಮತಾಜಳ ಮರಣ** — ಶಾಹೇಜಹಾನನಿಗ **ಮುಮತಾಜ** ಎಂಬ ಪ್ರೀತಿಯ ಪತ್ನಿಯಿದ್ದಳು ಈಕೆ ೧೬೩೧ರಲ್ಲಿ ಮಡಿದಳು ಶಾಹೇಜಹಾನನಿಗೆ ಸಂಸಾರವೆಲ್ಲ ಶ್ಮಶಾನದಂತೆ ತೋರಹತ್ತಿತು ಮುಂದೆ ಆಕೆಯ ಇಚ್ಛೆಯಂತೆ ಯಮುನಾನದಿಯ ದಂಡೆಯ ಮೇಲೆ ಗೋರಿಯನ್ನು ಮಾಡಿ, ಅದರ ಮೇಲೆ **ತಾಜಮಹಾಲ** ಎಂಬ ಜಗದ್ವಿಖ್ಯಾತ ಸ್ಮಾರಕಮಂದಿರವನ್ನು ಕಟ್ಟಿಸಿದನು ಅದಕ್ಕೆ ನಾನಾ ರಾಷ್ಟ್ರಗಳ ಕಲೆಗಾರರನ್ನು ಕರಯಿಸಿದನು ಅದನ್ನು ಕಟ್ಟಲು ಇಪ್ಪತ್ತುಸಾವಿರ ಜನರು ಸತತವಾಗಿ ೨೦ ವರುಷ ದುಡಿದರಂತೆ ಸುಮಾರು

೯ ಕೋಟಿ ರೂಪಾಯಿ ವೆಚ್ಚವಾಯಿತಂತೆ ಬಿಳಿಯ ಸಂಗಮರವರಿ ಕಲ್ಲಿನಿಂದ ಕಟ್ಟಿದ ಆ ಮಂದಿರವು ಹಾಲ್ಗಡಲಿನಿಂದ ಹೊರಬಂದಂತೆ, ಅಥವಾ ಬೆಳುದಿಂಗಳ ಲೋಕದಿಂದ ಭೂಮಿಗೆ ಬಿದ್ದಂತೆ ತೋರುತ್ತದೆ



ತಾಜಮುಹಾಲ, ಆಗ್ರಾ

**ಶಾಹೇಜಹಾನ ನಗರ** — ಶಾಹೇಜಹಾನನಿಗೆ ಕಟ್ಟಡಗಳನ್ನು ಕಟ್ಟಿಸುವ ಹವ್ಯಾಸ ಹೆಚ್ಚು ಅದಕ್ಕಾಗಿ ದಿಲ್ಲಿಯ ಹತ್ತಿರ ವೈಭವಪೂರ್ಣವಾದ ನಗರ ವನ್ನು ಕಟ್ಟಿಸಿ, ಅದಕ್ಕೆ **ಶಾಹೇಜಹಾನಾಬಾದ** ಎಂಬ ಹೆಸರನ್ನಿಟ್ಟನು

**ಮಯೂರಾಸನ** — ಶಾಹೇಜಹಾನನಿಗೆ ಮುತ್ತು-ಮಾಣಿಕಗಳ ಮೇಲೆ ಪ್ರೀತಿ ಬಹಳ ಭಂಡಾರದ ಎಲ್ಲ ರತ್ನಗಳನ್ನು ಉಪಯೋಗಿಸಿ, ೧೬೩೪ರಲ್ಲಿ ಮಯೂರ ಸಿಂಹಾಸನವನ್ನು ಕಟ್ಟಿಸಿದನು ಅದು ಗರಿಗೆದರಿ ನಿಂತ ನವಿಲಿನ ಆಕೃತಿಯಲ್ಲಿದೆ ಅದರ ವೈಭವವನ್ನು ಪರದೇಶದ ಪ್ರವಾಸಿಗಳು ಮನವಾರೆ ಬಣ್ಣಿಸಿದ್ದಾರೆ

**ಸುಂದರ ಶಿಲ್ಪಕೃತಿಗಳು** — ದಿವಾನ-ಈ-ಖಾಸ ಎಂಬ ಶಾಹೇಜಹಾನನ ದರಬಾರಗೃಹವು ಆತನ ವೈಭವದ ಪ್ರತೀಕವಾಗಿಯೇ ಸಿದ್ಧವಾಗಿತ್ತು ಅದರ ಮಹಾದ್ವಾರದ ಮೇಲೆ, "ಭೂಲೋಕದಲ್ಲಿ ಸ್ವರ್ಗ ಒಂದಿದ್ದರೆ ಅದು ಇದು, ಅದು ಇದು, ಅದು ಇದು," ಎಂದು ಬರೆದಿದೆ ಇದರಂತೆಯೇ ರಂಗಮಹಾಲ, ಶಾಹಬುರ್ಜ್, ಜುಮ್ಮಾಮಸೀದೆ ಮೊದಲಾದುವೂ ದಿಲ್ಲಿಯಲ್ಲಿಯ ಹೆಸರಾದ ಕಟ್ಟಡಗಳೇ ಆಗ್ರಾದಲ್ಲಿಯ ಮೋತೀಮಸೀದೆಯನ್ನು ಕಟ್ಟಿಸಿದವನು ಶಾಹೇಜಹಾನನೇ ಈ ಎಲ್ಲ ಕಟ್ಟಡಗಳನ್ನು ಕಟ್ಟಿಸಿರುವ ಕಾರಣದಿಂದ ಬಾದಶಹನಲ್ಲಿ ಸೌಂದರ್ಯ ಪ್ರೀತಿಯು ಎಷ್ಟಿದ್ದಿತೆಂಬುದನ್ನು ಸಹಜವಾಗಿಯೇ ಕಲ್ಪಿಸಬಹುದು ಈ ರೀತಿಯಾಗಿ ಬಾದಶಹನ ಅರ್ಧ ಆಯುಷ್ಯವೆಲ್ಲ ಕಲೋಪಾಸನೆಯಲ್ಲೇ ಕಳೆಯಿತು ಆದರೆ ಅವನ ಇಳಿವಯಸ್ಸಿನಲ್ಲಿ ಮಕ್ಕಳಿಂದಲೇ ಬಹಳ ಕಷ್ಟವು ಉಂಟಾಯಿತು

**ಶಾಹೇಜಹಾನನ ಮಕ್ಕಳು** — ಶಾಹೇಜಹಾನನಿಗೆ **ದಾರಾ, ಸೂಜಾ, ಔರಂಗಜೇಬ** ಮತ್ತು **ಮುರಾದ** ಎಂಬ ನಾಲ್ಕು ಜನ ಗಂಡುಮಕ್ಕಳು, ಮತ್ತು ಜಹಾನ್‌ಆರಾ, ರೋಶನಾಅರಾ ಎಂಬ ಇಬ್ಬರು ಹೆಣ್ಣುಮಕ್ಕಳು ಇದ್ದರು ಇವರೆಲ್ಲರಿಗೆ ಆ ಕಾಲದ ಶಿಕ್ಷಣವು ಸರಿಯಾಗಿಯೇ ಸಿಕ್ಕಿತ್ತು ಎಲ್ಲ ಮಕ್ಕಳೂ ಯುದ್ಧವಿದ್ಯೆಯಲ್ಲಿ ನಿಪುಣರು

**ದಾರಾನ ದೊಡ್ಡಸ್ತಿಕೆ** — ಇವರೆಲ್ಲರಲ್ಲಿ ದಾರಾನು ಹೆಚ್ಚು ವಿದ್ಯಾವಂತನೂ ಶೂರನೂ ಆಗಿದ್ದನು ಹಿಂದುಧರ್ಮದಲ್ಲಿ ಅವನಿಗೆ ತುಂಬಾ ಗೌರವ, ಪ್ರೀತಿ, ಸಂಸ್ಕೃತದಲ್ಲೂ ಪಾರ್ಸಿ ಭಾಷೆಯಲ್ಲೂ ಪಾಂಡಿತ್ಯವಿತ್ತು ಮೇಲಾಗಿ ಹಿರಿಯ ಮಗನು ಆದುದರಿಂದ ಅವನೇ ಸಿಂಹಾಸನಕ್ಕೆ ಬರಬೇಕೆಂದು ಬಾದಶಹನ ಇಚ್ಛೆ

**ಮಕ್ಕಳಿಗೆ ಅಧಿಕಾರ** - ಬಾದಶಹನು ಸೂಜಾನನ್ನು ಬಂಗಾಲದ ಸುಭೇದಾರನನ್ನಾಗಿಸಿದ್ದನು ಮುರಾದನನ್ನು ಗುಜರಾಥಕ್ಕೂ, ಔರಂಗಜೇಬನನ್ನು ದಕ್ಷಿಣಕ್ಕೂ, ದಾರಾನನ್ನು ಕಾಬೂಲ, ಪಂಜಾಬಗಳಿಗೂ ಸುಭೇದಾರರನ್ನು ಮಾಡಿದ್ದನು

**ದಕ್ಷಿಣದಲ್ಲಿ ಔರಂಗಜೇಬನ ಆಧಿಪತ್ಯ** — ಔರಂಗಜೇಬನು ದಕ್ಷಿಣದ ಸರದಾರನಾದ ಮೇಲೆ ಭೂಮಿಯನ್ನು ಅಳೆಸಿ ತೆರಿಗೆಯ ವ್ಯವಸ್ಥೆ ಮಾಡಿದನು. ಒಕ್ಕಲುತನಕ್ಕೆ ಸಹಾಯಮಾಡಿ ಉತ್ಪನ್ನವನ್ನು ಹೆಚ್ಚಿಸಿಕೊಂಡನು ವಿಜಾಪುರ ಗೋವಳಕೊಂಡ ಬೀದರ ಕಲ್ಯಾಣಗಳನ್ನು ಗದ್ದು ವಶಕ್ಕೆ ತೆಗೆದುಕೊಂಡನು.

**ಶಾಹೇಜಹಾನನ ಅಸ್ವಸ್ಥತೆ** — ಇಷ್ಟರಲ್ಲಿ ಶಾಹೇಜಹಾನನಿಗೆ ಅಸ್ವಸ್ಥತೆಯುಂಟಾಯಿತು ಆ ಕಾಲಕ್ಕೆ ದಾರಾನ ಹೊರತು ಉಳಿದ ಮಕ್ಕಳಾರೂ

ಆಗ್ರಾದಲ್ಲಿರಲಿಲ್ಲ ದಾರಾನೇ ತಂದೆಯ ಆರೈಕೆ ಮಾಡುತ್ತಿದ್ದನು ಅಸ್ವಸ್ಥತೆಯ ಸುದ್ದಿ ಗುಪ್ತವಾಗಿತ್ತು ಆದರೂ ಹೇಗೋ ಬೈಲಿಗೆ ಬಂದಿತು ಅಲ್ಲಲ್ಲಿ ಆಳುತ್ತಿದ್ದ ಮಕ್ಕಳು ತಾವೇ ಸ್ವತಂತ್ರ ಬಾದಶಹರೆಂದು ಸಾರಿದರು ಔರಂಗ-ಜೇಬನು ಮಾತ್ರ ಹೆಚ್ಚು ಗಡಿಬಿಡಿ ಮಾಡಲಿಲ್ಲ, ದಾರಾನ ಧರ್ಮದೃಷ್ಟಿಯು ವಿಶಾಲವಾಗಿದ್ದುದರಿಂದ ಅವನನ್ನು ದ್ವೇಷಿಸುತ್ತಿದ್ದನು 'ನಿನ್ನನ್ನೇ ಬಾದಶಹನನ್ನು ಮಾಡುವೆ' ಎಂದು ಮುರಾದನನ್ನು ಹುರಿದುಂಬಿಸಿ ದಾರಾನ ವಿರುದ್ಧ ಎಬ್ಬಿಸಿದನು ಇಬ್ಬರೂ ಕೂಡಿ ಆಗ್ರಾಕ್ಕೆ ಬಂದರು ದಾರಾನ ಕಡೆಯ ಯಶವಂತಸಿಂಗನಿಗೂ ಮುರಾದ ಮತ್ತು ಔರಂಗಜೇಬನ ದಂಡಿನವರಿಗೂ ಕಾಳಗವಾಯಿತು ದಾರಾನ ದಂಡಿನವರಿಗ ಸೋಲಾಯಿತು ದಾರಾನು ದಿಲ್ಲಿಗೆ ಓಡಿದನು ಅವನನ್ನು ಔರಂಗಜೇಬನು ಸೆರೆಹಿಡಿದು ಕೊಂದು-ಬಿಟ್ಟನು

**ಔರಂಗಜೇಬನಿಗೆ ಅಧಿಕಾರ ಸಿಕ್ಕಿತು** – ಮುರಾದ-ಔರಂಗಜೇಬರು ಆಗ್ರಾವನ್ನು ಹೊಕ್ಕರು ಔರಂಗಜೇಬನು ಮುರಾದನನ್ನು ಅರಸೊತ್ತಿಗೆಯ ಮಬ್ಬಿನಲ್ಲಿಯೇ ಇಟ್ಟು, ಸಿಂಹಾಸನವನ್ನು ಆಕ್ರಮಿಸುವ ಹೊಂಚನ್ನು ನಡೆಯಿಸಿದನು ಸಮಯವನ್ನು ಸಾಧಿಸಿ ಶಾಹೇಜಹಾನನನ್ನೂ ಮುರಾದನನ್ನೂ ಬೇರೆ ಬೇರೆ ಸೆರೆಮನೆಗಳಿಗ ಸೇರಿಸಿ, ತಾನು ದಿಲ್ಲಿಗ ಹೋಗಿ ಅಧಿಕಾರವನ್ನು ಆಕ್ರಮಿಸಿದನು, **ಅಲಮ್‌ಗೀರ್** ಎಂದರೆ ಜಗತ್ತನ್ನೇ ಗಲ್ಲುವವ— ಎಂಬ ಹೆಸರಿನಿಂದ ಪಟ್ಟಕ್ಕೆ ಕುಳಿತನು

**ಶಾಹೇಜಹಾನನ ಕೊನೆ** — ಔರಂಗಜೇಬನು ದಿಲ್ಲಿಯ ದೊರೆಯಾದುದನ್ನು ಕೇಳಿ ಶಾಹೇಜಹಾನನಿಗೆ ಹುಚ್ಚೇ ಹಿಡಿದಂತಾಯಿತು! ಲಷ್ಕರದಲ್ಲಿ ಔರಂಗಜೇಬನು ಮುರಾದನನ್ನು ಕೊಲ್ಲಿಸಿದ ಸುದ್ದಿಯೂ ಅವನಿಗೆ ತಿಳಿಯಿತು! ಸೂಜಾನ ಕೊಲೆಯಾದುದೂ ಗೊತ್ತಾಯಿತು! ಅವನು ಏಳೆಂಟು ವರ್ಷ ಸೆರೆಯಲ್ಲಿಯೇ ಇದ್ದನು ಕಡೆಗ ಕ್ರಿ ಶ ೧೬೬೬ರಲ್ಲಿ ಮರಣಹೊಂದಿದನು

## ಅಭ್ಯಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ಮಾತಿನಲ್ಲಿ ಉತ್ತರ ಹೇಳಿರಿ

(ಅ) ಜಹಾಂಗೀರನ ಮೊದಲಿನ ಹೆಸರು ಯಾವುದು? ಆ ಹೆಸರನ್ನಿಡಲು ಕಾರಣವೇನು?

(ಆ) ಜಹಾಂಗೀರನಲ್ಲಿದ್ದ ಗುಣಗಳು ಯಾವುವು?

(ಇ) ಶಾಹೇಜಹಾನನ ಸೌಂದರ್ಯಪ್ರೀತಿಯು ಅವನ ಯಾವ ಯಾವ ಕೃತಿಗಳಿಂದ ಗೂತ್ತಾಗುತ್ತದೆ?

(ಈ) ಶೀಖರು ಮೊಗಲರಿಗೆ ಯಾವ ಕಾರಣದಿಂಡ ವೈರಿಗಳಾದರು?

೨ ಕಳಗಿನ ವ್ಯಕ್ತಿಗಳನ್ನು ನೀವು ಮೆಚ್ಚುತ್ತೀರೊ, ತಿರಸ್ಕರಿಸುತ್ತೀರೊ? ಪ್ರತಿಯೊಬ್ಬ ವ್ಯಕ್ತಿಯ ಬಗೆಗೆ ಕಾರಣವನ್ನು ಕೊಟ್ಟು ಎರಡೆರಡು ವಾಕ್ಯಗಳಲ್ಲಿ ಮಾತ್ರ ಉತ್ತರ ಬರೆಯಿರಿ

ಅಬ್ದುರ್ ರಹಮಾನ, ಅಮರಸಿಂಹ, ಮಿಹರ್ ಉನ್ನೀಸಾ, ಸರ್ ಥಾಮಸ್ ರೋ, ತುಳಸೀದಾಸ, ದಾರಾ

೩ ಕಳಗೆ ಕೊಟ್ಟುವುಗಳ ಬಗೆಗೆ ಸಂಕ್ಷಿಪ್ತವಾದ ಟಿಪ್ಪಣಿ ಬರೆಯಿರಿ

ಮಯೂರಾಸನ, ತಾಜಮಹಾಲು, ಜಹಾಂಗೀರನ ನ್ಯಾಯದಾನಪದ್ಧತಿ

# ೧೨ ಔರಂಗಜೇಬ

(೧೬೧೮—೧೭೦೭)

**ಔರಂಗಜೇಬನ ಶಿಕ್ಷಣ** — ಔರಂಗಜೇಬನಿಗೆ ಎಳೆಯತನದಲ್ಲಿಯೇ ಪಾರ್ಸಿ ಹಿಂದೀ ಭಾಷೆಗಳ ಜ್ಞಾನವಾಗಿತ್ತು ಇಸ್ಲಾಂ ಧರ್ಮತತ್ತ್ವಗಳನ್ನು ಅಕ್ಷರಶಃ ಪಾಲಿಸಬೇಕೆಂಬ ಬಯಕ ಇವನದಾಗಿತ್ತು ವಯಸ್ಸಿಗೆ ಬಂದ ಬಳಿಕ ಯುದ್ಧಕಲೆಯಲ್ಲಿಯೂ ಇವನಿಗೆ ಸರಿಯಾಗಿ ಶಿಕ್ಷಣ ಸಿಕ್ಕಿತು ಮತ್ತು ತಂದೆಯು ಇವನ ಶೂರತನವನ್ನು ಕಂಡು, ಇವನನ್ನು ಯುದ್ಧಕ್ಕೆ ಕಳುಹುತ್ತಿದ್ದನು ಹದಿನೈದನೆಯ ವರುಷಕ್ಕೆ ಹತ್ತುಸಾವಿರ ಸವಾರರ ಅಧಿಪತಿಯಾದನು

ಔರಂಗಜೇಬ

**ಬಾದಶಹನಾದ ಮೇಲೆ** — ಇಷ್ಟೆಲ್ಲ ಯೋಗ್ಯತಯಿಂದ ಔರಂಗಜೇಬನು ಭಾಗ್ಯಶಾಲಿ ಬಾದಶಹನೆನಿಸಿಕೊಳ್ಳಬಹುದಿತ್ತು ಇವನು ಜನರ ನೀತಿಯನ್ನು ಸುಧಾರಿಸಬೇಕೆಂದು ಸೆರೆಕುಡಿತ, ಜೂಜು, ಜಾತ್ರೆ, ದೀಪಾವಳಿ, ಮೊಹರಮ್, ಮತ್ತು ಹೋಳಿಹಬ್ಬಗಳನ್ನು ನಿಲ್ಲಿಸಿಬಿಟ್ಟನು ಹಿಂದಿನ ಬಾದಶಹರು ಅನುಸರಿಸುತ್ತಿದ್ದ ಅನೇಕ ಪದ್ಧತಿಗಳನ್ನೂ ಉತ್ಸವಾದಿಗಳನ್ನೂ ಇವನು ನಿಷೇಧಿಸಿದನು ಇವನ ಆಸ್ಥಾನದಲ್ಲಿ ನರ್ತಕರಿಗೂ ಗಾಯಕರಿಗೂ ಚಿತ್ರಕಾರರಿಗೂ ಅವಕಾಶವೇ ಇರಲಿಲ್ಲ ಅರಮನೆಯ ಜ್ಯೋತಿಷಿಗಳೆಲ್ಲರನ್ನೂ ಇವನು ಮನೆಗೆ ಕಳುಹಿಸಿದನು ಆದರೆ, ಇವನಲ್ಲಿದ್ದ ಧರ್ಮದ ದುರಾಗ್ರಹವು ಇವನ ಕೀರ್ತಿಗೆಲ್ಲ ಕಲಂಕ ಹಚ್ಚಿತು! ಇವನಿಂದಾದಷ್ಟು ಹಿಂದುಗಳ ಮತ್ತು ಹಿಂದುತ್ವದ ಹಿಂಸೆ ಬೇರೆ ಯಾರಿಂದಲೂ ಆಗಲಿಲ್ಲ, ಅದರಿಂದ, ಇವನು ಮೇಲೆ ಮೇಲೆ ಸಾಮ್ರಾಜ್ಯವೃಕ್ಷದ ಶಾಖೆಗಳನ್ನು ಬೆಳೆಸುತ್ತಿದ್ದರೂ, ಬೇರುಬೊಡ್ಡೆಗಳಿಗೆ ಗೆದ್ದಲಿ ಹಿಡಿದುವು! ಇವನ ದೇಹ ಬೀಳುವ ಹೊತ್ತಿಗೇ ಸಾಮ್ರಾಜ್ಯವೃಕ್ಷವೂ ಬೀಳುವಂತಾಯಿತು, ಇವನ ತರುವಾಯ ಬೇಗನ ಬಿದ್ದುಹೋಯಿತು!

**ಸಂಶಯ ಸ್ವಭಾವ** — ಔರಂಗಜೇಬನ ಆಸ್ಥಾನಕ್ಕೆ ಇರಾಣ, ಅಬಿಸೀನಿಯಾ, ಕಾನ್‌ಸ್ಟಾಂಟಿನೋಪಲ್, ಬುಖಾರಾ, ಮಕ್ಕಾ ಮುಂತಾದ ರಾಜ್ಯಗಳಿಂದ ರಾಜದೂತರು ಬರುತ್ತಿದ್ದರು ಅವರೆಲ್ಲರನ್ನೂ ಅವನು ಸತ್ಕರಿಸು

ತ್ತಿದ್ದನು ಆದರೆ, ಬಳಗದವರನ್ನು ನಂಬುತ್ತಿರಲಿಲ್ಲ ಅಧಿಕಾರಿಗಳ ಮತ್ತು ಪ್ರಜೆಗಳ ಬಗೆಗೆ ತುಂಬಾ ಸಂಶಯವನ್ನು ತಾಳಿದ್ದನು ತನ್ನ ಮಗನಾದ ಮಹಮ್ಮದನನ್ನು ಈತನು ಸೆರೆಯಲ್ಲಿಟ್ಟನು

**ಹಿಂದುಗಳಿಗೆ ಹಿಂಸೆ** — ಔರಂಗಜೇಬನು ಪಟ್ಟಕ್ಕೆ ಬಂದ ಕೂಡಲೆ, ಅಕಬರನ ಕಾಲದಿಂದ ಮಾಯವಾದ **ಜಿಝಿಯಾ** ಕರವನ್ನು ಮತ್ತೆ ಹೇರಿದನು ಹೊಸ ದೇವಾಲಯಗಳನ್ನು ಕಟ್ಟಗೊಡಲಿಲ್ಲ ಇದ್ದ ದೇವಾಲಯಗಳನ್ನು ಕೆಡಹಿ ಮಸೀದೆಗಳನ್ನು ಮಾಡಿದನು ಸಾಮಾನ್ಯವಾಗಿ, ಹಿಂದುಗಳು ಯಾರೂ ಪಲ್ಲಕ್ಕಿ—ಆನೆ—ಕುದುರೆಗಳ ಮೇಲೆ ಸವಾರಿ ಮಾಡುವಂತಿರಲಿಲ್ಲ ಹಿಂದು-ಗಳನ್ನು ಮುಸಲ್ಮಾನರನ್ನಾಗಿ ಧರ್ಮಾಂತರಿಸುವುದಂತೂ ನಿತ್ಯವೂ ನಡೆದೆ ಇರುತ್ತಿತ್ತು ಹೀಗೆ ಔರಂಗಜೇಬನು ಧರ್ಮದ ದುರಭಿಮಾನದಿಂದ ಹಿಂದೂ ಜನರ ವೈರವನ್ನು ಕಟ್ಟಿಕೊಂಡನು

**ಮೀರಜುಮ್ಲಾನ ಮರಣ** — **ಮೀರಜುಮ್ಲಾ** ಔರಂಗಜೇಬನಿಗೆ ಸಿಂಹಾಸನಾರೋಹಣದಲ್ಲಿ ಬಹಳ ಸಹಾಯಮಾಡಿದ್ದನು, ಉಳಿದ ಕೆಲಸಗಳಲ್ಲಿ ಕೂಡ ಔರಂಗಜೇಬನಿಗೆ ಬಲಗೈಯಂತಿದ್ದನು ಅವನು ೧೬೬೩ರಲ್ಲಿ ಆಸಾಮ-ಕುಚ್ ಬಿಹಾರ ಪ್ರಾಂತಗಳಲ್ಲಿಯ ದಂಗೆಗಳನ್ನು ಅಡಗಿಸಿ ಬರುವಾಗ ಮಡಿದು ಹೋದನು ಇದರಿಂದಂತೂ ಔರಂಗಜೇಬನು ಸಂಪೂರ್ಣವಾಗಿ ಒಂಟಿಗ-ನಾದನೆಂದೇ ಹೇಳಬಹುದು

**ಔರಂಗಜೇಬನ ಆಳಿಕೆ** — ಇವನ ಆಳಿಕೆಯ ಕಾಲವನ್ನು ಸಾಮಾನ್ಯವಾಗಿ ಮೂರು ಭಾಗವಾಗಿ ಮಾಡಬಹುದು (೧) ೧೬೫೮ರಿಂದ ೧೬೬೯ನೆಯ ವರ್ಷದ ವರೆಗೆ ಆಂತರಿಕ ಕಲಹ (೨) ೧೬೬೯ರಿಂದ ೧೬೮೧ರ ವರೆಗೆ ಉತ್ತರ ಭಾರತದ ಸಮಸ್ಯೆಗಳು (೩) ೧೬೮೨ರಿಂದ ಮರಣದ ವರೆಗೆ ಎಂದರೆ ೧೭೦೭ರ ವರೆಗೆ ದಕ್ಷಿಣದ ಸಮಸ್ಯೆಗಳು ಈ ಅವಧಿಗಳಲ್ಲಿ ನಡೆದ ಮಹತ್ತ್ವದ ಸಂಗತಿಗಳನ್ನು ತಿಳಿದುಕೊಳ್ಳುವಾ

**೧೬೫೮ರಿಂದ ೧೬೬೯** — ಈ ಹತ್ತು ವರುಷಗಳಲ್ಲಿ ಮೊದಲಿನ ಎಂಟು ವರುಷ ಶಾಹೇಜಹಾನನು ಬದುಕಿದ್ದನು ಆತನಿರುವವರೆಗೂ ಏನು ಮಾಡು ವುದಕ್ಕೂ ಅಂಜಿಕೆ ಶಾಹೇಜಹಾನನ ಮರಣದ ನಂತರ ಆ ಅಂಜಿಕೆಯು ಇಲ್ಲದಂತಾಯಿತು

**೧೬೬೯ರಿಂದ ೧೬೮೧** — ಈ ಕಾಲದಲ್ಲಿ ಬಹುಶಃ ಧರ್ಮಾಂಧತೆಯ ಕೃತ್ಯಗಳೇ ನಡೆದುವೆನ್ನಬಹುದು ಆ ಕಾಲದಲ್ಲಿ ಮುಸಲ್ಮಾನರು ಧರ್ಮ-ಶಿಕ್ಷಣವನ್ನು ಪಡೆಯುವುದಕ್ಕೆ, ಕಾಶಿ ಮೊದಲಾದ ಸ್ಥಳಗಳಲ್ಲಿ ಬ್ರಾಹ್ಮಣರ ಹತ್ತಿರ ಹೋಗುತ್ತಿದ್ದರು ಔರಂಗಜೇಬನು ಇದನ್ನು ನಿಲ್ಲಿಸಿ ಕಾಶಿಯಲ್ಲಿಯ

ಗುಡಿಗಳನ್ನು ೧೬೭೯ರಲ್ಲಿ ಕೆಡಹಿಸಿದನು ಆ ಮೇಲೆ ಸಣ್ಣ ದೊಡ್ಡ ನೌಕರಿಯಲ್ಲಿದ್ದ ಹಿಂದುಗಳನ್ನು ಕಿತ್ತೊಗೆದನು ಇದನ್ನು ಮಾಡಬಾರದೆಂದು ಶಿವಾಜಿಯು ಔರಂಗಜೇಬನಿಗೆ ಬುದ್ಧಿವಾದದ ಒಂದು ಸುಂದರ ಪತ್ರವನ್ನು ಬರೆದನು ಅದರ ಪರಿಣಾಮವು ಮತ್ತಿಷ್ಟು ದ್ವೇಷದಲ್ಲಿಯೇ ಆಯಿತು. ಇದರಂತೆ ಮುಂದಿನ ಕಾಲದಲ್ಲಿ ಕೂಡ ಜಾಟ ಮತ್ತು ಶೀಖಜನರ ಧರ್ಮ-ಛಲನೆ ನಡೆಯಿತು ಈ ಎಲ್ಲ ಕಾರಣಗಳಿಂದ ಆಡಳಿತದ ಕಾಲವೆಲ್ಲ ಕಾದಾಡುವುದರಲ್ಲಿಯೇ ಹೋಯಿತು

**ಜಾಟರ ದಂಗೆ** — ಮಥುರೆಯಲ್ಲಿ ಕೇಶವ ದೇವಾಲಯವನ್ನು ಕೆಡಹಿ ಮೇಲೆ ಮಸೀದೆಯನ್ನು ಕಟ್ಟಿಸಿದುದೇ ಈ ಜಾಟಜನರ ದಂಗೆಗೆ ಕಾರಣ. **ಗೋಕುಲಜಾಟ** ಎಂಬವನು ಮುಂದಾಳಾಗಿ ದಂಗೆಯನ್ನು ಎಬ್ಬಿಸಿದನು ಬಾದಶಹನ ದಂಡಿನವರು ಅವನನ್ನು ಕೊಂದರು ಆ ಮೇಲೆ ರಾಜರಾಮನೆಂಬ ಜಾಟನಾಯಕನೂ ಮರಣಹೊಂದಿದನು ಅಲ್ಲಿಗೆ ದಂಗೆ ಅಡಗಿತು

**ಶೀಖರ ಬಂಡಾಯ** — ಶೀಖರ ಬಂಡಾಯವೇಳುವುದಕ್ಕೂ ಔರಂಗಜೇಬನ ಧರ್ಮಾಂಧತೆಯೇ ಮುಖ್ಯ ಕಾರಣವಾಯಿತು ಔರಂಗಜೇಬನು ಆ ಧರ್ಮದ ಗುರುಗಳಾದ ಹರಗೋವಿಂದ, ತೇಜಬಹಾದ್ದೂರ, ಎಂಬ ಇಬ್ಬರನ್ನು ಕೊಲ್ಲಿಸಿದನು ಅಲ್ಲಿಗ ಶೀಖರ ಬಂಡಾಯವಡಗಿತು, ಮಾತ್ರ ಮುಂದೆ **ಗುರುಗೋವಿಂದ** ಸಿಂಗನ ಹೊಸ ಕಟ್ಟುಗಳಂತೆ ಅವನ ಉಜ್ವಲನಾಯಕತ್ವದಲ್ಲಿ ಶೀಖರು 'ಸಿಂಹ'ರಾದರು



ಗುರುಗೋವಿಂದ ಸಿಂಗ

**ಜೋಧಪುರದ ಯುದ್ಧ** — ಜಸವಂತಸಿಂಗನು ಜೋಧಪುರದ ಅರಸನು ಔರಂಗಜೇಬನು ಅವನನ್ನು ಖೈಬರ್ ಸುಭೇದಾರನನ್ನಾಗಿ ನಿಯಮಿಸಿದ್ದನು ಜಸವಂತಸಿಂಗನು ಸಾಯಲು ಔರಂಗಜೇಬನು ಜೋಧಪುರದ ರಾಜ್ಯವನ್ನೂ ರಾಜನ ಇಬ್ಬರು ರಾಣಿಯರನ್ನೂ ರಾಜಪುತ್ರನನ್ನೂ ತನ್ನ ವಶಕ್ಕೆ ತೆಗೆದುಕೊಂಡನು. ಕೆಚ್ಚಿ

ದೆಯ ರಜಪೂತರಿಗೆ ಇದನ್ನು ತಡೆಯಲಾಗಲಿಲ್ಲ ದುರ್ಗಾದಾಸ ಸೇನಾವತಿಯು ಬಂಡೆಬ್ಬಿಸಿದನು ಬಾದಶಹನ ಸೈನ್ಯಕ್ಕೂ ಅವನಿಗೂ ಕಾಳಗವೆನಗಿತು ಔರಂಗಜೇಬನ ಮಗ ಅಕಬರ ಎಂಬ ರಾಜಕುಮಾರನು, ರಜಪೂತರ ವಕ್ಷ ವಹಿಸಿ ಅವರೊಂದಿಗೆ ಸೇರಿದನು ಸೇನಾವತಿಯು ರಾಣಿಯರಿಗೆ ಪುರುಷರ ವೇಷ ಹಾಕಿ ಆ ವಂಶವನ್ನೆಲ್ಲ ವಾರುಮಾಡಿ ತಾನು ಸಾಹಸದಿಂದ ಹೋರಾಡ ಹತ್ತಿದನು ಅಷ್ಟರಲ್ಲಿಯೇ ದಕ್ಷಿಣದಲ್ಲಿ ದೊಂಬೆಗಳೆದ್ದುದರಿಂದ ಔರಂಗ ಜೇಬನು ಅತ್ತಕಡಗೆ ಸಾಗಿದನು ಅಂತು ಜಾಟರು, ಶೀಖರು, ರಾಜಪುತ್ರರು ಈ ಮೂರು ಜನಾಂಗದವರೂ ಮೊಗಲ ಸಿಂಹಾಸನದ ಒದ್ಧವೈರಿಗಳಾದರು

**ದಕ್ಷಿಣದ ದಿಗ್ವಿಜಯ—ಶಿವಾಜಿ ಮತ್ತು ಔರಂಗಜೇಬ** —(೧೬೮೧—೧೭೦೭) ಈ ಹೊತ್ತಿಗೆ, ದಕ್ಷಿಣದಲ್ಲಿ ಶಿವಾಜಿಯು ಮುಸಲ್ಮಾನರ ವಿರುದ್ಧ



ಔರಂಗಜೇಬನ ದರಬಾರ ಹಾಗೂ ಶಿವಾಜಿಯು ಭಟ್ಟಿ

ಹಿಂದುಧರ್ಮದ ಧ್ವಜವನ್ನೆತ್ತಿ ನಿಲ್ಲಿಸಲು ಯುದ್ಧದ ಸಿದ್ಧತೆಯನ್ನು ಮಾಡು ತ್ತಿದ್ದನು ಮೊಗಲರಾಜ್ಯದಲ್ಲಿ ಸುಲಿಗೆಯನ್ನು ಸಾಗಿಸಿದ್ದನು ಈತನನ್ನು ಹಣಿಯುವುದಕ್ಕೆ ಔರಂಗಜೇಬನು ಮೊದಲು **ಶಾಯಿಸ್ತೆಖಾನನೆಂಬ** ಶೂರ ಸೇನಾಪತಿಯನ್ನು ಕಳುಹಿದನು ಶಿವಾಜಿಯು ಉಪಾಯದಿಂದ ಅವನ ವಸತಿಯನ್ನು ಹೊಕ್ಕನು ಆಗ ನಡೆದ ಕಾಳಗದಿಂದ ತಪ್ಪಿಸಿಕೊಳ್ಳಲು ಹೋಗಿ, ಶಾಯಿಸ್ತೆಖಾನನು ತನ್ನ ಹೆಬ್ಬೆರಳನ್ನು ಕಳೆದುಕೊಂಡನು ಅಂತೂ ಆತನ ಪ್ರಾಣವುಳಿಯಿತು.

ಆ ಮೇಲೆ ಔರಂಗಜೇಬನು ಜಯಸಿಂಗ ಮತ್ತು ದಿಲೇರಖಾನರೆಂಬ ಸರದಾರರನ್ನು ಕಳುಹಿದನು ಅವರು ಶಿವಾಜಿಯನ್ನು ಮನವೊಲಿಸಿ ದಿಲ್ಲಿಯ ದರಬಾರಕ್ಕೆ ಕರೆತಂದರು, ಆದರೆ ದರಬಾರದಲ್ಲಿ ಆತನಿಗೆ ರಾಜಮರ್ಯಾದೆ ಸಿಕ್ಕಲಿಲ್ಲ ಆದ್ದರಿಂದ ಬಾದಶಹನ ಮಾತಿಗೆಲ್ಲ ಶಿವಾಜಿಯು ಇದಿರುತ್ತರಗಳನ್ನೇ ಕೊಟ್ಟನು ಶಿವಾಜಿಯನ್ನು ಆಗ್ರಾದಲ್ಲಿ ಸೆರೆಯಲ್ಲಿಟ್ಟರು, ಆದರೆ, ಅವನು ಪ್ರಸಂಗಕ್ಕೆ ತಕ್ಕ ಬುದ್ಧಿಯನ್ನು ಉಪಯೋಗಿಸುವುದರಲ್ಲಿ ಎತ್ತಿದ ಕೈ ಮಿಠಾಯಿಬುಟ್ಟಿಯಲ್ಲಿ ಕುಳಿತು ಸೆರೆಮನೆಯಿಂದ ಪಾರಾಗಿ ಹೋದನು ಔರಂಗಜೇಬನಿಗೆ ಮತ್ತೆ ದಿಕ್ಕು ತಪ್ಪಿತು

**ಆದಿಲಶಾಹಿ ಕುತುಬಶಾಹಿಗಳ ನಾಶ** — ಔರಂಗಜೇಬನ ಇಸ್ಲಾಮ್ ಭಕ್ತಿ ಎಷ್ಟು ತೀವ್ರವಾಗಿತ್ತೆಂದರೆ, ಶಿಯಾ ಎಂಬ ಪಂಗಡದ ಮುಸಲ್ಮಾನರನ್ನು ಅವನು ತನ್ನ ಸುನ್ನಿ ಪಂಗಡದಷ್ಟೇ ಗೌರವಿಸಲು ಒಪ್ಪಲಿಲ್ಲ ಶಿಯಾ ಪಂಗಡವನ್ನು ನಿರ್ಮೂಲ ಮಾಡಿ, ಎಲ್ಲೆಲ್ಲೂ ಸುನ್ನಿಪಂಥವನ್ನೇ ಸ್ಥಾಪಿಸಬೇಕೆಂದು ಸಂಕಲ್ಪ ಮಾಡಿದನು ಅದಕ್ಕಾಗಿ ಅವನು ದಕ್ಷಿಣದ ಶಿಯಾ ಪಂಥದ ಶಾಹೀ ರಾಜ್ಯಗಳನ್ನು ಗೆಲ್ಲುವ ಹಂಚಿಕೆಯನ್ನು ನಡೆಸಿದನು ಈ ಕಾಲಕ್ಕೆ ಎನೆಯ ಅಲ್ಲೀ ಆದಿಲಶಹನ ನಾಲ್ಕು ವರ್ಷದ ಮಗನು ಪಟ್ಟದ ಮೇಲಿದ್ದನು ಸರ-ದಾರರೇ ಕಾರಭಾರವನ್ನು ನಾಗಿಸಿದ್ದರು ಔರಂಗಜೇಬನು ಅವರ ಮೇಲೆ ದಂಡೆತ್ತಿಹೋದನು ವಿಜಾಪುರದವರು ಸೋತರು ಶರಣಾಗತರಾದರು ಆದಿಲಶಾಹಿಯು ಮೊಗಲರಾಜ್ಯಕ್ಕ ಸೇರಿತು

ಕುತುಬಶಾಹಿಯ ಅಬ್ದುಲಾ ಹುಸೇನ ಅರಸನಿಗ **ಅಕ್ಕಣ್ಣ ಮಾದಣ್ಣ** ಎಂಬ ಹಿಂದು ಮಂತ್ರಿಗಳಿದ್ದರು ಈ ಮಂತ್ರಿಗಳೂ ಅರಸನೂ ಶಿವಾಜಿಗೆ ಆಗಾಗ ದ್ರವ್ಯಸಹಾಯ ಮಾಡುತ್ತಿದ್ದರು ಗೋವಳಕೊಂಡದಲ್ಲಿ ಹೆಸರಾದ ವಜ್ರದ ಕಣಿಗಳಿವೆಯೆಂದು ಔರಂಗಜೇಬನ ಕೇಳಿಕೆಯಲ್ಲಿತ್ತು ರಾಜನಂತೂ ವಿಲಾಸಿ ಈ ಎಲ್ಲ ಕಾರಣಗಳಿಂದ ಔರಂಗಜೇಬನು ಗೋವಳಕೊಂಡವನ್ನು ಮುತ್ತಿದನು ಅಬ್ದುಲ್‌ರಜಾಕನೆಂಬ ಸೇನಾಪತಿಯು ಮೊಗಲರಿಗೆ ಇದಿರಾಗಿ ಕಾದಿದನು ಕಡೆಗೆ ಕೋಟೆ ಮೊಗಲರ ಕೈಸೇರಿತು ಕುತುಬಶಾಹಿ ಕುಗ್ಗಿತು.

**ಸಂಭಾಜಿಯ ಕೊಲೆ** — ಈ ಹೊತ್ತಿಗೆ ಶಿವಾಜಿಯ ಆಳಿಕ ಮುಗಿದು ಸಂಭಾಜಿಯು ಪಟ್ಟವೇರಿದ್ದನು ಆತನು ತಂದೆಗಿಂತ ಮಿಾರಿದ ಶೂರನು, ಆದರೆ, ಸಹವಾಸದೋಷದಿಂದ ವ್ಯಸನಾಧೀನನಾದನು ಔರಂಗಜೇಬನು ವಿಜಾಪುರದಲ್ಲಿದ್ದುಕೊಂಡು ಸಂಭಾಜಿಯನ್ನು ಹಿಡಿತರಲು ದಂಡು ಕಳಿಸಿದನು ಅದು ತಿಳಿದಿದ್ದರೂ ಸಂಭಾಜಿಯು ವಿಲಾಸದಿಂದ ಇದ್ದನು ಕೊನೆಗೆ ಮೊಗಲ ಸರದಾರರು ಸಂಭಾಜಿಯನ್ನು ಸೆರೆಹಿಡಿದು ತಂದರು, ಔರಂಗಜೇಬನು

ಸಂಭಾಜಿಯ ಕಣ್ಣು ಕಿತ್ತಿಸಿ ಕೊಲ್ಲಿಸಿದನು ಆಮೇಲೆ ರಾಯಚೂರು, ಆದವಾನಿ, ಸೀರಾ, ಬೆಂಗಳೂರು, ಬೆಳಗಾವಿ ಕೋಟೆಗಳನ್ನು ಗೆದ್ದುಕೊಂಡನು

**ಕೊನೆಯ ದಿನಗಳು** —ಬಾದಶಹನ ಆಯುಷ್ಯದ ಕೊನೆಯ ಇಪ್ಪತ್ತೈದು ವರ್ಷಗಳು ಕಷ್ಟದಲ್ಲಿಯೇ ಕಳೆದುವು

(೧) ಅಕಬರನ ಧರ್ಮಸಹಿಷ್ಣುತೆಯ ಉದಾರಧೋರಣೆಯನ್ನು ಬಿಟ್ಟುಕೊಟ್ಟು ಧರ್ಮಾಂಧನಾದುದೇ ಇವನ ಅಳಿಗಾಲದ ಮುಖ್ಯ ಕಾರಣವು, ಇದರಿಂದ ಹಿಂದುಗಳೆಲ್ಲ ಇವನ ವೈರಿಗಳಾದರು

(೨) ದಕ್ಷಿಣ ದಿಗ್ವಿಜಯದ ಭರದಲ್ಲಿ ವಿಜಾಪಂಥದ ಆದಿಲಶಾಹಿ ಕುತುಬಶಾಹಿಗಳನ್ನು ಮುರಿದದ್ದರಿಂದ, ಮರಾಠರಿಗೆ ಅನಾಯಾಸವಾಗಿ ಬಲಗೊಳ್ಳಲು ದಾರಿಮಾಡಿಕೊಟ್ಟಂತಾಯಿತು ಹೀಗೆ ಬಲಗೊಂಡ ಮರಾಠರನ್ನು ಮುರಿಯುವುದು ಮತ್ತಿಷ್ಟು ಕಠಿಣ ಕೆಲಸವಾಯಿತು

(೩) ಔರಂಗಜೇಬನ ಧರ್ಮಾಂಧತೆಯ ಮೂಲಕ, ಮುಸಲ್ಮಾನರಲ್ಲದ ವೀರಾಳುಗಳು ಸೈನ್ಯದಲ್ಲಿ ಸೇರದಂತಾದರು ಆಗ ಅದನ್ನು ಬೆಳೆಸುವುದಕ್ಕೆ ಸಿಕ್ಕವರನ್ನು ಸೈನ್ಯದಲ್ಲಿ ತುಂಬಬೇಕಾಯಿತು ಇದರಿಂದ ಸೈನ್ಯದಲ್ಲಿ ಸಾಮರ್ಥ್ಯ ಕಡಿಮೆಯಾಯಿತು, ಅಲ್ಲದೆ, ಅವರಿಗೆ ಹೆಚ್ಚಾಗಿ ಸವಲತ್ತುಗಳನ್ನು ಕೊಡಲೇ ಬೇಕಾದುದರಿಂದ, ಅವರು ವಿಲಾಸಿಗಳಾದರು ಆ ಸೈನಿಕರು ಶಸ್ತ್ರಾಸ್ತ್ರಗಳನ್ನು ಹೊರಲಿಕ್ಕೆ ಬೇರೆ ಆಳುಗಳನ್ನು ಇಡಹತ್ತಿದರು, ಎಂದ ಮೇಲೆ, ಸ್ವಯಂಧೀರರಾದ ಮರಾಠರ ಇದಿರಿಗೆ ಈ ವಿಲಾಸಿಗಳು ತಡೆಯುವರೆ!

(೪) ಔರಂಗಜೇಬನ ಸಂಶಯವೃತ್ತಿಯೇ ಅವನ ಸರ್ವನಾಶ ಮಾಡಿತು. ಒಬ್ಬನಿಗೆ ಯಾವುದೊಂದು ಕೆಲಸವನ್ನು ಒಪ್ಪಿಸಿ, ಅವನು ಅದನ್ನು ಆರಂಭ ಮಾಡುವುದರೊಳಗೇ ಅದಕ್ಕೆ ಮತ್ತೊಬ್ಬನನ್ನು ನಿಯಮಿಸುತ್ತಿದ್ದನು ಇದರಿಂದ ಆ ಕೆಲಸವು ಆರಂಭಸ್ಥಿತಿಯಲ್ಲಿಯೇ ಉಳಿದು, ವೇಳೆ ಶ್ರಮ ಹಣ ಇವು ವ್ಯರ್ಥವಾಗುತ್ತಿದ್ದುವು

(೫) ಹಿಂದುಗಳನ್ನು ಒಮ್ಮೆಲೆ ನೌಕರಿಯಿಂದ ತೆಗೆದು ಮುಸಲ್ಮಾನರನ್ನು ತುಂಬುವುದರಿಂದ ಸಂಬಳದ ಏರಾಟ ನಡೆಯಿತು ಬೊಕ್ಕಸ ಬರಿದಾಗಹತ್ತಿತು ಆದುದರಿಂದ, ಸಿಕ್ಕವರ ಮೇಲೆ ಸಿಕ್ಕ ರೀತಿಯಲ್ಲಿ ಕರವನ್ನು ಹೇರಿ ಎಲ್ಲರಿಗೂ ಬೇಡವಾಗುವ ಹೊತ್ತು ಬಂದಿತು

**ಮಕ್ಕಳಿಗೆ ಬರೆದ ಮೃತ್ಯುಪತ್ರ** —"ಅಣ್ಣ-ತಮ್ಮಂದಿರೆಲ್ಲ ಒಮ್ಮನದಿಂದ ನಡೆಯಿರಿ ಒಳಜಗಳಗಳಿಂದ ಎಲ್ಲರೂ ರಾಜ್ಯವನ್ನು ಕಳಕೊಳ್ಳುವಿರಿ ನಗುನಗುತ್ತಲೇ ಎಲ್ಲ ರಾಜ್ಯವನ್ನು ಸರಿಯಾಗಿ ಹಂಚಿಕೊಳ್ಳಿರಿ. ನಾನಂತೂ ನನ್ನಲ್ಲಿದ್ದ ದೋಷಗಳ ಫಲಗಳನ್ನು ಕಟ್ಟಿಕೊಂಡು ಹೋಗುತ್ತೇನೆ ದೇವರು

ನನಗ ಯಾವ ಶಿಕ್ಷೆಯನ್ನು ಕೊಡುವನೋ ಗೊತ್ತಿಲ್ಲ ನನ್ನ ಕೆಟ್ಟ ಕೆಲಸಗಳ ಬೆಂಕಿ ನನ್ನನ್ನು ಸುಡುತ್ತಿದೆ ಬರುವಾಗ ನಾನೇನೂ ತಂದಿಲ್ಲ. ಅದರಿಂದ ನನ್ನ ಅಂತ್ಯವಿಧಿ ಅತಿ ಸಾದಾರೀತಿಯಿಂದಲೇ ಆಗಬೇಕು ನಾನು ಕೈಯಿಂದ




ಟೊಪ್ಪಿಗಯನ್ನು ಹೊಲಿದು ಮಾರಿದುದರ ಬೆಲೆ ನಾಲ್ಕು ರೂಪಾಯಿ ಎರಡಾಣೆ ಕುರಾನದ ಪ್ರತಿಗಳನ್ನು ಬರೆದು ಮಾರಿದ ಹಣ ಮುನ್ನೂರು ಅಯ್ದು ರೂಪಾಯಿ

ಇವುಗಳಲ್ಲಿ ಅಂತ್ಯವಿಧಿಯ ಖರ್ಚನ್ನು ಕಳೆದು ಉಳಿದ ಹಣವನ್ನು ಫಕೀರ ರಿಗೆ ದಾನ ಮಾಡಿರಿ”

**ಔರಂಗಜೇಬನ ಅಂತ್ಯ** —(೧೭೦೭) ಹೀಗೆ ಚಿಂತೆಯಲ್ಲಿಯೇ ಇರುವಾಗ ೯೦ ವರ್ಷದವನಾಗಿ ೧೭೦೭ನೆಯ ವರ್ಷ ಮಡಿದನು ಈತನ ಗೋರಿಯನ್ನು, ದೌಲತಾಬಾದದ ಹತ್ತಿರ ಶೇಖಬುರಹಾನುದ್ದೀನ ಎಂಬ ಸಾಧುವಿನ ಗೋರಿಯ ಒಳಿಯಲ್ಲಿ, ಅತ್ಯಂತ ಸಾದಾರೀತಿಯಲ್ಲಿ ಮಾಡಲಾಯಿತು ತರುವಾಯ ಈತನ ಮಕ್ಕಳಲ್ಲಿ ಪಟ್ಟಕ್ಕಾಗಿ ಜಗಳಗಳು ನಡೆದುವು

**ರಾಜ್ಯವಿಸ್ತಾರ ಮತ್ತು ಕಾರಭಾರ** —ಔರಂಗಜೇಬನ ಕಾಲಕ್ಕೆ ಮೊಗಲ ರಾಜ್ಯವು ಮಿತಿಮೀರಿ ಬೆಳೆಯಿತು ಅಫಗಾನಿಸ್ತಾನದಿಂದ ಕನ್ಯಾಕುಮಾರಿಯ ವರೆಗ ಇಡಿಯ ಭಾರತವೇ ಇವನ ಆಳಿಕೆಯಲ್ಲಿ ಬಂದಿತ್ತು ಆಡಳಿತದ ಅನುಕೂಲತೆಗೆ ಅನೇಕ ಸುಭೆಗಳನ್ನು ಮಾಡಿ ಸುಭೇದಾರರಿಗೆ ದಿವಾಣಿ, ಲಷ್ಕರೀ ಅಧಿಕಾರಗಳನ್ನು ಒಪ್ಪಿಸಿದ್ದನು ಗುಪ್ತಪೋಲೀಸರನ್ನು ಎಲ್ಲ ಅಧಿಕಾರಿಗಳ ಮೇಲೆಯೂ ನಿಯಮಿಸಿದ್ದನು ತನ್ನ ಹೆಸರಿನ ನಾಣ್ಯಗಳನ್ನು ಮುದ್ರಿಸಿ ಒಳಕೆಯಲ್ಲಿ ತಂದಿದ್ದನು

**ಧಾರ್ಮಿಕ ವಿಚಾರ** —ಮುಸಲ್ಮಾನ್ ಧರ್ಮಾಚರಣೆಯಲ್ಲಿ ಈತನಿಗೆ ಬಲು ನಂಬಿಕೆ ಕುರಾನಿನಲ್ಲಿ ಹೇಳಿದಂತೆ ನಮಾಜು, ಉಪವಾಸಗಳನ್ನು ತಪ್ಪದೆ ಮಾಡುತ್ತಿದ್ದನು ಕುರಾನಿನ ಆಜ್ಞೆಯಂತೆ ಕೈಕೂಲಿಯನ್ನು ಕೂಡ ಮಾಡುತ್ತಿದ್ದನು ಈತನು ಸುನ್ನೀಪಂಥದವನು, ಅದರಿಂದ ಶಿಯಾಪಂಥದ ಮುಸಲ್ಮಾನರನ್ನು ದ್ವೇಷಿಸುತ್ತಿದ್ದನು

### ಅಭ್ಯಾಸನಗಳು

೧ ಕೆಳಗೆ ಕೊಟ್ಟವುಗಳ ಬಗೆಗೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ

(ಅ) ಔರಂಗಜೇಬನಲ್ಲಿ ಅರಸನಾಗುವ ಯೋಗ್ಯತೆ

(ಆ) ಔರಂಗಜೇಬನು ಮಕ್ಕಳಿಗೆ ಬರೆದ ಮೃತ್ಯುಪತ್ರ

(ಇ) ಶೀಖರ ಒಂಡಾಯ

(ಈ) ಔರಂಗಜೇಬನ ರಾಜ್ಯವಿಸ್ತಾರ

೨. ಔರಂಗಜೇಬನು ಮಾಡಿದ ರಾಜಕೀಯ ತಪ್ಪುಗಳು ಯಾವುವು?

೩ ಮೀರಜುಮ್ಲಾ, ಶಾಯಿಸ್ತೈಖಾನ, ಗೋಕುಲಜಾಟ ಇವರು ಯಾರು? ಪ್ರತಿಯೊಬ್ಬನ ಬಗೆಗೆ ಎರಡೆರಡು ವಾಕ್ಯಗಳನು ಬ್ನರೆಯಿರಿ.

# ೧೩ ಮೊಗಲ ಸಾಮ್ರಾಜ್ಯದ ಸಿಂಹಾವಲೋಕನ

(೧೭೦೭-೧೮೫೭)

**ಪಟ್ಟಕ್ಕಾಗಿ ಜಗಳ** — ಔರಂಗಜೇಬನು ಮೊಗಲಸಾಮ್ರಾಜ್ಯವೃಕ್ಷವನ್ನು ಭಾರತದ ತುಂಬ ಬೆಳೆಸಿದನು ಇವನ ಮರಣದ ಕಾಲಕ್ಕೆ ರಾಜ್ಯದಲ್ಲೆಲ್ಲ ಬಂಡುಗಳು ಏಳುವಂತಾಗಿತ್ತು ಬಾದ-ಶಹನ ಮಕ್ಕಳು ಪಟ್ಟದ ಬಾಧ್ಯತೆಯ ಸಲುವಾಗಿ ತಮ್ಮತಮ್ಮೊಳಗೆ ಬಡಿದಾಡಿ ಸತ್ತರು ಮಯೂರಸಿಂಹಾಸನದ ಮೇಲೆ ಕುಳಿತ ಕೊನೆಯ ಅರಸನೆಂದರೆ ಮುಹಮ್ಮದಶ-ಹನೇ ಈ ಕಾಲದಲ್ಲಿ **ನಿಜಾಮುಉಲ್ಮುಲ್ಕನು** ಒಳ್ಳೆಯ ಮಂತ್ರಿಯೆಂದು ಹೆಸರಾಗಿದ್ದನು, ಆದರೆ, ಬಾದಶಹನಿಗೂ ಅವನಿಗೂ ಕೂಡಿ ನಡೆಯಲಿಲ್ಲ ಅದರಿಂದ ನಿಜಾಮುಉಲ್ಮುಲ್ಕನು ದಕ್ಷಿಣಕ್ಕೆ ಬಂದು, ಹೈದರಾಬಾದ್ ಸಂಸ್ಥಾನವನ್ನು ಸ್ಥಾಪಿಸಿಕೊಂಡನು



ನಾದಿರಶಹ

**ನಾದಿರಶಹನ ದಾಳಿ** — ಈ ಕಾಲಕ್ಕೆ ಇರಾಣದ ಅರಸನಾದ **ನಾದಿರಶಹನು**, ಆಗ್ರಾದ ಮೇಲೆ ದಾಳಿ ಮಾಡಿದನು (೧೭೩೯) ಮೊಗಲರ ಸೈನ್ಯವು ಅವನ ಹೊಡೆತಕ್ಕೆ ಈಡಾಗಲಿಲ್ಲ ಮುಹ-ಮ್ಮದಶಹನು ಒಪ್ಪಂದ ಮಾಡಿಕೊಂಡನು ಇಬ್ಬರೂ ದಿಲ್ಲಿಗೆ ಬಂದರು! ನಾದಿರಶಹನು ಮಯೂರಸಿಂಹಾಸನವನ್ನೂ ೭೦ ಕೋಟಿ ರೂಪಾಯಿಗಳನ್ನೂ ತೆಗೆದುಕೊಂಡು ಇರಾಣಕ್ಕೆ ನಡೆದನು

**ಮೊಗಲ ಸಾಮ್ರಾಜ್ಯ ಮುಳುಗಿತು** — ತರುವಾಯ ಮತ್ತೆ ಕೆಲವು ಅರಸರು ಆಳಿದರು ಕೊನೆಯಲ್ಲಿ **೨ನೆಯ ಬಹಾದ್ದೂರ್‌ಶಹನು** ಪಟ್ಟಕ್ಕೆ ಬಂದನು. ಈ ಕಾಲದಲ್ಲಿ ಇಂಗ್ಲಿಷರ ಪ್ರಾಬಲ್ಯ ಭಾರತದಲ್ಲಿ ಹೆಚ್ಚುತ್ತಿತ್ತು ಬಾದಶಹನಿಗೆ ತನ್ನ ಅಜ್ಜ-ಮುತ್ತಂದಿರ ವೈಭವವೆಲ್ಲ ಹಾಳಾದುದರ ಉರಿಯೊಂದು ಕಡೆ, ತಮ್ಮನ್ನು ನಿರ್ನಾಮ ಮಾಡುತ್ತಿರುವ ಇಂಗ್ಲಿಷರ ಮೇಲಿನ ಸೇಡು ತೀರಿಸಿಕೊಳ್ಳುವ ಹಂಬಲ ಮತ್ತೊಂದು ಕಡೆ! ಈ ತಳಮಳದಲ್ಲಿರುವಾಗಲೇ, ಭಾರತದಲ್ಲಿ ೧೮೫೭ನೆಯ ವರುಷ, ಇಂಗ್ಲಿಷರ ವಿರುದ್ಧ ಹಿಂದು-ಮುಸಲ್ಮಾನರು ಒಟ್ಟಾಗಿ ಮೊದಲನೆಯ ಸ್ವಾತಂತ್ರ್ಯಯುದ್ಧವನ್ನು ಸಾರಿದರು. ಸಿಪಾಯಿಗಳ ಬಂಡಾಯವೆಂದು ಅದು ಇತಿಹಾಸ ಪ್ರಸಿದ್ಧವಿದೆ ಬಹಾದ್ದೂರ್‌ಶಹನೂ

ಇದರಲ್ಲಿ ಸೇರಿದ್ದನೆಂದು ಅವನನ್ನು ಪಟ್ಟದಿಂದ ತಳ್ಳಿ ರಂಗೂನಿನಲ್ಲಿ ಸೆರೆಯಿಟ್ಟರು! ಇಲ್ಲಿಗೆ ಮೊಗಲ ಮನೆತನವು ಮುಗಿ‌ತು

ಮೊಗಲ ಬಾದಶಹರು, ಬಾಬರನಿಂದ ಔರಂಗಜೇಬನ ವರೆಗೆ ಸುಮಾರು ಎರಡುನೂರು ವರುಷಗಳ ಕಾಲ ವೈಭವದಿಂದ ಆಳಿದರು ಅವರೆಲ್ಲರ ಶಿಕ್ಷಣ, ಆಡಳಿತ, ಅವರ ಕಾಲದಲ್ಲಿಯ ಸಾಹಿತ್ಯ, ಕಲೆ, ಉತ್ಸವ, ಮುಂತಾದುವುಗಳನ್ನು ನೋಡುವಾ

**(ಅ) ಬಾದಶಹರ ಶಿಕ್ಷಣ** — ಬಾಬರನು ತನ್ನ ಆತ್ಮಚರಿತ್ರೆಯನ್ನು ಹಾಗೂ ಕೆಲವು ಕವನಗಳನ್ನು ಬರೆದಿದ್ದಾನೆ ಹುಮಾಯೂನ, ಜಹಾಂಗೀರ, ಔರಂಗಜೇಬ ಇವರು ಪಾರ್ಸೀ, ತುರ್ಕೀ, ಭಾಷೆಗಳಲ್ಲಿ ವಿದ್ವಾಂಸರು ಔರಂಗಜೇಬನು ನ್ಯಾಯವಿಚಾರಣೆಯ ಬಗೆಗೆ ಒಂದು ಹೊತ್ತಗೆಯನ್ನೇ ಬರೆದಿದ್ದಾನ ಅಕಬರನು ಅಭ್ಯಾಸದಿಂದಲೂ ವಿದ್ವಾಂಸರ ಸಹವಾಸದಿಂದಲೂ ಬಲ್ಲಿದನಾದನು

**(ಆ) ರಾಜ್ಯದಾಡಳಿತ** — ಆಡಳಿತದ ಅನುಕೂಲತೆಗಾಗಿ ಸುಭೆ, ಪರಗಣೆಗಳನ್ನು ಮಾಡಿ ಯೋಗ್ಯ ಅಧಿಕಾರಿಗಳನ್ನು ನಿಯಮಿಸಿದ್ದರು ಔರಂಗಜೇಬನನ್ನು ಬಿಟ್ಟರೆ, ಉಳಿದವರೆಲ್ಲ ರಜಪೂತರೊಡನೆ ಗೆಳೆತನ ಮಾಡಿಕೊಂಡಿದ್ದರು ಅಕಬರನಂತೂ ಅವರೊಡನೆ ಶರೀರಸಂಬಂಧ ಮಾಡಿಕೊಂಡಿದ್ದನು ಅಧಿಕಾರಿಗಳೆಲ್ಲ ಬಾದಶಹನಿಗೆ ಅಂಕಿತರಾಗಿದ್ದರು ಆತನಿಗೆ ಆಲೋಚನೆ ಹೇಳಲು ಕೆಲವೇ ನಂಬಿಗೆಯ ಮಂತ್ರಿಗಳಿದ್ದರು ಬಲಿಷ್ಠವಾದ ಕೇಂದ್ರ ಸರಕಾರವಿತ್ತು ಪ್ರಜಾಪ್ರಭುತ್ವಕ್ಕೆ ಮಾತ್ರ ಅವಕಾಶವಿರಲಿಲ್ಲ

**(ಇ) ಸಾಹಿತ್ಯಕ್ಕೆ ಪ್ರೋತ್ಸಾಹ** — ಇವರಾಳಿಕೆಯಲ್ಲಿ ಹಿಂದೀ, ಪಾರಸೀ ಭಾಷೆಗಳಿಗೆ ಪ್ರೋತ್ಸಾಹ ಸಿಕ್ಕಿತು ಅವೇ ದರಬಾರದ ಭಾಷೆಗಳಾದುವು, ಆದರೆ ಸಂಸ್ಕೃತಕ್ಕೂ ಮನ್ನಣೆಯಿತ್ತು ಅನೇಕ ಉತ್ತಮ ಸಂಸ್ಕೃತ ಗ್ರಂಥಗಳು ಪಾರ್ಸಿಗೆ ಭಾಷಾಂತರಿಸಲ್ಪಟ್ಟುವು ಅಬ್ದುರ್ ರಹಮಾನಾ, ಅಬುಲ್ ಫಜಲ್, ಫೈಜಿ, ತೋಡರಮಲ್, ತುಳಸೀದಾಸ, ಸೂರದಾಸ, ದಾರಾ, ಜಗನ್ನಾಥಕವಿ, ಗಿರಿಧರನಾಥ ಮೊದಲಾದವರು ಉದ್ಗ್ರಂಥಗಳ ರಚನೆ ಮಾಡಿದರು ವಿಜ್ಜಿಕಾ ಎಂಬ ಕವಯಿತ್ರಿಯು "ಆನಂದ ತಿಲಕಾ" ಎಂಬ ಗ್ರಂಥವನ್ನು ಬರೆದಳು

**(ಈ) ಚಿತ್ರ ಹಾಗೂ ಶಿಲ್ಪಕಲೆ** — ದರಬಾರದಲ್ಲಿಯೂ, ಅರಮನೆಗಳಲ್ಲಿಯೂ, ವಿಲಾಸಗೃಹಗಳಲ್ಲಿಯೂ, ಬಗೆಬಗೆಯ ಚಿತ್ರಗಳನ್ನುಬರೆಯಿಸುವುದು ಬಾದಶಹರಿಗೂ ಬೇಗಮರಿಗೂ ಪ್ರೀತಿಯ ವಿಷಯವಾಗಿತ್ತು ಇದಕ್ಕಾಗಿ ಇರಾಣದಿಂದ ಹಾಗೂ ತುರ್ಕಸ್ಥಾನದಿಂದ ಚಿತ್ರಕಾರರನೇಕರು ದಿಲ್ಲಿ ಆಗ್ರಾ

ಗಳಲ್ಲಿ ಬಂದು ನೆಲೆಸಿದರು ಶಿಲ್ಪಕಲೆಯ ದೃಷ್ಟಿಯಿಂದ ತಾಜಮಹಲು ಮೋತೀಮಹಲು, ದಿವಾನ-ಈ-ಖಾಸ್, ರಂಗಮಹಲು ಇವು ಇನ್ನೂ ಜಗತ್ತನ್ನು ಬೆರಗುಗೊಳಿಸುವಂತೆ ನಿಂತಿವೆ ಶಾಹೇಜಹಾನನು ದಿನಾಲು ತನ್ನ ಅರಮನೆಯಲ್ಲಿ ಕುಳಿತು, ಕಿಡಕಿಯ ಮುಖಾಂತರ ತಾಜಮಹಲನ್ನು ನೋಡುತ್ತ ಮೈಮರೆಯುತ್ತಿದ್ದನಂತೆ!

**ಊಟ-ಉಡಿಗೆ** — ಹಿಂದು-ಮುಸಲ್ಮಾನರು ಒಟ್ಟಾಗಿ ಇರಹತ್ತಿದ್ದರಿಂದ ಊಟ-ಉಡಿಗೆ, ಉತ್ಸವ-ಸಮಾರಂಭ, ರೀತಿ-ನೀತಿಗಳಲ್ಲಿ ಒಬ್ಬರೊಬ್ಬರು ಅನುಕರಣ ಮಾಡುವುದು ಸಹಜ ಅಕಬರಬಾದಶಹನು ಎರಡೂ ತರದ ಉಡಿಗೆಗಳನ್ನು ಉಪಯೋಗಿಸುತ್ತಿದ್ದನು ಘೋಷಾಪದ್ಧತಿಯು ಕೆಲವು ಹಿಂದುಜನರಲ್ಲಿ ಸೇರಿಕೊಂಡಿತು ಲಾಹೋರ್ ಡಾಕಾಗಳ ಮಲಮಲಿನ ಬಟ್ಟೆ, ಕಾಶ್ಮೀರದ ಉಣ್ಣೆಯ ಬಟ್ಟೆಗಳು, ಮುಲ್ತಾನದ ಚೀಟುಗಳು ಬಳಕೆಯಲ್ಲಿ ಬಂದುವು ಇರಾಣ, ಚೀನದೇಶಗಳಿಂದಲೂ ಬಟ್ಟೆಗಳು ಬರುತ್ತಿದ್ದುವು ಇಲ್ಲಿಂದ ಪರದೇಶಕ್ಕೆ ಹೋಗುತ್ತಿದ್ದುವು

**ಉತ್ಸವಗಳು** — ಹಿಂದು-ಮುಸಲ್ಮಾನರ ಉತ್ಸವಗಳಲ್ಲಿ ಎಲ್ಲರೂ ಸಮನಾಗಿಯೇ ಭಾಗತೆಗೆದುಕೊಳ್ಳಹತ್ತಿದರು ಅಕಬರನು ಪ್ರತಿವರ್ಷ ನೌರೋಝ, ಎಂಬ ಉತ್ಸವವನ್ನು ನಡೆಸುತ್ತಿದ್ದನು ಆಗ ಹಾಡು-ಕುಣಿತಗಳು ನಡೆಯುತ್ತಿದ್ದುವು ಔರಂಗಜೇಬನು ಸಂಗೀತ, ನರ್ತನಗಳಲ್ಲಿ ಆಸಕ್ತಿ ಇಲ್ಲದವನಿದ್ದರೂ, ಅವನ ಸರದಾರನಾಗಿದ್ದ ಶಾಯಿಸ್ತೆಖಾನನು ದಕ್ಷಿಣಕ್ಕೆ ದಂಡೆತ್ತಿ ಹೋದಾಗ, ನಾಲ್ಕುನೂರು ಜನ ನರ್ತಕಿಯರನ್ನು ಕರೆದೊಯ್ದಿದ್ದನಂತೆ ಹಿಂದುಗಳ ಹರಕೆ, ವ್ರತ-ನಿಯಮಗಳು ಮುಸಲ್ಮಾನರ ಬಳಕೆಯಲ್ಲಿ ಬಂದುವು ಮುಸಲ್ಮಾನರ 'ಮೊಹರಂ' ಮೊದಲಾದ ಹಬ್ಬಗಳಲ್ಲಿ ಹಿಂದುಗಳು ಭಾಗವಹಿಸಹತ್ತಿದರು

**ವ್ಯಾಪಾರ-ಕೈಗಾರಿಕೆ** — ನೇಯ್ಗೆ, ಒಕ್ಕಲುತನ, ರಥಗಳ ರಚನೆ, ಹಡಗುಗಳನ್ನು ಕಟ್ಟುವುದು, ಶಸ್ತ್ರಾಸ್ತ್ರಗಳನ್ನು ತಯಾರಿಸುವುದು ಮೊದಲಾದುವು ಶ್ರೇಷ್ಠವಾಗಿದ್ದುವು ವ್ಯಾಪಾರವಾದರೂ ಏರಿಕೆಯಲ್ಲಿ ಇತ್ತು ಒಳದೇಶದಲ್ಲಿ ರಾಜಮಾರ್ಗಗಳ ಅನುಕೂಲತೆ ಚೆನ್ನಾಗಿತ್ತು ಪೋರ್ತುಗೀಜ ಹಾಗೂ ಇಂಗ್ಲಿಷರ ಕೂಡ ವ್ಯಾಪಾರ ಬೆಳೆಯಿತು ದೂರ ದೇಶದ ಕೂಡ ಹಡಗುಗಳ ಮುಖಾಂತರ ವ್ಯಾಪಾರ ನಡೆದಿತ್ತು

**ಧಾರ್ಮಿಕ ಜೀವನ** — ಮುಸಲ್ಮಾನ್ ಧರ್ಮಕ್ಕೆ ಪ್ರಾಶಸ್ತ್ಯ ಹೆಚ್ಚಾಯಿತು ಕೆಲವು ಮತಾಂತರಗಳು ನಡೆದುವು, ಆದರೆ ಎರಡೂ ಧರ್ಮಗಳನ್ನು ಒಂದುಗೂಡಿಸುವ ಪ್ರಯತ್ನಗಳೂ ಆದುವು ಕಬೀರದಾಸರ 'ಕಬೀರ ಪಂಥ, ಮತ್ತು

ಅಕಬರನ "ದಿನ್-ಇಲಾಹಿ" ಪಂಥ, ಇವು ಇದಕ್ಕೆ ಉದಾಹರಣೆಗಳಾಗಿವೆ' ದಾಸಪಂಥವೂ ಪ್ರಚಾರಕ್ಕೆ ಬಂದಿತು ಭಕ್ತಿಪಂಥಗಳು ಜನಪ್ರಿಯವಾದುವು

ಒಟ್ಟಾರೆ, ಮೊಗಲರ ಕಾಲವು ಕೆಲವು ದೃಷ್ಟಿಗಳಿಂದ ಭಾರತದಲ್ಲಿ ಹೊಸ ಸಂಸ್ಕೃತಿಯನ್ನು ರೂಪುಗೊಳಿಸಿದ ಕಾಲವೆನ್ನಬಹುದು

## ಅಭ್ಯಸನಗಳು

೧ ನಾದಿರಶಹನು ಹಿಂದುಸ್ತಾನದಿಂದ ಇರಾಣಕ್ಕೆ ಏನೇನು ಒಯ್ದನು?

೨ ಮೊಗಲ ಸಾಮ್ರಾಜ್ಯದ ಅಂತ್ಯ ಹೇಗೆ ಆಯಿತು?

೩ ಹೈದರಾಬಾದ್ ಸಂಸ್ಥಾನವನ್ನು ಯಾರು ಸ್ಥಾಪಿಸಿದರು? ಅದಕ್ಕೆ ಕಾರಣ ವೇನಾಯಿತು?

೪ ಮೊಗಲರ ಕಾಲದ (ಅ) ಆಡಳಿತ (ಆ) ಸಾಹಿತ್ಯರಚನೆ ಹಾಗೂ (ಇ) ಶಿಲ್ಪಕಲೆ ಇವುಗಳನ್ನು ತಿಳಿಸುವ ಮೂರು ಮೂರು ವಾಕ್ಯಗಳನ್ನು ಬರೆಯಿರಿ

೫ ಉಡಿಗೆ, ಉತ್ಸವ, ಧಾರ್ಮಿಕ ಜೀವನ ಈ ವಿಷಯಗಳಲ್ಲಿ ಹಿಂದು-ಮುಸಲ್ಮಾನರ ಮೇಲೆ ಪರಸ್ಪರ ಆದ ಪರಿಣಾಮಗಳನ್ನು ಹೇಳಿರಿ

೬ ಮೊಗಲ ಸಾಮ್ರಾಜ್ಯದ ಆಳಿಗಾಲದ ಕಾಲದಲ್ಲಿ ೨ನೆಯ ಬಹಾದ್ದೂರ್‌ಶಹನ ಕನಸಿನಲ್ಲಿ ಬಾಬರನು ಕಾಣಿಸಿಕೊಂಡನೆಂದು ತಿಳಿಯಿರಿ ಅವರಿಬ್ಬರಲ್ಲಿ ಯಾವ ಸಂಭಾಷಣೆ ನಡೆಯಬಹುದು? (ಶಿಕ್ಷಕರು ಅದನ್ನು ವಿದ್ಯಾರ್ಥಿಗಳಿಗೆ ಅಭಿನಯಿಸ ಹಚ್ಚಬೇಕು)

---

# ಮೊಗಲ ಸಾಮ್ರಾಜ್ಯ


ಪ್ರಮಾಣ □ = ೧೦ ವರ್ಷಗಳು
ಕ್ರಿಸ್ತಶಕ ೧೫೦೦
ಖಾನುವಾದ ಕಾಳಗ ರಾಣಾಸಂಗನ ಸೋಲು ೧೫೨೭
೧೫೨೬ ಮೊದಲನೆಯ ಪಾಣಿಪತದ ಯುದ್ಧ- ಬಾಬರ - ಮೊಗಲ ರಾಜ್ಯಸ್ಥಾಪನೆ
೧೫೩೦ ಬಾಬರನ ಮರಣ
ಶೇರಶಹನು ದಿಲ್ಲಿಯನ್ನು ಹಿಡಿದದ್ದು ೧೫೪೦
ಹುಮಾಯೂನನ ಗೋಳಾಟ
ಅಕಬರನ ಜನನ ೧೫೪೨
೧೫೪೫ ಶೇರಶಹನ ಮರಣ
೧೫೫೬ ಹುಮಾಯೂನನು ದಿಲ್ಲಿಯನ್ನು ಮರಳಿ ಗಳಿಸಿದ್ದು - ಅವನ ಮರಣ - ಅಕಬರನ ಸಿಂಹಾಸನಾರೋಹಣ - ಎರಡನೆಯ ಪಾಣಿಪತದ ಯುದ್ಧ
ಬಹಿರಾಮಖಾನನ ಮರಣ ೧೫೬೧
ಹಳದೀಘಟ್ಟದ ಕಾಳಗ
ರಾಣಾ ಪ್ರತಾಪಸಿಂಹನ ಸೋಲು ೧೫೭೬
೧೫೬೮ ಚಿತ್ತೂರಿನ ವಿಜಯ
ಅಹಮದನಗರವನ್ನು ಗೆದ್ದದ್ದು ೧೬೦೧
೧೬೦೨ ಅಬುಲ ಫಸಲನ ಮರಣ
ಅಕಬರನ ಮರಣ
ಜಹಾಂಗೀರನ ಸಿಂಹಾಸನಾರೋಹಣ ೧೬೦೫
೧೬೧೬ ಅಹಮದನಗರದ ಆಕ್ರಮಣ
ಕಾಂಗ್ರಾ ಕೋಟೆಯ ಪತನ ೧೬೨೦
೧೬೨೭ ಜಹಾಂಗೀರನ ಮರಣ - ಶಾಹಜಹಾನನ ಸಿಂಹಾಸನಾರೋಹಣ
ಮುಮತಾಜಳ ಮರಣ ೧೬೩೧
೧೬೪೮ ಕಾಂದಹಾರವನ್ನು ಹಿಡಿದದ್ದು
ಪಟ್ಟಕ್ಕೋಸುಗ ಅಣ್ಣತಮ್ಮಂದಿರಲ್ಲಿ ಯುದ್ಧಗಳು - ಔರಂಗಜೇಬನ ಸಿಂಹಾಸನಾರೋಹಣ ೧೬೫೮
೧೬೬೬ ಶಾಹಜಹಾನನ ಮರಣ
ಶೀಖ ಗುರು ತೇಜಬಹದೂರನ ಕೊಲೆ ೧೬೭೫
೧೬೭೯ ಜೋಧಪುರವನ್ನು ಹಿಡಿದದ್ದು
ದುರ್ಗಾದಾಸನ ಸ್ವಾತಂತ್ರ್ಯಯುದ್ಧ
ಔರಂಗಜೇಬ ರಾಜಾಜಯಸಿಂಗರ ಒಪ್ಪಂದ ೧೬೮೧
೧೬೮೨ ಔರಂಗಜೇಬನ ದಕ್ಷಿಣ ದಂಡಯಾತ್ರೆ
ವಿಜಾಪುರದ ಆಕ್ರಮಣ ೧೬೮೬
೧೬೮೭ ಗೋವಳಕೊಂಡದ ಆಕ್ರಮಣ
ಸಂಭಾಜಿಯ ಕೊಲೆ
ಮರಾಠಾ ಸ್ವಾತಂತ್ರ್ಯಯುದ್ಧ ೧೬೮೯
೧೭೦೭ ಔರಂಗಜೇಬನ ಮರಣ
ಮೊಗಲ ಸಾಮ್ರಾಜ್ಯದ ಅವನತಿ
೧೮೦೦
ಬಹದೂರಶಹನ ಪದಚ್ಯುತಿ
ಮೊಗಲ ಸಾಮ್ರಾಜ್ಯವು ಅಳಿಯಿತು ೧೮೫೭
೧೮೫೭
೧೯೦೦

# ೧೪. ಶೀಖರ ಸಂಕ್ಷಿಪ್ತ ಇತಿಹಾಸ

**ಹೊಸ ಹೊಸ ಪಂಥಗಳು** — ಪರಾಣ ಮತ್ತು ಮೊಗಲ ಅರಸರ ಕಾಲ ದಲ್ಲಿ ಹಿಂದೂ ಮುಸಲ್ಮಾನ ಎರಡೂ ಜನಾಂಗಗಳೂ ಪರಸ್ಪರವಾಗಿ ಒಬ್ಬರ ನ್ನೊಬ್ಬರು ಅರಿತು ಬಾಳಲು ಪ್ರಯತ್ನಿಸಿದರು ಹಿಂದೂ-ಮುಸಲ್ಮಾನರಲ್ಲಿ ಬಾಂಧವ್ಯವನ್ನು ಬೆಳೆಸುವುದಕ್ಕಾಗಿ ಸಾಧು ಕಬೀರ ಮೊದಲಾದವರು ಪ್ರಯತ್ನಪಟ್ಟರು ಇದೇ ಪ್ರಯತ್ನ ದಲ್ಲಿ ಮತ್ತೊಬ್ಬ ಮಹಾಪುರುಷನು ಮುಂದಾದನು ಆತನ ಹೆಸರು ನಾನಕ ಈತನೇ **ಗುರು ನಾನಕ**



ಗುರು ನಾನಕ

**ನಾನಕರ ಕಥೆ** — ಲಾಹೋರ ಜಿಲ್ಲೆಯ ತಾಳವಂಡಿ ಗ್ರಾಮದಲ್ಲಿ, ಕ್ರಿ ಪ ೧೪೬೯ರಲ್ಲಿ ನಾನಕರು ಹುಟ್ಟಿ ದರು

ನಾನಕರು ಎಳತನದಲ್ಲಿ ಮುಗ್ಧ ನಂತೆ ಇರುತ್ತಿದ್ದರು ಬೆಳೆ-ಬೆಳೆದಂತೆ ಯಾವಾಗಲೂ ಯೋಚನಾಪರರಾಗಿ ಕಾಣುತ್ತಿದ್ದರು ಮನೆತನದ ವಿಚಾರ ದಲ್ಲಿ ಅವರ ಲಕ್ಷ್ಯವೇ ಇರಲಿಲ್ಲ ಮಗನು ದುಡಿಯಲೆಂದು ತಂದೆ ಅಂಗಡಿ ಇಟ್ಟುಕೊಟ್ಟನು ಅದನ್ನು ಸರಿಯಾಗಿ ಸಾಗಿಸದಿರಲು ಕಮತವನ್ನು ಮಾಡಿಕೊಟ್ಟನು ಅದನ್ನೂ ನಡೆಸುವುದಾಗಲಿಲ್ಲ! ಮದುವೆ ಮಾಡಿದರೆ ಹಾದಿಗೆ ಬಂದಾನೆಂದು ಅವನಿಗೆ ಮದುವೆ ಮಾಡಿದನು ಆಗಲೂ ಮಗನು ದಾರಿಗೆ ಬರಲಿಲ್ಲ, ಆ ಮೇಲೆಯೂ ಅದೇ ಹಾಡೇ! ಸುಲ್ತಾನಪುರದಲ್ಲಿ ಸರಕಾರೀ ಕೆಲಸವನ್ನು ಹಚ್ಚಿಕೊಟ್ಟನು! ಅದರಲ್ಲಿಯೂ ಆಸ್ಥೆ ಇರಲಿಲ್ಲ ಹಿಂದೂ, ಇಸ್ಲಾಂ ಧರ್ಮಗಳ ತಿರುಳನ್ನು ಆಳವಾಗಿ ಅಭ್ಯಾಸಮಾಡುವು ದೊಂದೇ ಅವರ ಕೆಲಸ! ಹಲವು ವರುಷಗಳ ತಪಸ್ಸಿನ ಫಲವಾಗಿ, ಒಮ್ಮೆ ಎಲ್ಲ ಮಾನವರಿಗಾಗಿ ಸಮಾನ ಧರ್ಮವನ್ನು ಕಂಡುಹಿಡಿದರು ಅಂದೇ ನೌಕರಿಗೆ ಶರಣುಹೊಡೆದು ಸಂನ್ಯಾಸಿಯಾಗಿ ಹೊರಬಿದ್ದರು ಇವರ ಸಂಗಡ **ಮರ್ದಾನ** ನೆಂಬ ಸಂಬಿಗೆಯ ಜೊತೆಗಾರನಿದ್ದನು ಅವನೇ ಮುಂದೆ ನಾನಕರ ಶಿಷ್ಯನಾದನು

**ತತ್ತ್ವಪ್ರಚಾರ** – ನಾನಕರು ತಮ್ಮ ಹೊಸ ಧರ್ಮದ ತತ್ತ್ವವನ್ನು, ಕಿವಿಗೆ ಇಂಪಾಗುವಂತೆ ಹೃದಯದಲ್ಲಿ ನೆಡುವಂತೆ ಪದಗಳ ರೂಪದಿಂದ ಹೇಳುತ್ತಿದ್ದರು ಮರ್ದಾನನು 'ರಿಬೆಕ್' ಎಂಬ ವಾದ್ಯವನ್ನು ನುಡಿಸುತ್ತಿದ್ದನು, ನಾನಕರು ಹಾಡುತ್ತಿದ್ದರು ಈ ಹಾಡುಗಳನ್ನು ಕೇಳಲು ಜನರು ಗುಂಪು-ಗುಂಪಾಗಿ ನೆರೆಯುತ್ತಿದ್ದರು ಈ ಹೊಸ ಧರ್ಮದಲ್ಲಿ ಜಾತಿಭೇದವಿಲ್ಲ, ಕೀಳು-ಮೇಲುಗಳಿಲ್ಲ ನೀತಿವಂತನಾದ ಸರಳಜೀವಿಗೆ ಇಹ-ಪರಗಳಲ್ಲಿ ಸುಖವುಂಟಾಗುವುದು ಪ್ರೇಮವೊಂದೇ ಎಲ್ಲರೂ ಪಾಲಿಸಬೇಕಾದ ತತ್ತ್ವವು ಅದರಿಂದ ಶಿಷ್ಯರ ಸಂಖ್ಯೆ ಮೆಲ್ಲಮೆಲ್ಲಗೆ ಬೆಳೆಯಿತು ನಾನಕರು ಮುಂದೆ ಸಂಚಾರ ಬೆಳೆಸಿದರು

ನಾನಕರು ಮೊದಲು ವೈದಿಕವಿದ್ವಾಂಸರನ್ನು ಹುಡುಕಿಕೊಂಡೇ ಸಂಚಾರಕ್ಕೆ ಹೊರಟರು ಉತ್ತರದಲ್ಲಿ ಬೃಂದಾವನ-ಕಾಶಿಗಳಲ್ಲಿ ವೈದಿಕ ವಿದ್ವಾಂಸರಿದ್ದರು ಅವರೊಡನೆ ನಾನಕರ ಹೊಸ ಧರ್ಮತತ್ತ್ವಗಳ ಚರ್ಚೆ ನಡೆಯಿತು' ಅಲ್ಲಿಯೇ ಕೆಲವು ವಿದ್ವಾಂಸರೂ ನಾಗರಿಕರೂ ಈತನಿಗೆ ಶಿಷ್ಯರಾಗಿ ಸಿಕ್ಕರು ಆ ಮೇಲೆ ಪುರಿ, ರಾಮೇಶ್ವರ ತಿರುಪತಿಗಳಲ್ಲಿ ವಾದ ಮಾಡುತ್ತ, ಶಿಷ್ಯರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತ ಸಿಂಹಳದ್ವೀಪಕ್ಕೂ ಹೋಗಿಬಂದರು' ತರುವಾಯ ಮಕ್ಕಾಯಾತ್ರೆಯನ್ನು ಮಾಡಿ ಮೌಲ್ವಿ-ಕಾಜಿಗಳಿಗೂ ಹೊಸ ಧರ್ಮವನ್ನು ಮನಗಾಣಿಸಿಕೊಟ್ಟು ಮಾತೃಭೂಮಿಗೆ ಮರಳಿದರು

**ಅವರ ತತ್ತ್ವದ ಸೂತ್ರ** – ನಾನಕರು ಹಿಂದೂ-ಮುಸಲ್ಮಾನರ ತಿಕ್ಕಾಟದ ಕಾರಣವನ್ನು ಅರಿತರು ಹಿಂದುಗಳಲ್ಲಿ ಹಲವು ಜಾತಿಭೇದಗಳಿಂದಲೇ ಹಲವು ದೇವತೆಗಳ ಉಪಾಸನೆಯಿಂದಲೇ ಒಕ್ಕಟ್ಟು ಬಿಟ್ಟುಹೋಗಿದೆ, ಎಲ್ಲರೂ 'ತಮ್ಮಷ್ಟಕ್ಕೆ ತಾವು' ಎನ್ನುವ ತಿಳಿವಳಿಕೆಯಲ್ಲಿದ್ದಾರೆ ಇದರಿಂದಲೇ ಬಹು-ಸಂಖ್ಯಾಕ ಸಮಾಜದವರೆಲ್ಲ ತುಂಡು-ತುಂಡಾಗಿ ಅಲ್ಪ ಸಂಖ್ಯಾಕರಾಗಿದ್ದಾರೆ. 'ಏಕೇಶ್ವರವಾದದಿಂದ ಮಹಮ್ಮದೀಯರಲ್ಲಿ ಸಂಘಟನೆ ಹೆಚ್ಚುತ್ತಿದೆ, ಬಂಧು ಭಾವನೆ ಬಲವಾಗುತ್ತಿದೆ' ಎಂದು ಅವರು ತಿಳಿದು, ಹೊಸ ಧರ್ಮವನ್ನು ಮೂರ್ತಸ್ವರೂಪಕ್ಕೆ ತಂದರು ಅದನ್ನು ತಮ್ಮ ಶಿಷ್ಯರಿಗೆಲ್ಲ ಉಪದೇಶಿಸಿದರು ಅದರ ದೀಕ್ಷೆಯನ್ನು ಕೊಟ್ಟರು

**ಪಂಥಪ್ರಚಾರ** — ಆ ಮೇಲೆ ನಾನಕರು ಖರಾತ್‌ಪುರದಲ್ಲಿಯೇ ಆಶ್ರಮವನ್ನು ಸ್ಥಾಪಿಸಿಕೊಂಡು ನಿಂತರು ಅವರನ್ನು **ಗುರು ನಾನಕ** ಎಂದೂ, ಅವರ ಧರ್ಮವನ್ನು **ನಾನಕ ಪಂಥ**ವೆಂದೂ ಕರೆಯಹತ್ತಿದರು ಮರ್ದಾನನು ಪಟ್ಟಶಿಷ್ಯನಾಗಿ ಅವರಲ್ಲಿಯೇ ಇರುತ್ತಿದ್ದನು ಈ ನಾನಕಪಂಥದ ಬೆಳಕು ಬಹು ಬೇಗ ಬಲು ದೂರ ಹಬ್ಬಿತು ಪಂಜಾಬದಲ್ಲಿ ಬಹುಜನರು ಶಿಷ್ಯರಾದರು

ಕೊನೆ-ಕೊನೆಗೆ ಈ ಪಂಥಕ್ಕೆ 'ಶಿಷ್ಯರ ಧರ್ಮ' ಎಂದು ಹೆಸರಾಯಿತು, ಅದನ್ನೇ ನಾವೀಗ 'ಶೀಖ' ಧರ್ಮ ಎನ್ನುತ್ತೇವೆ

**ಶೀಖಪಂಥದ ಸಮಾಲೋಚನೆ** – ಹಿಂದು ಇಸ್ಲಾಂ ಧರ್ಮಗಳ ಸತ್ಯ-ತತ್ತ್ವಗಳನ್ನು ಹೊಂದಿಕೊಂಡು ಇಬ್ಬರಿಗೂ ಸಮೀಪವಾಗಿಯೇ ಇರುವ ಮತವದು ಗುರುನಾನಕರ ಬೋಧದ ಸಾರವೆಂದರೆ "ಜಾತಿಭೇದವನ್ನೆಂದೂ ಎಣಿಸಬೇಡಿರಿ, ಮಾನವರೆಲ್ಲರೂ ಸಮಾನರು ಎಲ್ಲರೂ ಒಬ್ಬರನ್ನೊಬ್ಬರು– ಹಿಂದುವೇ ಇರಲಿ, ಮುಸಲ್ಮಾನನೇ ಇರಲಿ—ಬಂಧುಭಾವದಿಂದ ಕಾಣಬೇಕು ತ್ರಿಕಾಲಗಳಲ್ಲಿಯೂ ದೇವರನ್ನು ಧ್ಯಾನಿಸಿರಿ, ಸರಳವಾದ ಆಚರಣೆಯಿಂದಲೇ ಸುಖವು ಲಭಿಸುವುದು ದೇವರು ಒಬ್ಬನೇ ಆತನೇ ಸತ್ಯ ಆತನೇ ಸೃಷ್ಟಿಕರ್ತ ಆತನಿಗೆ ಎಲ್ಲರೂ ಸಮಾನರು ಆತನ ಆದೇಶಗಳೇನೆಂದರೆ, ಪರೋಪಕಾರ, ಸತ್ಯನಿಷ್ಠೆ, ಸದಾಚಾರ ಪರಸ್ಪರ ಪ್ರೇಮ ಸಹಾನುಭೂತಿ, ಸಹಕಾರ, ಸದುದ್ಯೋಗಗಳು ಪ್ರಪಂಚದಲ್ಲಿದ್ದುಕೊಂಡೇ ಪರಮಾತ್ಮನನ್ನು ಭಜಿಸಿರಿ" ಎಂದು ಗುರು ನಾನಕರು ಉಪದೇಶಿಸುತ್ತಿದ್ದರು, ಅದರಂತೆ ಆಚರಿಸುತ್ತಿದ್ದರು ಇದರಿಂದ ಅಲ್ಪಕಾಲದಲ್ಲಿಯೇ ಶೀಖಧರ್ಮವು ಬೆಳೆಯಿತು

**ಶೌರ್ಯೋಪಾಸನೆ** —ಗುರು ನಾನಕರ ಕಾಲದಲ್ಲಿ ಶೀಖಧರ್ಮವು ಎಷ್ಟೇ ಹೆಚ್ಚಾದರೂ ಶೀಖರು ಈಗ ಅರ್ಧಕೋಟಿಗೆ ಮಿಕ್ಕಿಲ್ಲ ಅಲ್ಲದೆ ಶೀಖರ ವಸತಿಯೆಲ್ಲ ಪಂಜಾಬದಲ್ಲಿ ಅಥವಾ ವಾಯುವ್ಯ ಭಾಗದಲ್ಲಿ ಅದೆಲ್ಲ ಮುಸಲ್ಮಾನರಿಂದ ಸುತ್ತುವರಿಯಲ್ಪಟ್ಟಿದೆ ಮುಸಲ್ಮಾನರಿಗೆ ತಮ್ಮ ಖಲೀಫರ ವಚನದಷ್ಟು ಮಹತ್ತ್ವವು ನಾನಕರ ಪಂಥದಲ್ಲಿ ಕಾಣಲಿಲ್ಲ ಬಾಬರಶಹನ ಕಾಲಕ್ಕೆ ಗುರು ನಾನಕರೇ ತುರಂಗವಾಸವನ್ನು ಅನುಭವಿಸಬೇಕಾಯಿತು, ಆದರೆ ಬಾಬರನು ಗುರುನಾನಕರ ಯೋಗ್ಯತೆಯನ್ನು ತಿಳಿದುಕೊಂಡು, ಅವರನ್ನು ಬಂಧಮುಕ್ತಮಾಡಿದನು ಮುಂದೆ ಮಾತ್ರ ಶೀಖರಿಗೆ ಹಿಂಸೆ ಹೆಚ್ಚಾಯಿತು ಅದರಿಂದ ಅವರು ಶೌರ್ಯೋಪಾಸನೆಯನ್ನು ಮಾಡಬೇಕಾಯಿತು, ಕ್ಷತ್ರಿಯರಂತೆ ಯುದ್ಧಕಲೆಯಲ್ಲಿ ಬಲ್ಲಿದರಾದರು

ಬಾಬರನಿಂದ ಮುಂದೆ ಇಬ್ಬರು ಮೂವರು ಬಾದಶಹರು ಪರಧರ್ಮ ಸಹಿಷ್ಣುಗಳಾಗಿದ್ದರು ಅವರ ಆಳಿಕೆಯಲ್ಲಿ ಶೀಖರು ಸುಖವಾಗಿ ಇದ್ದರು ಗುರು ಅಂಗದನು ನಾನಕರ ವಚನಗಳನ್ನೂ ಉಪದೇಶಗಳನ್ನೂ ಶೇಖರಿಸಿ, **'ಗ್ರಂಥಸಾಹೆಬ'** ಎಂಬ ಪವಿತ್ರಸಂಗ್ರಹವನ್ನು ಸಿದ್ಧಪಡಿಸಿದನು ಅಮರದಾಸ, ರಾಮದಾಸ ಎಂಬ ಗುರುಗಳು ಅಕಬರ ಚಕ್ರವರ್ತಿಯ ಪ್ರೀತಿ-ಗೌರವಗಳನ್ನು ಗಳಿಸಿ, ಅಮೃತಸರವನ್ನು ಪವಿತ್ರಯಾತ್ರಾಕ್ಷೇತ್ರವನ್ನು ಮಾಡಿಕೊಂಡರು, ಆದರೆ ಮುಂದೆ ಎಂದರೆ ಜಹಾಂಗೀರನ ಆಳಿಕೆಯಿಂದ ಶೀಖರಿಗೆ

ಕಷ್ಟದ ಕಾಲವು ಬಂದಿತು ಜಹಾಂಗೀರನ ಮಗ ಖುಸ್ರುವು ತಂದೆಯ ವಿರುದ್ಧ ದಂಗೆ ಎಬ್ಬಿಸಿ ಪಂಜಾಬಕ್ಕೆ ಬಂದಾಗ, ಗುರು ಅರ್ಜುನನು ಆತನಿಗೆ ನೆರವಾದುದರಿಂದ ಜಹಾಂಗೀರನು ಆ ಶೀಖ ಗುರುವನ್ನು ಸೆರೆಯಲ್ಲಿರಿಸಿದನು ಅರ್ಜುನನ ತರುವಾಯ ಗುರುಪೀಠಕ್ಕೆ ಬಂದ ಹರಗೋವಿಂದನನ್ನೂ ಜಹಾಂಗೀರನು ಕಾರಾಗ್ರುಹದಲ್ಲಿರಿಸಿ ಹಿಂಸಿಸಿದನು ಇದರಿಂದ ಶೀಖರು ಸುಸಜ್ಜಿತರಾದ ಸೈನಿಕರಾಗಬೇಕಾಯಿತು ಅವರು ಸಮರ್ಥರಾಗುವಷ್ಟಕ್ಕೇ ಔರಂಗಜೇಬನು ಪಟ್ಟಕ್ಕೆ ಬಂದನು ವಿಶಾಲ ಮನೋಭಾವದ ದಾರಾನನ್ನೇ ದಿಲ್ಲಿ ಸಿಂಹಾಸನದಲ್ಲಿ ಕುಳ್ಳಿರಿಸಬೇಕೆಂದು ಶೀಖರು ಹವಣಿಸಿದ್ದನ್ನು ಅವನು ಮರೆಯಲಿಲ್ಲ

**ಸಂಕಟ ಪರಂಪರೆ** — ಔರಂಗಜೇಬನ ಆಳಿಕೆಯಲ್ಲಿ ಗುರು ತೇಜಸಿಂಗನು ಶೀಖರ ಒಂಬತ್ತನೆಯ ಗುರುವಾಗಿದ್ದನು ಈ ಬಾದಶಹನ ಆಳಿಕೆಯಲ್ಲಿ ಹಿಂದುಗಳ ಹಿಂಸೆಯು ಶೀಖರ ಮನಸ್ಸನ್ನು ಕರಳಿಸಿತು ಏಕೆಂದರೆ ಶೀಖ-ಧರ್ಮವು ಹಿಂದುಗಳಲ್ಲಿಯ ಸುಧಾರಕಪಂಥದಂತೆಯೇ ಇದೆ ಗುರು **ತೇಜಸಿಂಗ, ಶೀಖ** ಸೈನ್ಯವನ್ನು ಸಜ್ಜುಗೊಳಿಸಿ ಸಮಯವನ್ನು ಕಾಯುತ್ತಿದ್ದನು ಬಾದಶಹನಿಗ ಶೀಖರ ಈ ಪರಾಟ ತಡೆಯಲಿಲ್ಲ ಅವನು ತೇಜಬಹಾದ್ದೂರನನ್ನು ಕೊಲ್ಲಿಸಿದನಲ್ಲದೆ, ಆತನ ಹೆಣ ಕೂಡ ಶೀಖರಿಗೆ ಸಿಕ್ಕದಂತೆ ಬಲವಾದ ಕೋಟೆಯಲ್ಲಿ ಕಾವಲಿನಲ್ಲಿಟ್ಟನು! ಆದರೆ, ಸ್ವಾಭಿಮಾನಿಗಳಾದ ಶೀಖರು ತುಂಬ ಸಾಹಸದಿಂದ ಆ ಹೆಣವನ್ನು ತಕ್ಕೊಂಡುಹೋದರು

**ಗುರು ಗೋವಿಂದಸಿಂಹ** — ತರುವಾಯ ಗುರು ತೇಜಸಿಂಗರ ಮಕ್ಕಳಾದ ಗುರು ಗೋವಿಂದಸಿಂಹರು ಶೀಖರ ೧೦ನಯ ಗುರುಸ್ಥಾನಕ್ಕೆ ಬಂದರು ಅವರು ಇಲ್ಲಿಯವರೆಗಾದ ಶೀಖರ ಇತಿಹಾಸವನ್ನು ಕಣ್ತೆರೆದು ನೋಡಿದರು! ಶೀಖರು ಬಾಳಿ ಬೆಳೆಯಬೇಕಾದರೆ, ಕ್ಷಾತ್ರಧರ್ಮವನ್ನು ಅವಲಂಬಿಸದೆ ಗತ್ಯಂತರವಿಲ್ಲವೆಂದು ಗುರು ಗೋವಿಂದಸಿಂಹರು ನಿಶ್ಚಯಿಸಿದರು

ಅಲ್ಲಿಯ ವರೆಗೆ ಶೀಖರು ಸ್ವಭಾವದಲ್ಲಿ ಕ್ಷತ್ರಿಯರಾಗಿದ್ದರೂ, ವೇಷ-ಭೂಷಣಗಳಲ್ಲಿ ಸೌಮ್ಯರೇ ಆಗಿದ್ದರು ಆದುದರಿಂದ, ಗುರುಗೋವಿಂದರು ಶೀಖರ ಹೊರವೇಷದಲ್ಲಿಯೂ ಕ್ಷಾತ್ರವೃತ್ತಿಯ ಚಿಹ್ನಗಳನ್ನೇ ಏರ್ಪಡಿಸಿದರು ಅವುಗಳಲ್ಲಿ ಮುಖ್ಯವಾಗಿ ಕಚ್ಛ (ವೀರಗಚ್ಚೆ), ಕಂಗನ್ (ಕಬ್ಬಿಣದ ಬಳೆ), ಕಿರಪಾಣಿ (ಖಡ್ಗ, ಕೃಪಾಣ), ಕೇಶ (ಕೂದಲು, ಜಟಾ), ಕಂಗವಾ (ಹಣಿಗೆ ಬಾಚಣಿಕೆ) **ಈ ಪಂಚ 'ಕ' ಕಾರಗಳನ್ನು** ಹೇಳಬಹುದು ಅಂದಿನಿಂದಲೇ ಶೀಖರು 'ಸಿಂಹ'ಗಳಾದರು ಅದಕ್ಕೆ ತಕ್ಕಂತೆ ಎಲ್ಲರ ಹೆಸರಿನ ಮುಂದೆ 'ಸಿಂಗ' ಎಂದು ಜೋಡಿಸಹತ್ತಿದರು

**ಶೀಖರ ಸಂಹಾರ** — ಇಷ್ಟಾದ ಮೇಲೆ **ಗುರು ಗೋವಿಂದಸಿಂಹರು,** ಸಣ್ಣದೊಂದು ಸೈನ್ಯವನ್ನು ಕಟ್ಟಿಕೊಂಡು ಔರಂಗಜೇಬನ ವಿರುದ್ಧ ಬಂಡಾಯವನ್ನೇ ಎಬ್ಬಿಸಿದರು ಔರಂಗಜೇಬನು ದಂಡೆತ್ತಿಹೋದನು ಶೀಖರನ್ನು ಹಿಂಸಿಸಹತ್ತಿದನು ಗುರು ಗೋವಿಂದಸಿಂಹರಂತೂ ಚಿತ್ರಹಿಂಸೆಗೊಳಗಾದರು ಶೀಖರ ಪವಿತ್ರ ಗ್ರಂಥವಾದ ಗ್ರಂಥಸಾಹೆಬ ಇರುವಲ್ಲಿ ಮತ್ತು ಇರುವವರೆಗೆ ನಾನಿದ್ದೇ ಇರುತ್ತೇನೆ' ಎನ್ನುತ್ತ ಗೋದಾವರೀ ನದೀತೀರದಲ್ಲಿ ಅವರು ಪ್ರಾಣಬಿಟ್ಟರು! ಅಲ್ಲಿಗೇ ಅವರ ಗುರುಪರಂಪರೆ ನಿಂತಿತು, ಆದರೆ ಶೀಖ ಜನಾಂಗವು ಉಳಿಯಿತು ಮುಂದೆ ರಣಜಿತಸಿಂಗ ಮೊದಲಾದ ಶೀಖ ಅರಸರು ಆಳಿದರು ಇಂದಿಗೂ ಶೀಖರು ತಮ್ಮ ಪಂಥವನ್ನು ಉಳಿಸಿಕೊಂಡು, ಭಾರತಕ್ಕೆ ಯಶಸ್ಸನ್ನು ತರುತ್ತಿದ್ದಾರೆ

## ಅಭ್ಯಾಸನಗಳು

೧ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ —

(ಅ) ಕ್ರಿ ಶ ರಲ್ಲಿ ನಾನಕರು ಹುಟ್ಟಿದರು

(ಆ) ನೆಂಬವನು ಇವರ ನಂಬುಗೆಯ ನು

(ಇ) ಇವರು ದಲ್ಲಿಯೇ. ವನ್ನು ಸ್ಥಾಪಿಸಿಕೊಂಡು ನಿಂತರು

(ಈ) ಇವರು ಕ್ರಿ ಶ ರಲ್ಲಿ ದೇಹವಿಟ್ಟರು

(ಉ) ಶೀಖರ ಧರ್ಮಗ್ರಂಥದ ಹೆಸರು ಅದು ಗುರು ರ ವಚನಗಳ ಸಂಗ್ರಹವು

(ಊ) ಶೀಖರ ಕ್ಷಾತ್ರವೃತ್ತಿಯ ಚಿಹ್ನಗಳು —೧ ೨ ೩ ೪ ೫

೨ ಗುರು ನಾನಕರಲ್ಲಿ ನೀವು ಕಂಡ ವಿಶೇಷ ಗುಣಗಳು ಯಾವುವು?

೩ ಮೊಗಲರಿಂದ ಚಿತ್ರಹಿಂಸೆಗೆ ಒಳಗಾದ ಶೀಖರ ಗುರುಗಳು ಯಾರು?

# ೧೫ ಧಾರ್ಮಿಕ ಆಂದೋಲನಗಳು

**ಧರ್ಮಭೂಮಿ** — ಮನುಷ್ಯನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವು ದೊರೆಯಬೇಕಾದರೆ, ದೇವ-ಧರ್ಮಗಳು ಅತ್ಯಾವಶ್ಯಕವೆಂದು ಎಲ್ಲ ಜನಾಂಗಗಳೂ ಒಪ್ಪುತ್ತವೆ ದೇವರಿಂದಲೇ ಈ ಸೃಷ್ಟಿ ಹುಟ್ಟಿದೆ, ಮುಂದೆ ಆತನಲ್ಲಿಯೆ ಅಡಗುತ್ತಿದೆ ದೇವನ ಸನ್ನಿಧಿಯನ್ನು ಸಾರಬೇಕಾದರೆ ಧರ್ಮಾಚರಣೆ ಅತ್ಯವಶ್ಯ ತಾವು ಶುದ್ಧ ಧರ್ಮಾಚರಣೆಯುಳ್ಳವರಾಗಿ, ಅತ್ಯುನ್ನತವಾದ ವಿಚಾರಗಳನ್ನು ಬೋಧಿಸಿದ ಅನೇಕ ಧಾರ್ಮಿಕ ಆಂದೋಲನಕಾರರು ಭಾರತದಲ್ಲಿ ಹುಟ್ಟಿದರು

**ತುಳಸೀದಾಸರು** — ಪರಾಣ ಮತ್ತು ಮೊಗಲ ಅರಸರ ಕಾಲದಲ್ಲಿ ಧರ್ಮದ ಹೋರಾಟವೆಲ್ಲ ಬಹುಶಃ ಉತ್ತರದಲ್ಲಿಯೇ ನಡೆಯಿತು ಅಲ್ಲಿಯೂ ಭಕ್ತಿಪಂಥ ತುಂಬ ಪ್ರಚಾರಕ್ಕೆ ಬಂತು ಅಕಬರ ಬಾದಶಹನ ಕಾಲಕ್ಕೆ ಎಲ್ಲ ಜಾತಿಯ ಅನೇಕ ಜನ ಆಸ್ಥಾನ ಪಂಡಿತರಿದ್ದರು ಅವರಲ್ಲಿ ಉತ್ತರ ಹಸ್ತಿನಾಪುರದ ಆತ್ಮಾರಾಮರೊಬ್ಬರು ಅವರೇ **ತುಳಸೀದಾಸರ** ತಂದೆ ತಂದೆಯ ಬಳಿಯಲ್ಲಿಯೇ ಅಭ್ಯಾಸಮಾಡಿ ತುಳಸೀದಾಸರು ಸುಪ್ರಸಿದ್ಧ ಪಂಡಿತರಾದರು

**ಶ್ರೀರಾಮಚರಿತಮಾನಸ** — ತುಳಸೀದಾಸರು ವಿದ್ವಾಂಸರು, ಕವಿಗಳು. ಶ್ರೀರಾಮಚರಿತ್ರೆಯನ್ನೇ 'ಶ್ರೀರಾಮಚರಿತ ಮಾನಸ' ಎಂದು ಹಿಂದಿಯಲ್ಲಿ ರಾಮಾಯಣವನ್ನು ಬರೆದಿದ್ದಾರೆ ಅದೇ ತುಳಸೀರಾಮಾಯಣ ಅದು ಒಳ್ಳೇ ಸರಸವಾದ ಭಕ್ತಿಕಾವ್ಯ ಉತ್ತರಭಾರತದಲ್ಲಿ ಎಲ್ಲರೂ ಈಗಲೂ ಅದನ್ನು ಭಕ್ತಿಯಿಂದ ಓದುತ್ತಾರೆ ತುಳಸೀದಾಸರನ್ನು ವಾಲ್ಮೀಕಿಗಳ ಅವತಾರವೆಂದು ಹೇಳುತ್ತಾರೆ

**ಮೀರಾಬಾಯಿ** — ಮೀರಾಬಾಯಿ ಉತ್ತರಭಾರತದ ರಜಪೂತ ವಂಶದಲ್ಲಿ ಹುಟ್ಟಿದಳು ಈಕೆಯ ತಂದೆಯು ಶ್ರೀಕೃಷ್ಣನ ನಿಜವಾದ ಭಕ್ತ ಅದೇ ಭಕ್ತಿಯು ಮಗಳಲ್ಲಿಯೂ ಮನೆಮಾಡಿತ್ತು! ನಿತ್ಯವೂ ಹಾಡಿ ಕುಣಿದು ದೇವನಿಗೆ ತನ್ನ ಸೇವೆಯನ್ನು ಸಲ್ಲಿಸುತ್ತಿದ್ದಳು ಕೊನೆಕೊನೆಗೆ ಶ್ರೀಕೃಷ್ಣನ ಹೊರತು ಜಗತ್ತೇ ಆಕೆಗೆ ಶೂನ್ಯವೆನಿಸಿತು

**ಮೀರಾಬಾಯಿಯ ಮದುವೆಯಾದ ಮೇಲೆ** — ಆಕೆಯನ್ನು ರಾಣಾ ಕುಂಭಸಿಂಗನಿಗೆ ಮದುವೆಮಾಡಿ ಕೊಟ್ಟರು ಆಕೆಗೆ ಹಗಲಿರುಳೂ ಶ್ರೀಕೃಷ್ಣನ ಭಕ್ತಿ ಗಂಡಹೆಂಡಿರಿಗೆ ಕೂಡಿ ನಡೆಯಲಿಲ್ಲ ರಾಣಾ ಬೇಸರುಗೊಂಡನು. ಆಕೆಗೆ ವಿಷಕುಡಿದು ಪ್ರಾಣಬಿಡಲು ಹೇಳಿದನು ವಿಷದ ಪರಿಣಾಮ ಏನೂ

ಆಗಲಿಲ್ಲ ಆ ಮೇಲೆ ಜಲಸಮಾಧಿಯ ಶಿಕ್ಷೆಯನ್ನು ಕೊಟ್ಟನು ನದಿಯ ತೆರೆಗಳು ಆಕೆಯನ್ನು ದಂಡೆಗೆ ತಂದು ಚೆಲ್ಲಿದುವು



ಶ್ರೀ ಮೀರಾಬಾಯಿಯವರು

**ಮಹಾಸಾಧ್ವಿ ಮೀರಾಬಾಯಿ** – ಆ ಮೇಲ ಆಕೆಯು ವೃಂದಾವನಕ್ಕೆ ಹೋಗಿ ರೂಪಗೋಸಾವಿ ಸಾಧುಗಳ ಶಿಷ್ಯಳಾದಳು ಆ ಗೋಸಾವಿಗಳ ಆಶ್ರಮದಲ್ಲಿ ಮೀರಾಬಾಯಿ ಶ್ರೀ ಕೃಷ್ಣನ ಭಕ್ತಿಪರವಾದ ಪದ-ಪದ್ಯಗಳನ್ನು ರಚಿಸಿ, ಸುಸ್ವರದಿಂದ ಹಾಡುತ್ತ ಮೈ ಮರೆಯುವಳು **'ಮಹಾಸಾಧ್ವಿ ಮೀರಾಬಾಯಿ'** ಯೆಂದು ಎಲ್ಲೆಲ್ಲಿಯೂ ಆಕೆಯ ಕೀರ್ತಿ ಹಬ್ಬಿತು

**ಪತಿಗೆ ಪಶ್ಚಾತ್ತಾಪ** – ಪತ್ನಿಯ ಕೀರ್ತಿಯನ್ನು ರಾಣಾನು ಕೇಳಿದನು. ಇಂತಹ ಸಾಧ್ವಿಗೆ ಶಿಕ್ಷೆಯನ್ನು ಕೊಟ್ಟೆನಲ್ಲಾ! ಎಂದು ಅವನಿಗೆ ಬಹಳ ಪಶ್ಚಾತ್ತಾಪವಾಯಿತು. ರಾಜಮರ್ಯಾದೆಯಿಂದ ಆಕೆಯನ್ನು ರಾಜಧಾನಿಗೆ ಕರೆತಂದನು ತಾನೂ ಶ್ರೀಕೃಷ್ಣನ ಭಕ್ತನಾದನು. ಶ್ರೀಕೃಷ್ಣನ ಲೀಲೆಗಳನ್ನು ಮೀರಾಬಾಯಿಯು ಮನೋಹರವಾಗಿ ಬಣ್ಣಿಸಿದ್ದಾಳೆ ಪದ್ಯಗಳ ಕೊನೆಯಲ್ಲಿ 'ಮೀರಾಕೇ ಪ್ರಭು ಗಿರಿಧರ ನಾಗರ' ಎಂಬ ಮುದ್ರಿಕೆಯು ಇರುವುದು

**ಚೈತನ್ಯರು** – ಚೈತನ್ಯರು ಕ್ರಿ ಶ ೧೪೮೫ರಲ್ಲಿ ಹುಟ್ಟಿದರು ಜಗನ್ನಾಥನ ಆರಾಧಕರಿವರು ಬಂಗಾಲ ಓಡಿಸಾಗಳಲ್ಲಿ ಇವರು ವೈಷ್ಣವಧರ್ಮವನ್ನು ಹೆಚ್ಚಾಗಿ ಹಬ್ಬಿಸಿದರು ಅನೇಕ ಲೀಲೆಗಳನ್ನು ಮಾಡಿತೋರಿಸಿದರು ಅದರಿಂದ ಭಕ್ತರು ಇವರನ್ನು ವಿಷ್ಣುವಿನ ಅವತಾರವೆಂದು ಭಾವಿಸಿದರು

**ಚೈತನ್ಯಪಂಥ** – ಚೈತನ್ಯರು ವಿದ್ವಾಂಸರು, ಭಗವದ್ಭಕ್ತರು ಇವರ ನಡೆನುಡಿಗಳು ಭಕ್ತರನ್ನು ಆಕರ್ಷಿಸುವಂತಿದ್ದುವು ವೈಷ್ಣವಭಕ್ತಿಯೇ ಈ ಪಂಥದ ಮುಖ್ಯತತ್ತ್ವ ಈ ಪಂಥದವರಿಗೆ ಜಾತಿಭೇದವಿಲ್ಲ ಭಗವಂತನನು

ಭಕ್ತಿಯಿಂದ ಭಜಿಸುವುದಕ್ಕೆ ಎಲ್ಲರಿಗೂ ಅಧಿಕಾರವಿದೆ ಭಕ್ತಿಯೊಂದೇ ಮುಕ್ತಿಗೆ ಕಾರಣ

**ಪಂಥದ ಪರಿಣಾಮ** — ಈ ಪಂಥದ ಉದಾರ ಮತ್ತು ಸುಲಭವಾದ ತತ್ತ್ವಗಳೂ ಆಚಾರ-ವಿಚಾರಗಳೂ ಬಹುಜನರಿಗೆ ಮೆಚ್ಚುಗೆಯಾದುವು ಅದರಿಂದ ಎಲ್ಲ ಜಾತಿಯವರೂ ಇದರಲ್ಲಿ ಸೇರಿದರು ಬಂಗಾಲ ಒಡಿಸಾಗಳಲ್ಲಿ ಶ್ರೀಕೃಷ್ಣನ ದೇವಾಲಯಗಳ ಸುತ್ತಲೂ ಈ ಜನರ ವಸತಿಯಿದ ಶ್ರೀಚೈತನ್ಯರು ಕ್ರಿ ಶ ೧೫೩೩ರಲ್ಲಿ ದೇಹವನ್ನಿಟ್ಟರು

**ಆಳ್ವಾರರು ಯಾರು?** — ಉತ್ತರದಲ್ಲಿ ಸಂತರು ವೈಷ್ಣವಭಕ್ತಿಯನ್ನು ಹಬ್ಬಿಸಿದಂತೆ, ದಕ್ಷಿಣದಲ್ಲಿಯೂ ಕೆಲವು ಸಂತರು ಅದನ್ನು ಹಬ್ಬಿಸಿದರು ಅವರಿಗೆ 'ಆಳ್ವಾರರು' ಎಂದು ಹೆಸರು ಆಳ್ವಾರ್ ಎಂದರೆ ಭಕ್ತಿಸಾಗರದಲ್ಲಿ ಮುಳುಗಿದವರು ಅಥವಾ ಸ್ವಾಮಿಗಳು ಎಂದು ಅರ್ಥ ಇವರು ಒಟ್ಟು ಹನ್ನೆರಡು ಜನರಾದರು ಹುಟ್ಟಿನಿಂದ ಇವರೆಲ್ಲ ಬೇರೆ ಬೇರೆ ಕುಲದವರು ಜ್ಞಾನಿಗಳಾದ ಮೇಲೆ ಮಾತ್ರ ಎಲ್ಲರೂ ಆಳ್ವಾರರೇ ಅಲ್ಲಿ ಭೇದವಿಲ್ಲ ವಿಷ್ಣುವೂ ಆತನ ದಶಾವತಾರಗಳೂ ಇವರ ಆರಾಧ್ಯ ದೇವತೆಗಳು, ವಿಷ್ಣುವಿನ ವಾಹನ-ಆಯುಧ-ಪರಿವಾರಗಳೇ ಆಳ್ವಾರರಾಗಿ ಅವತರಿಸಿದರಂತೆ ಇವರೆಲ್ಲ ೨ರಿಂದ ೯ನೆಯ ಶತಮಾನದೊಳಗಾಗಿ ಆಗಿಹೋಗಿರಬೇಕು ಅವರಲ್ಲಿ ಪೆರಿಯಾಳ್ವಾರ, ಶ್ರೀರಂಗನಾಯಕಿ, ತಿರುಪ್ಪನಾಳ್ವಾರರ ಚರಿತ್ರೆಗಳು ಹೆಸರಾಗಿವೆ



ಶ್ರೀ ಆಳ್ವಾರರು

**ಪೆರಿ ಆಳ್ವಾರ** — ಪೆರಿ ಆಳ್ವಾರ್ ಎಂದರೆ ಶ್ರೇಷ್ಠ ಆಚಾರ್ಯ ಎಂದು ಅರ್ಥ ಇವರನ್ನೇ ವಿಷ್ಣುಚಿತ್ತರೆಂದೂ ಹೇಳುವರು ಮದ್ರಾಸ ಪ್ರಾಂತದ ತಿನ್ನವೆಲ್ಲಿ ಜಿಲ್ಲೆಯ ವಿಲ್ಲಿ-ಪುತ್ತೂರ ಗ್ರಾಮದಲ್ಲಿ ಇವರ ಜನ್ಮವಾಯಿತು ಎಳತನದಲ್ಲಿಯೂ ಇವರಿಗೆ ಶ್ರೀಮನ್ನಾರಾಯಣನಲ್ಲಿ ಪರಮಭಕ್ತಿ ಆತನ ಪೂಜೆಗೆಂದು ಶಾಂತಸ್ಥಳದಲ್ಲಿ ಒಂದು ಕುಟೀರವನ್ನು

ಕಟ್ಟಿಕೊಂಡಿದ್ದರು, ಅಲ್ಲಿ ನಿತ್ಯವೂ ನಾರಾಯಣನನ್ನು ಸಿಂಗರಿಸಿ ಪೂಜಿಸುತ್ತಿದ್ದರು

ಒಮ್ಮೆ ದೇವರ ಆದೇಶದಂತೆ ಮಧುರೆಯಲ್ಲಿಯ ವಿದ್ವಾಂಸರ ಪರಿಷತ್ತಿಗೆ ಹೋದರು, ಅಲ್ಲಿ ಎಲ್ಲರನ್ನೂ ವಾದದಲ್ಲಿ ಸೋಲಿಸಿ, ವೈಷ್ಣವ ಧ್ವಜವನ್ನು ಎತ್ತಿಹಿಡಿದರು 'ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಭಜಿಸುತ್ತಿರುವುದೇ ಭವಪಾಶದಿಂದ ಪಾರಾಗುವ ಸುಲಭಮಾರ್ಗ' ಎಂಬುದೇ ಇವರ ಉಪದೇಶದ ಸಾರ


ಶ್ರೀ ರಂಗನಾಯಕಿಯರು

**ಶ್ರೀ ಆಂಡಾಳ್** (ಶ್ರೀರಂಗನಾಯಕಿ) — ಒಮ್ಮೆ ವಿಷ್ಣುಚಿತ್ತರು ದೇವರ ಪೂಜೆಗೆಂದು ಹೂವುಗಳನ್ನು ಕೊಯ್ಯುತ್ತಿದ್ದರು ಆಗ ಉದ್ಯಾನದಲ್ಲಿ ಕೂಸಿನ ಅಳುದನಿ ಕೇಳಿಸಿತು ಕೂಡಲೆ ಹೋಗಿ ಎತ್ತಿಕೊಂಡರು ಅದೊಂದು ಮುದ್ದಾದ ಹೆಣ್ಣು ಕೂಸು ಹಾಗೆಯೇ ತಂದು ದೇವರ ಮುಂದೆ ಮಲಗಿಸಿದರು, ದೇವರ ಆದೇಶದಂತೆ ಅದಕ್ಕೆ ಕೋದಯಿ — ಎಂದರೆ ಕುಸುಮ ಕೋಮಲೆ — ಎಂದು ಹೆಸರಿಟ್ಟರು ಇದೇ ಹೆಣ್ಣು ಕೂಸೇ ಮುಂದ ಪರಮ ಭಗವದ್ಭಕ್ತೆಯಾದಳು, ಶ್ರೀ ಆಂಡಾಳ್ ಅಥವಾ ಶ್ರೀರಂಗನಾಯಕಿ ಎಂದು ಪ್ರಸಿದ್ಧಳಾದಳು

ಶ್ರೀಆಂಡಾಳಳ ವೈಷ್ಣವ ಭಕ್ತಿ ಅಪಾರವಾಗಿತ್ತು ಇಷ್ಟದೇವ ಸಾಕ್ಷಾತ್ಕಾರಕ್ಕಾಗಿ ಹೃದಯಂಗಮವಾದ ಹಾಡುಗಳನ್ನು ರಚಿಸಿದಳು. ದೇವರ ಅಪ್ಪಣೆಯಂತೆ ಶ್ರೀರಂಗ-ಶ್ರೀರಂಗನಾಯಕಿಯರ ಮದುವೆಯ ಮಹೋತ್ಸವ ನಡೆಯಿತು ಮಂಗಲವಾದ್ಯಗಳು ಭೋರ್ಗರೆಯುತ್ತಿದ್ದುವು ಶ್ರೀರಂಗನಾಯಕಿ ವಿಷ್ಣುಮಂದಿರದಲ್ಲಿ ಕಾಲಿಟ್ಟಳು. ಆಗ ಝುಗ್ಗನೆ ದಿವ್ಯಪ್ರಭೆ ಮಂದಿರದ ತುಂಬ ಹರಡಿತು ರಂಗನಾಯಕಿಯೂ ತೇಜೋರೂಪದಿಂದಲೇ ಆ ಬೆಳಕಿನಲ್ಲಿ ಬೆರೆತುಹೋದಳು

**ತಿರುಪ್ಪನಾಳ್ವಾರ** — ತಿರುಪ್ಪನಾಳ್ವಾರರು ಹುಟ್ಟಿದುದು ಹರಿಜನರಲ್ಲಿ. ಇವರ ತಂದೆ ಗಾನವಿದ್ಯೆಯಲ್ಲಿ ನಿಪುಣ ಮಗನೂ ಅದನ್ನೇ ಕಲಿತ, ದೇವರ ನಾಮದ ಹೊರತು ಇವನು ಬೇರೆಯೇನನ್ನೂ ಹಾಡುತ್ತಿರಲಿಲ್ಲ

ಮುಂದೆ ಈ ಹುಡುಗನಿಗ ಶ್ರೀರಂಗದೇವರನ್ನು ಕಾಣುವ ಇಚ್ಛೆಯಾಯಿತು ಅಲ್ಲಿಗೆ ಹೋದನು ಆದರೆ ಇವನನ್ನು ಒಳಗೆ ಬಿಡಲಿಲ್ಲ ಈತ ಹಾಗೆಯೇ ತಿರುಗಿ ಕಾವೇರಿಯ ದಕ್ಷಿಣದ ದಂಡಯಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡನು, ಅಲ್ಲಿಯೇ ಶ್ರೀರಂಗನ ಭಜನೆ ಮಾಡಹತ್ತಿದನು ಎಂದಾದರೂ ದೇವರ ಉತ್ಸವ ಹೊರಟರೆ, ದೂರದಿಂದಲೇ ವಿಗ್ರಹವನ್ನು ನೋಡಿ ಆನಂದಪಡುತ್ತಿದ್ದನು


ಶ್ರೀ ತಿರುಪ್ಪನಾಳ್ವಾರರು

ಒಮ್ಮೆ ದೇವರ ಅಪ್ಪಣೆಯಂತೆ, ಸಾರಂಗ ಮಾಮುನಿ ಈತನನ್ನು ಹೆಗಲ ಮೇಲೆ ಹತ್ತಿಸಿಕೊಂಡು ದೇವಾಲಯದೊಳಗೆ ಕರೆದೊಯ್ದನು ಅಂದಿನಿಂದಲೇ ಈತನಿಗೆ 'ಮುನಿವಾಹನ' ಎಂದು ಹೆಸರಾಯಿತು

ಮುನಿವಾಹನರು ಭಕ್ತಿಪರವಶತೆಯಿಂದ ದೇವಸ್ಥಾನದಲ್ಲಿ ಹಾಡಹತ್ತಿದರು ಈ ಅದ್ಭುತವನ್ನು ನೋಡಲು ಜನರು ಕಿಕ್ಕಿರಿದು ಕೂಡಿದರು ಎಲ್ಲರೂ ನೋಡುತ್ತಿದ್ದ ಹಾಗಯೇ ತಿರುಪ್ಪನ ದೇಹದಿಂದ ದಿವ್ಯಜ್ಯೋತಿಯೊಂದು ಹೊರಟಿತು, ದೇವನ ದೇಹದಲ್ಲಿ ಕೂಡಿಹೋಯಿತು ಅಂದಿನಿಂದಲೇ ಇವರನ್ನು ತಿರುಪ್ಪನಾಳ್ವಾರ ಎಂದು ಕರೆಯತೊಡಗಿದರು

## ಕರ್ನಾಟಕ

**ಬಸವೇಶ್ವರರು** – ಕನ್ನಡನಾಡು ಧರ್ಮಗಳ ದಿವ್ಯಸ್ಥಾನವಾಗಿದೆಯೆಂದು ಹೇಳಬಹುದು ಯಾವುದೇ ಧರ್ಮತತ್ತ್ವವನ್ನು ಬಿಟ್ಟು ತಂತ್ರದ ಬೆನ್ನು ಹತ್ತಿದರೆ ಅದಕ್ಕೆ ಇದಿರಾಗಿ ಕ್ರಾಂತಿಯೇಳುವುದು ಬೌದ್ಧ-ಜೈನಮತಗಳು ಹೀಗೆಯೇ ಹುಟ್ಟಿದುವೆಂದು ಹೇಳಿದೆ ಹನ್ನೆರಡನೆಯ ಶತಮಾನದಲ್ಲಿಯೂ ವೈದಿಕಧರ್ಮದ ಕರ್ಮಠತನವು ಬೆಳೆಯಿತು ಅದಕ್ಕೆ ಇದಿರಾಗಿ ಕರ್ನಾಟಕದಲ್ಲಿ ಶ್ರೀಬಸವೇಶ್ವರರು ವೀರಶೈವಮತದ ಪುನರುದ್ಧಾರವನ್ನು ಮಾಡಿದರು.

**ಬಸವೇಶ್ವರರ ಮಹತ್ಕಾರ್ಯಗಳು.**—ಶ್ರೀಬಸವೇಶ್ವರರ ಧಾರ್ಮಿಕ ಆಂದೋಲನದ ಮಹತ್ತ್ವವನ್ನು ತಿಳಿದುಕೊಂಡರೆ, ಅವರ ಶ್ರೇಷ್ಠತೆಯು ಸ್ಪಷ್ಟವಾಗುವುದು

**ವಚನ ವಾಙ್ಮಯ**—ಭಾರತದಲ್ಲಿ ಯಾವ ಕಾಲಕ್ಕೂ ನಿರಕ್ಷರಿಗಳ ಸಂಖ್ಯೆಯೇ ಹೆಚ್ಚು ಆದರೆ ಕಲಿತವರಿಗೂ ಕಲಿಯದವರಿಗೂ ಕೂಡಿಯೇ ಬೇಕು ದೇವ-ಧರ್ಮಗಳು! ಅಶಿಕ್ಷಿತರಿಗೆ ಅವು ತಿಳಿಯುವುದು ಹೇಗೆ? ತಿಳಿಯದಿದ್ದರೆ, ಅವರು ಅಜ್ಞಾನದಲ್ಲಿಯೇ ಉಳಿಯುವರು ಅಂತಹ ಬಹುಜನರುಳ್ಳ ಸಮಾಜವು ತಲೆಯೆತ್ತಲಾರದು ಅದಕ್ಕಾಗಿ ಬಸವೇಶ್ವರರು ತಮ್ಮ ತತ್ತ್ವಗಳನ್ನು ತಿಳಿಗನ್ನಡದಲ್ಲಿಯೇ ರಚಿಸಿದರು ಇದರಿಂದ, ಶಾಸ್ತ್ರರಚನೆಗೆ ಸಾಕಾಗುವಷ್ಟು ಕನ್ನಡ ಶಬ್ದಭಾಂಡಾರವೂ ಇದೆ, ಎಂದು ತೋರಿಸಿದಂತಾಯಿತು ಇದೇ ರೀತಿಯಲ್ಲಿಯೇ ಉಳಿದ ಶಿವಶರಣರೂ, **ಅಕ್ಕಮಹಾದೇವಿ** ಮೊದಲಾದ ಶಿವಶರಣೆಯರೂ ವಚನರೂಪದಲ್ಲಿಯೇ ತಮ್ಮ ಅನುಭವದ ನುಡಿಗಳನ್ನು ಹೇಳಿರುವರು ಹೀಗೆ ಬಸವಣ್ಣನವರ ವಚನ ವಾಙ್ಮಯವೇ ಅವರು ಮಾಡಿರುವ ಮೊದಲನೆಯ ಮಹತ್ಕಾರ್ಯ "ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ಎನಗ ನೀನಲ್ಲದೆ ಮತ್ತಾರು ಇಲ್ಲವಯ್ಯಾ" ಎಂಬ ವಚನದಲ್ಲಿ ತಿಳಿಯದ ನುಡಿ ಒಂದೂ ಇಲ್ಲ ಆದರೆ ಇದರಲ್ಲಿ ಭಕ್ತಿಪಂಥದ ಅನನ್ಯಶರಣಾಗತಿಯ ತತ್ತ್ವವಿದೆ



ಶ್ರೀ ಬಸವೇಶ್ವರರು

**ಅನುಭವಮಂಟಪ**—ಬಸವೇಶ್ವರರಿಗೆ ಲೋಕಕಲ್ಯಾಣವೇ ಮುಖ್ಯ ತಮ್ಮದೇ ಸರಿ ಎಂಬ ಹಟವಿಲ್ಲ ಅದಕ್ಕಾಗಿ ಶರಣ-ಶರಣೆಯರೆಲ್ಲ ಕೂಡಿ ವಿಚಾರ ಮಾಡುವುದಕ್ಕೆ ಅನುಭವಮಂಟಪವನ್ನು ಮಾಡಿಕೊಂಡಿದ್ದರು ಶ್ರೀ-ಅಲ್ಲಮಪ್ರಭುಗಳು ಅದರ ಹಿರಿಯರು ಅವರ ಹತ್ತಿರದಲ್ಲಿಯೇ ಎಲ್ಲರೂ ಒಂದೊಂದು ವಿಷಯವನ್ನು ಚರ್ಚೆಮಾಡಿ, ತಕ್ಕ ವಚನಗಳನ್ನು ರಚಿಸಿದರು

**ಧರ್ಮಸುಧಾರಣೆ**—ಬಸವೇಶ್ವರರು ವೀರಶೈವಧರ್ಮದ ಗುರು, ಲಿಂಗ, ಜಂಗಮ ಮೊದಲಾದ ಅಷ್ಟಾವರಣಗಳಲ್ಲಿ ಎಷ್ಟೋ ಸುಧಾರಣೆಗಳನ್ನು ಮಾಡಿದ್ದಾರೆಂದು ಹೇಳುತ್ತಾರೆ ಇವರದು ಷಟ್‌ಸ್ಥಳದ ವೇದಾಂತಮಾರ್ಗ.

**ಹರಿಜನೋದ್ಧಾರ**—ವೀರಶೈವ ಧರ್ಮದ ಮುಖ್ಯಚಿಹ್ನವೆಂದರೆ ಇಷ್ಟಲಿಂಗ ಆ ದೀಕ್ಷೆಯಾದ ಮೇಲೆ ಹೊಲೆತನವಾಗಲಿ ಕೀಳು-ಮೇಲುಗಳಾಗಲಿ

ಮಾಯವಾಗುವುವೆಂದು ಅವರ ಅಭಿಪ್ರಾಯ "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಲಿಂಗಧಾರಿಗಳನ್ನೆಲ್ಲ ಒಂದೇಯೆಂಬೆ" ಈ ವಚನಗಳಲ್ಲಿ ಅವರ ಮಾನವಸಮಾನತೆಯ ತತ್ತ್ವವನ್ನು ನೋಡಬಹುದು ಇದೇ ಕಾರಣ ದಿಂದಲೇ ಮಾದರ ಹರಳಯ್ಯ, ನುಲಿಯ ಚೆನ್ನಯ್ಯ, ಘೋರ ಕಕ್ಕಯ್ಯ ಮೊದ ಲಾದವರು, ಎಲ್ಲರೊಡನೆ ಸರಿಸಮಾನರಾಗಿ ಬಾಳಿದರು. ಇಲ್ಲಿಂದಲೇ ಹರಿ-ಜನೋದ್ಧಾರ ಪ್ರಾರಂಭವಾಯಿತು

**ಜಾತೀಯತಾ ನಿವಾರಣೆ** – ಈಗ ಜಾತೀಯತೆಯಿಂದ ಭಾರತವು ಹಾಳಾ ಗುತ್ತಿರುವಂತೆ, ಆಗಲೂ ಇದರಿಂದ ಅವ್ಯವಸ್ಥೆ ನಡೆದಿತ್ತು ಇದನ್ನು ಬಸವೇಶ್ವರರು ಕಿತ್ತೊಗೆಯಲು ಪ್ರಯತ್ನಿಸಿದರು ಅವರ ಅಭಿಪ್ರಾಯದಂತೆ ಜಾತಿಯೆಂದರೆ ಕುಲಕಸಬಿನಿಂದಾದುದು "ಕಾಸಿ ಕಮ್ಮರನಾದ, ಬೀಸಿ ಮಡಿವಳನಾದ, ಹಾಸನಿಕ್ಕಿ ಸಾಲಿಗನಾದ, ಕುಲವೇನೋ ಅವಂದಿರ ಕುಲವೇನೋ!" ಅದರಂತೆ ತಮ್ಮ ಅನುಯಾಯಿಗಳಲ್ಲಿ ಎಲ್ಲ ಸಕಬಿನವರನ್ನೂ ಸೇರಿಸಿಕೊಂಡು ಜಾತೀಯತೆಯ ನಿವಾರಣೆ ಮಾಡಿದರು

**ಕಾಯಕವೇ ಕೈಲಾಸ** – ಸಮಾಜದಲ್ಲಿ ಮಾತಿಗೇ ಮಹತ್ತ್ವ ಬಂದಿದೆ, ಕೃತಿಗಿಲ್ಲ ಇಂತಹ ಸ್ಥಿತಿ ಆಗಲೂ ಇತ್ತು 'ಅದರಿಂದ ಕಾಯಕವೇ ಕೈಲಾಸವಯ್ಯ' ಎಂಬ ಸೂತ್ರವನ್ನು ಹೇಳಿದರು, ದುಡಿತಕ್ಕೆ ದೊಡ್ಡಿತೆಯನ್ನು ಕೊಟ್ಟರು ಬುದ್ಧಿಬಲದ ಮಾತು ಹಾಗಿರಲಿ, ಹಿರಿಯರ ಆಸ್ತಿಯನ್ನು ಅವ ಲಂಬಿಸುವುದು ಕೂಡ ಪಾಪವೆಂದು ಅವರ ಅಭಿಪ್ರಾಯ

**ಧರ್ಮದ ಮರ್ಮ** – ಧರ್ಮವೆಂದರೆ ಯಾವುದರಿಂದ ಮಾನವನ ಉತ್ತ ರೋತ್ತರ ಏಳ್ಗೆಯಾಗುವುದೋ ಅದು ಆ ಮರ್ಮ ಎಲ್ಲರಿಗೂ ತಿಳಿಯಲೆಂದು 'ಕೊಲ್ಲದಿಪ್ಪುದೆ ಧರ್ಮ' ಎಂದು ವಚನವನ್ನು ಹೇಳಿದರು ಯಾರೊಬ್ಬರಿಗೆ ಬಿರುಸು ಮಾತನ್ನಾಡಿದರೆ, ಅವರ ಮನಸ್ಸು ನೋಯಿಸಿದರೆ, ಮನೆಮುರುಕ ತನದ ಕೆಲಸಗಳನ್ನು ಮಾಡಿದರೆ, ಅದು ಕೂಡ ಕೊಲೆಯೇ ಎಂದು ಅವರ ಅಭಿಪ್ರಾಯ

ಹೀಗೆಯೆ ಧರ್ಮದ ಹೆಸರಿನಿಂದ ಕರ್ಮರತನವನ್ನು ತೋರಬಾರದು, ಅನನ್ಯಭಕ್ತಿಯಿಂದ ಪರಮಾತ್ಮನ ಪ್ರೀತಿಯಾಗುವುದು, ಎಂದು ಹಲವು ವಚನಗಳನ್ನು ಹೇಳಿದ್ದಾರೆ ಇದರಂತೆ ಅಲ್ಲಮಪ್ರಭುಗಳೂ ಚೆನ್ನಬಸವಣ್ಣ ನವರೂ ಅಕ್ಕಮಹಾದೇವಿ, ಮುಕ್ತಾಯಕ್ಕ ಮೊದಲಾದವರೂ ತಮ್ಮ ತಮ್ಮ ವಚನಗಳಲ್ಲಿ ದಿವ್ಯತತ್ತ್ವಗಳನ್ನು ಇಳಿಸಿದ್ದಾರೆ ಈ ವಚನಕಾವ್ಯ ಗಳನ್ನು ರಚಿಸಿ, ಇವರು ಕನ್ನಡಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಯನ್ನು ಸಲ್ಲಿಸಿರುವರು

**ಶ್ರೀಮನ್ ಮಧ್ವಾಚಾರ್ಯರು** — ಶ್ರೀಮಧ್ವಾಚಾರ್ಯರೂ ಅಚ್ಚ ಕನ್ನಡಿಗರೇ ಇವರನ್ನು ಶ್ರೀಹನುಮಂತ ದೇವರ ಅವತಾರವೆಂದು ಹೇಳುತ್ತಾರೆ ಇವರು ಉಡುಪಿಯ ನೆರೆಯ ಪಾಜಕ ಕ್ಷೇತ್ರದಲ್ಲಿ ಹುಟ್ಟಿ ಬಾಳಿ ಬೆಳೆದು ತತ್ತ್ವದ ಪ್ರಸಾರ ಮಾಡಿದ ಸಂಗತಿಯನ್ನು ಈ ಮೊದಲು ಹೇಳಿದೆ ಇವರು ದ್ವೈತಮತವನ್ನು ಸ್ಥಾಪಿಸಿದರು



ಶ್ರೀ ಮಧ್ವಾಚಾರ್ಯರು

**ಉಜ್ವಲವಾದ ಮೇಧಾಶಕ್ತಿ** — ಶ್ರೀ ಆಚಾರ್ಯರು ಅತ್ಯಂತ ಮೇಧಾವಿಗಳು ಶಾಸ್ತ್ರಾರ್ಥಗಳಲ್ಲಿ ಆಳವಾದ ಅಭ್ಯಾಸಿಗಳು ಎಲ್ಲ ಆಚಾರ್ಯರಂತೆ ಪ್ರಸ್ಥಾನತ್ರಯಿ (ಬ್ರಹ್ಮಸೂತ್ರ, ಭಗವದ್ಗೀತೆ, ಉಪನಿಷತ್ತು)ಗಳಿಗೆ ದ್ವೈತ ಪರವಾಗಿ ಟೀಕೆಗಳನ್ನು ಬರೆದಿದ್ದಾರೆ ಇವಲ್ಲದೆ ಮತ್ತೆ ೩೭ ಉದ್ಗ್ರಂಥಗಳನ್ನೂ ಬರೆದು, ತಮ್ಮ ಮತವನ್ನು ಪ್ರತಿಪಾದಿಸಿದ್ದಾರೆ

**ವೈಷ್ಣವ ಮತತತ್ತ್ವ** — ಶ್ರೀಆಚಾರ್ಯರು ವೈಷ್ಣವಮತಸ್ಥಾಪಕರು ವಿಷ್ಣು-ಸರ್ವೋತ್ತಮನೆಂಬುದೇ ಇವರ ಹೇಳಿಕೆಯ ಸಾರ ವಿಷ್ಣುವೇ ಪರಮಾತ್ಮ ಮಾನವನಲ್ಲಿರುವುದು ಜೀವಾತ್ಮ ಜೀವಾತ್ಮನು ಭಕ್ತಿಯ ಬಲದಿಂದ ಪರಮಾತ್ಮನ ಪ್ರೀತಿಯನ್ನು ಪಡೆಯುವನು, ಮೋಕ್ಷವನ್ನು ಸಂಪಾದಿಸುವನು— ಇವೇ ಮುಂತಾದುವು ವೈಷ್ಣವಮತದ ತತ್ತ್ವಗಳು ಈ ಮತದಲ್ಲಿ ಪರ-ಮಾತ್ಮ ಮತ್ತು ಜೀವಾತ್ಮಗಳು ಎರಡು ಎಂದು ಹೇಳುವುದರಿಂದ ದ್ವೈತಮತವೆಂದೂ, ಶ್ರೀಮಧ್ವಾಚಾರ್ಯರಿಂದ ಸ್ಥಾಪಿತವಾದುದರಿಂದ ಮಾಧ್ವಮತ ಎಂದೂ ವೈಷ್ಣವಮತಕ್ಕೆ ಬೇರೆ ಹೆಸರುಗಳಿವೆ

**ಕನ್ನಡ ನಾಡಿನಲ್ಲಿ ಭಕ್ತಿಪಂಥ** — ಈ ವೈಷ್ಣವ ಭಕ್ತಿಪಂಥದ ಪ್ರಭಾವವು ಇಡಿಯ ಭಾರತವನ್ನೇ ವ್ಯಾಪಿಸಿತು ಕನ್ನಡದಲ್ಲಿ ಕೂಡ ದಾಸಪಂಥದವರು ಈ ಮತವನ್ನು ಮುಂದುವರಿಸಿದರು ಅವರಲ್ಲಿ ಮುಖ್ಯವಾಗಿ ಪುರಂದರದಾಸ, ಕನಕದಾಸ, ವಿಜಯದಾಸ ಮುಂತಾದವರನ್ನು ಹೇಳಬಹುದು

**ಭಕ್ತಿಯೇ ಏಕೆ?** — ಶ್ರೀಆಚಾರ್ಯರ ವೈಷ್ಣವಪಂಥದಲ್ಲಿ ಭಕ್ತಿಗೆ ವಿಶೇಷ ಪ್ರಾಧಾನ್ಯವಿದೆ. ಶಂಕರಾಚಾರ್ಯರು ಜ್ಞಾನಕ್ಕೆ ಪ್ರಾಧಾನ್ಯ ಕೊಟ್ಟಿದ್ದರು.

ಭಗವಂತನ ಆರಾಧನೆಗೆ ಜ್ಞಾನ, ಭಕ್ತಿ, ಕರ್ಮ ಎಂದು ಮೂರು ಮಾರ್ಗಗಳಿವೆ ಎಲ್ಲರಿಗೂ ಜ್ಞಾನಮಾರ್ಗವು ಸಾಧ್ಯವಾಗಲಿಕ್ಕಿಲ್ಲ ಕರ್ಮಮಾರ್ಗದಲ್ಲಿ ಕರ್ಮರತನವಾಗಲಿ, ತಾಂತ್ರಿಕ ಆಚಾರಗಳಾಗಲಿ, ತಲೆಯೆತ್ತುವ ಸಂಭವವಿದೆ, ಆದರೆ, ಭಕ್ತಿಪಂಥವು ಎಲ್ಲರಿಗೂ ಸುಲಭವು ಶ್ರೀಬಸವೇಶ್ವರರು ಕೂಡ 'ಎಲವೋ ಪಾಪಕರ್ಮಗಳನ್ನು ಮಾಡಿದವನೇ, ಒಮ್ಮೆ ಶರಣೆನ್ನು' ಎಂದು ಭಕ್ತಿಗೇ ಮಹತ್ತ್ವ ಕೊಟ್ಟಿದ್ದಾರೆ ಜ್ಞಾನಮಾರ್ಗದಲ್ಲಿ ಭಕ್ತನು ಭಗವಂತನ ಕಡೆಗೆ ಹೋಗಬೇಕಾಗುವುದೆಂದೂ, ಭಕ್ತಿಮಾರ್ಗದಲ್ಲಿ ಭಗವಂತನೇ ಭಕ್ತನ ಕಡೆಗೆ ಬರುವನೆಂದೂ ಶಾಸ್ತ್ರಗಳು ಹೇಳುತ್ತವೆ–

**ಪುರಂದರ ದಾಸರು** — ಪುರಂದರದಾಸರ ಮೂಲ ಹೆಸರು ಶ್ರೀನಿವಾಸ ನಾಯಕರು ಚಿನಿವಾಲರ ಮನೆತನದವರು ನಾಯಕರು ಔಷಧಕ್ಕೆ ಕೂಡ ಒಂದು ಕಾಸನ್ನೂ ದಾನಧರ್ಮ ಮಾಡಿದವರಲ್ಲ ಆದರೆ, ಒಳ್ಳೇ ಸದಾಚಾರಿಗಳು



ಶ್ರೀ ಪುರಂದರದಾಸರು

**ಹಣದಾಸೆ ಬಿಟ್ಟ ಹರಿದಾಸರು** – ನಾಯಕರ ಸದಾಚಾರ ಶ್ರೀಹರಿಗೆ ಒಪ್ಪಿಗೆಯಾಯಿತು ಅವರ ಕೃಪಣತನವನ್ನು ಬಿಡಿಸಲು ದೇವನು ಒಂದು ಲೀಲೆಯನ್ನು ತೋರಿದನು ಒಡ ಬ್ರಾಹ್ಮಣನಾಗಿ ಬಂದು, ಮಗನ ಮದುವೆಗಾಗಿ ದಾನವನ್ನು ಬೇಡಿದನು ನಾಯಕರು 'ಆಗ ಬಾ-ಈಗ ಬಾ' ಎಂದು ಎಡತಾಕಿಸಿ, ಕೊನೆಗೊಮ್ಮೆ ಒಡಕು ಕಾಸು ಕೊಟ್ಟರು ಆ ಮೇಲೆ ಬ್ರಾಹ್ಮಣ ನಾಯಕರ ಹೆಂಡತಿಯ ಹತ್ತಿರ ದಾನವನ್ನು ಬೇಡಿದನು ಆ ಸಾಧ್ವಿಯ ಹತ್ತಿರ ಹಣವಿರಲಿಲ್ಲ, ಆದರೆ ಬ್ರಾಹ್ಮಣನ ಮಗನ ಮದುವೆಯ ಮಾತನ್ನು ಕೇಳಿ ಮನಸ್ಸು ಕರಗಿತು ಮೂಗಿನೊಳಗಿನ ನತ್ತನ್ನು ಕೊಟ್ಟುಬಿಟ್ಟಳು ಬ್ರಾಹ್ಮಣನು ನಾಯಕರಲ್ಲಿಯೇ ಅದನ್ನು ಒತ್ತೆ ಇಡಲು ಹೋದನು ಅವರು ಅದು ತಮ್ಮ ಹೆಂಡತಿಯದೇ ಎಂದು ಗುರುತಿಸಿದರು ಕೂಡಲೆ ಅದನ್ನು ಪೆಟ್ಟಿಗೆಯಲ್ಲಿಟ್ಟು, ಮನೆಗೆ ಒಂದು ಹೆಂಡತಿಯನ್ನು 'ನತ್ತು ಎಲ್ಲಿ?' ಎಂದು ಕೇಳಿದರು ಆ ಹೆಣ್ಣು ಮಗಳು ತರುತ್ತೇನೆಂದು ಸುಳ್ಳು ಹೇಳಿ ಒಳಗೆ ಹೋದಳು ವಿಷ ಕುಡಿಯುವ ಸಿದ್ಧತೆ ನಡೆಸಿದಳು ಕುಡಿಯುವುದಕ್ಕೆ ಬಟ್ಟಲನ್ನು ಎತ್ತಿದಾಗ ನತ್ತು ಅದರಲ್ಲಿ ಬಿತ್ತು ಗಂಡನಿಗೆ ತಂದು ತೋರಿಸಿದಳು ನಾಯಕರು ಗಡಿಬಿಡಿಯಿಂದ ಅಂಗಡಿಗೆ ಹೋಗಿ ನೋಡುತ್ತಾರೆ.

ನತ್ತು ಅಂಗಡಿಯಲ್ಲಿಲ್ಲ ಮನೆಗೆ ಬಂದು ನೋಡುತ್ತಾರೆ ಅಲ್ಲಿ ಬ್ರಾಹ್ಮಣನಿಲ್ಲ ಇದು ಶ್ರೀಹರಿಯದೇ ಆಟವೆಂದು ತಿಳಿದು ನಾಯಕರು ಹಣದಾಸೆಯನ್ನು ಬಿಟ್ಟು ಹರಿದಾಸರಾದರು

ನಾಯಕರು ಪುರಂದರದಾಸರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ ವಿಜಯನಗರದ ವ್ಯಾಸರಾಯರಲ್ಲಿಯೇ ಇವರಿಗೆ ಜ್ಞಾನೋಪದೇಶವಾಯಿತು ಅವರೇ ಈ ಹೆಸರನ್ನು ಕೊಟ್ಟರು. ಪುರಂದರದಾಸರ ಪದ್ಯಗಳು ಲೌಕಿಕ, ಪಾರಮಾರ್ಥಿಕ ಎರಡೂ ವಿಚಾರಗಳನ್ನೊಳಗೊಂಡು ಬಲು ಮನೋಹರ ವಾಗಿವೆ ಭಕ್ತಿರಸ ತುಂಬಿ ತುಳುಕುತ್ತದೆ ಪದ್ಯಗಳ ಕೊನೆಯಲ್ಲಿ 'ಪುರಂದರ ವಿಟ್ಠಲ' ಎಂಬ ಮುದ್ರಿಕೆಯಿರುತ್ತದೆ

**ಕನಕದಾಸರು** — ಕನಕದಾಸರು ಧಾರವಾಡ ಜಿಲ್ಲೆಯ ಬಾಡ ಎಂಬ ಹಳ್ಳಿಯವರು ಜಾತಿಯಿಂದ ತಳವಾರರು ಆಗಿನ ಅವರ ಹೆಸರು ಕನಕ ಮಾಡುತ್ತಿದ್ದುದು ಒಕ್ಕಲುತನ ಆದರೆ ಎಂದಿನಿಂದಲೂ ಸದಾಚಾರಿ, ದೇವ-ಭಕ್ತ

ಕನಕನ ಕನಸಿನಲ್ಲಿ ದೇವರು ಕಾಣುತ್ತಿದ್ದನು ತನ್ನ ದಾಸನಾಗಲು ಹೇಳುತ್ತಿದ್ದನು ಮನೆಬಿಟ್ಟು ಹೊರಡಲು ಒತ್ತಾಯ ಮಾಡುತ್ತಿದ್ದನು ದುಡಿದುಣ್ಣುವ ಕನಕನಿಗೆ ಈ ಭಿಕ್ಷಾವೃತ್ತಿ ಸೇರಲಿಲ್ಲ ಬೇಗನೆ ಅದಕ್ಕೆ ಒಪ್ಪಲಿಲ್ಲ ಕೊನೆಗೊಮ್ಮೆ ದೇವರು ವಿಚಿತ್ರಲೀಲೆಯನ್ನು ತೋರಿದನು, ಕನಕನಿಗೆ ತನ್ನ ಯೋಗ್ಯತೆಯ ಅರಿವಾಯಿತು ಮನೆಬಿಟ್ಟು ಹೊರಟು ಕನಕದಾಸನಾದನು

**ಕನಕನ ಕಿಂಡಿ** — ಕನಕನಿಗೆ ಒಳ್ಳೆಯ ಗುರುಗಳಿಂದ ಉಪದೇಶ ದೊರೆಯಿತು ಆತನಿಗೆ ಶ್ರೀಕೃಷ್ಣನ ಬಗೆಗೆ ಅನನ್ಯಭಕ್ತಿ ಹುಟ್ಟಿತು ಒಮ್ಮೆ ಶ್ರೀಕೃಷ್ಣನ ದರ್ಶನಕ್ಕೆಂದು ಉಡುಪಿಯ ಮಠಕ್ಕೆ ಹೋದನು ಆ ಮಠ-ದಲ್ಲಿಯ ಶ್ರೀ ಕೃಷ್ಣನ ದೇವಾಲಯವನ್ನು ಜಾಗ್ರತಸ್ಥಾನವೆಂದು ಹೇಳುತ್ತಾರೆ

ಕನಕದಾಸ ತಳವಾರನಲ್ಲವೇ! ಅದರಿಂದ ಅವನನ್ನು ದೇವದರ್ಶನಕ್ಕೆ ಬಿಡಲಿಲ್ಲ ಕನಕನಿಗೆ ಬಲು ಕೆಡುಕೆನಿಸಿತು. 'ದೇವಾ ನಿನ್ನ ಕಣ್ಣೆದುರಿನಲ್ಲಿಯೂ ಜಾತಿಯ ಜಂಭವೇ', ಎಂದು ಒಂದೆಡೆ ಮರೆಯಾದನು ಅಲ್ಲಿಯೇ ಶ್ರೀಕೃಷ್ಣನನ್ನು ಸ್ತುತಿಸಹತ್ತಿದನು ದೇವರಿಗೆ ಬೇಕಾದುದು ಜಾತಿಯಲ್ಲ, ನೀತಿ, ಭಕ್ತಿ ಕೂಡಲೆ ದೊಡ್ಡ ಸಪ್ಪಳವಾಗಿ, ಕನಕದಾಸನಿದ್ದ ಕಡೆಯ ಗೋಡೆಯಲ್ಲಿ ಕಿಂಡಿ ಬಿದ್ದಿತು ಅದರೊಳಗಿಂದ ಆತನಿಗೆ ಶ್ರೀಕೃಷ್ಣನು ದರ್ಶನ ಕೊಟ್ಟನು ಆಗ ಮಾತ್ರ ಈತನು ಮಹಾನುಭಾವನೆಂದು ಎನ್ನಹತ್ತಿದರು ಆ ಕನಕನ ಕಿಂಡಿ ಈಗಲೂ ಇದೆ.

**ಕನಕದಾಸರ ಕೇಶವರಾಯ** — ಕನಕದಾಸರು ಕಾಗಿನೆಲ್ಲಿಗೆ ಬಂದು ಕೇಶವ ದೇವರ ಆರಾಧಕರಾಗಿ ಉಳಿದರು ಅಲ್ಲಿಯೇ ಭಕ್ತಿಪರವಾದ ಹಾಡುಗಳನ್ನು ಹೇರಳವಾಗಿ ರಚಿಸಿದರು ‹ಕಾಗಿನೆಲೆಯಾದಿಕೇಶವರಾಯ' ಎಂಬುದು ಇವರ ಮುದ್ರಿಕೆಯು. ಈ ಹಾಡುಗಳು ಸರಸವಾಗಿವೆ ಇವರು ‹ಮೋಹನ ತರಂಗಿಣಿ' ಮೊದಲಾದ ಕಾವ್ಯಗಳನ್ನೂ ಬರೆದಿದ್ದಾರೆ

## ಮಹಾರಾಷ್ಟ್ರ

**ಜ್ಞಾನದೇವರು** — ಪೈಠಣದ ಬಳಿಯಲ್ಲಿರುವ ಆಪೇಗಾಂವಿ ಎಂಬೂರಲ್ಲಿ ವಿಟ್ಠಲಪಂತ ಎಂಬ ಗೃಹಸ್ಥನಿದ್ದನು ಈತನು ಅಲ್ಲಿಯ ಕುಲಕರ್ಣಿ ಈತನ ಹೆಂಡತಿ ರುಕ್ಮಿಣಿಬಾಯಿ ಇವರ ಹೊಟ್ಟೆಯಲ್ಲಿಯೇ ಜ್ಞಾನದೇವರು ಹುಟ್ಟಿದರು



ಜ್ಞಾನದೇವರು

**ಜ್ಞಾನದೇವರ ಯೋಗ್ಯತೆ, ತತ್ತ್ವ** — ಜ್ಞಾನದೇವರು ಪರಮ ಭಗವದ್ಭಕ್ತರು ದಯಾಪರರು— "ಕೊಡಗಳು ಬೇರೆಯಾದರೂ ಅವುಗಳಲ್ಲಿರುವ ನೀರಲ್ಲ ಒಂದೇ, ಬಟ್ಟೆಗಳು ಬೇರೆಯಾದರೂ ಅವುಗಳಲ್ಲಿಯ ಎಳೆಗಳು ಮಾತ್ರ ಒಂದೇ, ಆಭರಣಗಳು ಬೇರೆಯಾದರೂ ಅವುಗಳಲ್ಲಿಯ ಬಂಗಾರ ಮಾತ್ರ ಒಂದೇ ಹಾಗೆಯೇ ಪ್ರಾಣಿಗಳು ಎಷ್ಟೇ ಇದ್ದರೂ, ಅವುಗಳಲ್ಲಿರುವವನು ಶ್ರೀಹರಿಯೊಬ್ಬನೇ" ಎಂಬುದು ಇವರ ತತ್ತ್ವವಾದ ಇವರು ಪಾಂಡುರಂಗನ ಭಕ್ತರು

**ಏಕನಾಥರು** — ವಿಜಯನಗರದ ಅರಸರು ಪಾಂಡುರಂಗನ ಮೂರ್ತಿಯನ್ನು ವಿಜಯನಗರಕ್ಕೆ ಒಯ್ದಿದ್ದರಂತೆ ಅದನ್ನು ಭಾನುದಾಸರೆಂಬವರು ತಿರುಗಿ ಪಂಢರಪುರಕ್ಕೆ ತಂದರಂತೆ ಅವರ ಮೊಮ್ಮಕ್ಕಳು ಸೂರ್ಯನಾರಾಯಣ ಇವರ ಮಕ್ಕಳೇ ಏಕನಾಥರು

ಏಕನಾಥರ ಗುರುಗಳು ಜನಾರ್ದನ ಪಂಡಿತರು. ಅವರು ಶಿಷ್ಯನ ಗುಣಗಳಿಗೆ ಮೆಚ್ಚಿದ್ದರು ಅವರು ಒಮ್ಮೆ ಶಿಷ್ಯನಿಗೆ ಲೆಕ್ಕಬರೆಯುವ ಕೆಲಸವನ್ನು ಕೊಟ್ಟರು ಆಗ ಒಂದು 'ಪೈಯು' ಲೆಕ್ಕ ಹೊಂದದಾಯಿತು ಏಕನಾಥರು ಏಕಧ್ಯಾನದಿಂದ ಅದನ್ನು ಹುಡುಕುವುದರಲ್ಲಿ ಮಗ್ನರಾದರು. ಅದು ಸಿಕ್ಕಿತು

ಆಗ ಆನಂದದಿಂದ ಚಪ್ಪಾಳೆ ಹೊಡೆದರು ಗುರುಗಳು ಅಲ್ಲಿಯೇ ನಿಂತಿದ್ದರು – ಈ ಪ್ರೆಯಲ್ಲಿ ನಿಲ್ಲಿಸಿದ ನಿನ್ನ ಮನಸ್ಸನ್ನೇ ಶ್ರೀಕೃಷ್ಣನ ಚರಣದಲ್ಲಿ ನಿಲ್ಲಿಸಿದರೆ ನೀನು ನಿಜಪದವನ್ನು ಹೊಂದುವೆ'—ಎಂದು ಹೇಳಿದರು ಅಂದಿನಿಂದಲೇ ಏಕನಾಥರಿಗೆ ಜ್ಞಾನಪ್ರಾಪ್ತಿಯಾಯಿತು, ಪರಮ ಭಗವದ್‌ಭಕ್ತರಾದರು ಇವರು ಭಾಗವತಕ್ಕೆ ಟೀಕೆಯನ್ನು ಬರೆದಿದ್ದಾರೆ, ವಾಲ್ಮೀಕಿ ರಾಮಾಯಣಕ್ಕೆ ಬರೆದ ಮರಾಠೀಟೀಕೆಯು 'ಭಾವಾರ್ಥರಾಮಾಯಣ' ಎಂದು ಹೆಸರಾಗಿದೆ ಏಕನಾಥರನ್ನು ಜಗದ್ಗುರುವಿನ ಅವತಾರವೆಂದು ಹೇಳುತ್ತಾರೆ – 'ತ್ರೈಲೋಕ್ಯವೆಲ್ಲ ಜನಾರ್ದನನ ಸ್ವರೂಪ ಆತನು ಎಲ್ಲ ಕಡೆಗೂ ವ್ಯಾಪಿಸಿರುವನು ಆತನನ್ನೇ ಅನನ್ಯಭಕ್ತಿಯಿಂದ ಮೊರೆಹೊಗಬೇಕು' ಎಂಬುದೇ ಅವರ ಉಪದೇಶದ ಸಾರ

**ತುಕಾರಾಮರು** —ಆಳಂದಿಯಿಂದ ಒಂದೆರಡು ಹರದಾರಿಯ ಮೇಲೆ ದೇಹೂ ಎಂಬ ಊರಿದೆ ಅದೇ ತುಕಾರಾಮರ ಜನ್ಮಗ್ರಾಮ ಅವರು ಮೊದಲು ವೈಶ್ಯವೃತ್ತಿಯವರು ಧನ-ಸಂಪನ್ನರು ಆದರೂ,ಪಾಂಡು-ರಂಗನ ಶ್ರೇಷ್ಠ ಭಕ್ತರು ಒಮ್ಮೆ ಬರಗಾಲ ಬಿದ್ದಾಗ, ಮನೆಯ ಕಮತ-ಕಟ್ಟೆ ಮುರಿಯಿತು ಅಂಗಡಿಯ ವ್ಯಾಪಾರದಲ್ಲಿ ಹಾನಿ ಆಯಿತು ಬಡತನ ಬೆನ್ನಟ್ಟಿತು ಮನೆಯಲ್ಲಿ ಅನೇಕರು ಸತ್ತರು, ಇದರಿಂದ ಸಂಸಾರಕ್ಕೆ ಬೇಸತ್ತು ಮನೆತನದ ದೇವರಾದ ಪಾಂಡುರಂಗನ ಭಜನೆಯಲ್ಲಿ ಕಾಲ ಕಳೆಯಹತ್ತಿದರು



ಸಂತ ತುಕಾರಾಮರು

**ತುಕಾರಾಮರ ಅಭಂಗಗಳು** — ನಾಮದೇವರು ಪ್ರಾಕೃತಭಾಷೆಯಲ್ಲಿ ಶತಕೋಟಿ ಗ್ರಂಥಗಳನ್ನು ಬರೆಯುವೆವೆಂದು ಪ್ರತಿಜ್ಞೆ ಮಾಡಿದ್ದರಂತೆ ದೇವರ ಇಚ್ಛೆಯಂತೆ ಕೆಲವು ಅಪೂರ್ಣವಾಗಿ ಉಳಿದುವು ಮುಂದೆ ಅದೇ ಪಾಂಡುರಂಗನ ಪ್ರೇರಣೆಯಿಂದಲೇ ತುಕಾರಾಮರು ಗ್ರಂಥಸಂಖ್ಯೆಯನ್ನು ಪೂರ್ಣಮಾಡಿದರು ತುಕಾರಾಮರ ಭಕ್ತಿಪರವಾದ ಅಭಂಗಗಳು ಅಪಾರವಾಗಿವೆ


ಶ್ರೀ ರಾಮದಾಸರು

**ಶಿವಾಜಿಯ ಸಹಾಯಕರು** — ಶ್ರೀ ರಾಮದಾಸರು ಶಿವಾಜಿರಾಜನಿಗೆ ಪ್ರತ್ಯಕ್ಷ ಗುರುಗಳಾಗಿದ್ದಂತೆ, ತುಕಾರಾಮರು ಸಹಾಯಕರಾದ ರಾಜಗುರುಗಳಾಗಿದ್ದರು ಆದರೂ, ಭಕ್ತಿಪಂಥದಲ್ಲಿಯೇ ಇವರ ಕೀರ್ತಿ ಹೆಚ್ಚಾಗಿದೆ

## ಗುಜರಾಥ

**ನರಸಿಂಹ ಮೇಹತಾ** —ನರಸಿಂಹ ಮೇಹತಾ ಅವರ ಮೂಲ ಹೆಸರು ನರಸಿಂಹ ಮಹಂತ ಇವರು ಜುನಾಗಡದ ಒಬ್ಬ ನಾಗರ ಬ್ರಾಹ್ಮಣನ ಮಕ್ಕಳು ಚಿಕ್ಕಂದಿನಲ್ಲಿಯೇ ತಾಯ್ತಂದೆಗಳನ್ನು ಕಳೆದುಕೊಂಡು ಚಿಕ್ಕಪ್ಪ-ದೊಡ್ಡಪ್ಪಂದಿರ ಆಶ್ರಯದಲ್ಲಿ ನಿಂತರು ಎಳೆತನದಲ್ಲಿ ಇವರು ಕೇವಲ ಆಟಗುಳಿ, ಮನೆಗೆಲಸಕ್ಕೆ ಮೈಗಳ್ಳರು ಇದರಿಂದ ಒಮ್ಮೆ ಇವರ ಅತ್ತಿಗೆ ಸಿಟ್ಟಾಗಿ ಬಾಯಿಗ ಬಂದಂತೆ ಬೈದಳು ನರಸಿಂಹ ಮಹಂತರಿಗ ಮನೆ ಬೇಡವಾಯಿತು, ಹಾಗೆಯೇ ಎಲ್ಲಿಗೂ ಹೊರಟರು



ಶ್ರೀ ನರಸಿಂಹ ಮೇಹತಾ

**ಈಶ್ವರದರ್ಶನ** — ಕಟ್ಟಡವಿಯಲ್ಲಿ ನಡೆದು ನಡೆದು ಸಾಕಾಯಿತು ಕೊನೆಗೊಂದು ಶಿವಾಲಯವು ಕಂಡಿತು ಅಲ್ಲಿಯೇ ಮಲಗಿಬಿಟ್ಟರು ಏಳು ದಿನಗಳ ವರೆಗೆ ಅನ್ನವಿಲ್ಲ, ನೀರಿಲ್ಲ ನಡುನಡುವೆ 'ದೇವಾ, ನನ್ನನ್ನೇಕೆ ಬದುಕಿಸಿರುವ' ಎಂದು ನಿಟ್ಟುಸಿರು! ದೇವರಿಗೆ ದಯೆ ಬಂದು ಪ್ರತ್ಯಕ್ಷನಾದನು 'ನಿನ್ನ ಪ್ರಿಯ ವಸ್ತುವನ್ನೇ ನನಗ ಕೊಡು' ಎಂದು ಮಹಂತರು ಕೇಳಿದರು ಪರಮಾತ್ಮನು ಕೃಷ್ಣನಾಮವೇ ನನಗೆ ಅತಿ ಪ್ರಿಯವಾದುದು

ಅದನ್ನು ನಿನಗೆ ಕೊಡುವುದಲ್ಲದೆ, ಕೃಷ್ಣನ ಲೀಲೆಯನ್ನೂ ನಿನಗೆ ಪ್ರತ್ಯಕ್ಷ ವಾಗಿ ತೋರಿಸುವೆ– ಎಂದು ಯಮುನಾ ತೀರಕ್ಕೆ ಕರೆದೊಯ್ದನು

**ರಾಸಕ್ರೀಡೆಯನ್ನು ಕಂಡುದು** — ಅಲ್ಲಿ ಶ್ರೀಕೃಷ್ಣನು ಗೋಪಿಕಾಸ್ತ್ರೀಯರೊಡನೆ ಭಕ್ತಿಪರವಶನಾಗಿ ರಾಸಕ್ರೀಡೆಯಾಡುತ್ತಿದ್ದನು ಆಗ ನರಸಿಂಹ ಮಹಂತನ ಮೇಲೆ ಆತನ ದೃಷ್ಟಿ ಬಿತ್ತು ಈ ಭಕ್ತನಿಗೆ ಕೃಷ್ಣನ ಅನುಗ್ರಹವೇ ಆಯಿತು, ‹ನೀನು ಕಂಡ ಈ ವಿಲಾಸವನ್ನೇ ಬಣ್ಣಿಸುತ್ತ ಭಕ್ತಿಪಂಥವನ್ನು ಹರಡು’ ಎಂದು ಹೇಳಿದನು

**ಕೈಕೊಂಡ ಕಾರ್ಯ** — ಶ್ರೀಕೃಷ್ಣನ ದರ್ಶನದಿಂದ ನರಸಿಂಹ ಮೇಹತಾರಿಗೆ ಅಲೌಕಿಕ ಕವಿತ್ವಶಕ್ತಿ ಬಂದಿತು ಆಮೇಲೆ ಕೃಷ್ಣನ ಎಲ್ಲ ಲೀಲೆಗಳನ್ನು— ಹೆಚ್ಚಾಗಿ ರಾಸಕ್ರೀಡೆಯನ್ನು— ಬಣ್ಣಿಸಿ, ಗುಜರಾಥಿ ಭಾಷೆಯಲ್ಲಿ ಹಾಡುಗಳನ್ನು ಹೆಣೆದಿದ್ದಾರೆ, ಶ್ರೀಕೃಷ್ಣಭಕ್ತಿಯನ್ನು ಪ್ರಚಾರ ಮಾಡಿದ್ದಾರೆ

## ಅಭ್ಯಸನಗಳು

೧ ತೆರವಿದ್ದ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ

(ಅ) ತುಳಸೀದಾಸರು ಎಂಬ ಕಾವ್ಯವನ್ನು . ಭಾಷೆಯಲ್ಲಿ ಬರೆದಿದ್ದಾರೆ

(ಆ) ಮೀರಾಬಾಯಿಯ ಗಂಡನ ಹೆಸರು ಆಕೆಯು ಮುಂದೆ ಗಳ ಶಿಷ್ಯಳಾದಳು

(ಇ) ಶ್ರೀಚೈತನ್ಯರು ನ ಆರಾಧಕರು ಇವರು ಗಳಲ್ಲಿ . ಧರ್ಮವನ್ನು ಹೆಚ್ಚಾಗಿ ಹಬ್ಬಿಸಿದರು

(ಈ) ಆತನ .ಗಳೂ ಆಳ್ವಾರರ ಆರಾಧ್ಯದೇವತೆಗಳು

(ಉ) ಶ್ರೀ ಬಸವೇಶ್ವರರು . ಮತದ ಪುನರುದ್ಧಾರ ಮಾಡಿದರು

(ಊ) ಶ್ರೀಮಧ್ವಾಚಾರ್ಯರು ಮತಸ್ಥಾಪಕರು

(ಎ) ಪುರಂದರದಾಸರಿಗೆ ವಿಜಯನಗರದ ರಲ್ಲೇ ಜ್ಞಾನೋಪದೇಶವಾಯಿತು

(ಏ) ಕನಕದಾಸರು ಗೆ ಬಂದು ರ ಆರಾಧಕರಾಗಿ ಉಳಿದರು.

(ಐ) ಜ್ಞಾನದೇವರು ನ ಭಕ್ತರು

(ಒ) ಏಕನಾಥರನ್ನು . ನ ಅವತಾರವೆಂದು ಹೇಳುತ್ತಾರೆ

(ಓ) ಒಮ್ಮೆ ಬರಗಾಲ ಬಿದ್ದಾಗ ತುಕಾರಾಮರ ಮುರಿಯಿತು .

ದಲ್ಲಿ ಹಾನಿಯಾಯಿತು ಬೇಸತ್ತರು ಭಜನೆಯಲ್ಲಿ . .
ಹತ್ತಿದರು

(ಔ) ಶ್ರೀ ನ ದರ್ಶನದಿಂದ ನರಸಿಂಹ ಮೆಹತಾರಿಗೆ ಅಲೌಕಿಕ .
ಬಂದಿತು

೨. ಕೆಳಗೆ ಕಾಣಿಸಿದ ವ್ಯಕ್ತಿಗಳ ಧಾರ್ಮಿಕ ವೈಶಿಷ್ಟ್ಯವನ್ನು ಎರಡೆರಡು ವಾಕ್ಯಗಳಲ್ಲಿ ಹೇಳಿರಿ
ಬಸವೇಶ್ವರ, ತಿರುಪ್ಪನಾಳ್ವಾರ, ಕನಕದಾಸ, ತುಕಾರಾಮ, ಮೀರಾಬಾಯಿ.

೩ ಕನಕದಾಸನ ಕಥೆಯನ್ನು ಅಭಿನಯ ಮಾಡಿರಿ (ಗಂಡುಮಕ್ಕಳ ಶಾಲೆಯಲ್ಲಿ)

೪. ಮೀರಾಬಾಯಿಯ ಕಥೆಯನ್ನು ಅಭಿನಯಿಸಿರಿ (ಹೆಣ್ಣುಮಕ್ಕಳ ಶಾಲೆಯಲ್ಲಿ)

---

# ಭಾರತದಲ್ಲಿ ಧಾರ್ಮಿಕ ಆಂದೋಲನೆಗಳು



# ೧೬ ಮರಾಠಾ ರಾಜ್ಯಸ್ಥಾಪಕ ಶಿವಾಜಿ

(೧೬೩೦-೧೬೮೦)

**ಮಹಾಪುರುಷನ ಅಗತ್ಯ** — ವಿಜಯನಗರದ ಸಾಮ್ರಾಜ್ಯದ ಅಳಿಗಾಲದ ನಂತರ, ಹಿಂದುಗಳನ್ನು ರಕ್ಷಿಸುವ ಬಲಾಢ್ಯ ಅರಸರು ಯಾರೂ ಉಳಿಯಲಿಲ್ಲ. ಹಿಂದುಗಳ ಈ ಅಧೋಗತಿಯನ್ನು ನಿಲ್ಲಿಸಿ, ಅವರನ್ನು ಮುನ್ನಡೆಯಿಸಲು ಒಬ್ಬ ಮುಂದಾಳು ಮಹಾಪುರುಷನು ಬೇಕಾಗಿದ್ದನು ಏಕೆಂದರೆ ಕಾಳಗದ ಕಣದಲ್ಲಿ ನಿಂತು ಬಾದಶಹನನ್ನು ಇದಿರಿಸುವ ಗಂಡೆದೆ ಯಾರಲ್ಲಿಯೂ ಇರಲಿಲ್ಲ ಇಂತಹ ಮಹತ್ಕಾರ್ಯವನ್ನು ಮಾಡಿದವನೆಂದರೆ ಶಿವಾಜಿರಾಜನು

**ಶಿವಾಜಿಯ ಬಾಲ್ಯ ಮತ್ತು ಶಿಕ್ಷಣ** — ಭೋಸಲೆ ಎಂಬ ಮನೆತನದ ಶೂರ ಮರಾಠಾ ಸರದಾರ ಶಹಾಜಿಯು, ವಿಜಾಪುರ ಬಾದಶಹರಲ್ಲಿ ಸರದಾರನಾಗಿದ್ದನು ಈತನ ಧರ್ಮಪತ್ನಿಯ ಹೆಸರು ಜೀಜಾಬಾಯಿ ಈಕೆ ವೀರಪತ್ನಿಯಾಗಿದ್ದಂತೆ ವೀರಮಾತೆಯೂ ಆಗಿದ್ದಳು ಈಕೆಯ ಹೊಟ್ಟೆಯಲ್ಲಿಯೇ ೧೬೩೦*ನೆಯ ವರ್ಷ ಶಿವಾಜಿಯ ಜನ್ಮವಾಯಿತು ಈತನೇ ಮುಂದೆ ಸ್ವರಾಜ್ಯಸ್ಥಾಪಕ ಶಿವಾಜಿ ಮಹಾರಾಜನೆಂದು ಇತಿಹಾಸಪ್ರಸಿದ್ಧನಾದನು

ಶಹಾಜಿ ಭೋಸಲೆಗೆ ಪುಣೆ ಸುಪೆ ಜಹಗೀರುಗಳಿದ್ದುವು ಆ ಕಾಲದ ಶೂರ ಸರದಾರರ ಸ್ವಭಾವಕ್ಕೆ ತಕ್ಕಂತೆ ಈತನೂ ಒಂದೆರಡು ಸಲ ಸ್ವತಂತ್ರನಾಗಲು ಪ್ರಯತ್ನಿಸಿದನು, ಆದರೆ, ಫಲವಾಗಲಿಲ್ಲ ಆದರೂ ಪ್ರಯತ್ನವನ್ನು ಬಿಟ್ಟಿರಲಿಲ್ಲ ತನ್ನ ಜಹಗೀರಿಯಲ್ಲಿಯ 'ಮಾವಳ' ಎಂಬ ಗುಡ್ಡಗಾಡಿನ ಪ್ರಜೆಗಳನ್ನು ಒಳ್ಳೆಯ ರೀತಿಯಿಂದ ನಡೆಸಿಕೊಂಡು, ಅವರ ಪ್ರೇಮವನ್ನು ಸಂಪಾದಿಸಿದ್ದನು ಇದರ ಉಪಯೋಗವನ್ನು ಮಕ್ಕಳಾದರೂ ಮಾಡಿಕೊಳ್ಳಲಿ ಎಂದು ಆತನ ಆಸೆ ಇದಕ್ಕೆ ತಕ್ಕಂತೆ ಶಿವಾಜಿ, ಎಳತನದಲ್ಲಿಯೇ ದಿಟ್ಟತನ ಜಾಣತನಗಳನ್ನು ತೋರಿಸಿದನು ಆದುದರಿಂದ, ಮಗನ ಶಿಕ್ಷಣ ಒಳಿತಾಗಿಯೇ ನಡೆಯಲೆಂದು ಶಹಾಜಿ, ಒಳ್ಳೆಯ ಗುರುಗಳನ್ನೇ ನಿಯಮಿಸಿದನು ಶಿವಾಜಿಯು ವಿದ್ಯಾಬುದ್ಧಿಗಳನ್ನು ಬಹುಬೇಗ ಕಲಿತನು, ಅದರೊಡನೆಯೇ ಕುದುರೆಯ ಏರಾಟ, ಕತ್ತಿ-ಢಾಲುಗಳ ಉಪಯೋಗ, ದಾಂಡಪಟ್ಟೆಗಳ ತಿರುವಾಟ ಇವುಗಳಲ್ಲಿ ಪ್ರವೀಣನಾದನು ಈ ಹೊತ್ತಿಗೆ ತಾಯಿ ಜೀಜಾಬಾಯಿಯು ಮಗನನ್ನು ಕರೆದುಕೊಂಡು ಪುಣೆಯಲ್ಲಿ ಇರುತ್ತಿದ್ದಳು ಅಲ್ಲಿ ದಾದೋಜಿ ಕೊಂಡದೇವ ಎಂಬ ವಿದ್ವಾಂಸನಿದ್ದನು ಅವನು ಶಹಾಜಿಯ ಜಹಗೀರಿಯ ವ್ಯವಸ್ಥಾಪಕನು ಅವನೇ ಶಿವಾಜಿಗೆ ಶ್ರೇಷ್ಠವಾದ ರಾಜಕೀಯ ಶಿಕ್ಷಣವನ್ನು

---

* ಕೆಲವು ಇತಿಹಾಸಗಳಲ್ಲಿ ೧೬೨೭ ಎಂದೂ ಇದೆ

ಕೊಟ್ಟನು ಜೀಜಾಬಾಯಿಯು ಸಮಯ ಸಿಕ್ಕಾಗಲೆಲ್ಲ ಭಾರತದ ವೀರ ಪುರುಷರ ಚರಿತ್ರಗಳನ್ನು ಮಗನಿಗೆ ಹೇಳುತ್ತಿದ್ದಳು ಈ ನಡುನಡುವೆ ದಾದಾಜಿಯು ಶಿವಾಜಿಯನ್ನು ಕರೆದುಕೊಂಡು ಹೋಗಿ ಮಾವಳಿ ಜನರ ಪರಿಚಯ ಮಾಡಿಕೊಡುತ್ತಿದ್ದನು ತಾನಾಜಿ ಮಾಲುಸರೆ, ಏಸಾಜಿ ಕಂಕ, ಬಾಜೀ ಪಾಸಲಕರ ಮುಂತಾದ ಮಾವಳೀ ವೀರರಂತೂ ಶಿವಾಜಿಗೆ ಜೀವದ ಗೆಳೆಯರಾದರು. ಈ ಎಲ್ಲ ಸನ್ನಿವೇಶಗಳೂ ಶಿವಾಜಿಯ ವೀರಹೃದಯದಲ್ಲಿ ಸ್ವರಾಜ್ಯಸ್ಥಾಪನೆಯ ಬೀಜವನ್ನು ಬಿತ್ತಿದುವು

**ಸ್ವರಾಜ್ಯಸ್ಥಾಪನೆಯ ಸಂಕಲ್ಪ** — ದಾದೋಜಿ ತೀರಿಕೊಂಡ ಬಳಿಕ, ಜಹಾಗೀರಿಯ ವ್ಯವಸ್ಥೆಯನ್ನು ಶಿವಾಜಿಯೇ ವಹಿಸಿಕೊಂಡನು ಆ ಕಾಲಕ್ಕೆ ನೆರೆಯಲ್ಲಿಯೇ ಹಲವು ಜನ ಕಿಲ್ಲೆದಾರರಿದ್ದರು ಅವರೆಲ್ಲ ಶೂರರು, ಹಿಂದು ಧರ್ಮದ ಅಭಿಮಾನಿಗಳು ಅವರನ್ನೆಲ್ಲ ಒಲಿಸಿಕೊಂಡು ತನ್ನ ಬೆಂಬಲಕ್ಕಿಟ್ಟುಕೊಂಡನು ಇದೇ ಹೊತ್ತಿಗ ತುಕಾರಾಮ, ರಾಮದಾಸರೆಂಬ ರಾಜಕೀಯ ಸಾಧುಗಳು ಈತನನ್ನು ಕಂಡು ಸ್ವರಾಜ್ಯಸ್ಥಾಪನೆಗೆ ಹುರುಪುಕೊಟ್ಟರು, ಹರಸಿದರು ಅಲ್ಲಲ್ಲಿಯ ವೀರ ಸರದಾರರು ಶಿವಾಜಿಯನ್ನು ಕಂಡು, ತಾವೂ ಸಹಾಯ ಮಾಡುವುದಾಗಿ ವಚನ ಕೊಟ್ಟರು ಕುಲದೇವತೆಯಾದ ಅಂಬಾಭವಾನಿಯ ಕೃಪೆಯೂ ಇವನಿಗಿತ್ತು ಪ್ರಜೆಗಳಂತೂ ಜೀವಕ್ಕೆ ಜೀವ ಕೊಡಲು ಸಿದ್ಧರಾದರು, ಶಿವಾಜಿಯನ್ನು ಶಿವನ ಅವತಾರವೆಂದು ಭಾವಿಸಿದರು ಮಾವಳೀ ಜನರೂ ಬೆನ್ನುಕಟ್ಟಿದರು ಅಲ್ಲಿಂದಲೇ ಸ್ವರಾಜ್ಯಸ್ಥಾಪನೆಯ ಸಂಚು ಆರಂಭವಾಯಿತು



ಛತ್ರಪತಿ ಶಿವಾಜಿ

**ಪೂರ್ವಸಿದ್ಧತೆ** — ಆ ಕಾಲಕ್ಕೆ ಉತ್ತರದಲ್ಲಿ ಮೊಗಲ ಬಾದಶಹರಲ್ಲಿ ಪ್ರಚಂಡ ಸೇನಾಸಿದ್ಧತೆಯಿತ್ತು, ಆದರೆ ಅವರು ದಕ್ಷಿಣದಲ್ಲಿ ಅಷ್ಟೊಂದು ಬಿಗುವಿನ ಆಳಿಕೆಯನ್ನು ಇಟ್ಟಿರಲಿಲ್ಲ ದಕ್ಷಿಣದ ಆದಿಲಶಾಹಿಯಲ್ಲಿ ಅಷ್ಟೊಂದು ಸಾಮರ್ಥ್ಯವಿರಲಿಲ್ಲ, ಆದರೂ ಗಟ್ಟಿಮುಟ್ಟಾದ ಸಿದ್ಧತೆಮಾಡಿಕೊಂಡೇ ಶಿವಾಜಿಯು ಸ್ವರಾಜ್ಯಸ್ಥಾಪನೆಯ ಸಾಹಸ ಮಾಡಬೇಕಾಯಿತು.

ಈ ಕಾರ್ಯಕ್ಕಾಗಿ ಮೊತ್ತಮೊದಲು ಭದ್ರವಾದ ತೋರಣಕೋಟೆಯನ್ನು ವಶಪಡಿಸಿಕೊಂಡನು ಆ ಕೋಟೆಯನ್ನು ಸರಿಪಡಿಸಲು ಅಗಿಸಿದಾಗ ಹೇರಳ ಹಣ ಸಿಕ್ಕಿತಂತೆ ಅದರಿಂದ ಕೋಟೆಯನ್ನು ಭದ್ರಪಡಿಸಿ, ಮದ್ದು-ಗುಂಡು ಗಳನ್ನು ಸಂಗ್ರಹಿಸಲು ಅನುಕೂಲವಾಯಿತು ಮುಂದೆ ರಾಯಗಡ ಕೋಟೆ ಯನ್ನು ಕಟ್ಟಿಸಿದನು ಆ ಮೇಲೆ ಕೊಂಡಾಣೆ, ಪುರಂದರ, ಕಲ್ಯಾಣ ಕೋಟೆ ಗಳು ವಶವಾದುವು ಆಬಾಜಿ ಸರದಾರನು ಕಲ್ಯಾಣದ ಮುಸಲ್ಮಾನ ಸರದಾರನ ಸುಂದರ ಸೊಸೆಯನ್ನು ಸೆರೆಹಿಡಿದು, ಶಿವಾಜಿರಾಜನೆದುರಿಗೆ ತಂದು ನಿಲ್ಲಿಸಿದನು ಆಗ ಶಿವಪ್ರಭು ಆಬಾಜಿಗೆ ‹ಇಂತಹ ಹೀನ ಕೆಲಸಗಳನ್ನು ಮಾಡತಕ್ಕುದಲ್ಲ’ ಎಂದು ಬುದ್ಧಿ ಹೇಳಿದುದಲ್ಲದೆ, ‘ಇಂತಹ ಸುಂದರ ಸ್ತ್ರೀಯ ಹೊಟ್ಟೆಯಲ್ಲಿ ನಾನು ಹುಟ್ಟಿದ್ದರೆ ಎಂತಹ ಸುಂದರನಾಗಬಹುದಿತ್ತು!” ಎಂದು ಆಕೆಯನ್ನು ತಾಯಿಯಂತೆ ಸನ್ಮಾನಿಸಿ ಕಳಿಸಿದನಂತೆ! ಹೀಗೆ ಶೌರ್ಯ, ಸಾಹಸ, ಔದಾರ್ಯಗಳಿಂದ ಇಡಿಯ ಕೊಂಕಣಪ್ರಾಂತವೇ ಶಿವಾಜಿಯ ವಶವಾಯಿತು

**ಶಹಾಜಿಯ ಬಿಡುಗಡೆ** — ಶಿವಾಜಿಯ ಈ ಸಾಹಸ-ಸಿದ್ಧತೆಗಳ ಸುಳಿವು ಆದಿಲಶಾಹಿಗೆ ಅಂಜಿಕೆಯನ್ನು ಹುಟ್ಟಿಸಿತು ಸಸಿಯಿರುವಾಗಲೇ ಕಿತ್ತು ಬಿಡುವುದು ಒಳಿತೆಂದು ಶಾಹಿ ಅರಸರು ಹಂಚಿಕೆಯನ್ನು ಹುಡುಕಿದರು ಶಿವಾ ಜಿಯ ತಂದೆ ಹೇಗೂ ಅವರಲ್ಲಿ ಸರದಾರನಾಗಿದ್ದನು ಆತನ ಮೇಲೆ ಸುಳ್ಳೇ ಸಂಶಯದ ಆರೋಪ ತಂದು ಸೆರೆಯಲ್ಲಿಟ್ಟರು! ಆತನ ಬಿಡುಗಡೆಯ ನೆವ ದಿಂದ ಶಿವಾಜಿಯನ್ನು ತಮ್ಮ ಅಂಕಿತದಲ್ಲಿಟ್ಟುಕೊಳ್ಳಬೇಕೆಂದು ಅವರ ಇಚ್ಛೆ, ಆದರೆ ಶಿವಾಜಿಯು ಮೊಗಲ ಬಾದಶಹರೊಡನೆ ಪತ್ರವ್ಯವಹಾರ ಮಾಡಿ, ಮೇಲಿಂದಲೇ ವಿಜಾಪುರದವರಿಗೆ ಪತ್ರವನ್ನು ಬರೆಸಿದನು, ತಂದೆಯ ಬಿಡು-ಗಡೆ ಮಾಡಿದನು ಆದಿಲಶಹನು ಒಳಗೇ ನೊಂದುಕೊಂಡನು

**ಅಫಝುಲಖಾನನ ಕೊನೆ** — ಈ ಹೊತ್ತಿಗೆ ಶಿವಾಜಿಯು ವಿಜಾಪುರ ಸರ-ದಾರನ ಜಾವಳಿ ಪ್ರಾಂತವನ್ನು ಗೆದ್ದು, ಸೆರಯಲ್ಲಿಯೇ ಪ್ರತಾಪಗಡ ಕೋಟೆ ಯನ್ನು ಕಟ್ಟಿಸಿದನು ವಿಜಾಪುರದ ಶಹನಿಗೆ ಸಿಟ್ಟು ಬಂದಿತು ಶಿವಾಜಿಯ ಪಾರುಪತ್ಯ ಮಾಡುವುದಕ್ಕಾಗಿ ಅಫಝುಲಖಾನ ಎಂಬ ಶೂರ ಸರದಾರನನ್ನು ಕಳಿಸಿಕೊಟ್ಟನು ಖಾನನು ತನ್ನ ವಕೀಲನ ಮುಖಾಂತರ ಶಿವಾಜಿಯನ್ನು ಕರೆಸಿಕೊಂಡನು ಭೆಟ್ಟಿಯ ಕಾಲಕ್ಕೆ ಖಾನನು ಶಿವಾಜಿಯನ್ನು ಕರಾರಿಯಿಂದ ಇರಿಯಲು ಪ್ರಯತ್ನಿಸಿದನು ಕೂಡಲೆ ಶಿವಾಜಿಯು ತನ್ನ ಉಕ್ಕಿನಂಗಿಯ ಮರೆಯಲ್ಲಿದ್ದ ಹುಲಿಯುಗುರುಗಳಿಂದ ಅವನನ್ನು ಕೊಂದನು ಅಫಝುಲ ಖಾನನ ಅಂತ್ಯವಾಗುತ್ತಲೆ ವಿಜಾಪುರದ ಸೈನ್ಯ ದಿಕ್ಕೆಟ್ಟು ಓಡಿತು. ಆಮೇಲೆ ಖಾನನ ಮಗ ಫಾಜಲ್‌ಖಾನನು ಸಿದ್ದೀ ಜೋಹರ್ ಎಂಬ ಶೂರ ಸರದಾರ

ನೊಡನೆ ಶಿವಾಜಿಯ ಪನ್ಹಾಳಗಡ ಕೋಟೆಯನ್ನು ಮುತ್ತಿದನು ಈ ಪ್ರಸಂಗದಲಿ ಶಿವಾಜಿಯ ಜೀವದ ಗೆಳೆಯ ಬಾಜೀಪ್ರಭು ಅವರಿಗೆ ಇದಿರಾಗಿ ಕಾದ ಹತ್ತಿದನು ಬಾಜೀಪ್ರಭು ಆ ಹೋರಾಟದಲ್ಲಿ ವೀರಸ್ವರ್ಗವನ್ನು ಹೊಂದಿದನು ಅಷ್ಟಕ್ಕೇ ವಿಜಾಪುರದ ಸೈನ್ಯವು ಹಿಂದಕ್ಕೆ ತಿರುಗಿತು ಮುಂದೆ ವಿಜಾಪುರದವರೊಡನೆ ಕಾದಾಡಬಾರದೆಂದು ಶಹಾಜಿಯು ಮಗನಿಗೆ ಅಪ್ಪಣೆ ಮಾಡಿದನು. ಅಲ್ಲಿಗೆ ಆ ಹೋರಾಟ ನಿಂತಿತು

**ಮೊಗಲ ಸರದಾರನ ಪಲಾಯನ** — ಶಿವಾಜಿಯ ಸ್ವರಾಜ್ಯಸ್ಥಾಪನೆಯ ಸುದ್ದಿ ಮೊಗಲರ ಕಿವಿಗೂ ಮುಟ್ಟಿತ್ತು ಅವರೂ ಆತನನ್ನು ದಂಡಿಸುವ ವಿಚಾರದಲ್ಲಿದ್ದರು ಶಿವಾಜಿಯ ಸರದಾರ ನೇತಾಜಿ ಪಾಲ್ಕರನು ಮೊಗಲರ ರಾಜ್ಯವನ್ನು ಪ್ರವೇಶಿಸಿ, ಔರಂಗಾಬಾದದ ವರೆಗೂ ಊರುಗಳನ್ನು ಸುಲಿದನು ಆಗ ಔರಂಗಜೇಬನು ಶಿವಾಜಿಯನ್ನು ದಂಡಿಸಲು, ಶಾಯಿಸ್ತೇಖಾನನೆಂಬ ಒಬ್ಬ ಶೂರ ಸರದಾರನನ್ನು ಕಳಿಸಿದನು ಅವನು ಪುಣೆಯಲ್ಲಿ ಬೀಡುಬಿಟ್ಟನು ಶಿವಾಜಿಗೆ ಈ ಸುದ್ದಿ ತಿಳಿಯಿತು ಆತನು ಸಿಂಹಗಡದಿಂದ ಬಂದು ಪುಣೆಯ ಹೊರಮಗ್ಗಲು ಶೂರ ಸೈನಿಕರೊಡನೆ ಅಡಗಿಕೊಂಡು ಕುಳಿತನು ಮಧ್ಯ-ರಾತ್ರಿಯ ಸುಮಾರಿಗೆ ಮದುವೆಯ ಮೆರೆವಣಿಗೆಯ ನೆವದಿಂದ ಪುಣೆಯನ್ನು ಪ್ರವೇಶಿಸಿದನು ಖಾನನ ಬೀಡಾರವನ್ನು ಮುತ್ತಿದನು ಖಾನನು ಗಡಬಡಿಸಿ ಕಿಡಕಿಯೊಳಗಿಂದ ಪಾರಾಗಿ ಹೋಗುತ್ತಿದ್ದನು ಅಷ್ಟರಲ್ಲಿ ಶಿವಾಜಿಯು ಖಡ್ಗವನ್ನು ಬೀಸಿದನು ಖಾನನ ಕೈಬೆರಳು ಕತ್ತರಿಸಿದುವು ಗಡಬಿಡಿಯಲ್ಲಿ ಖಾನನ ಮಗ ಫತ್ತೇಖಾನನ ಕೊಲೆಯಾಯಿತು, ಮತ್ತಿಬ್ಬರು ಮಕ್ಕಳು ಗಾಯಹೊಂದಿದರು ಮೊಗಲ ಸೈನ್ಯವು ತಳಕಿತ್ತಿತು ಶಿವಾಜಿಯು ಸಿಂಹ-ಗಡಕ್ಕೆ ಸಾಗಿದನು ಶಾಹಿಸ್ತೇಖಾನನಿಗಾದ ಶಿಕ್ಷೆಯನ್ನು ಕಂಡು ಔರಂಗಜೇಬನ ಕಣ್ಣು ಮತ್ತಿಷ್ಟು ಕೆಂಪಗಾದುವು

**ದಿಲ್ಲಿಗೆ ಆಗಮನ** — ಈ ಸಮಯಕ್ಕೆ ಶಹಾಜಿಯ ಮರಣವಾಯಿತು. (೧೬೬೪) ಶಿವಾಜಿಗೆ ಬಹಳ ದುಃಖವೆನಿಸಿತು ಆದರೂ ರಾಜ್ಯಸ್ಥಾಪನೆಯ ಕೆಲಸವನ್ನು ನಿಲ್ಲಿಸುವಂತಿರಲಿಲ್ಲ ಮುಂದೆ ತುಸು ದಿನಗಳಲ್ಲಿಯೇ ಮೊಗಲ ರಾಜ್ಯದ ಕೆಲವು ಕೋಟೆಗಳನ್ನು ತೆಗೆದುಕೊಂಡನು ಅದರಂತೆ ವಿಜಾಪುರದವರ ಕೋಟೆಗಳನ್ನೂ ಹಿಡಿದುಕೊಂಡನು ಮತ್ತೆ ಮೊಗಲರ ಸುರತ ಪಟ್ಟಣವನ್ನು ಸುಲಿದನು ಇದರಿಂದ ವಿಜಾಪುರದವರೂ ಮೊಗಲರೂ ಸಿಟ್ಟಾಗಿ ಒಮ್ಮೆಲೆ ಶಿವಾಜಿಯ ಮೇಲೆ ದಂಡೆತ್ತಿಬಂದರು ಮೊಗಲರ ಕಡೆಗೆ ಜಯ-ಸಿಂಗ ಮತ್ತು ದಿಲೇರಖಾನ ಎಂಬ ಶೂರ ಸೇನಾಪತಿಗಳಿದ್ದರು ಇವರನ್ನು ಇದಿರಿಸುವುದು ಶಕ್ಯವಿಲ್ಲವೆಂದು ಶಿವಾಜಿಗೆ ತಿಳಿಯಿತು, ಜಯಸಿಂಗನೊಡನೆ

ಸಂಧಾನವನ್ನು ಬೆಳೆಸಿದನು ಆ ಮೇಲೆ ಆತನ ಹೇಳಿಕೆಯಂತೆ, ಔರಂಗಜೇಬ ನಲ್ಲಿಗೆ ಸಂಭಾಜಿ ಸಹಿತವಾಗಿ ತೆರಳಿದನು. ಮೊಗಲರ ಆಸ್ಥಾನದಲ್ಲಿದ್ದ ರಜಪೂತರಾಜರೊಂದಿಗೆ ಸಂಧಾನ ನಡೆಯಿಸಿ, ಅವರನ್ನೆಲ್ಲ ಒಟ್ಟುಗೂಡಿಸಿ ಇಡೀ ಭಾರತದಲ್ಲಿ ಒಮ್ಮೆಲೆ ಕ್ರಾಂತಿಯನ್ನು ಎಬ್ಬಿಸಬೇಕೆಂಬುದೇ ಶಿವಾಜಿಯ ಉದ್ದೇಶವಾಗಿತ್ತು ಅದಕ್ಕಾಗಿಯೇ ಅವನು ಆಗ್ರಾಕ್ಕೆ ತೆರಳಲು ಒಪ್ಪಿದ್ದು, ಆದರೆ, ರಜಪೂತರು ಅಷ್ಟು ಉತ್ಸಾಹ ತೋರಿಸಲಿಲ್ಲ ಓಲಗದಲ್ಲಿ ಬಾದಶಹ ನಿಗೂ ಶಿವಾಜಿಗೂ ಮಾತಿಗೆ ಮಾತು ಬೆಳೆಯಿತು. ಆಗ ಶಿವಾಜಿ, ಸಂಭಾಜಿ ಇವರನ್ನು ಸೆರೆಯಲ್ಲಿಡಲಾಯಿತು ಅಲ್ಲಿಂದ, ಶಿವಾಜಿಯು ಬಹು ಚಮತ್ಕಾರದಿಂದ ತಪ್ಪಿಸಿಕೊಂಡು ಸ್ವದೇಶಕ್ಕೆ ಹಿಂದಿರುಗಿದನು ಮುಂದೆ ಶಿವಾಜಿಯು ನರಗುಂದ, ಧಾರವಾಡ, ಬಂಕಾಪುರ ಮೊದಲಾದುವುಗಳನ್ನು ವಶಪಡಿಸಿಕೊಂಡನು ಈ ರೀತಿ ತನ್ನ ರಾಜ್ಯವನ್ನು ವಿಸ್ತರಿಸಿದನು

**ಸಿಂಹಾಸನಾರೋಹಣ** —(೧೬೭೪) ಶಿವಪ್ರಭುವಿನ ಆಳಿಕೆಯಲ್ಲಿ ಈ ವರುಷ ಒಳ್ಳೇ ಮಹತ್ತ್ವದ್ದು ಇಪ್ಪತ್ತೆಂಟು ವರುಷಗಳ ಸಂತತ ಸಾಹಸದ ಅವಧಿಯಲ್ಲಿ, ಮಹಾರಾಷ್ಟ್ರ ಮತ್ತು ಕರ್ನಾಟಕದೊಳಗಿನ ಎಲ್ಲ ದೊಡ್ಡ ದೊಡ್ಡ ಕಿಲ್ಲೇದಾರರೂ ಆತನಿಗೆ ಅಂಕಿತರಾಗಿದ್ದರು, ಅಲ್ಲದೆ, ತಾನೂ ಹಲವು ಕೋಟೆಗಳನ್ನು ಕಟ್ಟಿಸಿದ್ದನು. ಆ ಮೇಲೆ ಎಲ್ಲ ಸರದಾರರ ಅನುಮತಿಯಿಂದ ರಾಯಗಡದಲ್ಲಿ ಶಿವಾಜಿಯ ಸಿಂಹಾಸನಾರೋಹಣ ಸಮಾರಂಭವು ಸಾಂಗ ವಾಯಿತು ಈ ಸಮಾರಂಭಕ್ಕೆ ಬೇರೆ ಬೇರೆ ರಾಜರೂ, ಸರದಾರರೂ, ರಾಯಭಾರಿಗಳೂ, ಪೋರ್ತುಗೀಜ್ ಮತ್ತು ಈಸ್ಟ್ ಇಂಡಿಯಾ ಕಂಪನಿಗಳ ವಕೀಲರೂ ಬಂದಿದ್ದರು ಈ ಪ್ರಸಂಗದಲ್ಲಿ ನಡೆದ ಸ್ಮರಣೀಯ ಸಂಗತಿಗಳೆಂದರೆ (೧) ಶಿವಪ್ರಭು ತನ್ನ ಸುವರ್ಣತುಲಾಭಾರವನ್ನು ಮಾಡಿ, ಆ ಬಂಗಾರವನ್ನೆಲ್ಲ ಬ್ರಾಹ್ಮಣರಿಗೆ ದಾನಮಾಡಿದನು (೨) ರಾಜ್ಯಾಭಿಷೇಕ ಶಕ' ಎಂಬ ಹೆಸರಿನ ಕಾಲಗಣನೆಯನ್ನು ಆರಂಭಿಸಿದನು (೩) ರಾಯಗಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಮಹಾಭಾರತದಲ್ಲಿ ಹೇಳಿದಂತೆ ಅಷ್ಟಪ್ರಧಾನ ಮಂಡಲದ ರಚನೆ ಮಾಡಿದನು ಅವರಿಗೆ ಪಾರ್ಸಿ ಉರ್ದು ಹೆಸರುಗಳನ್ನು ಕೊಡದೆ, ಸಂಸ್ಕೃತಪದಗಳನ್ನು ಉಪಯೋಗಿಸಿದನು (೪) 'ಕ್ಷತ್ರಿಯ ಕುಲಾವತಂಸ ಶಿವಛತ್ರಪತಿ ಮಹಾರಾಜ ಸಿಂಹಾಸನಾಧೀಶ್ವರ' ಎಂಬ ಬಿರುದನ್ನು ಸರಕಾರಿ ಕಾಗದ-ಪತ್ರಗಳಲ್ಲಿ ಉಪಯೋಗಕ್ಕೆ ತಂದನು

**ದಕ್ಷಿಣದ ದಿಗ್ವಿಜಯ** —ಈ ಕಾಲಕ್ಕೆ ಶಿವಾಜಿಯ ಮಲತಮ್ಮನಾದ ವೆಂಕೋಜಿಯು ತಂಜಾವರದಲ್ಲಿ ಆಳುತ್ತಿದ್ದನು ಅತ್ತ ಕಡೆಗೆ ಶಿವಾಜಿಯ ಸವಾರಿ ಹೊರಟಿತು ಮೊದಲು ಮೊಗಲ ಸರಕಾರದ ಸುಭೇದಾರ ಬಹದ್ದೂರ್

ಖಾನನ ಮೇಲೆ ಏರಿಹೋಗಿ, ಒಂದು ಕೋಟಿ ರೂಪಾಯಿಗಳನ್ನು ಸುಲಿಗೆಮಾಡಿದನು, ಅದರಂತೆ ಬಾಗಲಣ, ನಗರ ಜಿಲ್ಹೆಗಳಲ್ಲಿಯೂ ಅಪಾರ ಸುಲಿಗೆಯನ್ನು ಸಂಪಾದಿಸಿದನು ಆ ಮೇಲೆ ಗೋವಳಕೊಂಡ ಬಾದಶಹನೊಡನೆ ಮಿತ್ರತ್ವದ ಒಪ್ಪಂದಮಾಡಿಕೊಂಡನು ಹಾಗೆಯೆ ಕಡಪಾ-ಕರ್ನೂಲುಗಳ ಮೇಲಿಂದ ಶ್ರೀಶೈಲಕ್ಕೆ ಹೋಗಿ, ಅಲ್ಲೊಂದು ಧರ್ಮಶಾಲೆಯನ್ನು ಕಟ್ಟಿಸಿದನು ಮುಂದೆ ಸಾಗಿ ವಿಜಾಪುರದವರ ಜಿಂಜಿ, ವೆಲ್ಲೂರು, ತ್ರಿಚನಾಪಳ್ಳಿ, ಆರ್ಣಿ ಮುಂತಾದ ಕೋಟೆಗಳನ್ನು ಕೈವಶಮಾಡಿಕೊಂಡನು ತಂಜಾವರಕ್ಕೆ ಹೋದ ಮೇಲೆ ವೆಂಕೋಜಿಗೂ ಈತನಿಗೂ ರಾಜ್ಯದ ವಿಷಯದಲ್ಲಿ ವೈಮನಸ್ಸುಂಟಾಯಿತು, ಆದರೂ ಅವನನ್ನು ಹಾಗೆಯೇ ಬಿಟ್ಟು ಹೊರಟನು ದಾರಿಯಲ್ಲಿ ಕೆಳದಿ, ಗೋಕರ್ಣ, ಅಂಕೋಲೆಗಳ ಸರದಾರರನ್ನು ಸೋಲಿಸಿ ಕಪ್ಪವನ್ನು ತೆಗೆದುಕೊಂಡು ಕಾರವಾರಕ್ಕೆ ಕಾಲಿಟ್ಟನು ಅಲ್ಲಿಯೂ ಸುಲಿಗೆ ಮಾಡಿಕೊಂಡು ಸ್ವಾದಿ, ಲಕ್ಷ್ಮೇಶ್ವರ, ಕೊಪ್ಪಳ, ಬಳ್ಳಾರಿ, ಗದಗು, ಮುಳಗುಂದಗಳನ್ನು ಕೈವಶಮಾಡಿಕೊಂಡು, ಸಂಪಗಾವಿಯ ಮಾರ್ಗವಾಗಿ ರಾಜಧಾನಿಗೆ ತಿರುಗುತ್ತಿದ್ದನು

ದಾರಿಯಲ್ಲಿ ಬೆಳವಡಿ ಸಂಸ್ಥಾನ ಹತ್ತಿತು ಅಲ್ಲಿ ಶಿವಾಜಿಯ ದಂಡಿನವರು ಸುಲಿಗೆ ನಡೆಸಿದರು ಸಂಸ್ಥಾನದ ಒಡೆಯನಾದ ಈಶಪ್ರಭು ಸೈನ್ಯಸಹಿತವಾಗಿ ಈ ಸುಲಿಗೆಗಾರರ ಮೇಲೆ ಬಿದ್ದನು, ಕಾದಾಟದಲ್ಲಿ ಮಡಿದನು! ಆ ಮೇಲೆ ಆತನ ಪತ್ನಿಯಾದ ಮಲ್ಲಮ್ಮ ದೇಸಾಯಿತಿ ರಣಚಂಡಿಯಂತೆ ಹೊರಬಿದ್ದು ಕಾದಹತ್ತಿದಳು ಮರಾಠಾ ಸೈನ್ಯವು ಮೆತ್ತಗಾಯಿತು ಕೊನೆಗೆ ದೇಸಾಯಿತಿ ಶಿವಾಜಿಯ ಸೆರೆಯಾಳಾದಳು! ಶಿವಾಜಿ ಆಕೆಯ ಶೌರ್ಯವನ್ನು ಹೊಗಳಿ ಎರಡು ಊರುಗಳನ್ನು ಆಕೆಗೆ ಉಂಬಳಿಯಾಗಿ ಕೊಟ್ಟನು ಈ ಕಾಲಕ್ಕೆ ಔರಂಗಜೇಬನು ವಿಜಾಪುರದವರ ಮೇಲೆ ದಿಲೇರಖಾನನನ್ನು ದಂಡೆತ್ತಿ ಕಳಿಸಿದ್ದನು ವಿಜಾಪುರದವರ ಪ್ರಾರ್ಥನೆಯಂತೆ ಶಿವಾಜಿಯು ಆ ಯುದ್ಧದಲ್ಲಿ ಸೇರಿ ಮೊಗಲರನ್ನು ಹಣ್ಣುಹಣ್ಣುಮಾಡಿದನು ವಿಜಾಪುರದವರ ಸಖ್ಯವನ್ನು ಉಳಿಸಿಕೊಂಡು ರಾಯಗಡಕ್ಕೆ ಬಂದನು

**ಶಿವಾಜಿಯ ಮೃತ್ಯು** — ವಯಸ್ಸಿನ ೧೭ನೆಯ ವರ್ಷದಿಂದ ಸತತವಾಗಿ ೩೩ ವರುಷ ಹೋರಾಟ ನಡೆಸಿದುದರಿಂದ ಶಿವಪ್ರಭುವಿನ ಪ್ರಕೃತಿ ಅಸ್ವಸ್ಥವಾಯಿತು ಮುಂದೆ ದುರ್ದೈವದಿಂದ ಅವನ ಕಾಲಿಗೆ ಮುಂಡೆಯಾಯಿತು ಅದರಿಂದಲೇ ಆ ಮಹಾಪುರುಷನ ಮೃತ್ಯುವಾಯಿತು (೧೬೮೦).

**ಸ್ವಭಾವ** — ಶಿವಾಜಿಮಹಾರಾಜನ ಸಂಗ್ರಾಮದ ಸಾಮರ್ಥ್ಯವನ್ನು ಭಾರತದ ಇತಿಹಾಸವೇ ಸಾರುತ್ತದೆ! ಆತನ ಸ್ವಭಾವ ಮತ್ತು ಉದಾರ-ಹೃದಯಗಳ ಬಗೆಗೆ ಹೇಳಬೇಕೆಂದರೆ

ಶಿವಪ್ರಭುವಿನಲ್ಲಿ ದೇವಭಕ್ತಿ, ಗುರುಹಿರಿಯರಲ್ಲಿ ಭಕ್ತಿ, ಸಾಹಸ, ಜನಾಕರ್ಷಣಶಕ್ತಿ, ಶೌರ್ಯ, ಪ್ರತಿಭೆ, ಮನುಷ್ಯರನ್ನು ಮುಖದ ಮೇಲಿಂದಲೇ ಪರೀಕ್ಷಿಮಾಡುವ ಧೂರ್ತತನಗಳಿದ್ದುವು ಪರಸ್ತ್ರೀಯರನ್ನು ತನ್ನ ತಾಯಿ ತಂಗಿಯರಂತೆ ತಿಳಿದುಕೊಳ್ಳುತ್ತಿದ್ದನು ಈತನಲ್ಲಿ ಎಲ್ಲಕ್ಕೂ ಶ್ರೇಷ್ಠ ಸದ್ಗುಣಗಳೆಂದರೆ ಸ್ವಧರ್ಮಾಭಿಮಾನ, ಸ್ವರಾಷ್ಟ್ರಾಭಿಮಾನ' ಈ ಗುಣಗಳಿಂದಲೇ ಗೋಬ್ರಾಹ್ಮಣ ಪರಿಪಾಲನ ಕಾರ್ಯವನ್ನು ಅಖಂಡವಾಗಿ ಸಾಗಿಸಿದನು

ಅಷ್ಟಪ್ರಧಾನರು — ಸತತವಾಗಿ ರಣರಂಗದಲ್ಲಿಯೇ ಇರುತ್ತಿದ್ದ ಶಿವಾಜಿಗೆ ಆಡಳಿತದ ವ್ಯವಸ್ಥೆಗೆ ಬೇಕಾಗುವಂಥ ವಿರಾಮವು ದೊರೆಯಲೇ ಇಲ್ಲ ಆದರೂ, ಶಿವಾಜಿಯು ತನ್ನ ಚಕ್ರಾಧಿಪತ್ಯವನ್ನು ನೆಲೆಗೊಳಿಸುವುದಕ್ಕೆ ಉತ್ತಮ ರೀತಿಯ ಏರ್ಪಾಡುಗಳನ್ನು ಮಾಡದೆ ಇರಲಿಲ್ಲ ರಾಜ್ಯದ ಸ್ಥಿರತೆಗೆ (೧) ಗಳಿಸಿದುದನ್ನು ಉಳಿಸಿಕೊಳ್ಳುವುದು, (೨) ಉಳಿಸಿದುದನ್ನು ಬೆಳೆಸಿಕೊಳ್ಳುವುದು ಈ ಎರಡು ವಿಚಾರಗಳು ಅತಿ ಮುಖ್ಯ ಶಿವಾಜಿಮಹಾರಾಜನು ಇದಕ್ಕಾಗಿ ಆಡಳಿತದಲ್ಲಿ ಮುಖ್ಯವಾಗಿ (ಅ) ರಾಜ್ಯಕಾರಭಾರ (ಆ) ಸೈನ್ಯ (ಇ) ಕೋಟೆಗಳ ಭದ್ರತೆ (ಈ) ಭಂಡಾರದ ಭರತಿ ಹೀಗೆ ನಾಲ್ಕು ಭಾಗಗಳನ್ನು ಮಾಡಿ, ಅಷ್ಟಪ್ರಧಾನಮಂಡಲದಲ್ಲಿ ಆ ವಿಭಾಗ (ಖಾತ)ಗಳನ್ನು ಹಂಚಿಕೊಟ್ಟಿದ್ದನು

## ಅಷ್ಟಪ್ರಧಾನರು ಮತ್ತು ಅವರ ಕಾರ್ಯಗಳು

| | | | |
|---|---|---|---|
| ೧ | ಮೋರೋಪಂತ ಪಿಂಗಳೆ | ಪಂತಪ್ರಧಾನ | (ರಾಜ್ಯಕಾರಭಾರ) |
| ೨ | ಆಬಾಜಿ ಮತ್ತು ನಿಳೋಸೋನದೇವ | ಪಂತ ಅಮಾತ್ಯ | (ಕಂದಾಯ ಸಂಗ್ರಹ) |
| ೩ | ಅಣ್ಣಾಜಿ ದತ್ತೋ | ಪಂತಸಚಿವ | (ಕಾಗದಪತ್ರಗಳ ಸಂಗ್ರಹ) |
| ೪ | ದತ್ತಾಜಿಪಂತ ಬೋಕೀಲ | ಮಂತ್ರಿ | (ಸ್ವತಃದ ಕಾರಭಾರ) |
| ೫ | ಪ್ರತಾಪರಾವ ಮತ್ತು ಹಂಬೀರರಾವ | ಸೇನಾಪತಿ | (ಸೈನ್ಯಾಧಿಕಾರಿ) |
| ೬ | ಸೋಮನಾಥ ಪಂತ | ಸುಮಂತ | (ವಿದೇಶ ವ್ಯವಹಾರ) |
| ೭ | ಬಾಳಾಜಿ ಮತ್ತು ನೀರಾಜಿರಾವಜಿ | ನ್ಯಾಯಾಧೀಶ | (ನ್ಯಾಯವಿಭಾಗ) |
| ೮ | ರಘುನಾಥ ಪಂತ | ಪಂಡಿತರಾವ | (ಧರ್ಮವಿಭಾಗ) |

ರಾಜ್ಯವ್ಯವಸ್ಥೆ — ಈ ಮಂತ್ರಿಗಳಿಗೆಲ್ಲ ಸರಕಾರದಿಂದ ಸಂಬಳವಿತ್ತು ಮುಖ್ಯಮಂತ್ರಿಗೆ ೧೫೦೦ ರೂಪಾಯಿ. ಪಂತ ಅಮಾತ್ಯನಿಗೆ ೧೨೦೦ ರೂಪಾಯಿ ಮಿಕ್ಕವರಿಗೆ ೧೦೦೦ ರೂಪಾಯಿ ಸಂಬಳ ರಾಜ್ಯದಲ್ಲಿ ಹನ್ನೆರಡು ಸುಭೆಗಳು ಇದ್ದುವು ಆ ಅಧಿಕಾರಿಗಳಿಗೆ ಜಹಾಗೀರನ್ನು ಕೊಡದೆ ಸಂಬಳವನ್ನು ಗೊತ್ತು ಮಾಡಿದ್ದನು ತೆರಿಗೆಯನ್ನು ಬೆಳೆಯ ಐದರಲ್ಲಿ ಒಂದು ಪಾಲು ತಕ್ಕೊಳ್ಳುತ್ತಿ

ದ್ದನು ಹಳ್ಳಿ-ಪಳ್ಳಿಗಳಲ್ಲಿ ನ್ಯಾಯತೀರಿಸಲಿಕ್ಕೆ ಗ್ರಾಮಪಂಚಾಯತಿಗಳು ಆರಂಭವಾಗಿದ್ದುವು ಶಿವಾಜಿರಾಜನ ರಾಜ್ಯವು ಉತ್ತರಕ್ಕೆ ತಾಪೀನದಿಯಿಂದ ದಕ್ಷಿಣಕ್ಕೆ ತುಂಗಭದ್ರೆಯ ವರೆಗೂ ಹಬ್ಬಿತ್ತು ರಾಜ್ಯದ ಒಟ್ಟು ಉತ್ಪನ್ನವು ವರ್ಷಕ್ಕೆ ೯ ಕೋಟಿಯಷ್ಟಿತ್ತು

**ಸೈನ್ಯ ಮತ್ತು ಹಡಗುವಡೆ** —ಸೇನೆಯಲ್ಲಿ ಕಾಲಾಳು ಮತ್ತು ರಾಹುತರು ಎಂದು ಮುಖ್ಯವಾಗಿ ಎರಡು ಭಾಗಗಳಿದ್ದುವು ಇವರಲ್ಲಿ ಕಾಲಾಳುಗಳ ಸಂಖ್ಯೆಯೇ ಹೆಚ್ಚು ನೂರು, ಅಯ್ದುನೂರು, ಸಾವಿರ ಕಾಲಾಳುಗಳ ಮೇಲೆ ಸಣ್ಣ ದೊಡ್ಡ ನಾಯಕರು ಕಾಲ್ದಳದಲ್ಲಿ ಮಾವಳೆ ಜನರ ಸಂಖ್ಯೆಯೇ ಹೆಚ್ಚು ಪ್ರತಿಯೊಬ್ಬನಿಗೂ ಕನಿಷ್ಟವಕ್ಷಕ್ಕೆ ಒಂದು ಕತ್ತಿ, ಒಂದು ಢಾಲು ಇರಲೇಬೇಕು ಇವರ ಸಂಬಳ ನಾಲ್ಕು ರೂಪಾಯಿಗಳಿಂದ ೧೦ ರೂಪಾಯಿಗಳವರೆಗೆ ಕುದುರೆಯ ಸವಾರರಿಗೆ ಕತ್ತಿ ಢಾಲು ಭರ್ಚಿ ಭಾಲೆಗಳೇ ಮುಖ್ಯ ಆಯುಧಗಳು ಇವರ ಸಂಬಳ ೨೪ ರೂಪಾಯಿಗಳಿಂದ ೪೮ ರೂಪಾಯಿಗಳ ವರೆಗೆ ಸೈನ್ಯಾಧಿಕಾರಿಗಳಲ್ಲಿ ಶಿಲೇದಾರ, ಸರನೌಬತ್, ಜಮೇದಾರ, ಮುಂತಾದ ಮೇಲುಮೇಲಿನ ಅಧಿಕಾರಿಗಳು ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿದವರಿಗೆ ಸಂಭಾವನೆ ಸಿಕ್ಕುತ್ತಿತ್ತು.

ಶಿವಾಜಿರಾಜನ ರಾಜ್ಯದಲ್ಲಿ ಹಡಗುವಡೆ ಇತ್ತು ಅದಕ್ಕಾಗಿ ಕೆಲವು ಜಲದುರ್ಗಗಳನ್ನು ಕಟ್ಟಿಸಿದ್ದನು ಕುಲಾಬಾ ಜಿಲ್ಹೆಯು ಹಡಗುಪಡೆಯ ಮುಖ್ಯ ಸ್ಥಾನ ಸೈನ್ಯದಲ್ಲಿ ಒಟ್ಟು ೧೬೧ ಹಡಗುಗಳಿದ್ದುವು. ಆಂಗ್ರೆ, ದೌಲತ್‌ಖಾನ ಮೊದಲಾದವರು ಹಡಗುಪಡೆಯ ಮುಖ್ಯಸ್ಥರು ಆಫ್ರಿಕಾದಿಂದ ಬಂದು ಪಶ್ಚಿಮತೀರದ ವ್ಯಾಪಾರೀ ಹಡಗುಗಳ ಮೇಲೆ ಬೀಳುತ್ತಿದ್ದ ಕಡಲುಕಳ್ಳರನ್ನು ಅವರು ಸದೆಬಡಿದರು ಪೋರ್ತುಗೀಜರ ಹಡಗುಗಳನ್ನೂ ಅನೇಕ ಕಾಳಗಗಳಲ್ಲಿ ಹಿಂದಕ್ಕೋಡಿಸಿದರು

**ಕೋಟೆಗಳು** —ಶಿವರಾಜ್ಯದ ಮುಖ್ಯ ಆಧಾರಗಳೆಂದರೆ ಭದ್ರವಾದ ಕೋಟೆಗಳು ಒಟ್ಟು ಮುನ್ನೂರಕ್ಕೆ ಮೇಲ್ಪಟ್ಟು ಕೋಟೆಗಳಿದ್ದುವು ಅವೆಲ್ಲ ಬಹುತರವಾಗಿ ಗಡ ಎಂದು ಪ್ರಸಿದ್ಧವಾಗಿವೆ ಈ ಕಿಲ್ಲೆಗಳಲ್ಲಿಯೇ ಮದ್ದು-ಗುಂಡು, ಕಾಳು-ಕಡಿ, ಮೇವು ಇವುಗಳ ಸಂಗ್ರಹವಿರುತ್ತಿತ್ತು ಈ ಕೋಟೆಗಳೆಲ್ಲ ಕಡಿದಾದ ಪ್ರದೇಶಗಳಲ್ಲಿಯೇ ಇರುತ್ತಿದ್ದುವಾದುದರಿಂದ ವೈರಿಗಳು ಸಹಸಾ ಏರಿಬರುತ್ತಿರಲಿಲ್ಲ

**ಭಂಡಾರದ ಭರತಿ.**—ಭಂಡಾರ ಭರತಿಯಾಗುತ್ತಿದ್ದುದು ಕರ-ತೆರಿಗೆಗಳಿಂದ ಬರುವ ಹಣ ಮತ್ತು ಸುಲಿಗೆಯ ಸಂಪಾದನೆಗಳಿಂದ ಸುಲಿಗೆಯ ಸಂಪಾದನೆಯಲ್ಲಿ ಮತ್ತೆರಡು ವಿಭಾಗಗಳು ಕಪ್ಪಗಾಣಿಕೆ ಮತ್ತು ಸುಲಿಗೆ ಶಿವ-

ರಾಜ್ಯದಲ್ಲಿ ಮೊಗಲಾಯಿ ಮತ್ತು ಸ್ವರಾಜ್ಯ ಎಂದು ಇಬ್ಭಾಗ ಮೊಗಲಾಯಿ ಭಾಗದಲ್ಲಿ, ಬಹುಶಃ ಜಹಗೀರುದಾರರೇ ಹೆಚ್ಚು ಅವರಿಂದ ಕಪ್ಪಗಾಣಿಕೆ ತಪ್ಪದೆ ಬರುತ್ತಿತ್ತು ಅದು ಭಾಂಡಾರಕ್ಕೆ ಭರತಿಯಾಗುತ್ತಿತ್ತು ಇದರಂತೆಯೇ ಕಟ್ಟ-ಸುಲಿಗೆಯ ಹಣವು ಕಡ್ಡಾಯವಾಗಿ ಭಾಂಡಾರಕ್ಕೇ ಸೇರಬೇಕೆಂದು ಕಟ್ಟ-ಪ್ಪಣೆಯಿತ್ತು, ಒಂದು ವಿಷಯ ಆಯಾ ಹಣದಲ್ಲೆ ಆಯಾ ವೀರಾಳುಗಳಿಗೆ ತಕ್ಕ ಸಂಭಾವನೆ ಸಿಕ್ಕುತ್ತಿತ್ತು ಇದರಿಂದ ಸೈನಿಕರೆಲ್ಲ ಸದಾ ಸಂತೋಷದಿಂದ ಇರುತ್ತಿದ್ದರು

**ಸಂಭಾಜಿ** —ಶಿವಪ್ರಭುವಿನ ತರುವಾಯ ಸಂಭಾಜಿಯು ಪಟ್ಟವೇರಿದನು ಈತನು ತಂದೆಗಿಂತ ಶೂರ, ಆದರೆ ದುಷ್ಟಮಂತ್ರಿಗಳ ಸಂಗದಲ್ಲಿ ದುರ್ಗುಣಗಳ ತವರುಮನೆಯಾದನು ಕೊನೆಗ, ಔರಂಗಜೇಬನ ಸೆರೆಯಲ್ಲಿ ಸಿಕ್ಕು ಪ್ರಾಣವನ್ನು ನೀಗಿದನು ಆ ಮೇಲೆ ಪಟ್ಟದ ಸಲುವಾಗಿ ಒಳಜಗಳ ಹುಟ್ಟಿತು ಸಾತಾರೆ-ಕೊಲ್ಲಾಪುರಗಳಲ್ಲಿ ಈ ಮನೆತನದ ರಾಜ್ಯಗಳಾದುವು ಸಂಭಾಜಿಯ ಮಗನಾದ ಶಾಹುವೇ ಈ ಮನೆತನದಲ್ಲಿ ಮುಂದೆ ಹೆಸರಾದ ಅರಸು ಅವನ ಕಾಲಕ್ಕೆ **ಬಾಳಾಜಿ ವಿಶ್ವನಾಥನೆಂಬ** ಮುಖ್ಯಮಂತ್ರಿಯಿಂದ ಪೇಶ್ವಾಯಿ ಆರಂಭವಾಯಿತು

## ಅಭ್ಯಸನಗಳು

೧. ಶಿವಾಜಿಗೆ ಕೆಳಗೆ ಕೊಟ್ಟ ವಿಷಯಗಳಲ್ಲಿ ಸಂಬಂಧಪಟ್ಟ ವ್ಯಕ್ತಿಗಳು ಯಾರು? (ಅ) ಶಿಕ್ಷಣ ಕೊಟ್ಟವರು (ಆ) ಜೀವದ ಗೆಳೆಯರಾದವರು (ಇ) ಆಶೀರ್ವದಿಸಿದ ಸಾಧುಗಳು. (ಈ) ರಾಜ್ಯವಿಸ್ತಾರ (ಉ) ಅಷ್ಟ ಪ್ರಧಾನರು

೨ ಶಿವಾಜಿಯನ್ನು ಸದೆಬಡಿಯಲು ಬಂದ ಮುಸಲ್ಮಾನ ಸರದಾರರು ಯಾರು ಯಾರು? ಅವರವರ ಗತಿ ಏನಾಯಿತು?

೩ ಶಿವಾಜಿಯ ಸೈನ್ಯ, ಹಡಗುಪಡೆ ಮತ್ತು ಭಂಡಾರ-ಭರತಿ ಇವುಗಳ ಬಗೆಗೆ ಮೂರು ಮೂರು ವಾಕ್ಯಗಳನ್ನು ಬರೆಯಿರಿ.

೪ ಶಿವಾಜಿಯಲ್ಲಿದ್ದ ಸದ್ಗುಣಗಳು ಯಾವವು? ಒಂದೊಂದು ಗುಣವು ಪ್ರಕಟವಾದ ಮಹತ್ತ್ವದ ಒಂದೊಂದು ಪ್ರಸಂಗವನ್ನು ಹೇಳಿರಿ

# ೧೭ ಮೊದಲನೆಯ ನಾಲ್ಕು ಜನ ಪೇಶ್ವೆಯರು

## ಬಾಳಾಜಿ ವಿಶ್ವನಾಥ

(೧೭೧೩ — ೧೭೨೦)

**ಪೇಶವೇಪದದ ಮೊದಲು** (೧೭೧೪) — ಭೋಸಲೆ ಮನೆತನದ ಶಾಹೂ ರಾಜನು ಔರಂಗಜೇಬನ ಸೆರೆಯಲ್ಲಿದ್ದನು ಆತನನ್ನು ಬಿಡಿಸಿ ತರುವುದೂ ಪಟ್ಟಕ್ಕೆ ಕುಳ್ಳಿರಿಸುವುದೂ ಅತಿಕಠಿಣ ಕಾರ್ಯಗಳಾಗಿದ್ದುವು ಇವುಗಳಲ್ಲಿ ಬಾಳಾಜಿ ವಿಶ್ವನಾಥನು ಒಳ್ಳೇ ಜಾಣತನವನ್ನು ತೋರಿಸಿದನು ಆಗ ಮರಾಠಾ ಸೈನ್ಯದ ಆಧಿಪತ್ಯವು ಕಾನ್ಹೋಜಿ ಆಂಗ್ರೆ ಎಂಬುವನ ಕಡೆಗಿತ್ತು ಅವನು ತಾರಾಬಾಯಿಯ ಪಕ್ಷವನ್ನು ವಹಿಸಿ, ಶಾಹುವಿನ ರಾಜ್ಯದಲ್ಲಿ ಪುಂಡಾಟಿಕೆಯನ್ನು ನಡೆಸಿದ್ದನು ಇದನ್ನು ಮುರಿಯಲು ಶಾಹುರಾಜನು ಬಾಳಾಜಿಯನ್ನೇ ಆಂಗ್ರೇನ ಮೇಲೆ ಕಳಿಸಿದನು ಬಾಳಾಜಿಯು ತನ್ನ ಜಾಣತನದಿಂದ ಯುದ್ಧವನ್ನು ನಿಲ್ಲಿಸಿದನು ಆಂಗ್ರೇನನ್ನು ಶಾಹುವಿನ ಪಕ್ಷಕ್ಕೆ ತಿರುಗಿಸಿದನು ಹೀಗೆ ತನ್ನ ಶೌರ್ಯ-ಮುತ್ಸದ್ದಿತನಗಳಿಂದ ಶಾಹುವಿನ ಪಕ್ಷವನ್ನು ಎತ್ತಿಹಿಡಿದನು ಅದರಿಂದ ಶಾಹೂಮಹಾರಾಜನು ಈತನನ್ನೇ ಪೇಶವೆಯನ್ನು ಮಾಡಿಕೊಂಡನು (೧೭೧೪)

**ಪೇಶವೆಯ ಪ್ರಭುತ್ವ** — ಬಾಳಾಜಿಯು ಮಂತ್ರಿಯಾದ ಮೇಲೆ ಮರಾಠಾ ರಾಜ್ಯದಲ್ಲಿ ಹೊಸ ಯುಗವೇ ಹುಟ್ಟಿತೆಂದು ಹೇಳಬಹುದು, ಏಕೆಂದರೆ ಶಾಹು ದೊರೆಯು ಚಿಕ್ಕಂದಿನಿಂದಲೂ ಔರಂಗಜೇಬನ ಸೆರೆಯಲ್ಲಿದ್ದು, ವಿಲಾಸ-ವೈಭವಗಳಲ್ಲಿ ಕಾಲ ಕಳೆಯಲು ಕಲಿತಿದ್ದನು ರಾಜಕಾರಣದ ಚಟುವಟಿಕೆಗಳೆಂದರೆ ತಲೆಬೇಸರು ಅವನಿಗೆ ಯಾರೊಬ್ಬರಿಗೆ ಅದನ್ನು ಒಪ್ಪಿಸಿ ಕಾಲವನ್ನು ಕಳೆಯಬೇಕೆಂದು ಅವನ ಇಚ್ಛೆ ಸುದೈವದಿಂದ ಬಾಳಾಜಿಯಂತಹ ಶೂರ ಮುತ್ಸದ್ದಿಯು ಪೇಶವೆಯಾಗಿ ದೊರೆತನು ಕಾರಭಾರವನ್ನೆಲ್ಲಾ ಈತನಿಗೇ ಒಪ್ಪಿಸಿ ಶಾಹು ನಿಶ್ಚಿಂತನಾದನು! ಮುಂದಿನ ಮರಾಠಾ ಆಳಿಕೆಯನ್ನು ಪೇಶವಾಯಿ ಪ್ರಭುತ್ವವೆಂದೇ ಹೇಳಬೇಕು

**ಮತ್ತೆ ಸುದಿನಗಳು** — ಪೇಶವೆಯರ ಆಳಿಕೆಯಿಂದ ಮರಾಠರಿಗೆ ಮತ್ತ ಭಾಗ್ಯೋದಯಕಾಲ ಬಂದಿತು ಈ ಕಾಲದಲ್ಲಿ ಮೊಗಲರಾಜ್ಯ ಇಳಿಮುಖವಾಗಿತ್ತು ದಿಲ್ಲಿಯ ಆಸ್ಥಾನವು ಅಂತಃಕಲಹಗಳ ನೆಲೆವೀಡಾಗಿತ್ತು ಫರೂಕ್‌ಶಿಅರನ ಆಳಿಕೆಯಲ್ಲಿ ಬಾಳಾಜಿಯು ಖಂಡೇರಾವ್ ಸೇನಾಪತಿ ಸಹಿತವಾಗಿ ದಂಡೆತ್ತಿಹೋಗಿ, ಮೊಗಲರ ಗುಜರಾಥ, ವರ್‍ಹಾಡ ಪ್ರಾಂತಗಳನ್ನು

ಗೆದ್ದನು ದಾರಿಯಲ್ಲಿ ಅನೇಕ ರಜಪೂತ ಸರದಾರರನ್ನು ಮರಾಠಾ ರಾಜ್ಯಕ್ಕೆ ಒಳಪಡಿಸಿದನು

**ದಿಲ್ಲಿಯ ಸಲಹೆಗಾರ** – ಬಾಳಾಜಿಯ ಆಳಿಕೆಯಲ್ಲಿ ನಡೆದ ಎರಡು ಮುಖ್ಯ ಕಾರ್ಯಗಳೆಂದರೆ ದಿಲ್ಲಿಗೆ ಹೋಗಿ ಮೊಗಲರ ಮನವೊಲಿಸಿದುದು, ಮತ್ತು ಕಂದಾಯಭಾಗದ ಬಾಧ್ಯತೆಯನ್ನು ತಾವು ಪಡೆದುದು ದಿಲ್ಲಿಯ ಜಹಂದರ ಬಾದಶಹನಿಗೂ ವಜೀರರಾದ ಸಯ್ಯದ ಬಂಧುಗಳಿಗೂ ಜಗಳ ಹುಟ್ಟಿತ್ತು ಬಾಳಾಜಿಯು ದಿಲ್ಲಿಗೆ ಹೋಗಿ, ಸಯ್ಯದ ಬಂಧುಗಳ ಪಕ್ಷವನ್ನು ಹಿಡಿದು ಸಹಾಯ ಮಾಡಿದನು ಇದರಿಂದ ಮುಂದಿನ ಬಾದಶಹನಾದ ಮುಹಮ್ಮದಶಹನಿಂದ ಆತನ ರಾಜ್ಯದ ದಕ್ಷಿಣಭಾಗದೊಳಗೆ ಎಂದರೆ ನರ್ಮದಾನದಿಯ ತೆಂಕಣಭಾಗದಲ್ಲಿಯ ದಕ್ಷಿಣಭಾರತ, ಕರ್ನಾಟಕ, ಮೈಸೂರು ಈ ಪ್ರಾಂತಗಳಲ್ಲಿ **ಚೌಥಾಯಿ, ಸರದೇಶಮುಖಿ** ಎಂಬ ಎರಡು ಉತ್ಪನ್ನಗಳನ್ನು ಸಾರೋದ್ಧಾರವಾಗಿ ಪಡೆಯುವ ಹಕ್ಕು ಮರಾಠರಿಗೆ ಸಿಕ್ಕವು ಚೌಥಾಯಿಯೆಂದರೆ ಕಂದಾಯದ ನಾಲ್ಕರಲ್ಲಿ ಒಂದು ಭಾಗ, ಸರದೇಶಮುಖಿ ಯೆಂದರೆ, ಕಂದಾಯದ ಹತ್ತರಲ್ಲಿ ಒಂದು ಭಾಗ ಇಷ್ಟಲ್ಲದೆ, ಶಾಹೂ ರಾಜನು ಮರಾಠಾರಾಜ್ಯದ ಅಧಿಪತಿಯೆಂಬುದನ್ನು ಮೊಗಲರು ಒಪ್ಪಿದರು. ಮರಾಠಾ ರಾಜ್ಯವನ್ನು ಸ್ವರಾಜ್ಯವೆಂದು ಘೋಷಿಸಲಾಯಿತು

**ಬಾಳಾಜಿಯ ಸನ್ಮಾನ** – ಈ ಪ್ರಸಂಗದಲ್ಲಿ ಬಾಳಾಜಿಗೆ ಸಯ್ಯದ ಬಂಧುಗಳಿಂದ ಎಂಬತ್ತು ಲಕ್ಷ ವರಹಗಳು ದೊರೆತುವು ಶಾಹೂರಾಜನೂ ಸಂತೋಷವಟ್ಟು ಹೊಸ ಜಹಗೀರಿಯನ್ನು ಹಾಕಿಕೊಟ್ಟನು ಹೀಗೆ ಬಾಳಾಜಿಯು ಮರಾಠಾ ರಾಜ್ಯವನ್ನು ಮೇಲೆತ್ತಿದನು, ಅದರೊಡನೆ ಪೇಶವಾಯಿಯ ಹಕ್ಕು ವಂಶಪಾರಂಪರ್ಯವಾಗಿ ನಡೆದು ಬಂದಿತು

**ಮರಣ** — ಬಾಳಾಜಿ ಇನ್ನೂ ಕೆಲಕಾಲ ಬದುಕಿದ್ದರೆ, ಮರಾಠಾ ರಾಜ್ಯವು ಮತ್ತಿಷ್ಟು ವೈಭವಶಾಲಿಯಾಗಬಹುದಿತ್ತು, ಆದರೆ ದಿಲ್ಲಿಯಿಂದ ತಿರುಗಿದ ಮರುವರುಷವೇ ೧೭೨೦ರಲ್ಲಿ ಮರಣಹೊಂದಿದನು

**ಬಾಳಾಜಿಯ ಯೋಗ್ಯತೆ ಮತ್ತು ಮಹತ್ಕಾರ್ಯ** — ಬಾಳಾಜಿಯು ಶೂರನು, ರಾಜಕಾರಣ ಕುಶಲನು, ಕರ್ತವ್ಯದಕ್ಷನು, ಏಕನಿಷ್ಠ ಸೇವಕನು ಒಡೆಯನ ಹಿತಚಿಂತನೆಯೇ ಈತನ ಹಿರಿಯ ಗುಣ ರಾಜ್ಯವು ಸುವ್ಯವಸ್ಥಿತವಾಗಿ ಸಾಗಬೇಕೆಂದು ಜಹಗೀರಿ ಪದ್ಧತಿಯನ್ನು ಆರಂಭಮಾಡಿದನು ಇದರಿಂದ ಆತನ ಮರಣದ ತರುವಾಯವೂ ಮರಾಠಾರಾಜ್ಯವು ಏಳ್ಗೆಯಲ್ಲಿಯೇ ಉಳಿಯುವಂತಾಯಿತು

**ಜಹಗೀರಿ ಪದ್ಧತಿ** — ಜಹಗೀರಿ ಪದ್ಧತಿಯನ್ನೇ **ಸರಂಜಾಮಿ** ಪದ್ಧತಿಯೆಂದೂ ಹೇಳುತ್ತಾರೆ. ರಾಜ್ಯದಲ್ಲಿ ಶೂರರಾದವರನ್ನು ಆಯ್ದು ಅವರಿಗೆ ರಾಜ್ಯದ ಕೆಲವೊಂದು ಭಾಗದ ಒಡೆತನವನ್ನು ಒಪ್ಪಿಸುವುದು ಅಷ್ಟಕ್ಕೆ ಅವರು ಅರಸರಂತಿದ್ದರೂ, ಮೂಲ ಮಹಾರಾಜನಿಗೆ ಎಲ್ಲರೂ ಅಂಕಿತರು ಅದಕ್ಕಾಗಿ (೧) ಜಹಗೀರುದಾರರು ತಮ್ಮ ಜಹಗೀರಿಯನ್ನು ಸರ್ವರೀತಿಯಿಂದಲೂ ಸಂರಕ್ಷಿಸಬೇಕು ಉತ್ಪನ್ನದಲ್ಲಿ ಕೆಲವೊಂದು ಭಾಗವನ್ನು ಛತ್ರಪತಿಗೆ ಪ್ರತಿವರುಷವೂ ಒಪ್ಪಿಸಬೇಕು (೨) ಛತ್ರಪತಿಯ ರಾಜ್ಯವನ್ನು ಬೆಳೆಸಲಿಕ್ಕೆ ಸಹಾಯವನ್ನು ಮಾಡಬೇಕು (೩) ತಮ್ಮ ಜಹಗೀರಿಯ ಆಯ-ವ್ಯಯಗಳನ್ನು ಮರಾಠಾ ಸರಕಾರಕ್ಕೆ ಒಪ್ಪಿಸಬೇಕು ಈ ಕರಾರುಗಳನ್ನು ಹಾಕಿದನು ಇದರಿಂದ ಶ್ರೇಷ್ಠ ಸರದಾರರೆಲ್ಲರೂ ಮರಾಠಾರಾಜ್ಯದ ಭದ್ರತೆಯ ಸಲುವಾಗಿ ಅಭಿಮಾನ ಹಿಡಿಯುವಂತಾಯಿತು

## ಮೊದಲನೆಯ ಬಾಜೀರಾವ ಪೇಶವೆ

(೧೭೨೦—೧೭೪೦)

**ಬಾಜೀರಾಯನ ಬಾಲ್ಯ** — ಬಾಳಾಜಿ ಪೇಶವೆಯ ಹಿರಿಯ ಮಗನು ವಿಸಾಜಿ ಅಥವಾ ಬಾಜೀರಾಯ ಈತನು ೧೬೯೮ರಲ್ಲಿ ಹುಟ್ಟಿದನು ತಂದೆಯ ಸಕಲ ಗುಣಗಳೂ ಈತನಲ್ಲಿ ಮನೆಮಾಡಿದ್ದುವು ಇದಕ್ಕೆ ತಕ್ಕಂತೆ ಒಳ್ಳೆಯ ಶಿಕ್ಷಣವೂ ಸಿಕ್ಕಿತು ತುಸು ದೊಡ್ಡವನಾದ ಮೇಲೆ, ತಂದೆಯೊಡನೆ ರಣ-ರಂಗಕ್ಕೆ ಹೋಗುತ್ತಿದ್ದನು ಶೌರ್ಯದಿಂದ ಕಾದಾಡುತ್ತಿದ್ದನು, ಮತ್ತು ಎಷ್ಟೋ ಚರ್ಚಾಪ್ರಸಂಗಗಳಲ್ಲಿ ತಂದೆಯೊಡನೆ ಇರುತ್ತಿದ್ದನು ಆಗ ಇವನು ಪ್ರಸಂಗಕ್ಕೆ ಸರಿಯಾಗಿ ಜಾಣತನವನ್ನೂ ಉಪಯೋಗಿಸುತ್ತಿದ್ದನು ಇದೆಲ್ಲವೂ ಶಾಹೂರಾಜನಿಗೆ ಗೊತ್ತಿತ್ತು

**ಬಾಜೀರಾವ ಪೇಶವೆ** — ಬಾಳಾಜಿಯ ಮರಣದ ಕಾಲದಲ್ಲಿ ಬಾಜೀ-ರಾಯನಿಗೆ ೨೦ ವರುಷಗಳ ಸಣ್ಣ ವಯಸ್ಸು, ಆದರೆ ಇವನ ಯೋಗ್ಯತೆ ಬಲು ದೊಡ್ಡದು ಅದರಿಂದ ಶಾಹೂಛತ್ರಪತಿಯು ಬಾಜೀರಾಯನಿಗೇ ಪೇಶವೆ ಪದವನ್ನು ಕೊಟ್ಟನು ೧೭೨೦ನೆಯ ವರುಷದಿಂದಲೇ ಬಾಜೀ-ರಾಯನು ಪೇಶವೆಯಾದನು

**ಏರಾಟದ ಇಚ್ಛೆ** — ಬಾಜೀರಾಯನು ಹೆಸರಾದ ವೀರಾಳು ಈ ಕಾಲಕ್ಕೆ ಮೊಗಲಸಾಮ್ರಾಜ್ಯವು ಸಂಪುಷ್ಟಕ್ಕೆ ಬಂದಿತ್ತು ಈಗ ಏರಾಟವನ್ನು ನಡೆಸಿ ಪುನಃ ಹಿಂದೂಸಾಮ್ರಾಜ್ಯಸ್ಥಾಪನೆ ಮಾಡಬೇಕೆಂದು ಆತನ ಬಯಕೆಯಿದ್ದಿತು.

ಅದಕ್ಕಾಗಿ ಮರಾಠಾ ಸೈನ್ಯವನ್ನು ಸಂಘಟಿಸಿ, ಸೈನಿಕರಿಗೆಲ್ಲ ಹೆಚ್ಚು ಶಿಕ್ಷಣ ಕೊಟ್ಟು, ಸಿದ್ಧನಾದನು



ಬಾಜೀರಾವ ಪೇಶವ

**ಕರ್ನಾಟಕದ ಮೇಲೆ ದಾಳಿ** – ನಿಜಾಮ ಉಲ್ಮುಲ್ಕನ ರಾಜ್ಯವನ್ನು ಹಾಳುಮಾಡುವುದು ಬಾಜೀರಾಯನ ಮೊದಲನೆಯ ಕಲಸವಾಯಿತು ಅಷ್ಟರಲ್ಲಿ ಶಾಹುವಿಗೂ ಕರ್ನಾಟಕದ ಮೇಲೆ ಆಸೆ ಹುಟ್ಟಿತ್ತು ಈ ಎರಡು ಕಾರಣಗಳಿಂದ ಬಾಜೀರಾಯನು ಕರ್ನಾಟಕದ ಮೇಲೆ ದಾಳಿಯಿಟ್ಟನು. ಈತನು ೧೭೨೬ರಲ್ಲಿ ನಿಜಾಮನ ಊರುಗಳನ್ನು ಗೆಲ್ಲುತ್ತ ಕಲಬುರ್ಗಿ, ಹನುಮಸಾಗರ, ಕೊಪ್ಪಳಗಳ ಮಾರ್ಗವಾಗಿ ಕರ್ನಾಟಕವನ್ನು ಹೊಕ್ಕನು ಚಿತ್ರದುರ್ಗದ ಮದಕರಿನಾಯಕನಿಂದ ಕಪ್ಪಗಾಣಿಕೆಯನ್ನು ಪಡೆದನು. ಮುಂದೆ ಶ್ರೀರಂಗಪಟ್ಟಣಕ್ಕೆ ನಡೆದನು ಆಗ ದೊಡ್ಡ ಕೃಷ್ಣರಾಜ ಒಡೆಯರ ಆಳಿಕೆಯಿತ್ತು ಕನ್ನಡಿಗರ ಆ ಪ್ರಚಂಡಶಕ್ತಿಗೆ ಮರಾಠರು ಈಡಾಗಲಿಲ್ಲ ಹಾಗೆಯೇ ಹಿಂತಿರುಗಿ ಬಿದನೂರು, ಸ್ವಾದಿ, ಸುರಪುರ, ಗದುಗು, ಲಕ್ಷ್ಮೇಶ್ವರಗಳ ನಾಯಕರಿಂದ ಬಾಜೀರಾಯನು ಕಪ್ಪವನ್ನು ಪಡೆದನು ಧಾರವಾಡದ ವರೆಗಿನ ಸೀಮೆಯನ್ನು ಮರಾಠಾರಾಜ್ಯಕ್ಕೆ ಸೇರಿಸಿದನು

**ಬಾಳಾಪುರ ಯುದ್ಧ (೧೭೨೩)** – ದಿಲ್ಲಿಯ ರಾಜ್ಯಚಾಲಕರಾದ ಸಯ್ಯದ ಬಂಧುಗಳಿಗೂ ನಿಜಾಮ ಉಲ್ಮುಲ್ಕನಿಗೂ ಬಾಳಾಪುರದ ಹತ್ತಿರ ಆದ ಯುದ್ಧ ದಲ್ಲಿ, ಬಾಜೀರಾಯನ ನೆರಪಿನಿಂದ ನಿಜಾಮ ಉಲ್ಮುಲ್ಕನಿಗೆ ಗೆಲುವಾಯಿತು. ಅವನು ಔರಂಗಬಾದದಲ್ಲಿ ತನ್ನ ಸಿಂಹಾಸನವನ್ನು ಸ್ಥಾಪಿಸಿ, ಮೊಗಲರಾಜ್ಯದ

ಭಾಗವನ್ನೆಲ್ಲ ಆಳಹತ್ತಿದನು, ಮತ್ತು ತನ್ನ ಆ ಭಾಗದಲ್ಲಿ ಮರಾಠರ ಚೌಥಾಯಿ-ಸರದೇಶಮುಖಿ ಒಡೆತನಗಳನ್ನು ಒಪ್ಪಿದನು ಈ ಯುದ್ಧದಿಂದ ಮರಾಠರಿಗೆ ದಿಲ್ಲಿಯ ಮೊಗಲರ ಕಾಟ ತಪ್ಪಿದಂತಾಯಿತು ಇತ್ತ ನಿಜಾಮ-ಉಲ್ಮುಲ್ಕನು ದಿಲ್ಲಿಯ ವಜೀರನಾಗಿ ಮೆರೆದನು

**ನಿಜಾಮನೊಡನೆ ಯುದ್ಧ** — ದಿಲ್ಲಿಯ ವಜೀರನಾದ ಮೇಲೆ, ಆ ಮೊದಲು ಮರಾಠರು ಮಾಡಿದ ಸಹಾಯವನ್ನು ನಿಜಾಮನು ಮರೆತನು ಅವರಿಗೆ ಕೊಟ್ಟ ಚೌಥಾಯಿ-ಸರದೇಶಮುಖಿಗಳ ಹಕ್ಕನ್ನು ಹಾರಿಸಬೇಕೆಂದು ಹೊಂಚು-ಹಾಕಿದನು ರಾಜ್ಯದ ಆಸೆ ಹಚ್ಚಿ ರಾಜಾರಾಮನ ಎರಡನೆಯ ಮಗನಾದ ಸಂಭಾಜಿಯನ್ನು ತನ್ನ ಕಡೆಗೆ ಒಲಿಸಿಕೊಂಡನು ಈ ದುರುದ್ದೇಶವು ಬಾಜೀರಾಯನಿಗೆ ತಿಳಿಯಿತು ತಾನಾಗಿಯೇ ಕಾಲುಕೆದರಬೇಕೆಂದು, ನಿಜಾಮನಿಗೆ ತನ್ನ ಚೌಥಾಯಿ-ಸರದೇಶಮುಖಿಯ ಹಣವನ್ನು ಕೊಡಲು ಕೇಳಿದನು ನಿಜಾಮನು ನಿರಾಕರಿಸುತ್ತಲೇ ಬಾಜೀರಾಯನು ಸೈನ್ಯಸಹಿತ ವಾಗಿ ಏರಿಹೋದನು, **ಪಾಲಖೇಡ** ಎಂಬಲ್ಲಿ ಪೂರ್ಣ ಸೋಲಿಸಿದನು. ಆಗ ನಿಜಾಮನು ಒಪ್ಪಂದ ಮಾಡಿಕೊಂಡು, ಅವರ ಕಂದಾಯಭಾಗದ ಬಾಧ್ಯತೆಯನ್ನು ಒಪ್ಪಿ, ಮತ್ತೆ ಆರು ಸುಭೆಗಳನ್ನೂ ಕೆಲವು ಕೋಟೆಗಳನ್ನೂ ಮರಾಠರಿಗೆ ಕೊಟ್ಟನು

**ಮಾಳವದ ಮುತ್ತಿಗೆ** — ಬಾಜೀರಾಯನಿಗೆ ಮರಾಠಾರಾಜ್ಯವನ್ನು ಹೇಗಾದರೂ ವಿಸ್ತರಿಸಬೇಕೆಂಬ ಹಂಬಲವಿತ್ತು ಅದಕ್ಕಾಗಿ ಸೈನ್ಯಸಮೇತನಾಗಿ ಉತ್ತರಕ್ಕೆ ಹೊರಟನು ಎಷ್ಟೋ ಭಾಗಗಳು ಅನಾಯಾಸವಾಗಿಯೇ ಈತನ ಕೈಸೇರಿದುವು ಕೊನೆಗೆ ಮಾಳವಕ್ಕೆ ಮುತ್ತಿಗೆಹಾಕಿದನು ಅಲ್ಲಿಯ ದೊರೆಯಾದ ರಾಜಾ ಗಿರಿಧರಬಹದ್ದೂರನು ಒಳ್ಳೆ ಕಲಿತನದಿಂದ ಕಾದಿದನು, ಆದರೂ ಮರಾಠರ ವೀರಾವೇಶಕ್ಕೆ ಈಡಾಗಲಿಲ್ಲ ಸೋತು ಮರಾಠರ ಮಾಂಡಲಿಕನಾದನು ಈ ಜಯದಿಂದ, ನಿಜಾಮನಿಗೆ ದಿಲ್ಲಿಯ ಆಡಳಿತಕ್ಕೆ ದಾರಿ ಕಟ್ಟಾಯಿತು ದಳಪತಿಗಳಾದ ಸಿಂಧೆ-ಹೋಳಕರರು ಗ್ವಾಲ್ಹೇರ-ಇಂದೂರುಗಳಲ್ಲಿ ಕಾರಭಾರ ಮಾಡಹತ್ತಿದರು

**ಬುಂದೇಲಖಂಡದ ಒಪ್ಪಂದ** — ಈ ಹೊತ್ತಿಗ ಬುಂದೇಲಖಂಡದಲ್ಲಿ ರಾಜಾ ಛತ್ರಸಾಲನು ಆಳುತ್ತಿದ್ದನು ಈತನಿಗೂ ಮಹಮ್ಮದ ಬಾದಶಹನಿಗೂ ಕಾಳಗ ನಡೆಯಿತು ಬಾಜೀರಾಯನು ಬುಂದೇಲಖಂಡದವರ ಪಕ್ಷವನ್ನು ವಹಿಸಿ ಯುದ್ಧದಲ್ಲಿ ಗೆದ್ದನು ಕೃತಜ್ಞನಾದ ಛತ್ರಸಾಲನು, ೩೦ ಲಕ್ಷ ಉತ್ಪನ್ನದ ಸೀಮೆಯನ್ನು ಮರಾಠರಿಗೆ ಕೊಟ್ಟನು

**ಭೋಪಾಳದ ಯುದ್ಧ** — ಇನ್ನು ದಿಲ್ಲಿಯ ದೊರೆತನವನ್ನು ಕೈವಶಮಾಡಿಕೊಳ್ಳಬೇಕೆಂಬುದೊಂದೇ ಬಾಜೀರಾವನ ಹವಣಿಕೆ ಅದಕ್ಕಾಗಿ ದಿಲ್ಲಿಯ ಮೇಲೆ ದಂಡೆತ್ತಿ ಹೋದನು. ಅರಸನಾದ ಮಹಮ್ಮದಶಹನು ನಿಜಾಮನಿಗೆ ಹೇಳಿಕಳಿಸಿದನು ಭೋಪಾಳದ ಹತ್ತಿರವೇ ನಿಜಾಮನಿಗೂ ಬಾಜೀರಾಯನಿಗೂ ಕೈಗೆ ಕೈಹತ್ತಿತು. ನಿಜಾಮನಿಗ ಅಪಜಯವಾಗಿ ಒಪ್ಪಂದವಾಯಿತು. ಇದರಿಂದ ನರ್ಮದಾ ಚಂಬಳಾ ನದಿಗಳ ನಡುವಿನ ಸೀಮೆ ಮರಾಠರಿಗೆ ದಕ್ಕಿತು, ಬಾದಶಹನ ಕಡೆಯಿಂದ ೫೦ ಲಕ್ಷ ರೂಪಾಯಿ ಕೊಡಿಸಲು ನಿಜಾಮನಿಂದ ವಚನವೂ ಸಿಕ್ಕಿತು

**ಪೋರ್ತುಗೀಜರ ಪರಾಭವ** — ಭಾರತದಲ್ಲಿ ನಡೆದ ಈ ಹೋರಾಟಗಳನ್ನು ನೋಡಿ, ಹೊರನಾಡಿನಿಂದ ಬಂದ ಪೋರ್ತುಗೀಜರೂ ತಮ್ಮ ರಾಜ್ಯಗಳನ್ನು ಭದ್ರಗೊಳಿಸಲು ಸೈನ್ಯವನ್ನು ಸಜ್ಜುಗೊಳಿಸಿದರು ಬಾಜೀರಾಯನ ತಮ್ಮ **ಚಿಮಾಜಿಯು** ಸೈನ್ಯಸಹಿತವಾಗಿ ಹೋಗಿ ಕೊಂಕಣ, ವಸಯಿಗಳನ್ನು ಗೆದ್ದುಕೊಂಡನು ಪೋರ್ತುಗೀಜರ ಪರಾಭವವಾಯಿತು ಹೀಗೆ ಮರಾಠಾ ರಾಜ್ಯವು ಬಾಜೀರಾಯನ ಕಾಲದಲ್ಲಿ ಉತ್ತರಕ್ಕೂ ದಕ್ಷಿಣಕ್ಕೂ ದೂರದ ವರೆಗ ಬೆಳೆಯಿತು

**ಮರಣ** — ಈ ಕಾಲಕ್ಕೆ ಇರಾಣದ ನಾದಿರಶಹನು ದಾಳಿಯನ್ನು ಮಾಡುತ್ತ ಭಾರತವನ್ನು ಹೊಕ್ಕನು ಅವನನ್ನು ಇದಿರಿಸಲು ಬಾಜೀರಾಯನು ಹೊರಟನು ಆದರೆ, ಪ್ರಯಾಣದಲ್ಲಿರುವಾಗಲೇ ರಾವೇರ ಎಂಬಲ್ಲಿ ಜ್ವರ ಬಂದು, ಆತನ ಅಂತ್ಯವಾಯಿತು (೧೭೪೦) ತರುವಾಯ ಹಿರಿಯ ಮಗ ಬಾಳಾಜಿ ಬಾಜೀರಾಯನು ಪೇಶ್ವೆಯಾದನು

**ಗುಣ ಮತ್ತು ಕಾರ್ಯ** — ಮೊದಲನೆಯ ಬಾಜೀರಾಯನು ಪೇಶವೇ ವಂಶದಲ್ಲಿಯೇ ಮಿಗಿಲಾದವನು ಈತನ ಶೌರ್ಯ, ಚಾತುರ್ಯ, ಸಾಹಸ, ಪ್ರಸಂಗಾವಧಾನಗಳು ಮರಾಠಾರಾಜ್ಯವನ್ನು ವಿಸ್ತರಿಸುವುದಕ್ಕೆ ಒಳ್ಳೆ ಪೋಷಕವಾದುವು. ಈತನಲ್ಲಿ ಗುಣಿಗಳನ್ನು ಗೌರವಿಸುವ ದೊಡ್ಡತನವಿತ್ತು ಅದರಿಂದ ಈತನ ಆಳಿಕೆಯಲ್ಲಿ ಸಿಂಧೆ ಹೋಳಕರ ಮೊದಲಾದ ಮರಾಠಾವೀರರು ಬೆಳಕಿಗೆ ಬಂದರು ದಿಲ್ಲಿಯ ಮೇಲೆ ತಮ್ಮ ಕಾವಿಯ ಧ್ವಜವನ್ನು ಹಾರಿಸಬೇಕೆಂಬ ಹೆಬ್ಬಯಕೆ ಮಾತ್ರ ಈತನಿಂದ ಈಡೇರಲಿಲ್ಲ! ಪುಣೆ ಪಟ್ಟಣದಲ್ಲಿ ಪ್ರೇಕ್ಷಣೀಯವಾಗಿರುವ ಶನಿವಾರವಾಡೆಯನ್ನು ಈತನೇ ಕಟ್ಟಿಸಿದನು ಅದೀಗ ಬಹುಮಟ್ಟಿಗೆ ಹಾಳಾಗಿದೆ

## ನಾನಾಸಾಹೇಬ (ಬಾಳಾಜಿ ಬಾಜೀರಾವ) ಪೇಶವೆ

(೧೭೪೦–೧೭೬೦)

**ನಾನಾಸಾಹೇಬ ಪೇಶವೆ** —ಬಾಜೀರಾವ ಪೇಶವೆನಿಗೆ ಮೂವರು ಮಕ್ಕಳು ಅವರಲ್ಲಿ ಬಾಳಾಜಿ ಬಾಜೀರಾಯನು ಹಿರಿಯ ಮಗನು ಈತನು ಸಾತಾರೆಯಲ್ಲಿ ಶಾಹೂರಾಜನೊಡನೆಯೇ ಕಾಲ ಕಳೆಯುತ್ತಿದ್ದನು ಅದರಿಂದ ರಾಜನಿಗೆ ಈತನ ಬಗೆಗೆ ಹೊಟ್ಟೆಯ ಮಗನಷ್ಟು ಪ್ರೇಮವಿತ್ತು ಬಾಜೀ-ರಾಯನು ನತ್ತಾಗ ಬಾಳಾಜಿಗೆ ೧೮ ವರುಷ ಮಾತ್ರ, ಆದುದರಿಂದ ರಘೂಜಿ ಭೋಸಲೆ ಮೊದಲಾದವರು, ಬೇರೊಬ್ಬರನ್ನು ಪೇಶವೆ ಪದಕ್ಕೆ ಮುಂದೆ ಮಾಡಿದರು, ಆದರೆ, ಶಾಹೂರಾಜನ ಪ್ರೀತಿಯು ಇದಕ್ಕೆ ಆಸ್ಪದ ಕೊಡಲಿಲ್ಲ ಅಲ್ಲದೆ ಬಾಳಾಜಿಯು ಬುದ್ಧಿವಂತ, ಶೂರ, ಸಾಹಸಿ ಆದುದರಿಂದ ಶಾಹೂರಾಜನು ಈತನಿಗೇ ಪೇಶವೆಯ ಪಟ್ಟಕಟ್ಟಿದನು ಮುಂದೆ ಬಾಳಾಜಿಯು **ನಾನಾ ಸಾಹೇಬ ಪೇಶವೆ** ಎಂಬ ಹೆಸರಿನಿಂದ ಪ್ರಸಿದ್ಧನಾದನು

**ಪೇಶವೆಗೇ ಸರ್ವಾಧಿಕಾರ** —೧೭೪೯ರಲ್ಲಿ ಶಾಹೂರಾಜನ ಮರಣ ವಾಯಿತು ಆತನಿಗೆ ಮಕ್ಕಳಿರಲಿಲ್ಲ ಅದರಿಂದ ‘ತನ್ನ ತರುವಾಯ ತಾರಾ ಬಾಯಿಯ ಮೊಮ್ಮಗನಾದ ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸಬೇಕು, ಪೇಶವೆಯ ಎಲ್ಲ ಅಧಿಕಾರಗಳನ್ನು ನೋಡಿಕೊಳ್ಳಬೇಕು’ ಎಂದು ಶಾಹೂ ರಾಜನು ತಿಳಿಸಿದ್ದನು, ಆದರೆ, ತಾರಾಬಾಯಿಯು ಪೇಶವೆಯನ್ನು ಬದಿಗಿರಿಸಿ ತಾನೇ ಸರ್ವಾಧಿಕಾರಿಣಿಯಾಗಬೇಕೆಂದು, ಗಾಯಕವಾಡ ಮೊದಲಾದ ಸರದಾರರ ಬೆಂಬಲವನ್ನು ಪಡೆಯಲು ಪ್ರಯತ್ನಿಸಿದಳು ನಾನಾಸಾಹೇಬನು ಅವರೆಲ್ಲರನ್ನೂ ಸೋಲಿಸಿ ಸರೆಯುಲ್ಲಿಟ್ಟನು ಪುಣೆಯನ್ನೇ ತನ್ನ ರಾಜಧಾನಿ ಯನ್ನು ಮಾಡಿಕೊಂಡನು ಅಂದಿನಿಂದ ಪೇಶವೆಗೇ ಸರ್ವಾಧಿಕಾರವು ದೊರೆಯಿತು

**ಉತ್ತರಹಿಂದುಸ್ಥಾನದಲ್ಲಿ ಚೌಥಾಯಿಯ ಬಾಧ್ಯತೆ** —(೧೭೫೦) ಉತ್ತರ ದಲ್ಲಿ ಸಿಂಧೆ ಹೋಳಕರ ಮೊದಲಾದ ವೀರರು ಮರಾಠಾರಾಜ್ಯವನ್ನು ವಿಸ್ತರಿಸುತ್ತ ದಿಲ್ಲಿಯ ಸಮೀಪಕ್ಕೆ ಹೋದರು ಮರಾಠರು ಬಂಗಾಲದ ನವಾಬನನ್ನು ಸೋಲಿಸಿ, ಅವನಿಂದ ಓಡಿಸಾ ಪ್ರಾಂತವನ್ನು ಪಡೆದರು ಬಂಗಾಲ-ಬಿಹಾರ ಪ್ರಾಂತಗಳಿಂದಲೂ ಚೌಥಾಯಿ ಹಣ ಸಲ್ಲುವಂತೆ ಒಪ್ಪಂದ ಮಾಡಿಕೊಂಡರು ಈ ಹೊತ್ತಿಗೆ ಇರಾಣದ **ಅಹಮ್ಮದಶಹ ಅಬದಾಲಿಯು** ದಿಲ್ಲಿಯ ಮೇಲೆ ದಾಳಿಮಾಡುವನೆಂದು ಸುದ್ದಿ ಬಂದಿತು ಆಗ ನಿಜಾಮು ಉಲ್ಮುಲ್ಕನ ಮಗನಾದ ಗಾಝೀಉದ್ದೀನನು ವಜೀರನಾಗಿದ್ದನು ಅವನು

ಅಬದಾಲಿಗೆ ಹೆದರಿ ಮರಾಠರ ಮಿತ್ರತ್ವವನ್ನು ಬಯಸಿದ್ದನು ಇದಕ್ಕಾಗಿ ಮರಾಠರಿಗೆ, ಉತ್ತರಭಾರತದಲ್ಲಿ ಸಿಂಧುನದಿಯ ವರೆಗಿನ ಪ್ರದೇಶದಲ್ಲಿ ಚೌಧಾಯಿಯ ಬಾಧ್ಯತೆಯನ್ನು ಕೊಟ್ಟನು

**ಪಂಜಾಬದಲ್ಲಿ (೧೭೫೮)** — ಈ ಹೊತ್ತಿಗಾಗಲೇ ಅಬದಾಲಿ ಅಹಮ್ಮದ ಶಹನು ದಿಲ್ಲಿಯನ್ನು ಗೆದ್ದು, ಮಥುರೆಯನ್ನು ಸುಲಿದು, ದೇವಸ್ಥಾನಗಳ ಧನ-ವನ್ನೆಲ್ಲ ದೋಚಿಕೊಂಡು ಹೋಗಿದ್ದನು ದಿಲ್ಲಿಯಲ್ಲಿ ತನ್ನೊಬ್ಬ ಸುಭೇದಾರ ನನ್ನಿಟ್ಟನು ಈ ಸುದ್ದಿಯು ನಾನಾಸಾಹೇಬನಿಗೆ ತಿಳಿಯುತ್ತಲೇ ರಘುನಾಥ ರಾವ ಸೇನಾಪತಿಯನ್ನು ಅಲ್ಲಿಗೆ ಕಳಿಸಿದನು ಆತನು ಅಬದಾಲಿಯ ಸುಭೇದಾರನನ್ನು ಓಡಿಸಿ, ಅಟಕ ಪಟ್ಟಣದ ಮೇಲೆ ಮರಾಠರ ಕಾವೀಬಣ್ಣದ ಧ್ವಜ ವನ್ನು ಹಾರಿಸಿದನು ಇದು ದಿಲ್ಲಿಯ ವಜೀರ ನಜೀಬಖಾನ ರೋಹಿಲೆಗೆ ಹೊಟ್ಟೆಯುರಿಯನ್ನುಂಟುಮಾಡಿತು ಅವನು ಅಬದಾಲಿಯನ್ನು ಮರಾಠರ ವಿರುದ್ಧ ಹುರಿದುಂಬಿಸಲು ಪತ್ರವನ್ನು ಬರೆದನು

**ಕನ್ನಡನಾಡಿನಲ್ಲಿ** —(೧೭೪೭-೧೭೫೭) ಉತ್ತರದಲ್ಲಿ ಸಿಕ್ಕ ಯಶಸ್ಸಿನಿಂದ ಮತ್ತೆ ನಾನಾಸಾಹೇಬನಿಗೆ ಕನ್ನಡನಾಡಿನಲ್ಲಿ ಕಾಲುಚಾಚಬೇಕೆಂಬ ಹುಮ್ಮಸು ಹುಟ್ಟಿತು ಆಗ ದಕ್ಷಿಣದಲ್ಲಿದ್ದ ಸಂಸ್ಥಾನಗಳೆಲ್ಲ ಸಣ್ಣವು ಮರಾಠರ ಸೈನ್ಯ ದೊಡ್ಡದಿತ್ತು ಅದರಿಂದ ನಾನಾಸಾಹೇಬನು ಬಾಗಿಲುಕೋಟೆ, ಸವಣೂರು, ಧಾರವಾಡ, ಬಹದ್ದೂರ್‌ಬಂಡೆ, ಕಡಪಾ, ಕರ್ನೂಲುಗಳನ್ನು ಸಹಜವಾಗಿಯೇ ಗೆದ್ದುಕೊಂಡನು, ಧಾರವಾಡದಲ್ಲಿ ಟಂಕಸಾಲೆಯನ್ನು ಹಾಕಿಸಿದನು ಇದರಂತೆ ಬೆಂಗಳೂರನ್ನು ಮುತ್ತಿ, ಇಮ್ಮಡಿ ಕೃಷ್ಣರಾಜರ ಸರ್ವಾಧಿಕಾರಿಯಾಗಿದ್ದ ಹೈದರಅಲಿಯನ್ನು ಸೋಲಿಸಿದನು, ಅವರ ಕಡೆಯಿಂದ ೩೭ ಲಕ್ಷ ರೂಪಾಯಿ ಕಪ್ಪಗಾಣಿಕೆಯನ್ನು ಪಡೆದನು

**ಉದಯಗಿರಿಯ ಕಾಳಗ** —(೧೭೬೦) ನಿಜಾಮನಿಗೂ ಮರಾಠರಿಗೂ ಎಂದಿನಿಂದಲೂ ಸೇಡು ಸುಳಿದಾಡುತ್ತಿತ್ತು ನಿಜಾಮಲುಲ್ಮುಲ್ಕನ ಮರಣ (೧೭೪೮)ದ ತರುವಾಯ ಆತನ ಆರು ಜನ ಮಕ್ಕಳಲ್ಲಿ ಒಳಜಗಳವೆದ್ದಿತು ಕೊನೆಗೆ ಸಲಾಬತಜಂಗನು ಪಟ್ಟವೇರಿದನು ಇವನು ಉದಯಗಿರಿಯಲ್ಲಿ ಆಳುತ್ತಿದ್ದನು ನಾನಾಸಾಹೇಬನಿಗೆ, ಹಿಂದೆ ಸಿಂದಖೇಡ ಒಪ್ಪಂದದಂತೆ ನಿಜಾಮನಿಂದ ಬರತಕ್ಕ ಸೀಮೆಕೋಟೆಗಳು ಕೈಸೇರಿರಲಿಲ್ಲ ಈಗ ಅವುಗಳನ್ನು ಕೇಳುವುದಕ್ಕೆ ಸದಾಶಿವರಾಯನನ್ನು ನಿಜಾಮನಲ್ಲಿಗೆ ಕಳಿಸಿದನು ಸಲಾಬತಜಂಗನು ಯುದ್ಧಕ್ಕೇ ನಿಂತನು. ಆದರೆ ಅವನ ಕಡೆಗೆ ಫ್ರೆಂಚರಾಗಲಿ ಬೇರೆ ಮುಸಲ್ಮಾನ ವೀರಾಳುಗಳಾಗಲಿ ಇರಲಿಲ್ಲ ಅದರಿಂದ ಸೋತು ಒಪ್ಪಂದಮಾಡಿಕೊಂಡನು ದೌಲತಾಬಾದ, ಅಶೀರಗಡ, ಬರ್ಹಾಣಪುರ

ಕೋಟೆಗಳನ್ನೂ ನಾಂದೇಡ, ಅಂಬೇಡ, ವಿಜಾಪುರ ಮುಂತಾದ ಕರ್ನಾಟಕ ಪ್ರಾಂತಗಳನ್ನೂ ಪೇಶವೆಗೆ ಕೊಟ್ಟನು

**ಉತ್ತರದಲ್ಲಿ ವಿರೋಧ** — ಈ ಹೊತ್ತಿಗೆ, ಉತ್ತರದಲ್ಲಿ ಮರಾಠರ ವಿರುದ್ಧವಾಗಿ ವಿರೋಧದ ಗಾಳಿ ಬೀಸತೊಡಗಿತು ಅಫಗಾನರ ಮುಖಂಡರು ದಿಲ್ಲಿಯ ಮೇಲೆ ದಾಳಿಮಾಡಬೇಕೆಂದು ಅಬದಾಲಿಗೆ ಪತ್ರ ಬರೆದರು ಅದರಂತೆ ಅವನು ಸುಸಜ್ಜಿತ ಸೈನ್ಯದೊಡನೆ ಭಾರತವನ್ನು ಹೊಕ್ಕನು ಲಾಹೋರದಲ್ಲಿದ್ದ ಪೇಶವೆಯ ಸುಭೇದಾರನನ್ನು ಓಡಿಸಿದನು ಇದರಿಂದ ಮರಾಠರಿಗೆ ಕಣ್ಣು ಕೆಂಪಗಾದುವು ದತ್ತಾಜಿ ಸಿಂಧೆ ಒಬ್ಬನೇ ಸೈನ್ಯಸಹಿತನಾಗಿ ಅಬದಾಲಿಗೆ ಇದಿರಾದನು ಆತ ಕಾದಾಡುತ್ತ ಕಾದಾಡುತ್ತ ವೀರಸ್ವರ್ಗವನ್ನು ಪಡೆದನು. ಆಮೇಲೆ ಅಬದಾಲಿಯು ದಿಲ್ಲಿಯ ನೆರೆಯಲ್ಲಿಯೇ ನೆಲೆಯೂರಿ ನಿಂತನು

**ಸೈನ್ಯಸೌರಣೆ** —ಈಗ ಮರಾಠರು ಕಣ್ಣು ತೆರೆದರು ೭೦ ಸಾವಿರ ಸೈನ್ಯದ ಸೌರಣೆ ಮಾಡಿದರು ಸದಾಶಿವರಾಯನೆಂಬ ಶೂರನು ಸೈನ್ಯಾಧಿಪತ್ಯವನ್ನು ವಹಿಸಿದನು ಆತನ ಬೆಂಬಲಕ್ಕೆ ನಾನಾಸಾಹೇಬನ ಮಗ ವಿಶ್ವಾಸರಾಯನೂ ಪುರಂದರೆ, ಮೆಹಂದಳೆ ಚಿಟಣೀಸ ಮುಂತಾದ ವೀರರೂ ಸಾಗಿದರು ಶಸ್ತ್ರಾಸ್ತ್ರಗಳ ಸಂಗ್ರಹವೂ ಹೇರಳವಾಗಿತ್ತು ಆ ಮೇಲೆ ದಾರಿಯಲ್ಲಿ ಸುರಜಮಲ್ಲ ಜಾಟ ಮೊದಲಾದ ಶೂರರನ್ನು ಕೂಡಿಸಿಕೊಂಡರು ಸದಾಶಿವರಾಯನು ಅಬದಾಲಿಯ ಸೈನ್ಯದ ಸುತ್ತಲೂ ಛಾವಣಿಯನ್ನು ಹೊಡೆದನು, ಅಬದಾಲಿಗೆ ಅನ್ನ ನೀರು ಸಿಕ್ಕದಂತೆ ಕೊಳ್ಳೆಹೊಡೆಯಲು ಸೈನಿಕರಿಗೆ ಅಪ್ಪಣೆಕೊಟ್ಟನು ಸಿಂಧೆ-ಹೋಳಕರರನ್ನು ದಿಲ್ಲಿಯ ಮೇಲೆ ದಂಡೆತ್ತಿಸಿದನು

**ಅಬದಾಲಿಯ ತಂತ್ರ** — ದಿಲ್ಲಿಯು ಪೇಶವೆಯರ ವಶವಾಯಿತು ಸದಾಶಿವರಾಯನು ದಿಲ್ಲಿಯ ಬೊಕ್ಕಸವನ್ನು ಬರಿದುಮಾಡಿ ಸೈನಿಕರಿಗೆ ಹಂಚಿದನು ಆ ಆರ್ಭಟೆಯನ್ನು ಕಂಡು ಅಬದಾಲಿಯು ಅಂಜಿದನು, ಆದರೂ ಮರಾಠರನ್ನು ಹಣಿಯುವ ತಂತ್ರಗಳನ್ನು ನಡೆಸಿದನು ಮರಾಠಾ ಸೈನಿಕರು ಮುನ್ನಡೆಯುತ್ತ ಪಾನಿಪತ್ ರಣಭೂಮಿಗೆ ಬಂದರು ಅಬದಾಲಿಯ ತಂತ್ರಗಳಿಂದ ಮರಾಠಾಸೈನ್ಯಕ್ಕೆ ಹೊರಗಿನ ಯಾವ ನೆರವೂ ಸಿಕ್ಕದಂತಾಯಿತು, ಕೂಳು-ನೀರುಗಳ ಸಂಗ್ರಹವೂ ತೀರಿತು! ಇನ್ನು ಹೊರಬಿದ್ದು ಕಾದಾಡದೆ ಗತ್ಯಂತರವೇ ಉಳಿಯಲಿಲ್ಲ

**ಪಾನಿಪತದ ಮೂರನೆಯ ಯುದ್ಧ** —೧೭೬೧ನೆಯ ಇಸವಿಯ ಜನವರಿ ನಾಲ್ಕನೆಯ ದಿನಾಂಕ ಬೆಳಗ್ಗೆ, ಮರಾಠಾ ಸೈನ್ಯವು ಸಮರಕ್ಕೆ ಸಿದ್ಧವಾಗಿ ನಿಂತಿತು ಸದಾಶಿವರಾವ ವಿಶ್ವಾಸರಾಯರು ಸೈನಿಕರನ್ನೂ ಸರದಾರರನ್ನೂ 'ಗೆಲವು ಇಲ್ಲವೆ ಸಾವು' ಎರಡಕ್ಕೂ ಸಿದ್ಧರಾಗಬೇಕೆಂದು ಹುರಿದುಂಬಿಸಿದರು!

ಎಲ್ಲಕ್ಕೂ ಮುಂದೆ ತೋಫಖಾನೆ ಸಹಿತವಾಗಿ ಇಬ್ರಾಹಿಮಖಾನನು ನಿಂತನು, ನಡುವೆ ಸದಾಶಿವರಾವ-ವಿಶ್ವಾಸರಾಯರು ಆನೆಗಳ ಮೇಲೆ, ಅವರ ಬಲಕ್ಕೆ ಸಿಂಧೆ, ಹೋಳಕರ, ಎಡಕ್ಕೆ ಪವಾರ, ವಿಂಚೂರಕರ ಮತ್ತು ಸಮಶೇರ ಬಹಾದ್ದೂರ ಗಾಯಕವಾಡರು ಸೈನ್ಯವೆಲ್ಲ ಮುನ್ನಡೆಯಿತು ಅಬದಾಲಿಯೂ ಸೈನ್ಯಸಹಿತವಾಗಿ ಪಾನಿಪತದಲ್ಲಿ ಇದಿರಾದನು.

ಎರಡೂ ಕಡೆಗಳಿಂದಲೂ ತೋಫುಗಳು ಅಗ್ನಿಯನ್ನು ಕಾರಹತ್ತಿದುವು! ಮರಾಠರ ಮೊದಲ ಹೊಡೆತಕ್ಕೇ ಅಬದಾಲಿಯ ಸೈನ್ಯ ಪಟಪಟ ನೆಲಕ್ಕೆ ಬೀಳಹತ್ತಿತು! ಮರಾಠರ ಸೈನ್ಯದಲ್ಲಿ 'ಹರಹರ ಮಹಾದೇವ' ಜಯಘೋಷ ಆರಂಭವಾಯಿತು ಆಗ, ಅಬದಾಲಿ ದೂರದಿಂದಲೇ ಹದ್ದಿನಂತೆ ಎರಗಿ ಮರಾಠಾ ಸೈನ್ಯವನ್ನು ಮುತ್ತಿದನು ಮಧ್ಯಾಹ್ನದ ಬಿಸಿಲಿನಲ್ಲಿ ಖಡ್ಗಗಳ ಝಣಝಣಾಟ, ತೋಫುಗಳ ಬೆಂಕಿಯ ಕಾರಾಟ! ಈ ಹೊತ್ತಿಗೆ ಎಲ್ಲಿಂದಲೋ ಒಂದು ಗುಂಡು ಬಂದು ಆನೆಯ ಮೇಲಿದ್ದ ವಿಶ್ವಾಸರಾಯನಿಗೆ ತಾಗಿತು, ಅವನು ಗಾಯಾಳುವಾದನು ಸದಾಶಿವರಾಯನು ಮಿಂಚಿನ ವೇಗದಿಂದ ಬಂದು ಅವನ ಸ್ಥಳದಲ್ಲಿ ನಿಂತನು ಕಾಲಭೈರವನಂತೆ ಕಾದಹತ್ತಿದನು! ಇಷ್ಟರಲ್ಲಿ ಮುಸಲ್ಮಾನರು ಸದಾಶಿವರಾಯನನ್ನು ಸೆರೆಹಿಡಿದು ಕೊಂದರು. ಮರಾಠಾವೀರರೂ ಸೈನಿಕರೂ ರಣಭೂಮಿಯಿಂದ ಕಾಲುಕಿತ್ತಿದರು. ಅಬದಾಲಿಯ ಅಬ್ಬರಕ್ಕೆ ಗಗನವೆಲ್ಲ ಪ್ರತಿಧ್ವನಿಗುಡಹತ್ತಿತು.

**ನಾನಾಸಾಹೇಬನ ಮರಣ** — ಮಗನ ಮರಣದ ಸುದ್ದಿ ನಾನಾಸಾಹೇಬನಿಗ ನಡುದಾರಿಯಲ್ಲಿಯೆ ತಿಳಿಯಿತು ಅವನು ಹಾಗೆಯೆ ಪುಣೆಗೆ ಹಿಂದಿರುಗಿದನು, ಇದೇ ಎದೆಯೊಡಿಕೆಯಿಂದಲೇ ಆತನು ತೀವ್ರದಲ್ಲಿಯೇ (೧೭೬೧ರಲ್ಲಿ) ಸತ್ತನು.

**ಮರಾಠರು ಸೋತುದೇಕೆ?**—ಮರಾಠರಿಗೆ ಹಿಂದಿನ ಹಲವು ಸಣ್ಣ ಪುಟ್ಟ ಗೆಲವುಗಳಿಂದ ಜೊಳ್ಳು ಹೆಮ್ಮೆ ಹುಟ್ಟಿತ್ತು, ಅದರಿಂದ ಯಾರನ್ನು ಇದಿರಿಸುವುದಕ್ಕೂ ಇದ್ದ ಸ್ಥಿತಿಯೇ ಸಾಕೆನ್ನುತ್ತಿದ್ದರು ಹೀಗಾಗಿ, ಸೈನಿಕರಿಗೆ ಸಾಕಷ್ಟು ಶಿಕ್ಷಣ ಕೊಡಲಿಲ್ಲ, ಶಸ್ತ್ರಾಸ್ತ್ರಸಂಗ್ರಹವು ಇವರ ಮಟ್ಟಿಗೆ ಹೇರಳವಾಗಿರಬಹುದು, ಆದರೆ, ಇದಿರಾಳಿನ ದೃಷ್ಟಿಯಿಂದ ಕಡಮೆಯೇ ಇತ್ತು ಅಬದಾಲಿಯನ್ನು ಬೇಗನೆ ಅಡಗಿಸುವೆವೆಂಬ ಹೆಮ್ಮೆಯಿಂದ ಸಾಕಷ್ಟು ಅನ್ನಸಂಗ್ರಹವನ್ನೂ ಮಾಡಿಕೊಂಡಿರಲಿಲ್ಲ ಅಬದಾಲಿಯು ಇವರ ಸಹಾಯದ ಹಾದಿಯನ್ನು ಕಟ್ಟುತ್ತಲೇ, ಮರಾಠರಿಗೆ ಹೊರಗಿನದೇನೂ ಸಿಕ್ಕದಂತಾಯಿತು, ಇದ್ದುದು ಸಾಲಲಿಲ್ಲ ಹೊಸ ಅನ್ನಸಾಮಗ್ರಿಯಿಲ್ಲ ಹೊಸ ಹೊಸ ಸೈನ್ಯವಿಲ್ಲ ಅಬದಾಲಿಯು ಯುದ್ಧದ ಮುತ್ಸದ್ದಿತನವನ್ನು ಬಲ್ಲನು. ಮರಾಠರ

ಮುಂದಾಳುಗಳೇ ಮುಂದಾಗಿ ಕಾದತೊಡಗಿದಂತೆ, ಅವನೇನೂ ಒಮ್ಮೆಲೆ ಕಣಕ್ಕಿಳಿಯಲಿಲ್ಲ ಈ ಎಲ್ಲ ಕಾರಣಗಳಿಂದಾಗಿ ಮರಾಠರು ಸೋಲಲು ಕಾರಣವಾಯಿತು ಇಲ್ಲಿಗೆ ಮರಾಠರ ಕಸುವು ಕುಂದಿತು

**ಮಾಧವರಾಯನಿಗೆ ಪೇಶವೆ ಪಟ್ಟ** — ನಾನಾಸಾಹೇಬ ಪೇಶವೆಗೆ ಮೂವರು ಮಕ್ಕಳು ವಿಶ್ವಾಸರಾವ, ಮಾಧವರಾವ ಮತ್ತು ನಾರಾಯಣ ರಾವ. ಹಿರಿಯ ಮಗನು ಪಾನಿಪತ ಯುದ್ಧದಲ್ಲಿ ಮಡಿದುದರಿಂದ ಮಾಧವ ರಾಯನಿಗೆ ಪೇಶವೆ ಪಟ್ಟವು ಬರಬೇಕಾಯಿತು ಆಗ ಆತನಿಗೆ ಹದಿನಾರು ವರುಷ ಮಾತ್ರ ಆತನ ಚಿಕ್ಕಪ್ಪ ರಘುನಾಥರಾಯನು ಸಾತಾರೆಯ ರಾಮ-ರಾಜನಿಂದ ಆತನಿಗೇ ಪೇಶವೆ ಪಟ್ಟವನ್ನು ಕೊಡಿಸಿದನು, ತಾನು ಹಿರಿಯನಾಗಿ ಕಾರಭಾರವನ್ನು ಕೈಯಲ್ಲಿ ತಕ್ಕೊಂಡನು

**ಕಲಹದ ಬೇಗೆ** — ಮಾಧವರಾಯನು ವಯಸ್ಸಿನಿಂದ ಚಿಕ್ಕವನಿದ್ದರೂ ಪೇಶವೆ ಪಟ್ಟದ ಅನುಭವ ಆತನಿಗಿತ್ತು ತಂದೆಯ ಕಾಲದಿಂದಲೂ ಹಲವು ಅನುಭವಗಳನ್ನು ಪಡೆದಿದ್ದನು, ಆದರೂ ಕಕ್ಕನ ಸಲುವಾಗಿ ಕೆಲವು ದಿನ ಸುಮ್ಮನಿದ್ದನು ಮುಂದೆ ರಘುನಾಥರಾಯನ ಹಿಡಿತವಿಲ್ಲದ ಆಳಿಕೆಯು ಆತನ ಮನಸ್ಸಿಗೆ ಬರಲಿಲ್ಲ ಅದರಿಂದ ಕೆಲವು ಮಹತ್ತ್ವದ ಅಧಿಕಾರಗಳನ್ನು ತನಗೆ ಕೊಡಬೇಕೆಂದು ಕಕ್ಕನನ್ನು ಕೇಳಿದನು ಅಲ್ಲಿಯೇ ಕಲಹದ ಕಿಡಿ ಎದ್ದಿತು ಏಕೆಂದರೆ ರಘುನಾಥರಾಯನಿಗೆ ಅರಸೊತ್ತಿಗೆಯ ಹುಚ್ಚು ತಲೆಗೇರಿತ್ತು ಮಾಧವರಾಯನ ಮಾತಿನಿಂದ ರಘುನಾಥರಾಯನಿಗೂ ಆತನ ಆಲೋಚಕ ನಾದ **ಸಖಾರಾಮ ಬಾಪು**ವಿಗೂ, ಕೋಪಬಂದಿತು ಎಲ್ಲ ಕಾರಭಾರವನ್ನೂ ತಿರುಗಿ ಒಪ್ಪಿಸಿಬಿಟ್ಟರು ಮಾಧವರಾಯನು **ನಾನಾಫಡಣವೀಸ** ಮತ್ತು **ಹರಿಪಂತ**ರಿಗೆ ಕಾರ್ಯಭಾರವನ್ನು ಕೊಟ್ಟು, ತಾನು ಆ ಸೂತ್ರಗಳನ್ನು ಹಿಡಿದನು ರಾಜ್ಯರಥವು ಸರಿಯಾಗಿ ಸಾಗಿತು

**ರಘುನಾಥರಾಯನ ಸೆರೆ** — ರಘುನಾಥರಾಯನು ತನ್ನ ಹೊರತು ಏನೂ ನಡೆಯಲಾರದೆಂದು ತಿಳಿದಿದ್ದನು ಈಗ ಸರಾಗವಾಗಿ ಸಾಗಿದುದನ್ನು ನೋಡ ದಾದನು ಅದರಿಂದ ತನ್ನ ಬೆಂಬಲಕ್ಕೆ ಬರಬೇಕೆಂದು ನಿಜಾಮನಿಗೆ ತಿಳಿಸಿ ದನು, ಹಿಂದ ಗೆದ್ದುಕೊಂಡ ಪ್ರದೇಶಗಳನ್ನೆಲ್ಲ ಬಿಟ್ಟುಕೊಡುವುದಾಗಿ ಆಸೆ ಹಚ್ಚಿದನು ಇದು ಮಾಧವರಾಯನಿಗೆ ತಿಳಿಯಿತು ರಘುನಾಥರಾಯನನ್ನು ಸೆರೆಯಲ್ಲಿಡಬೇಕೆನ್ನುವಾಗ ಅವನು ಓಡಿಹೋದನು

**ರಾಕ್ಷಸಭುವನದ ಕಾಳಗ** — (೧೭೬೩) ಈಗ ಪೇಶವೆಯ ಮನೆತನ ದಲ್ಲಿಯೇ ಒಡಕುಹುಟ್ಟಿತು ಇದರಿಂದ ಕೆಲವು ಮರಾಠಾಸರದಾರರಿಗೆ ಸ್ವತಂತ್ರರಾಗಬೇಕೆಂಬ ಹಂಬಲು ಹತ್ತಿತು ಅದೇ ಸಮಯದಲ್ಲಿ ರಾಘೋಬನು,

ನಿಜಾಮನನ್ನು ಸಹಾಯಕ್ಕೆ ಕರೆದುಕೊಂಡು ಏರಿ ಬಂದನು ರಾಕ್ಷಸ-ಭುವನದ ಹತ್ತಿರ ಕಾಳಗವಾಯಿತು ಮಾಧವರಾಯನು ನಿಜಾಮನ ದಂಡನ್ನು ಪೂರಾ ಮೆತ್ತಿಗೆ ಮಾಡಿದನು ರಘುನಾಥರಾಯನನ್ನು ಸೆರೆಯಲ್ಲಿ ಇಟ್ಟನು ನಿಜಾಮನು ಹೆದರಿ ಒಪ್ಪಂದವನ್ನು ಮಾಡಿಕೊಂಡನು

**ಹೈದರ ಅಲಿ** – ಹೈದರ ಅಲಿಯು ಫತ್ತೆಮುಹಮೂದ್ ಎಂಬ ಸಣ್ಣ ಜಹ-ಗೀರುದಾರನ ಮಗ ವಿದ್ಯಾವಂತನಲ್ಲದಿದ್ದರೂ ಬಹು ಗಟ್ಟಿಗನು ಮೊದ-ಮೊದಲು ಇವನು ಮೈಸೂರು ದಂಡಿನಲ್ಲಿ ಸಿಪಾಯಿಯಾಗಿ ಸೇರಿಕೊಂಡ ಮೈಸೂರು ದಳವಾಯಿ ನಂಜರಾಜಯ್ಯನು ದೇವನಹಳ್ಳಿಯನ್ನು ಮುತ್ತಿದಾಗ, ಇವನು ಒಳ್ಳೇ ಕಲಿತನದಿಂದ ಕಾದಿದನು ಅದರಿಂದ ನಂಜರಾಜಯ್ಯನು ಹೈದರನಿಗೆ ನಾಯಕ ಕೆಲಸವನ್ನುಕೊಟ್ಟನು ಈ ನಾಯಕನು ಹಾಗೆಯೇ ಮುಂದೆ ಮುಂದೆ ಏರುತ್ತ, ಮೈಸೂರಿನ ಸೇನಾಪತಿಯಾದನು ಆ ಮೇಲೆ ರಾಜಮನೆತನದವರನ್ನೂ ಲೆಕ್ಕಿಸದಂತಾದನು ಆಗ, ಇವನನ್ನು ಬಗ್ಗುಬಡಿಯಲು ಮೈಸೂರರಸು ಇಮ್ಮಡಿ ಕೃಷ್ಣರಾಜನು, ಪೇಶವೆಯರ ಸಹಾಯವನ್ನು ಕೇಳಿದನು ಇದು ಹೈದರ ಅಲಿಗೆ ತಿಳಿಯಿತು ಕೂಡಲೇ ಅರಸನನ್ನು ಬದಿಗಿರಿಸಿ, ಉಂಬಳಿಯನ್ನು ಗೊತ್ತುಮಾಡಿ ತಾನೇ ಸರ್ವಾಧಿಕಾರಿಯಾದನು (೧೭೬೧)


ಹೈದರ ಅಲಿ

ಹೈದರ ಅಲಿಯು ಕರ್ನಾಟಕವನ್ನೆಲ್ಲ ಕೈವಶಮಾಡಿಕೊಳ್ಳಬೇಕೆಂದು ದಂಡೆತ್ತಿ ಹೊರಟನು ಸ್ವಾದಿ, ಕೆಳದಿ, ಚಿತ್ರದುರ್ಗ, ಸವಣೂರುಗಳನ್ನು ಗೆದ್ದು ಧಾರವಾಡದಲ್ಲಿ ತಳವೂರಿದನು ಇದನ್ನು ಕೇಳಿ ಮಾಧವರಾಯನು ದಂಡೆತ್ತಿ ಬಂದು, ಹೈದರನನ್ನು ಬೆನ್ನಟ್ಟಿದನು ಹೈದರನು ಹೆದರಿ ಕೃಷ್ಣಾ-ತುಂಗಾ ನದಿಗಳ ನಡುವಿನ ಪ್ರದೇಶವನ್ನೂ ಯುದ್ಧದ ಖರ್ಚಿಗೆಂದು ಮೂವತ್ತು ಲಕ್ಷ ರೂಪಾಯಿಗಳನ್ನೂ ಕೊಟ್ಟು ಒಪ್ಪಂದ ಮಾಡಿಕೊಂಡನು.

ಇಷ್ಟಾದರೂ ಹೈದರ ಅಲಿಯು ತನ್ನ ಪುಂಡತನವನ್ನು ಬಿಡಲಿಲ್ಲ, ಮತ್ತೆ ಮೈಸೂರು ಅರಸರನ್ನು ಕಾಡಿಸಹತ್ತಿದನು ಈಗ ಪೇಶವೆಯು ನಿಜಾಮನನ್ನು ಕೂಡಿಕೊಂಡು ಹೈದರನ ಮೇಲೆ ಸಾಗಿಬಂದನು ಹೈದರನು ಆ ಎರಡೂ ಸೈನ್ಯಗಳಿಗೂ ಕುಡಿಯಲು ನೀರು ಸಿಕ್ಕದಂತೆ ದಾರಿಯಲ್ಲಿಯ ಜಲಾಶಯ

ಗಳಲ್ಲಿ ವಿಷವನ್ನು ಕೂಡಿಸಿದ್ದನು. ಆದರೂ ಅವರು ಮುನ್ನಡೆದು ಬಂದರು ಹೈದರನು ಒಪ್ಪಂದ ಮಾಡಿಕೊಂಡು, ಪೇಶವೆಗೆ ಕೆಲವು ಕೋಟೆಗಳನ್ನೂ ಯುದ್ಧದ ಖರ್ಚಿಗೆ ಐವತ್ತು ಲಕ್ಷ ರೂಪಾಯಿಗಳನ್ನೂ ಕೊಟ್ಟನು ಅಲ್ಲದೆ ವರ್ಷಕ್ಕೆ ಹದಿನಾಲ್ಕು ಲಕ್ಷ ರೂಪಾಯಿ ಕಾಣಿಕೆ ಕೊಡಲೊಪ್ಪಿದನು

**ಮರಾಠರ ಕೈಯಲ್ಲಿ ದಿಲ್ಲಿಯ ಸೂತ್ರಗಳು** — ಪೇಶವೆಗೆ ಮತ್ತೆ ರಾಜ್ಯವನ್ನು ಬೆಳೆಸುವ ಹವ್ಯಾಸ ಹುಟ್ಟಿತು ಈ ಹೊತ್ತಿಗೆ ದಿಲ್ಲಿಯ ಬಾದಶಾಹಿ ಮನೆತನದ **ಶಹಾ ಆಲಮನು** ಪಟ್ಟವಿಲ್ಲದೆ ಅಲೆಯುತ್ತಿದ್ದನು ಅಯೋಧ್ಯೆಯ ನವಾಬ ಸುಜಾ ಉದ್ದೌಲನು ಅವನಿಗೆ ಅಲ್ಪ ಸ್ವಲ್ಪ ಆಶ್ರಯವನ್ನು ಕೊಟ್ಟಿದ್ದನು, ಆದರೆ ದೊರೆತನವನ್ನು ಕೊಡಿಸಿರಲಿಲ್ಲ ಆ ಭಾಗದಲ್ಲಿ ಸುರಜಮಲ್ಲ ಜಾಟ ಮತ್ತು ರ್ಹೋಹಿಲೆಯರು ಪ್ರಬಲರಾಗಿದ್ದರು ಎಲ್ಲರಿಗೂ ದಿಲ್ಲಿಯ ಮೇಲೆ ಕಣ್ಣು ಮುಂದಾಗುವ ಧೈರ್ಯ ಮಾತ್ರ ಯಾರಿಗೂ ಇರಲಿಲ್ಲ ಈಗ ಶಹಾ ಆಲಮನನ್ನೇ ಪಟ್ಟಕ್ಕೆ ಕುಳ್ಳಿರಿಸಿದರೆ ಪೇಶವೆಯ ಹಂಬಲು ಕೈಗೂಡಬಹುದಾಗಿತ್ತು ಈ ಕೆಲಸಕ್ಕೆ ಸಿಂಧೆ, ಹೋಳಕರ, ವಿಸಾಜಿ ಮೊದಲಾದವರನ್ನು ಕಳಿಸಿಕೊಟ್ಟನು ಇವರೆಲ್ಲರೂ ಒಳ್ಳೆ ಸಾಹಸದಿಂದ ಮತ್ತು ಯುಕ್ತಿಯಿಂದ ಶಾಹಆಲಮನ ಸಿಂಹಾಸನಾರೋಹಣಕ್ಕೆ ಸಹಾಯಮಾಡಿದರು ಇದರಿಂದ ದಿಲ್ಲಿಯ ಬಾದಶಹನು ಪೇಶವೆಗೆ ಇಪ್ಪತ್ತೈದು ಲಕ್ಷ ರೂಪಾಯಿ ಮತ್ತು ಮೀರತ ಮೊದಲಾದ ಗ್ರಾಮುಗಳ ಸನದನ್ನು ಕೊಟ್ಟನು ದಿಲ್ಲಿಯ ಸೂತ್ರವೆಲ್ಲ ಮರಾಠರ ಕೈಸೇರಿತು ಆಮೇಲೆ ಮರಾಠಾ ಶೂರ ಸರದಾರರೆಲ್ಲ ರೋಹಿಲಖಂಡವನ್ನು ಹೊಕ್ಕರು, ಪಾನಿಪತ ಯುದ್ಧದಲ್ಲಿ ಅಬದಾಲಿಯು ತಮಗೆ ಮಾಡಿದ ಹಾನಿಯ ಸೇಡನ್ನು ತೀರಿಸಿಕೊಂಡರು

**ಮಾಧವರಾಯನ ಮರಣ** — ಈ ಸಮಯಕ್ಕೆ ಮಾಧವರಾಯನು ಬೇನೆಯಿಂದ ಹಾಸಿಗೆಯನ್ನು ಹಿಡಿದನು. ಬದುಕುವ ಲಕ್ಷಣ ತೋರಲಿಲ್ಲ ಅವನು 'ನಾರಾಯಣರಾಯನನ್ನು ಪಟ್ಟಕ್ಕೆ ಕುಳ್ಳಿರಿಸಬೇಕು, ಮತ್ತು ರಾಜ್ಯಸೂತ್ರವನ್ನೆಲ್ಲ ನೀವೇ ಸಾಗಿಸಬೇಕು' ಎಂದು ನಾನಾಫಡಣವೀಸ ಮತ್ತು ಹರಿಪಂತ ಮೊದಲಾದವರಿಗೆ ಹೇಳಿದನು ರಘುನಾಥರಾಯನನ್ನು ಸೆರೆಯಿಂದ ಹೊರಗೆ ಬಿಟ್ಟನು ೧೭೭೨ರಲ್ಲಿ ಮಾಧವರಾಯನ ಮರಣವಾಯಿತು ಆತನ ಹೆಂಡತಿ ಸತಿಹೋದಳು

**ಮಾಧವರಾಯನ ಹಿರಿಮೆ** — ಮಾಧವರಾಯನು ಪೇಶ್ವೆಯರಲ್ಲಿ ಅತ್ಯಂತ ಶ್ರೇಷ್ಠನೆಂದು ಹೇಳಬಹುದು ಎಳೆಯತನದಲ್ಲಿಯೇ ಪೇಶವೆಸೂತ್ರವನ್ನು ಸರಿಯಾಗಿ ಸಾಗಿಸಿದನು ಬಾಳಿದುದು ಇಪ್ಪತ್ತೆಂಟೇ ವರುಷವಾದರೂ, ಮಲೆತು ನಿಂತ ಮಹಾ ವೀರರನ್ನು ಸೋಲಿಸಿ, ತುಂಗಭದ್ರಾ ನದಿಯಿಂದ ಗಂಗಾನದಿಯ

ವರೆಗೆ ಮರಾಠಾ ರಾಜ್ಯವನ್ನು ವಿಸ್ತರಿಸಿದನು, ಮತ್ತು ದಿಲ್ಲಿಯ ದೊರೆಯನ್ನು ಪದರಿನಲ್ಲಿ ಹಾಕಿಕೊಂಡು ರಾಜ್ಯದ ಉತ್ಪನ್ನವು ಬೆಳೆಯುವಂತೆ ಮಾಡಿದನು ಇದಕ್ಕೆಲ್ಲ ಈತನ ಶ್ರೇಷ್ಠ ವ್ಯಕ್ತಿತ್ವವೇ ಕಾರಣ ಈತನ ಮುಖದ ತೇಜಸ್ಸು ಯಾರನ್ನೂ ಸೆಳೆದುಕೊಳ್ಳುವಂತಿತ್ತು ಅದಕ್ಕೆ ತಕ್ಕಂತೆ ಧೈರ್ಯ, ಶೌರ್ಯ, ಪ್ರಸಂಗಾವಧಾನ, ನ್ಯಾಯನಿಷ್ಠುರತೆ, ಗುಣಕ್ಕೆ ಮನ್ನಣೆ ಮೊದಲಾದ ಸದ್ಗುಣಗಳಿದ್ದುವು ಇವೆಲ್ಲಕ್ಕೂ ಮಿಗಿಲಾಗಿ 'ಅರಸನೆಂದರೆ ಜನಸೇವಕ' ಎಂಬ ಭಾವನೆ ಅವನಲ್ಲಿತ್ತು ಇದರಿಂದ ಕೈಕೆಳಗಿನ ಅಧಿಕಾರಿಗಳೆಲ್ಲ ಕಾರ್ಯಕ್ಷಮರಾಗುವಂತೆ ನೋಡಿಕೊಳ್ಳುತ್ತಿದ್ದನು ಈ ಕಾಲಕ್ಕೆ ಪ್ರಭುಣೆ ರಾಮಶಾಸ್ತ್ರಿಯು ಒಳ್ಳೆಯ ನ್ಯಾಯಾಧೀಶನೆಂದು ಹೆಸರಾದನು

## ಅಭ್ಯಾಸನಗಳು

೧ ನೀವು ಓದಿದ ನಾಲ್ವರು ಪೇಶ್ವೆಯರಲ್ಲಿ ನಿಮ್ಮ ದೃಷ್ಟಿಯಲ್ಲಿ ಅತಿ ಶ್ರೇಷ್ಠನಾದ ಪೇಶ್ವೆಯು ಯಾರು? ಉಳಿದ ಮೂವರಿಗಿಂತ ಯಾವ ಹೆಚ್ಚಿನ ಕೃತಿಗಳನ್ನು ಅವನು ಮಾಡಿದ್ದಾನೆ?

೨ ಕೆಳಗೆ ಕಾಣಿಸಿದ ವ್ಯಕ್ತಿಗಳ ಬಗೆಗೆ ನೀವು ಓದಿದ ಒಂದೊಂದು ಮಹತ್ವದ ಸಂಗತಿಯನ್ನು ಬರೆಯಿರಿ

ಕಾನ್ಹೋಜಿ ಆಂಗ್ರೆ, ನಿಜಾಮ ಉಲ್ಮುಲ್ಕ್, ಚಿಮಾಜಿ, ರಘುನಾಥರಾಯ, ರಾಮಶಾಸ್ತ್ರಿ ಪ್ರಭುಣೆ

೩ ಪಾನಿಪತ್ತದ ಮೂರನೆಯ ಯುದ್ಧದಲ್ಲಿ ಮರಾಠರಿಗೆ ಸೋಲು ಏಕೆ ಉಂಟಾಯಿತು?

೪ ಸರದೇಶಮುಖಿ, ಚೌಥಾಯಿ, ಸರಂಜಾಮಿ ಪದ್ಧತಿ—ಇವುಗಳ ಅರ್ಥವೇನು? ಮೊತ್ತಮೊದಲು ಅವನ್ನು ಯಾರು ಒಳಕೆಯಲ್ಲಿ ತಂದರು?

# ೧೮ ಮರಾಠರ ಅವನತಿ

**ಅರಾಜಕಸ್ಥಿತಿ** – ಮುಂದೆ ನಾರಾಯಣರಾಯನು ಪೇಶ್ವೆಯಾದನು ಅವನ ಅವಿವೇಕತನದಿಂದ ರಘುನಾಥರಾಯನಿಗೂ ಅವನಿಗೂ ವೈಮನಸ್ಸು ಬೆಳೆಯಿತು ಕೈಕೆಳಗಿನ ಅಧಿಕಾರಿಗಳನ್ನು ಕೆಟ್ಟತನದಿಂದ ನಡೆಸಿಕೊಳ್ಳುತ್ತಿದ್ದನು ರಘುನಾಥರಾಯನ ಹೆಂಡತಿಯಾದ ಆನಂದೀಬಾಯಿಯು ಮಹತ್ತ್ವಾಕಾಂಕ್ಷಿಣಿ, ಸೇಡಿನ ಸ್ವಭಾವದವಳು ಇವೆಲ್ಲ ಒಟ್ಟಾಗಿ ನಾರಾಯಣರಾಯನ ವಿರುದ್ಧ ಬಲವಾದ ಸಂಚು ನಡೆಯಿತು ಇದರಿಂದಲೇ ಅವನ ಕೊಲೆಯೂ ಆಯಿತು

ಆ ಮೇಲೆ ರಘುನಾಥರಾಯನು ಪೇಶವೆಯಾದನು ಅವನ ಅವಿವೇಕದ ಆಳಿಕೆಯು ದುಸ್ಸಹವಾಯಿತು, ಮತ್ತು ನಾರಾಯಣರಾಯನ ಕೊಲೆಯ ಆರೋಪವು ಬಹಿರಂಗವಾಗಿ ರಘುನಾಥರಾಯನ ಮೇಲೆಯೇ ಬಂದಿತು ಅದರಿಂದ ನ್ಯಾಯಾಲಯದಲ್ಲಿ ಅವನಿಗೆ ದೇಹಾಂತಶಿಕ್ಷೆಯನ್ನು ವಿಧಿಸಲಾಯಿತು, ಆದರ ಅವನು ತಪ್ಪಿಸಿಕೊಂಡು ಹೋದನು ಅವನ ಪಕ್ಷದವರಿಗ ಕಠಿನ ಶಿಕ್ಷೆಗಳಾದುವು


ನಾನಾಫಡಣವೀಸ

ಈ ಹೊತ್ತಿಗೆ ನಾರಾಯಣರಾಯನ ಹೆಂಡತಿ ಗಂಡುಮಗುವನ್ನು ಹೆತ್ತಳು ನಾಲ್ವತ್ತು ದಿವಸಗಳ ಕೂಸಿಗೆ ಪೇಶ್ವೆಪಟ್ಟ ಕಟ್ಟಿದರು, ಸವಾಯಿ ಮಾಧವರಾಯನೆಂದು ಹೆಸರಿಟ್ಟರು ನಾನಾಫಡಣವೀಸ ಮುಂತಾದ ಮಂತ್ರಿಗಳು ಸ್ವಾಮಿನಿಷ್ಠೆಯಿಂದ ರಾಜ್ಯಸೂತ್ರ ವಹಿಸಿದರು

**ಸುತ್ತಲಿನ ಸಂಕಟಗಳು** – ಪೇಶವೆ ರಾಜ್ಯದ ಒಡಕು-ತೊಡಕುಗಳು ಸುತ್ತಲಿನ ಸರದಾರರಿಗೆ ಸ್ವತಂತ್ರರಾಗುವ ಹವ್ಯಾಸವನ್ನು ಹುಟ್ಟಿಸಿದುವು, ಪರಕೀಯರ ಪ್ರವೇಶಕ್ಕೆ ಹಾದಿಯನ್ನು ಹಾಕಿಕೊಟ್ಟುವು ಈ ಹೊತ್ತಿಗೆ ಭಾರತದಲ್ಲಿ ಇಂಗ್ಲಿಷ್ ಕಂಪನಿಯ ಸರಕಾರವು ಆಳಿಕೆಯನ್ನು ಆರಂಭಿಸಿತ್ತು, ಪ್ರಬಲವಾದ ಸೇನೆಯನ್ನು ಸಜ್ಜುಮಾಡಿಕೊಂಡಿತ್ತು ಒಮ್ಮೆ ಅವರ ಪಕ್ಷ, ಮತ್ತೊಮ್ಮೆ ಇವರ ಪಕ್ಷ, ಹೀಗೆ ಒಲೆದಾಡಿ, ಎರಡೂ ಪಕ್ಷಗಳನ್ನು ಹಣ್ಣಿಗೆ ತರುವ ಬ್ರಿಟಿಷ್ ಭೇದನೀತಿಯು ಆಗಲೇ ಆರಂಭವಾಗಿತ್ತು ಇದನ್ನು ತಿಳಿದು ರಾಘೋಬನು ಇಂಗ್ಲಿಷರ ಬೆನ್ನುಬಿದ್ದನು. ಅವರು ಸುರತದಲ್ಲಿ ಅವನೊಡನೆ ಒಪ್ಪಂದ

ಮಾಡಿಕೊಂಡು, ಪೇಶವಾಯಿ ರಾಜ್ಯದಲ್ಲಿ ಕಾಲುಚಾಚಿದರು ಇದೇ ಕಾಲಕ್ಕೆ, ಹೈದರಅಲಿಯು ಮತ್ತೆ ಮರಾಠರ ಮೇಲೆ ದಂಡೆತ್ತಿ ಬಂದನು ಸಣ್ಣಪುಟ್ಟ ಪಾಳೆಯಗಾರರೂ ಸ್ವತಂತ್ರರಾಗಹತ್ತಿದರು ನಿಜಾಮನೂ ಕಾಲು-ಕೆದರಿ ಜಗಳವನ್ನು ತೆಗೆದನು ನಾನಾಫಡಣವೀಸ ಮೊದಲಾದವರು ಎಷ್ಟು ಸಾಹಸ-ಪ್ರಯತ್ನಗಳನ್ನು ಮಾಡಿದರೂ, ಸುತ್ತಲಿನ ಸಂಕಟಗಳನ್ನು ಪರಿಹರಿಸುವುದಕ್ಕೆ ಸಾಮರ್ಥ್ಯವು ಸಾಲಲಿಲ್ಲ ಅಷ್ಟರಲ್ಲಿ ಹರಿವಂತ ಫಡಕೆ, ರಾಮಶಾಸ್ತ್ರಿ, ತುಕೋಜಿ ಹೋಳಕರ ಮೊದಲಾದ ಸ್ವಾಮಿನಿಷ್ಠರು ತೀರಿಕೊಂಡರು ಇದರಿಂದ ಪೇಶವಾಯಿಯ ಪುಣ್ಯ ಮುಗಿಯುತ್ತಲೇ ಬಂದಂತಾಗಿತ್ತು ಕೊನೆಗೆ ಸವಾಯಿಮಾಧವರಾಯನು ಅಪಮೃತ್ಯುವಿನಿಂದ ತೀರಿಕೊಂಡನು

**ಎರಡನೆಯ ಬಾಜೀರಾಯ** – (೧೭೯೬-೧೮೧೮) ಆ ಮೇಲೆ ಎರಡನೆಯ ಬಾಜೀರಾಯನು ಪೇಶವೆಯಾದನು ಈತನು ಆನಂದೀಬಾಯಿಯ ಮಗ ತಾಯಿಯ ಮಹತ್ವಾಕಾಂಕ್ಷೆ-ದುರಾಸೆಗಳೆಲ್ಲ ಈತನಲ್ಲಿ ಮನೆಮಾಡಿದ್ದುವು, ಆದರೆ ತಿಂದುಂಡು ಕಾಲ ಕಳೆಯುವುದಷ್ಟೇ ಈತನಿಗೆ ಬೇಕಾದುದು ಈ ಕಾಲಕ್ಕೆ ನಾನಾ ಫಡಣವೀಸನು ಪೇಶವೆರಾಜ್ಯದ ವೈಭವವನ್ನುಳಿಸಬೇಕೆಂದು ಎಷ್ಟೋ ಪ್ರಯತ್ನಿಸಿದನು ಸಾಧ್ಯವಾಗಲಿಲ್ಲ ಕಡೆಗೆ ೧೮೦೦ ರಲ್ಲಿ ಆತನೇ ಮರಣಪಟ್ಟನು ಆಮೇಲೆ ಬಾಜೀರಾಯನ ಅವಿವೇಕಕ್ಕೆ ಅಂಕೆಯೇ ಉಳಿಯಲಿಲ್ಲ ಆಗ ಮರಾಠಾರಾಜ್ಯದಲ್ಲಿ ಪುಂಡರ ಹಾವಳಿಯೂ ಹೆಚ್ಚಾಯಿತು ತಮ್ಮತಮ್ಮೊಳಗೆ ಒಬ್ಬರನ್ನೊಬ್ಬರು ಚೆಂಡಾಡಹತ್ತಿದರು ಕರ್ನಾಟಕದಲ್ಲಿಯೂ **ಧುಂಡಜಿವಾಘ**ನೆಂಬವನ ಹಾವಳಿಯು ಹೇಳಕೂಡದಷ್ಟಾಯಿತು! ಈ ಸ್ಥಿತಿಯನ್ನು ತಪ್ಪಿಸಿ, ಹಿಂದುಗಳಲ್ಲಿ ಒಕ್ಕಟ್ಟನ್ನು ಹುಟ್ಟಿಸಬೇಕೆಂದು ಕನ್ನಡ ನಾಡಿನ ಸಾಧುಪುರುಷರೊಬ್ಬರು ಶ್ರೀವಿದ್ಯಾರಣ್ಯರಂತೆ ರಾಜಕೀಯ ಸಾಹಸವನ್ನು ಸಾಗಿಸಿದರು ಅವರೇ ಮುರಗೋಡದ **ಶ್ರೀಚಿದಂಬರದೀಕ್ಷಿತರು** ಅವರು ಮಹಾ ಸತ್ಪುರುಷರು ಪೇಶವೆ ಮತ್ತು ಬೇರೆ ಅರಸುಗಳಿಗೆ ಕುಲಗುರುಗಳಾಗಿದ್ದರು ಬಾಜೀರಾಯನು ಇವರ ದರ್ಶನಕ್ಕೆ ಬಂದಾಗ, ಅನೇಕ



೨ನೆಯ ಬಾಜೀರಾಯ

ರಾಜಕೀಯ ಸಲಹೆಗಳನ್ನು ಕೊಟ್ಟರು, ಆದರೆ, ಆ ಅವಿವೇಕಿಯು ಅವರ ಸಲಹೆಯಂತೆ ನಡೆಯಲಿಲ್ಲ

**ಬಾಜೀರಾಯನ ಕಾರಭಾರ** — ಬಾಜೀರಾಯನ ಆಡಳಿತವೆಂದರೆ, ರಘುನಾಥರಾಯನ ಪುನರಾವೃತ್ತಿಯೇ ಸರಿ ಬುದ್ಧಿವಂತರಿಗೂ ಶೂರರಿಗೂ ಅವನಾಳಿಕೆಯಲ್ಲಿ ಆಶ್ರಯವಿರಲಿಲ್ಲ ಸಣ್ಣಪುಟ್ಟ ತಪ್ಪುಗಳನ್ನು ಹೊರಿಸಿ ಅನುಭವಿಕರನ್ನೆಲ್ಲ ಮನೆಗೆ ಕಳಿಸಿಬಿಟ್ಟನು, ಕೆಲವರನ್ನು ಕೊಲ್ಲಿಸಿದನು ಇದರಿಂದ ಹೋಳಕರ ಮೊದಲಾದವರು ಸಿಟ್ಟಾಗಿ, ಪುಣೆಯ ಮೇಲೆ ದಂಡೆತ್ತಿ ಬಂದರು ಆಗ ಬಾಜೀರಾಯನು ವಸಯಿಯಲ್ಲಿ ಇಂಗ್ಲಿಷರನ್ನು ಮೊರೆ-ಹೊಕ್ಕನು, ಪೇಶವೆಯ ಸ್ವಾತಂತ್ರ್ಯಸೂರ್ಯನಿಗೆ ಗ್ರಹಣವನ್ನು ಹಿಡಿಸುವ ಮನೆಮುರುಕ ಕರಾರುಗಳನ್ನು ಮಾಡಿಕೊಂಡು, ಅವರ ಆಶ್ರಯದಲ್ಲಿ ನಿಂತನು ಮುಂದೆ ಇಂಗ್ಲಿಷರ ಮಾಂಡಲಿಕನಾಗಿ ಪುಣೆಯ ಪೇಶವೆಯಾದನು

**ಮರಾಠಾ-ಇಂಗ್ಲಿಷರ ಮೂರನೆಯ ಯುದ್ಧ** — ಇಷ್ಟಾದರೂ ಬಾಜೀರಾಯನು ಇಂಗ್ಲಿಷರೊಡನೆಯೂ ಸ್ನೇಹದಿಂದ ಸಾಗಲಿಲ್ಲ, ಮತ್ತೆ ಮರಾಠಾ ಸರದಾರರನ್ನು ಕೂಡಿಕೊಂಡು ಇಂಗ್ಲಿಷರನ್ನು ಹಣಿಯುವ ಹಂಚಿಕೆಯನ್ನು ನಡೆಸಿದನು ಕೋರೆಗಾಂವ ಯುದ್ಧದಲ್ಲಿ ಪೇಶವೆಯರಿಗೆ ಪೂರ್ಣ ಪರಾಭವ ವಾಯಿತು! ಇಂಗ್ಲಿಷರು ಬಾಜೀರಾಯನಿಗೆ ವರ್ಷಕ್ಕೆ ಎಂಟು ಲಕ್ಷ ರೂಪಾಯಿ ಉಂಬಳಿಯನ್ನು ಗೊತ್ತುಮಾಡಿದರು, ಅವನ ಇಚ್ಛೆಯಂತೆಯೇ ಬ್ರಹ್ಮಾವರ್ತದಲ್ಲಿಟ್ಟರು (೧೮೧೮) ಮರಾಠಾ ರಾಜ್ಯವನ್ನು ತಮ್ಮ ಕೈವಶಮಾಡಿಕೊಂಡರು ಇದರಿಂದ ಮುಂಬಯಿ ಪ್ರಾಂತವೆಲ್ಲ ಇಂಗ್ಲಿಷರ ವಶವಾಯಿತು ಬಾಜೀರಾಯನಿಂದಲೇ ಪೇಶವಾಯಿಯು ಪರಿಸಮಾಪ್ತಿಹೊಂದಿತು

**ಮರಾಠಾ ರಾಜ್ಯದ ಏರು-ಇಳಿವು** — ಶಿವಾಜಿರಾಜನು ಬಲಾಢ್ಯ ಮೊಗಲ ಸಾಮ್ರಾಜ್ಯವನ್ನು ಎದುರಿಸಿ, ದಕ್ಷಿಣದಲ್ಲಿ ಮಹಾರಾಷ್ಟ್ರದ ಸ್ವರಾಜ್ಯವನ್ನು ಸ್ಥಾಪಿಸಿದನು, ಗೋ-ಬ್ರಾಹ್ಮಣ ಪ್ರತಿಪಾಲಕ ಎಂಬ ಬಿರುದನ್ನು ಪಡೆದನು ಆದರೆ, ಆತನು ಅರ್ಧಾಯುಷ್ಯದಲ್ಲಿಯೇ ತೀರಿಕೊಂಡನು ನೆಟ್ಟ ಸಸಿಯನ್ನು ಹೆಮ್ಮರವಾಗುವಂತೆ ಬೆಳೆಸುವುದಕ್ಕೆ ಅವನಿಗೆ ಅವಧಿ ಸಿಕ್ಕಲಿಲ್ಲ, ಅಲ್ಲದೆ ಪ್ರಬಲನಾದ ಅಲಂಗೀರನು ಅರಗಿಸಿಕೊಳ್ಳಲು ಆಗಾಗ ಯತ್ನಿಸುತ್ತಲೇ ಇದ್ದನು ಸಂಭಾಜಿಯ ಅವಿವೇಕತನದಿಂದ ಮೊಗಲರ ಕಾರಸ್ಥಾನಕ್ಕೆ ಕಳೆಯೂ ಕಟ್ಟಿತು! ಸಂಭಾಜಿಯ ಮರಣದನಂತರ ರಾಜ್ಯದಲ್ಲಿ ಒಳಜಗಳ ಗಳು ಹುಟ್ಟಿದುವು ರಾಜಧಾನಿಗಳು ಒಡೆದು ಎರಡು ಛತ್ರಪತಿ ರಾಜ್ಯಗಳಾದುವು ಮುಂದೆ ಸಮರ್ಥರಾರೂ ಸಿಂಹಾಸನಕ್ಕೆ ಬರಲಿಲ್ಲ ಹೆಸರಿಗೆ ಮಾತ್ರ ರಾಜರಾಗಿ ಪೇಶವೆಯರ ಕೈಯಲ್ಲಿಯೇ ಸರ್ವಾಧಿಕಾರವನ್ನು

ಕೊಟ್ಟರು ಒಬ್ಬಿಬ್ಬರು ಪೇಶ್ವೆಯರು ಅದನ್ನು ಉತ್ತಮ ಸ್ಥಿತಿಗೆ ಮುಟ್ಟಿಸಿದರೂ, ಮುಂದೆ ಅವರ ಒಳಜಗಳವೆ ರಾಜ್ಯದ ಅಳಿಗಾಲಕ್ಕೆ ಕಾರಣವಾಯಿತು ಹೀಗೆ, ಮಹಾರಾಷ್ಟ್ರದ ಮೂಡು-ಮುಳುಗು ಸುಮಾರು ಒಂದೂಮುಕ್ಕಾಲು ಶತಮಾನದಲ್ಲಿ ಮುಗಿದುಹೋದುವು

**ಮರಾಠಾ ರಾಜ್ಯವು ಮುಳುಗಿದುದೇಕೆ? (೧) ಒಕ್ಕಟ್ಟು ಉಳಿಯಲಿಲ್ಲ** — ಪಾನಿಪತ್ತ ಯುದ್ಧದಲ್ಲಿ ಮರಾಠಾಸೈನಿಕರಿಗೆ ಸೋಲುಂಟಾದುದೇಕೆ? ಎಂಬ ಸಂಗತಿಯನ್ನು ಹಿಂದೆ ಹೇಳಿದೆ ಅದರಲ್ಲಿ ಮುಖ್ಯವಾಗಿ ಸರದಾರರಲ್ಲಿದ್ದ ಅನೈಕ್ಯಭಾವವೇ ಕಾರಣವೆಂದು ಒಡೆದು ತೋರುತ್ತದೆ ಆದರೆ, ಅದಿನ್ನೂ ಆರಂಭದ ಸ್ಥಿತಿಯೆಂದು ಹೇಳಬಹುದು ಮುಂದೆಯಂತೂ ಒಕ್ಕಟ್ಟು ಉಳಿಯಲೇ ಇಲ್ಲ ಒಕ್ಕಟ್ಟು ಉಳಿಯಬೇಕಾದರೆ ಮುಖ್ಯವಾಗಿ ಎರಡು ಸಂಗತಿಗಳು ಅವಶ್ಯ (೧) ಕೇಂದ್ರಸರಕಾರ ಬಲಿಷ್ಠವಾಗಿರಬೇಕು (೨) ಎಲ್ಲರಿಗೂ ಸ್ವರಾಜ್ಯದ ಸದಭಿಮಾನವಿರಬೇಕು ಮೊದಲಿನ ಮೂವರು ಪೇಶವೆಯರ ಕಾಲಕ್ಕೆ ಕೇಂದ್ರಸರಕಾರವು ಬಲಿಷ್ಠವಾಗಿಯೇ ಇತ್ತು ಅದರೆದುರಿಗೆ ಯಾವ ಸರದಾರನೂ ತಲೆಯನ್ನು ತಗ್ಗಿಸಬೇಕಾಗಿತ್ತು ಅದರಿಂದ ಎಲ್ಲರೂ ಒಕ್ಕಟ್ಟಾಗಿಯೇ ಉಳಿದರು ಅದರಂತೆ ಶಿವಾಜಿ-ಸಂಭಾಜಿಯರ ಕಾಲಕ್ಕೆ ಎಲ್ಲರಲ್ಲಿಯೂ ಸ್ವರಾಜ್ಯದ ಅಭಿಮಾನವು ಉಕ್ಕುತ್ತಿತ್ತು ಅದರಿಂದಲೂ ಸರದಾರರಲ್ಲಿ ಐಕ್ಯವು ಉಳಿಯಿತು ಮುಂದೆ ಮೊದಲನೆಯ ಮಾಧವರಾಯನ ತರುವಾಯ, ಕೇಂದ್ರಸರಕಾರದಲ್ಲಿ ಸತ್ತ್ವವು ಉಳಿಯಲಿಲ್ಲ, ಮುಂದಿನ ಮರಾಠಾ ರಾಜರೂ ಹಾಗೂ ಪೇಶವೆಯರು ವಿಲಾಸಿಗಳಾದುದರಿಂದ, ಸ್ವರಾಜ್ಯದಲ್ಲಿ ಅಭಿಮಾನವಿರಲಿಲ್ಲ ಇದರಿಂದ ಸರದಾರರಲ್ಲಿ ಸ್ವಾರ್ಥ ಹೆಚ್ಚಿತು, ಒಕ್ಕಟ್ಟು ಒಡೆದು ಅನೇಕ ಪಂಗಡಗಳಾದುವು, ತಮ್ಮ ತಮ್ಮೊಳಗೇ ಮೇಲಾಟಗಳು ಸಾಗಿದುವು ಯಾದವೀ ಯುದ್ಧಗಳೂ ನಡೆದುವು ಮರಾಠಾ ರಾಜ್ಯವು ಮುಳುಗುವುದಕ್ಕೆ ಇದೇ ಮೊದಲನೆಯ ಕಾರಣವಾಯಿತು

**(೨) ಸ್ವರಾಜ್ಯದ ಸದಭಿಮಾನವಿರಲಿಲ್ಲ** — ಮೊದಲು ಮರಾಠರಲ್ಲಿ ರಾಷ್ಟ್ರೀಯ ಭಾವನೆಯು ಜಾಗೃತವಾಗಿತ್ತು ಅಂತೆಯೇ ಶಿವಾಜಿರಾಜನಿಗೆ, ಕೇವಲ ಗುಡ್ಡಗಾಡು ಜನರಿಂದಲೇ ಮೊಗಲಸಾಮ್ರಾಜ್ಯಕ್ಕಿದಿರಾಗಿ ಹಿಂದೂ ರಾಜ್ಯವನ್ನು ಸ್ಥಾಪಿಸುವುದು ಸಾಧ್ಯವಾಯಿತು, ಮತ್ತು ಆಗಿನ ಅಷ್ಟ ಪ್ರಧಾನ ಮಂಡಲದ ವ್ಯವಸ್ಥೆಯಿಂದಲೂ, ಸಾಧು-ಸಂತರ ಸದುಪದೇಶದಿಂದಲೂ ಆಳಿನಿಂದ ಹಿಡಿದು ಅರಸನವರೆಗೂ ಸ್ವರಾಜ್ಯದ ಸದಭಿಮಾನವಿತ್ತು ಮುಂದೆ ರಾಜಾರಾಮನ ಮರಣದ ನಂತರ ಸರಂಜಾಮ ಪದ್ಧತಿಯು ಆರಂಭವಾಯಿತು ಇದರಿಂದ ಕೆಲವು ಸರದಾರರಿಗೆ ಸ್ವತಂತ್ರರಾಗಲು ಹಾದಿಸಿಕ್ಕಂತಾಯಿತು

ಆದರೆ, ಮೇಲಿನ ರಾಜನು ಬಲಿಷ್ಠನಿದ್ದರೆ, ಸರದಾರರೇನೂ ಸ್ವತಂತ್ರರಾಗುತ್ತಿದ್ದಿಲ್ಲ ಮುಂದಿನ ಅರಸರೂ ವಿಲಾಸಿಗಳಾದರು ಇದರಿಂದ ಆ ಸರಂಜಾಮಿ ತುಂಡುಗಳೇ ಸ್ವತಂತ್ರವಾದುವು ಅವರಿಗೆ ಸ್ವರಾಜ್ಯದ ಸದಭಿಮಾನವು ಉಳಿಯಲಿಕ್ಕೆ ಕಾರಣವಿರಲಿಲ್ಲ ಮರಾಠಾರಾಜ್ಯವು ಮುಳುಗುವುದಕ್ಕೆ ಇದು ಎರಡನೆಯ ಕಾರಣವಾಯಿತು

**(೩) ಅವ್ಯವಸ್ಥಿತ ಆಡಳಿತ** — ಸ್ವರಾಜ್ಯವನ್ನು ಸ್ಥಾಪಿಸುವ ಬಗೆಗೆ ಮರಾಠರಲ್ಲಿ ಮೀರಿದ ಶಕ್ತಿ-ಸಾಮರ್ಥ್ಯಗಳಿದ್ದುವು, ಅದರಂತೆ ಸ್ಥಾಪನೆಯೂ ಆಯಿತು ಮುಂದೆ ಅವರಲ್ಲಿ ಐಕ್ಯವಿರುವವರೆಗೆ ಹಾಗೂ ಸ್ವರಾಜ್ಯದ ಸದಭಿಮಾನವಿರುವವರೆಗೆ, ರಾಜ್ಯವೂ ಬೆಳೆಯಿತು, ಆದರೆ ಬೆಳೆದುದನ್ನು ಉಳಿಸಿಕೊಳ್ಳುವ ವ್ಯವಸ್ಥೆ ಸರಿಯಾಗಿರಲಿಲ್ಲ ಗೆದ್ದ ರಾಜ್ಯಗಳಲ್ಲಿ ಕಪ್ಪಗಾಣಿಕೆ ತೆಗೆದುಕೊಳ್ಳುವುದು, ಹಿಂದಿರುಗುವದು, ಅಲ್ಲಿಯ ಆಡಳಿತದಲ್ಲಿ ತಮ್ಮ ಅಂಗವನ್ನೇ ಇಟ್ಟುಕೊಳ್ಳುತ್ತಿರಲಿಲ್ಲ ಇದರಿಂದ ಹಗೆಗಳೇ ಹೆಚ್ಚಾಗುತ್ತಿದ್ದರು ಹೀಗಾಗಿ, ಒಮ್ಮೆ ಯುದ್ಧ ಮಾಡಿದವರೊಡನೆ ಮತ್ತೆಮತ್ತೆಯೂ ಯುದ್ಧ ಮಾಡಬೇಕಾಗುತ್ತಿತ್ತು ಇದಕ್ಕೆ ನಿಜಾಮ, ಹೈದರಅಲಿ ಅವರ ಉದಾಹರಣೆಗಳನ್ನು ನೋಡಬಹುದು. ಈ ಅದೂರದೃಷ್ಟಿಯ ಆಡಳಿತವು ಮೂರನೆಯ ಕಾರಣವಾಯಿತು

**(೪) ದುರ್ದೈವ** — ಎಂಟು-ಹತ್ತು ವರುಷಗಳ ಅವಧಿಯಲ್ಲಿಯೇ ಮಹ-ದಾಜಿ ಸಿಂದೆ, ತುಕೋಜಿ ಹೋಳಕರ, ಸವಾಯಿ ಮಾಧವರಾವ, ನಾನಾಫಡಣವೀಸ, ಪರಶುರಾಮ ಭಾವು ಮುಂತಾದ ವೀರರೂ ರಾಜಕಾರಣಪಟುಗಳೂ ಒಬ್ಬರ ಹಿಂದೊಬ್ಬರು ಮರಣಹೊಂದಿದರು ಸಾವು ಎಲ್ಲರಿಗೂ ಸಿದ್ಧ! ಆದರೆ, ಈ ಅಲ್ಪಕಾಲದ ಸಂಬಂಧವನ್ನು ನೆನೆಸಿದರೆ, ದೈವವೂ ಮರಾಠಾ ಸಾಮ್ರಾಜ್ಯದ ಮುಳುಗುವಿಕೆಗೆ ಕಾರಣವಾಯಿತೆಂದು ಹೇಳಬೇಕಾಗುತ್ತದೆ

**(೫) ಸೈನ್ಯದಲ್ಲಿ ಶಿಸ್ತು ಸಂಘಟನೆಗಳಿರಲಿಲ್ಲ** — ಮರಾಠರು ತಂತ್ರಗಾರಿಕೆಯ ಯುದ್ಧ (ಗನಿಮಿ ಕಾವಾ) ಮಾಡುವುದರಲ್ಲಿ ನಿಪುಣರು ಅಲ್ಲಿಯ ಗುಡ್ಡಗಾಡು ಪ್ರದೇಶವೆಲ್ಲ ಅವರಿಗೆ ಗೊತ್ತು ಸಮಯ ಸಿಕ್ಕುವವರೆಗೆ ಅಡಗಿಕುಳಿತು, ಆಮೇಲೆ ಏರಿಬಿದ್ದು ವೈರಿಗಳನ್ನು ಹಣ್ಣುಮಾಡುವುದರಲ್ಲಿ ಚೆನ್ನಾಗಿ ಪಳಗಿದವರು ಹೋಳಕರನಂತೂ ಈ ಪದ್ಧತಿಯಲ್ಲಿ ಎತ್ತಿದ ಕೈ, ಮುಂದೆ ರಾಜ್ಯವಿಸ್ತಾರಕ್ಕಾಗಿ ಬಯಲಿಗೆ ಬಿದ್ದಮೇಲೆ, ಇದಿರಿಗೆ ನಿಂತೇ ಕಾದಬೇಕಾಯಿತು ಇದರಿಂದ ಅವರ ತಂತ್ರಗಾರಿಕೆಯ ಯುದ್ಧಪದ್ಧತಿಯು ಉಪಯೋಗ ಬೀಳಲಿಲ್ಲ ಅಷ್ಟು ಹೊತ್ತಿಗೆ ಇಂಗ್ಲಿಷ-ಫ್ರೆಂಚರು ಸೈನ್ಯಸಹಿತವಾಗಿ ಭಾರತದಲ್ಲಿ ತಳವೂರಿದ್ದರು ಅವರ ಪದ್ಧತಿಯನ್ನು ಮರಾಠರು

ಕಲಿಯತೊಡಗಿದರು. ಇದಕ್ಕಾಗಿ ಇಂಗ್ರೇಜಿ ಅಧಿಕಾರಿಗಳನ್ನು ನಿಯಮಿಸಿಕೊಂಡರು. ಅವರು ಎರಡು ಕಾರಣಗಳಿಂದ ತಮ್ಮ ನಿಜವಾದ ವಿದ್ಯೆಯನ್ನು ಕೊಡಲಿಲ್ಲ. ಒಂದು, ಮರಾಠರು ತಮ್ಮವರೆಂಬ ಅಭಿಮಾನವಿರಲಿಲ್ಲ. ಎರಡು, ಮುಂದೆ ಮರಾಠರು ತಮ್ಮ ಮೇಲೆಯೇ ತಿರುಗಿ ಬಿದ್ದರೆ ಹೇಗೆ—ಎಂಬ ಸಂಶಯ. ಇದರಿಂದಾಗಿ ಮರಾಠರಿಗೆ ಹೊಸ ಸೈನ್ಯಶಿಕ್ಷಣವು ಸಿಕ್ಕಲಿಲ್ಲ, ತಮ್ಮ ರೀತಿಯು ಕೆಲಸಕ್ಕೆ ಬಾರದಂತಾಗಿತ್ತು. ಹೀಗಾಗಿ ಅರ್ಧಮರ್ಧ ಶಿಕ್ಷಣದಿಂದ ಸೈನ್ಯದಲ್ಲಿ ಶಿಸ್ತು ಉಳಿಯಲಿಲ್ಲ.

ಇದಲ್ಲದೆ, ಇತ್ತೀಚೆಗೆ ಮರಾಠಾಸೈನ್ಯದಲ್ಲಿ ಅರಬರೂ 'ಹಬಸಿಯರೂ ಸೇರಿಕೊಂಡಿದ್ದರು. ಅವರು ಹೊಟ್ಟೆಯ ಮಟ್ಟಿಗೆ ಮಾತ್ರ ದುಡಿಯುವವರು. ಇದಲ್ಲದೆ ಬೇರೆ ಬೇರೆ ಸರದಾರರಲ್ಲಿ ವೈಮನಸ್ಯವಿದ್ದುದರಿಂದ, ಎಲ್ಲರೂ ಒಂದೇ ಎಂಬ ಭಾವನೆ ಬರುವಂತಿರಲಿಲ್ಲ. ಇದರಿಂದ ಸಂಘಟನೆಗೆ ಅವಕಾಶವೇ ಇರಲಿಲ್ಲ.

ಮತ್ತೊಂದು ಮಾತೆಂದರೆ, ಮರಾಠರಿಗೆ ಗೆಲ್ಲುವುದು ಇಲ್ಲವೆ ಸಾಯುವುದು—ಇಷ್ಟೇ ಗೊತ್ತು. ಸೋಲುವ ಪ್ರಸಂಗ ಬಂದಾಗ ಸಾವಧಾನದಿಂದ ಹಿಂದಕ್ಕೆ ಸರಿಯುವುದಾಗಲಿ ಮತ್ತೆ ಸಂಘಟಿಸಿಕೊಂಡು ಮುಂದುವರಿಯುವುದಾಗಲಿ ಅವರಿಗ ಗೊತ್ತಿರಲಿಲ್ಲ. ಆ ಕಾಲಕ್ಕೆ ಇವರು ಫ್ರೆಂಚರ ನೆರವನ್ನು ಪಡೆದಿದ್ದರೆ, ಎಲ್ಲ ರೀತಿಯಿಂದಲೂ ಅನುಕೂಲವಾಗಬಹುದಿತ್ತು. ಏಕೆಂದರೆ, ಅವರು ಇಂಗ್ಲಿಷರ ಕಡುಹಗೆಗಳಾಗಿದ್ದರು. ಮರಾಠರು ಅದನ್ನೂ ಮಾಡಲಿಲ್ಲ.

**(೬) ಪರಕೀಯರ ಪ್ರಾಬಲ್ಯ**—ಮರಾಠಾರಾಜ್ಯವು ಸರದಾರರಲ್ಲಿ ಹರಿದು ಹಂಚಿಹೋಯಿತು, ಸಂಘಟನೆಯು ಕಡಮೆಯಾಯಿತು. ಇದರಿಂದ ಇವರನ್ನು ಮೆತ್ತಗೆ ಮಾಡುವುದಕ್ಕೆ ಪರಕೀಯರ ಪ್ರಾಬಲ್ಯವೇ ಕಾರಣವಾಯಿತು. ಇದರಲ್ಲಿ ಮುಸಲ್ಮಾನ-ಫ್ರೆಂಚ-ಇಂಗ್ಲಿಷರನ್ನು ಹೇಳಬಹುದು. ಇವರೆಲ್ಲರೂ ಹೊರನಾಡಿನವರು. ಆದರೆ ಭಾರತವನ್ನು ಬಿಟ್ಟೋಡುವುದಕ್ಕೆ ಮನಸ್ಸಿರಲಿಲ್ಲ. ಆದುದರಿಂದ ಹೋರಾಟದ ಹಟದಿಂದಲೇ ಅವರು ನೆಲೆಯೂರಿ ನಿಂತರು. ದಿನ-ದಿನಕ್ಕೆ ಇಳಿಮುಖವಾಗುತ್ತಿದ್ದ ಮರಾಠಾರಾಜ್ಯವು ಪರಕೀಯರ ಪ್ರಾಬಲ್ಯಕ್ಕೆ ಈಡಾಗಲಿಲ್ಲ.

ಈ ಎಲ್ಲ ಕಾರಣಗಳಿಂದಾಗಿ ಮರಾಠರಿಗೆ ಪಾನಿಪತದಲ್ಲಿ ಪ್ರಬಲವಾದ ಪೆಟ್ಟು ಬಿದ್ದಿತು. ಆಮೇಲಂತೂ ಇಂಗ್ಲಿಷರ ಮಹತ್ವಾಕಾಂಕ್ಷೆಯ ಮಹಾಸಾಗರದ ತೆರೆಗಳು ಏರಿಬರಹತ್ತಿದುವು. ಕೊನೆಗೆ ಮಹಾರಾಷ್ಟ್ರ ರಾಜ್ಯವನ್ನು ಮುಳುಗಿಸಿಯೇ ಬಿಟ್ಟುವು!

**ಸಾಮಾಜಿಕ ಸ್ಥಿತಿಯ ಸಮಾಲೋಚನೆ —**

**ಸಾಮಾಜಿಕ ಸ್ಥಿತಿ** — ಮರಾಠಾ ಸಾಮ್ರಾಜ್ಯದ ಕಾಲವೆಲ್ಲ ಬಹುತರವಾಗಿ ಕಾಳಗದಲ್ಲಿಯೇ ಕಳೆದುಹೋಯಿತೆಂದು ಹೇಳಬಹುದು ಮೊದ-ಮೊದಲು ರಾಜ್ಯಸ್ಥಾಪನೆಯ ಬಗೆಗೆ ಕಾಳಗಗಳಾದುವು ಶಾಹುವಿನ ತರುವಾಯ ರಾಜ್ಯವಿಸ್ತಾರವು ಸಾಗಿತು ಇದರಿಂದ ಸ್ವಾಭಾವಿಕವಾಗಿ ಮನೆಮನೆಗೆ ವೀರರಿರುತ್ತಿದ್ದರೆಂದು ಹೇಳಬಹುದು, ಆದರೂ ಒಕ್ಕಲುತನಕ್ಕಾಗಿ ದುಡಿಯುವ ಜನರು ಅದನ್ನು ನಾಗಿಸಿಯೇ ಇದ್ದರು ಆಗ ಹೊಟ್ಟೆಬಟ್ಟೆಗಳ ವೆಚ್ಚವೂ ತೀರ ತುಟ್ಟಿಯಾಗಿರಲಿಲ್ಲ ಪ್ರಪಂಚಕ್ಕೆ ಬೇಕಾದ ಎಲ್ಲ ಪದಾರ್ಥಗಳೂ ಸಿಕ್ಕು ತ್ತಿದ್ದುವು

**ವ್ಯಾಪಾರ** — ವ್ಯಾಪಾರಕ್ಕಾಗಿ ಎತ್ತು-ಒಂಟೆಗಳನ್ನು ಉಪಯೋಗಿಸು ತ್ತಿದ್ದರು, ಆದರೆ ಮನೆಬಿಟ್ಟು ಹೊರಡುವ ಮುಂದೆ ಹೆಂಡತಿ-ಮಕ್ಕಳಿಗೆ ಹೇಳಿಕೇಳಿಯೇ ಹೊರಡಬೇಕಾಗುತ್ತಿತ್ತು ಏಕೆಂದರೆ ಅದು ಸುಲಿಗೆ-ಕೊಲೆ ಗಳ ಕಾಲ!

**ಧಾರ್ಮಿಕ ಸ್ಥಿತಿ** — ಬಹುಶಃ ಜಾತಿಯ ಕೀಳು-ಮೇಲು ಕಟುತರವಾಗಿಯೇ ಬಳಕೆಯಲ್ಲಿರಬೇಕು ಅದಕ್ಕಾಗಿಯೇ ಸಾಧು-ಸಂತರು ಜಾತಿಭೇದವನ್ನು ಮುರಿಯಲು ಬಹಳ ಪ್ರಯತ್ನಪಡಬೇಕಾಯಿತು ಧರ್ಮದಲ್ಲಿ ನಂಬಿಗೆ ಹೆಚ್ಚಿತ್ತು ಅದರಿಂದ ಫಲಜ್ಯೋತಿಷ, ಶಕುನ, ಸಾಮುದ್ರಿಕ, ವ್ರತ, ಉಪ ವಾಸಗಳು ಬಹಳವಾಗಿ ಬಳಕೆಯಲ್ಲಿ ಬಂದುವು

**ಕೈಗಾರಿಕೆ** — ಒಕ್ಕಲುತನ, ನೇಕಾರಿಕೆ ಇವೆರಡೇ ಹೆಚ್ಚಾಗಿ ಬಳಕೆಯಲ್ಲಿ ಇದ್ದಂತೆ ತೋರುತ್ತದೆ ನಾಗಪುರ, ಅಷ್ಟೇ, ಮಾಹೇಶ್ವರಿ, ಬಾಂದವಾಡ, ಸೋಲಾಪುರದಲ್ಲಿ ಬಟ್ಟೆಯ ಕಾರಖಾನೆಗಳಿದ್ದುವು ಅವುಗಳಲ್ಲಿ ನಯವಾದ ಮತ್ತು ಬೆಲೆಯುಳ್ಳ ಬಟ್ಟೆಗಳು ತಯಾರಾಗುತ್ತಿದ್ದುವು.

**ನ್ಯಾಯನೀತಿ** — ಮರಾಠಾರಾಜ್ಯದಲ್ಲಿ ತುರಂಗಗಳು ಕೇವಲ ರಾಜಕೀಯ ಕೈದಿಗಳಿಗೆ ಮಾತ್ರ ಉಳಿದೆಲ್ಲ ಅಪರಾಧಿಗಳಿಗೆ ಕೇವಲ ದಂಡವೇ ಸರಿ ಅದನ್ನು ಕೂಡ ಗ್ರಾಮಪಂಚರೇ ಮಾಡತಕ್ಕದ್ದು ಆಳಿನ ಮೇಲೆ ಒಡೆಯ ನಿಗೆ ಪೂರಾ ಅಧಿಕಾರವಿತ್ತು ಆತನೇ ಅವನ ನ್ಯಾಯಾನ್ಯಾಯಗಳನ್ನು ವಿಚಾ ರಿಸಬೇಕು

ಹೀಗೆ ಸಾಮಾಜಿಕಜೀವನದಲ್ಲಿ ಸುಖ-ಸೌಲಭ್ಯಗಳು ಹೆಚ್ಚಾಗಿದ್ದ ವೆಂದು ಹೇಳಲುಬಾರದು, ಏಕೆಂದರೆ, ಎಂದೋ ಕಣ್ಮರೆಯಾದ ಹಿಂದೂ ರಾಜ್ಯ ವನ್ನು ಕಟ್ಟಿದ ಕಾಲವದು! ಎಂದಮೇಲೆ ರಾಜ-ಪ್ರಜೆಗಳಿಬ್ಬರ ಆಯುಷ್ಯವೂ ಹೋರಾಟದಲ್ಲಿಯೇ ಹೋಗಬೇಕಾದುದು ಅನಿವಾರ್ಯ, ಆದರ, ಮರಾಠರ ಶಕ್ತಿ

ಸಾಹಸಗಳಿಂದಲೇ ಹಿಂದುಗಳೂ ಹಿಂದೂಧರ್ಮವೂ ಮುಂದೆ ಬಾಳಿ ಬೆಳೆಯಲು ಅನುಕೂಲವಾಯಿತೆಂಬುದನ್ನು ಮರೆಯುವಂತಿಲ್ಲ

## ಅಭ್ಯಸನಗಳು

೧ ಮರಾಠರ ಅವನತಿಯ ಕಾರಣಗಳನ್ನು ಹೇಳಿರಿ

೨. ಅವನತಿಯ ಕಾಲದಲ್ಲಿಯೂ ಮರಾಠರ ರಾಜ್ಯವನ್ನು ಉಳಿಸಲು ಸಲಹೆಗಳನ್ನು ಕೊಟ್ಟವರು ಯಾರು ಯಾರು?

೩ ಎರಡನೆಯ ಬಾಜೀರಾಯನು ಇಂಗ್ಲಿಷರ ಕೂಡ ವಸಯಿಯಲ್ಲಿ ಒಪ್ಪಂದ ಮಾಡಿಕೊಂಡಾಗ ಅವನಿಗೆ ೧ನೆಯ ಬಾಜೀರಾಯನಾಗಲಿ ಇಲ್ಲವೆ ಶಿವಾಜಿಯಾಗಲಿ ಕನಸಿನಲ್ಲಿ ಭೆಟ್ಟಿಯಾದನೆಂದು ತಿಳಿಯಿರಿ ಆಗ ಅವರಿಬ್ಬರಲ್ಲಿ ಯಾವ ಸಂಭಾಷಣೆ ನಡೆಯಬಹುದು? (ಶಿಕ್ಷಕರು ಅದರ ನಾಟ್ಯಾಭಿನಯ ಮಾಡಿಸಬೇಕು )

---

# ಮರಾಠಾ ಸಾಮ್ರಾಜ್ಯ

ಪ್ರಮಾಣ □ = ೧೦ ವರ್ಷಗಳು

ಕ್ರಿಸ್ತಶಕ ೧೬೦೦

೧೬೨೭ ಶಿವಾಜಿಯ ಜನನ

ವಿಜಾಪುರದಲ್ಲಿ ಶಹಜಿಯ ಏರಿಕೆ { ೧೬೩೬ – ೧೬೪೯

೧೬೪೬ ಶಿವಾಜಿಯು ತೋರಣಕೋಟೆಯನ್ನು ಹಿಡಿದದ್ದು

೧೬೪೭ ದಾದಾಜಿ ಕೊಂಡದೇವನ ಮರಣ

೧೬೫೬ ಜಾವಳಿಪ್ರಾಂತದ ಆಕ್ರಮಣ

ಶಿವಾಜಿಯು ಅಫಜಲಖಾನನನ್ನು ಕೊಂದದ್ದು ೧೬೫೯

೧೬೬೩ ಶಾಹಿಸ್ತಖಾನನನ್ನು ಸಾಯಗೊಳಿಸಿದ್ದು

ಸೂರತದ ಸುಲಿಗೆ ೧೬೬೪

೧೬೬೫ { ಪುರಂಧರದ ಒಪ್ಪಂದ / ಶಿವಾಜಿ-ಔರಂಗಜೇಬರ ಭೇಟ್ಟಿ

ಶಿವಾಜಿಯ ಪಟ್ಟಾಭಿಷೇಕ ೧೬೭೪

೧೬೭೭ ಕರ್ನಾಟಕದ ಮೇಲೆ ದಾಳಿ

ಶಿವಾಜಿಯ ಮರಣ ೧೬೮೦

೧೬೮೯ { ಸಂಭಾಜಿಯ ಕೊಲೆ / ಮರಾಠಾ ಸ್ವಾತಂತ್ರ್ಯ ಯುದ್ಧ

ಜಿಂಜಿಯಲ್ಲಿ ರಾಜಾರಾಮನು ನಿಂತದ್ದು ೧೬೯೮

೧೭೦೦ ರಾಜಾರಾಮನ ಮರಣ

ತಾರಾಬಾಯಿಯ ಆಳಿಕೆ-ಮರಾಠರ ಪ್ರಗತಿ ೧೭೦೧

ದಿಲ್ಲಿಯಿಂದ ಶಾಹುರಾಜನ ಬಿಡುಗಡೆ ೧೭೦೭

೧೭೧೩ { ಬಾಳಾಜಿ ವಿಶ್ವನಾಥನು ಪೇಶ್ವೆಯಾದದ್ದು / ಪೇಶವೆಯರ ಪ್ರಗತಿ

ಬಾಜಿರಾಯ ಪೇಶವೆ ೧೭೨೦

೧೭೨೩ ಬಾಳಾಪುರದ ಯುದ್ಧ

ಕರ್ನಾಟಕದ ಮೇಲೆ ದಾಳಿ ೧೭೨೬

೧೭೨೮ ನಿಜಾಮನೊಡನೆ ಯುದ್ಧ

ಭೋಪಾಳದ ಒಪ್ಪಂದ / ದಿಲ್ಲಿಯಲ್ಲಿ ಮರಾಠರ ಏರಿಕೆ } ೧೭೩೭

೧೭೪೦ ಬಾಜೀರಾಯನ ಮರಣ

ಶಾಹುರಾಜನ ಮರಣ / ಪೇಶವೆಯರ ಸರ್ವಾಧಿಕಾರ } ೧೭೪೯

೧೭೫೮ { ಅಟಕದಮೇಲೆ ದಾಳಿ / ಮರಾಠಾ ಸಾಮ್ರಾಜ್ಯದ ಅತ್ಯುಚ್ಚ ಶಿಖರ

೧೭೬೧ ೩ನೆಯ ಪಾಣಿಪತದ ಯುದ್ಧ

ರಾಕ್ಷಸಭುವನ ಕಾಳಗ - ಪೇಶವೆ ಮಾಧವರಾಯನ ಮುನ್ನಡೆ - ಹೈದರನ ಸೋಲು } ೧೭೬೩

೧೭೭೨ { ಮಾಧವರಾಯನ ಮರಣ / ನಾರಾಯಣರಾಯನ ಕೊಲೆ / ಬಾರಾಭಾಯಿ ಮಂತ್ರಿಮಂಡಳ

ಮೊದಲನೆಯ ಇಂಗ್ಲಿಷ ಮರಾಠಾ ಯುದ್ಧ { ೧೭೭೫

ಸಾಲ್ಬಾಯಿ ಒಪ್ಪಂದ { ೧೭೮೨

೧೭೯೪ ಮಹದಾಜಿ ಸಿಂಧೆಯ ಮರಣ

ಸವಾಯಿ ಮಾಧವರಾಯ ಪೇಶ್ವೆಯ ಮರಣ / ಎರಡನೇ ಬಾಜೀರಾಯನು ಪೇಶ್ವೆಯಾದದ್ದು } ೧೭೯೫

೧೮೦೦ ನಾನಾಫಡ್ನವೀಸನ ಮರಣ

ವಸಯಿ ಒಪ್ಪಂದ ೧೮೦೨

೧೮೦೩ – ೧೮೦೫ } ಎರಡನೆಯ ಇಂಗ್ಲಿಷ-ಮರಾಠಾ ಯುದ್ಧ

ಮೂರನೆಯ ಇಂಗ್ಲಿಷ-ಮರಾಠಾ ಯುದ್ಧ { ೧೮೧೭

ಮರಾಠರ ಅವನತಿ { ೧೮೧೮

೧೮೫೭ ನಾನಾಸಾಹೇಬ ಪೇಶವೆಯ ಮರಣ

೧೯೦೦

# ಮೂರನೆಯ ಭಾಗ

---

## ಬ್ರಿಟಿಶ ಮತ್ತು ಸ್ವತಂತ್ರಭಾರತದ ಇತಿಹಾಸ

# ೧ ಪಾರತಂತ್ರ್ಯದಿಂದ ಸ್ವಾತಂತ್ರ್ಯಕ್ಕೆ

**ಮುಸಲ್ಮಾನರಾಳಿಕೆಯ ಮುಕ್ತಾಯ** — ಮಕ್ಕಳಿರಾ, ಮುಸಲ್ಮಾನರಿಗೆ ಭಾರತದಲ್ಲಿ ಕಾಲಿಡಲು ಹೇಗೆ ಅನುಕೂಲವಾಯಿತು, ಅವರು ಬರುಬರುತ್ತ ಇಲ್ಲಿಯೇ ತಳವೂರಿ, ಹೇಗೆ ರಾಜ್ಯಸ್ಥಾಪನೆಯನ್ನು ಮಾಡಿಕೊಂಡರು, ಅದನ್ನು ಹೇಗೆ ವಿಸ್ತಾರಗೊಳಿಸಿದರು, ಅವರಿಂದ ಭಾರತದ ಸಂಸ್ಕೃತಿ ಹಾಗೂ ಸಾಂಪತ್ತಿಕ ಸ್ಥಿತಿಯಲ್ಲಿ ಯಾವ ಯಾವ ಬದಲಾವಣೆಗಳಾದವು, ಕಡೆಗೆ ಔರಂಗಜೇಬನ ತಪ್ಪುಗಳಿಂದ ಮುಸಲ್ಮಾನರಾಳಿಕೆಗ ಹೇಗೆ ಧಕ್ಕೆ ತಗುಲಿತು, ಇವನ್ನೆಲ್ಲ ಈ ಮೊದಲು ಕಲಿತಿರುವಿರಿ ಅವರು ಬರುವಾಗ ಪರಕೀಯರಾಗಿ ಬಂದರು, ಆದರೆ ಮುಂದೆ ಭಾರತದಲ್ಲಿ ನೆಲಸಿ, ಭಾರತೀಯರೊಡನೆ ಬೆರೆತು, ಭಾರತೀಯ ವೈಭವದ-ಸಂಸ್ಕೃತಿಯ ಬೆಳವಣಿಗೆಯಲ್ಲಿ ಪಾಲುಗಾರರಾದ ರೆಂಬುದು ನೆನಪಿಡಿತಕ್ಕ ಸಂಗತಿ

**ಹಿಂದೂ ಸಾಮ್ರಾಜ್ಯಸ್ಥಾಪನೆಯ ಯತ್ನಗಳು** — ಇದೇ ಕಾಲಕ್ಕೆ ಮುಸಲ್ಮಾನರ ಪ್ರಬಲ ಆಕ್ರಮಣವನ್ನು ತಡೆಗಟ್ಟಿ, ಹಿಂದೂಧರ್ಮ ಹಾಗೂ ಹಿಂದೂ ಸಂಸ್ಕೃತಿಗಳ ರಕ್ಷಣೆಗಾಗಿ ಸ್ವತಂತ್ರ ಹಿಂದೂಸಾಮ್ರಾಜ್ಯವನ್ನು ಕಟ್ಟಲು ದಕ್ಷಿಣದಲ್ಲಿ ಮೊದಲು ವಿಜಯನಗರದ ಅರಸರು, ಕೊನೆಕೊನೆಗೆ ಮರಾಠರು ಹೇಗೆ ಯತ್ನಿಸಿದರು, ಆ ಸಾಮ್ರಾಜ್ಯಗಳು ಸ್ಥಿರವಾಗಿ ಬಾಳದೆ, ಹೇಗೆ ಉರುಳಿದವು ಎಂಬುದನ್ನು ಓದಿದಿರಿ ವಿಜಯನಗರದ ಅಳಿಗಾಲಕ್ಕೆ ಶಕ್ತಿಯ ಸೊಕ್ಕು ಕಾರಣವಾದರೆ, ಮರಾಠರ ಅವನತಿಗೆ ರಾಷ್ಟ್ರೀಯ ಅನೈಕ್ಯ, ಸ್ವಾರ್ಥದಾಸೆ, ಹಾಗೂ ಒಳಜಗಳಗಳು ಕಾರಣಗಳಾದವು

**ಯುರೋಪಿಯನ್ನರ ಚಂಚುಪ್ರವೇಶ** — ಮೊಗಲರ ಮುಕ್ತಾಯ ಹಾಗೂ ದಕ್ಷಿಣದ ಹಿಂದೂರಾಜ್ಯಗಳ ಅಳಿಗಾಲ, ಇವೆರಡೂ ಯುರೋಪಿಯನ್ನರ ಪ್ರವೇಶಕ್ಕೆ ಸುಲಭಮಾರ್ಗವನ್ನು ಮಾಡಿಕೊಟ್ಟವು ತೀರ ಪ್ರಾಚೀನ

ಕಾಲದಿಂದಲೂ ಭಾರತೀಯರು ಪಶ್ಚಿಮ ಹಾಗೂ ಪೂರ್ವದ ರಾಷ್ಟ್ರಗಳೊಡನೆ ವ್ಯಾಪಾರಮಾಡುತ್ತಿದ್ದರು ಭಾರತದ ವೈಭವವನ್ನು ಬೇರೆ ಯುರೋಪಿಯನ್ನರು ರೋಮನ್ನರಿಂದ ಕೇಳಿ ತಿಳಿದುಕೊಂಡಿದ್ದರು ಸಮುದ್ರದ ಮೇಲೆ ಪ್ರವಾಸ ಮಾಡುವ ಸಾಹಸ ಹೆಚ್ಚಾದ ಬಳಿಕ, ತಮ್ಮ ದೇಶಗಳಲ್ಲಿಯೇ ಅವರು ಕುಳಿತು ಕೊಳ್ಳದೆ ಪರದೇಶದ ಪ್ರವಾಸಕ್ಕೂ ವ್ಯಾಪಾರಕ್ಕೂ ಕೈಹಾಕಿದರು ಹೀಗೆ ಮೊದಲು ಪೋರ್ತುಗೀಜರು, ಆ ಮೇಲೆ ಡಚ್ಚರು, ಫ್ರೆಂಚರು, ಇಂಗ್ಲಿಷರು, ಒಬ್ಬೊಬ್ಬರಾಗಿ ಭಾರತಕ್ಕೆ ಬಂದರು ಇವರಲ್ಲಿ ಇಂಗ್ಲಿಷರೇ ಚೆನ್ನಾಗಿ ತಳ ವೂರಿ ಹೇಗೆ ಇಡೀ ಭಾರತದ ಸಾರ್ವಭೌಮರಾದರು? ಎಂಬುದನ್ನು ಈಗ ನೋಡಬೇಕಾಗಿದೆ.

**ಸ್ವಾತಂತ್ರ್ಯದ ಸೂರ್ಯೋದಯ** — ಆದರೆ ಅಷ್ಟಕ್ಕೇ ನಾವು ನಿಲ್ಲುವಂತಿಲ್ಲ ಪಾರತಂತ್ರ್ಯದ ಕತ್ತಲೆಯ ಕಾಲದಲ್ಲಿ ಭಾರತೀಯರು ಪಟ್ಟ ಕಷ್ಟನಷ್ಟಗಳು ಯಾವವು? ಅವರಿಗೆ ಬೆಳಕನ್ನು ತೋರುತ್ತ ದೇಶಸೇವೆಗಾಗಿ ಪ್ರಾಣ ಗಳನ್ನರ್ಪಿಸಿದ ಹುತಾತ್ಮರು ಯಾರು, ಅವರ ಸಂದೇಶವೇನು, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಹಿಂಸಾತ್ಮಕವಾದ ಚಳವಳಿ ಹೂಡಿ, ಭಾರತಕ್ಕೆ ಸ್ವಾತಂತ್ರ್ಯ ವನ್ನು ತಂದುಕೊಟ್ಟವರು ಯಾರು, ಕಡೆಗ ಹಿಂದುಸ್ಥಾನವು ಹೋಳಾಗಿ ಭಾರತ-ಪಾಕಿಸ್ತಾನಗಳು ಹೇಗೆ ಆದವು, ಈಗ ಭಾರತದಲ್ಲಿ ನಡೆದ ಆಡಳಿತದ ರೀತಿ-ನೀತಿಗಳಾವವು, ಇವೇ ಮೊದಲಾದ ವಿಷಯಗಳನ್ನೂ ನಾವು ತಿಳಿದು ಕೊಳ್ಳಬೇಕಾಗಿದೆ

# ೨. ಭಾರತಕ್ಕೆ ಯುರೋಪಿಯನ್ನರ ಆಗಮನ

**ಭಾರತದ ವ್ಯಾಪಾರಸಂಪರ್ಕ** —ಕ್ರಿ. ಶ ಮೊದಲನೆಯ ಶತಮಾನದಿಂದಲೂ, ಭಾರತೀಯರು ಏಶಿಯಾಖಂಡದ ಪೂರ್ವ ರಾಷ್ಟ್ರಗಳಿಗೂ, ಯುರೋಪಖಂಡದ ಪಶ್ಚಿಮ ರಾಷ್ಟ್ರಗಳಿಗೂ ವ್ಯಾಪಾರಕ್ಕಾಗಿ ಹೋಗುತ್ತಿದ್ದರು ಇಟಲಿ, ಇರಾಣ, ಅರಬಸ್ತಾನ, ಗ್ರೀಸ ಮೊದಲಾದ ದೇಶಗಳಿಂದ ವರ್ತಕರು




ಭಾರತಕ್ಕೆ ಬರುತ್ತಿದ್ದರು. ಮೊದಮೊದಲು ನೆಲಮಾರ್ಗವಾಗಿಯೇ ವ್ಯಾಪಾರವು ಹೆಚ್ಚಾಗಿ ಸಾಗುತ್ತಿತ್ತು ಅಲೆಕ್ಝಾಂಡರನ ದಾಳಿಯನಂತರ ಸಮುದ್ರಮಾರ್ಗವಾಗಿಯೂ ವ್ಯಾಪಾರವು ವಿಶೇಷವಾಗಿ ಸಾಗತೊಡಗಿತು. ನಯವಾದ ಬಟ್ಟೆಗಳು, ಮುತ್ತಿನ ಒಡವೆಗಳು, ಬಂಗಾರ, ಕಸ್ತೂರಿ, ಚಂದನ, ಸಕ್ಕರೆ ಹಾಗೂ ಮೆಣಸು, ಶುಂಠಿ, ಲವಂಗ, ದಾಲಚಿನ್ನಿ ಮೊದಲಾದ

ಮಸಾಲೆಯ ಸಾಮಾನುಗಳು, ಭಾರತದಿಂದ ಪರದೇಶಗಳಿಗೆ ಹೋಗುತ್ತಿದ್ದವು ಭಾರತವು ಸಂಪತ್ತಿನ ಶಿಖರಕ್ಕೇರಿತ್ತು, 'ಸುವರ್ಣಭೂಮಿ' ಎಂದೆನಿಸಿಕೊಂಡಿತ್ತು ಆದರೆ ಅರಬರು ಇಜಿಪ್ತವನ್ನೂ ತುರ್ಕರು ಕಾನಸ್ಟಾಂಟಿನೋಪಲನ್ನೂ ಆಕ್ರಮಿಸಿದ ಮೇಲೆ, ಯುರೋಪಿಯನ್ನರಿಗೆ ಹಿಂದುಸ್ಥಾನದೊಡನೆ ಭೂಮಾರ್ಗದ ವ್ಯಾಪಾರವು ಕಟ್ಟಾಯಿತು ಮುಸಲ್ಮಾನ ಅರಸರಿಗೆ ಮಾರ್ಗದಲ್ಲಿ ಅಪಾರ ಸುಂಕ-ಸಾರಿಗೆಗಳನ್ನು ತೆತ್ತು, ತಮಗೆ ಅವಶ್ಯವಾದ ಪದಾರ್ಥಗಳನ್ನು ತರುವದು ಅವರಿಗೆ ಅನುಕೂಲವಾಗಿರಲಿಲ್ಲ

**ಹೊಸದಾರಿಯ ಶೋಧ** — ಆದುದರಿಂದ ಭಾರತಕ್ಕೆ ಬರಲು ಅವರು ಹೊಸ ದಾರಿಯನ್ನು ಹುಡುಕಲೇಬೇಕಾಯಿತು ಮೊತ್ತಮೊದಲು ಹೊಸ ದಾರಿಯನ್ನು ಶೋಧಮಾಡಿ ಭಾರತಕ್ಕೆ ಬಂದ ಯುರೋಪಿಯನ್ನರೆಂದರೆ— ಪೋರ್ತುಗೀಜರು ಕೋಲಂಬಸನೆಂಬ ಸ್ಪೇನದೇಶದ ನಾವಿಕನು ಹಿಂದುಸ್ಥಾನವನ್ನು ಹುಡುಕಲು ಹೊರಟು, ಪಶ್ಚಿಮಕ್ಕೆ ಸಾಗಿ ಹೊಸಜಗತ್ತನ್ನು ಅಂದರೆ ಅಮೇರಿಕಾಖಂಡವನ್ನು ಹುಡುಕಿದನು ವಾಸ್ಕೊ-ಡಿ-ಗಾಮಾ ಎಂಬ ಪೋರ್ತುಗೀಜ ನಾವಿಕನು ಆಫ್ರಿಕಾಖಂಡದ ದಕ್ಷಿಣ ತುದಿಯನ್ನು ಸುತ್ತುವರಿದು, ಕ್ರಿ ಶ ೧೪೯೮ರಲ್ಲಿ ಭಾರತಕ್ಕೆ ಬಂದನು ಪಶ್ಚಿಮದಂಡೆಯಲ್ಲಿದ್ದ ಕಲ್ಲೀಕೋಟೆಯಲ್ಲಿ (ಕಾಲಿಕತ್ತ) ಮೊದಲು ಬಂದು ಇಳಿದನು

**ವ್ಯಾಪಾರಕ್ಕೆ ಒಪ್ಪಿಗೆ** — ಆ ಕಾಲಕ್ಕೆ ಕಲ್ಲೀಕೋಟೆಯಲ್ಲಿ ಆಳುತ್ತಿದ್ದ ಝೂಮೋರಿನ್ ದೊರೆಯಿಂದ ವ್ಯಾಪಾರಮಾಡಲು ಗಾಮಾನು ಒಪ್ಪಿಗೆಯನ್ನು ಪಡೆದನು, ಆದರೆ ಅಲ್ಲಿ ಈ ಮೊದಲೇ ವ್ಯಾಪಾರ ಮಾಡುತ್ತಿದ್ದ ಆಫ್ರಿಕದ ಮೂರ್ ಜನರಿಗೆ ಇದು ಸರಿಬರಲಿಲ್ಲ ಅವರಿಗೂ ಪೋರ್ತುಗೀಜರಿಗೂ ಜಗಳ ನಡೆಯಿತು ಪೋರ್ತುಗೀಜರ ಮೊದಲನೆಯ ಗವ್ಹರ್ನರನಾಗಿ ಬಂದಿದ್ದ ಆಲ್ಮೀಡಾನಿಗೆ ಜಯಸಿಗಲಿಲ್ಲ, ಆದರೆ ಎರಡನೆಯ ಗವ್ಹರ್ನರ ಅಲ್ಫಾನ್ಸೋ ಅಲ್ಬುಕರ್ಕನು ಬಂದು ವಿಜಾಪುರದ ಬಾದಶಹನ ವಶದಲ್ಲಿದ್ದ ಗೋವೆಯನ್ನು ಗೆದ್ದು, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು ಮುಂದೆ ಪೋರ್ತುಗೀಜರು ವಸಯಿ, ದಮಣ, ಮುಂಬಯಿ, ಮಾಹಿಮ, ಮಂಗಳೂರು ಮುಂತಾದ ಸ್ಥಳಗಳಲ್ಲಿ ತಮ್ಮ ವ್ಯಾಪಾರದ ಠಾಣ್ಯಾಗಳನ್ನು ಮಾಡಿಕೊಂಡರು

**ಪೋರ್ತುಗೀಜರ ಅಳಿಗಾಲ** — ಆದರೆ, ಸ್ಪೇನ-ಪೋರ್ತುಗಾಲ ಎರಡೂ ಒಂದಾದ ಬಳಿಕ, ಹಿಂದುಸ್ಥಾನದಲ್ಲಿದ್ದ ಪೋರ್ತುಗೀಜರ ಠಾಣ್ಯಾಗಳಿಗೆ ಸ್ಪೇನದ ಅರಸು ಅಷ್ಟು ಲಕ್ಷ್ಯ ಪೂರೈಸಲಿಲ್ಲ, ಅಲ್ಲದೆ ೧೫೮೮ರಲ್ಲಿ ಇಂಗ್ಲಿಷರು ಸ್ಪೇನ-ಪೋರ್ತುಗಾಲಗಳ ದೊಡ್ಡ ಹಡಗುಪಡೆಯನ್ನು ನಾಶಮಾಡಿ ಅವರಿಗೆ ಸೋಲನ್ನುಂಟುಮಾಡಿದರು. ಅಷ್ಟರಲ್ಲಿ ಡಚ್ಚರು ಇಲ್ಲಿ ವಸಾಹತುಗಳನ್ನು

ಮಾಡಲು ಪ್ರಾರಂಭಿಸಿದ್ದರು ಅವರ ಹೊಡೆತವನ್ನೂ ಮರಾಠರ ಹೊಡೆತವನ್ನೂ ತಡೆಯಲು ಪೋರ್ತುಗೀಜರಿಗೆ ಆಗಲಿಲ್ಲ, ಅಲ್ಲದೆ ಅವರು ತಾವು ಗೆದ್ದುಕೊಂಡ ಪ್ರದೇಶದಲ್ಲಿ, ಹಿಂದೀಯರನ್ನು ಕ್ರೈಸ್ತಮತಕ್ಕೆ ಪರಿವರ್ತಿಸಲು ಪ್ರಯತ್ನಿಸಹತ್ತಿದರು ಇದರಿಂದ ಭಾರತೀಯರು ಅವರ ಮೇಲೆ ಸಿಟ್ಟಾದರು, ಹೀಗಾಗಿ ಪೋರ್ತುಗೀಜರಿಗೆ ಇಲ್ಲಿ ತಮ್ಮ ರಾಜ್ಯವನ್ನು ಬೆಳೆಸುವದು ದುಸ್ತರವಾಯಿತು. ಕ್ರಮೇಣ, ಅವರ ಪ್ರದೇಶಗಳು ಕೈಬಿಟ್ಟವು ಪೋರ್ತುಗಾಲದ ಅರಸು ಇಂಗ್ಲಿಷ ರಾಜನಾದ ಎರಡನೆಯ ಚಾರ್ಲ್ಸನಿಗೆ ತನ್ನ ಮಗಳನ್ನು ಕೊಟ್ಟು, ಭಾರತದಲ್ಲಿಯ ಮುಂಬಯಿ ನಡುಗಡ್ಡೆಯನ್ನು ಅವನಿಗೆ ವರದಕ್ಷಿಣೆಯಾಗಿ ಕೊಟ್ಟನು ಈಗ ಪೋರ್ತುಗೀಜರ ಕೈಯಲ್ಲಿ ಗೋವೆ, ದೀವ, ದಮಣ ಇಷ್ಟು ಮಾತ್ರ ಉಳಿದಿದ್ದು, ಅಲ್ಲಿಯೂ ಸ್ವಾತಂತ್ರ್ಯದ ಹೋರಾಟ ಪ್ರಾರಂಭವಾಗಿದೆ

**ಡಚ್ಚರು** — ಇವರು ಪಶ್ಚಿಮ ಯುರೋಪದಲ್ಲಿದ್ದ ಹಾಲಂಡದ ನಿವಾಸಿಗಳು ಇವರು ಪೋರ್ತುಗೀಜರಂತೆ ತಾವೂ ವ್ಯಾಪಾರಮಾಡಬೇಕೆಂದು ಕ್ರಿ ಶ ೧೫೯೫ರಲ್ಲಿ ಹೌಟ್‌ಮನ್ ಎಂಬ ನಾವಿಕನ ಕೈಕೆಳಗೆ ನಾಲ್ಕು ಹಡಗುಗಳನ್ನು ಕೊಟ್ಟು ಅಂದಮಾನಕ್ಕೆ ಕಳಿಸಿದರು ಹೌಟಮನ್ನನು ಪೋರ್ತುಗೀಜರ ವಶದಲ್ಲಿದ್ದ ಆ ದ್ವೀಪವನ್ನು ಗೆದ್ದುಕೊಂಡನು ಬಳಿಕ, ಡಚ್ಚರು ೧೬೦೨ರಲ್ಲಿ 'ಡಚ್ ಈಸ್ಟ್ ಇಂಡಿಯಾ ಕಂಪನಿ'ಯನ್ನು ಸ್ಥಾಪಿಸಿದರು ಐವತ್ತು ವರ್ಷಗಳಲ್ಲಿ ಭಾರತದಲ್ಲಿಯ ನಾಗಪಟ್ಟಣ, ಚಿನ್ಸುರಾ ಮತ್ತು ಸಿಲೋನದಲ್ಲಿಯ ತ್ರಿಂಕೋಮಾಲಿ, ಹಾಗೂ ಪೂರ್ವಸಾಗರದಲ್ಲಿ ಜಾವಾ, ಇವು ಅವರ ವ್ಯಾಪಾರದ ಪಡಿಮೂಲೆಗಳಾದವು

**ಇಂಗ್ಲಿಷರ ಪ್ರವೇಶ** — ಪೋರ್ತುಗೀಜ ಮತ್ತು ಡಚ್ಚರ ವ್ಯಾಪಾರದ ವೈಭವವನ್ನು ಬ್ರಿಟಿಶರು ತಿಳಿದುಕೊಂಡರು ಅವರಿಗೂ ವ್ಯಾಪಾರದಲ್ಲಿಯ ಲಾಭದಾಸೆ ಹುಟ್ಟಿತು ಭಾರತಕ್ಕೆ ಬರಬೇಕೆಂದು ಪ್ರಯತ್ನ ನಡೆಸಿದರು ಈ ಕಾಲದಲ್ಲಿ, ಇಂಗ್ಲಂಡದ ಸಿಂಹಾಸನದಲ್ಲಿ ಕುಳಿತಿದ್ದ ಎಲಿಜಬಥ್ ರಾಣಿಯ ಅಪ್ಪಣೆಯಿಂದ ಪೂರ್ವದೇಶಗಳಲ್ಲಿ ವ್ಯಾಪಾರವನ್ನು ನಡೆಸುವ ಬಗೆಗೆ 'ಈಸ್ಟ ಇಂಡಿಯಾ ಕಂಪನಿ'ಯು ಇಂಗ್ಲಂಡಿನಲ್ಲಿ ಸ್ಥಾಪನೆಯಾಯಿತು (೧೬೦೦)

**ಡಚ್ಚರ ಅಳಿಗಾಲ** — ಮುಂದ, ಇಂಗ್ಲಿಷರು ವ್ಯಾಪಾರಕ್ಕೆಂದು ಭಾರತಕ್ಕೆ ಬಂದು ಡಚ್ಚರೊಡನೆ ವ್ಯಾಪಾರದ ಏರಾಟ ನಡೆಸಿದರು ಡಚ್ಚರು ಸಿಟ್ಟಾಗಿ ಜಾವಾದ ಹತ್ತಿರದ ಅಂಬೋಯನಾದಲ್ಲಿ ಇಂಗ್ಲಿಷ ಅಧಿಕಾರಿಯ ಕೊಲೆಯನ್ನು ಮಾಡಿದರು. ಆದರೆ ಕ್ಲೈವನು ಇಂಗ್ಲಿಷರ ದಳಪತಿಯಾಗಿ

ಬಂದು ಚಿನ್ಸುರಾಪಟ್ಟಣವನ್ನು ಡಚ್ಚರಿಂದ ಕಸಿದುಕೊಂಡನು ಉಳಿದ ಕಡೆಗಳಲ್ಲಿಯೂ ಅವರನ್ನು ಸೋಲಿಸಿ ಭಾರತದಲ್ಲಿ ಅವರಿಗೆ ನೆಲೆಯಿಲ್ಲದಂತೆ ಮಾಡಿದನು. ಡಚ್ಚರು ಒಪ್ಪಂದಮಾಡಿಕೊಂಡರು ತಮ್ಮ ಕೆಲವು ವ್ಯಾಪಾರದ ಸ್ಥಳಗಳನ್ನೂ ಸುಮಾತ್ರಾ ದ್ವೀಪವನ್ನೂ ಬ್ರಿಟಿಶರಿಗೆ ಬಿಟ್ಟುಕೊಟ್ಟರು ಜಾವಾ, ಮಲಕ್ಕಾ ನಡುಗಡ್ಡೆಗಳು ಮಾತ್ರ ಡಚ್ಚರಿಗುಳಿದವು

**ಸುರತದಲ್ಲಿ ವಖಾರ**—ಇಂಗ್ಲಿಷರು ಮೊದಲು ಸುರತದಲ್ಲಿ ನೆಲೆಯೂರಿನಿಂತರು ಅದು ಮೊಗಲ ಬಾದಶಹನ ಆಡಳಿತಕ್ಕೆ ಸೇರಿತ್ತು ಅದರಿಂದ ಬಾದಶಹನನ್ನು ಮೆಚ್ಚಿಸಿ ವ್ಯಾಪಾರಕ್ಕೆ ಒಪ್ಪಿಗೆಪಡೆಯಬೇಕೆಂದು ಕಂಪನಿಯವರು ೧೬೦೮ರಲ್ಲಿ ಕ್ಯಾಪ್ಟನ್ ಹಾಕಿನ್ಸನನ್ನು ದಿಲ್ಲಿ ಆಗ್ರಾಗಳಿಗೆ ಕಳುಹಿದರು ಅವನು ೧೬೧೩ರಲ್ಲಿ ಜಹಾಂಗೀರ ಬಾದಶಹನನ್ನು ಕಂಡು ವಖಾರವನ್ನು ಹಾಕುವದಕ್ಕೆ ಒಪ್ಪಿಗೆಯನ್ನು ಪಡೆದನು ಇಂಗ್ಲಿಷರು ೧೬೩೨ರಲ್ಲಿ ಮಚ್ಚಲಿಪಟ್ಟಣದಲ್ಲಿ ಮತ್ತೊಂದು ವಖಾರವನ್ನು ಹಾಕಿದರು ಆ ಮೇಲೆ ಶಾಹೇಜಹಾನ ಬಾದಶಹನಿಂದ ಕಲಕತ್ತೆಯಲ್ಲಿ ವಖಾರವನ್ನು ಕಟ್ಟಿಸಲು ಅವರು ಅಪ್ಪಣೆಯನ್ನು ಪಡದುಕೊಂಡರು, 'ಬಂಗಾಲದಲ್ಲಿ ಬೇಕಾದಂತೆ ವ್ಯಾಪಾರ ಮಾಡಬಹುದು, ತಮ್ಮ ಮಾಲಿನ ಮೇಲೆ ಬಾದಶಹನು ಸುಂಕವನ್ನು ತೆಗೆದುಕೊಳ್ಳಬಾರದು, ಹುಗಳೀನದಿಯ ಮುಖದ ವರೆಗೆ ಇಂಗ್ಲಿಷ್ ಹಡಗುಗಳನ್ನು ಬರಗೊಡಬೇಕು'—ಮುಂತಾದ ಮಾತುಗಳಿಗೆ ಬಾದಶಹನ ಒಪ್ಪಿಗೆಯನ್ನು ಪಡೆದರು ಜಾನ್ ಕಾರ್ನಾಕ್ ಎಂಬವನು ಕಲಕತ್ತೆಯಲ್ಲಿ ಫೋರ್ಟ್ ವಿಲಿಯಮ್ ಕೋಟೆಯನ್ನು ಕಟ್ಟಿಸಿದನು ಮುಂದೆ ೧೬೩೯ರಲ್ಲಿ ಇಂಗ್ಲಿಷರು ಚಂದ್ರಗಿರಿಯ ಅರಸನಿಂದ ಮದ್ರಾಸ (ಚೆನ್ನಪಟ್ಟಣ)ವನ್ನು ಮಾರಲಿಕ್ಕೆ ತೆಗೆದುಕೊಂಡರು, ಅಲ್ಲಿ 'ಸೇಂಟ್ ಜಾರ್ಜ' ಎಂಬ ಬಲವಾದ ಕೋಟೆಯನ್ನು ಕಟ್ಟಿಸಿದರು, ಬಂಗಾಲದ ಸುಭೇದಾರನಿಂದ ಮುರ್ಶಿದಾಬಾದ, ಡಾಕಾ ಕಾಶೀಮಬಝಾರಗಳಲ್ಲಿ ವಖಾರಗಳನ್ನು ಕಟ್ಟಲು ಅಪ್ಪಣೆಪಡೆದರು ಆಗ, ಮುಂಬಯಿಯು ಪೋರ್ತುಗೀಜರ ವಶದಲ್ಲಿತ್ತು ಪೋರ್ತುಗಾಲದ ಅರಸನಿಂದ ವರದಕ್ಷಿಣೆಯಾಗಿ ಬಂದ ಮುಂಬಯಿ ನಡುಗಡ್ಡೆಯನ್ನು ೨ನೇ ಚಾರ್ಲಸನು ವರ್ಷಕ್ಕೆ ಹತ್ತು ಪೌಂಡು ಬಾಡಿಗೆಯ ಕರಾರಿನಿಂದ ೧೬೬೮ರಲ್ಲಿ ಕಂಪನಿಯವರಿಗೆ ಒಪ್ಪಿಸಿದನು ಅಲ್ಲಿಯೇ ಅವರು ಭದ್ರವಾದ ವಖಾರವನ್ನು ಸ್ಥಾಪಿಸಿದರು, ಸುರತದ ಅಂಗಡಿಯನ್ನು ಅಲ್ಲಿಗೆ ತಂದರು ಹೀಗೆ ಮುಂಬಯಿ, ಮದ್ರಾಸ, ಕಲಕತ್ತಾ ಮುಂತಾದ ಆಯಕಟ್ಟಿನ ಸ್ಥಳಗಳಲ್ಲೆಲ್ಲ, ಕಂಪನಿಯ ವಖಾರಗಳೂ ಕೋಟೆಗಳೂ ಕಟ್ಟಲ್ಪಟ್ಟವು

**ಇಂಗ್ಲಿಷ ಕಂಪನಿಗಳ ಸಂಘಟನೆ** — ೧೬೪೮ರಲ್ಲಿ ಇಂಗ್ಲಂಡದಲ್ಲಿ ದೊಡ್ಡ ಕ್ರಾಂತಿಯಾಯಿತು ಪ್ರಜೆಗಳು ಅರಸನ ವಿರುದ್ಧ ಬಂಡೆಬ್ಬಿಸಿ ಆಡಳಿತವನ್ನು ಕೈಯಲ್ಲಿ ತೆಗೆದುಕೊಂಡರು. ಅರಸನ ಆಶ್ರಯದಲ್ಲಿದ್ದ ಈಸ್ಟ ಇಂಡಿಯಾ ಕಂಪನಿಗೆ ಇಳಿಗಾಲ ಬಂದಿತು ಹೊಸ ಸರಕಾರವು ಸಣ್ಣ ಕಂಪನಿಗಳನ್ನೆಲ್ಲ ನಿಲ್ಲಿಸಿತು, ಈಸ್ಟ ಇಂಡಿಯಾ ಕಂಪನಿಯನ್ನೂ ಹೊಸದೊಂದು ಕಂಪನಿಯನ್ನೂ ಕೂಡಿಸಿ **ಯುನಾಯಿಟೆಡ್ ಈಸ್ಟ ಇಂಡಿಯಾ ಕಂಪನಿ** ಎಂಬ ಹೊಸ ಹೆಸರನ್ನು ಕೊಟ್ಟಿತು (೧೭೦೮) ಅಂದಿನಿಂದಲೇ ವ್ಯಾಪಾರಕ್ಕೆ ಕಳೆಕಟ್ಟಿತು

(೧) **ಫ್ರೆಂಚ ಕಂಪನಿ** —ಭಾರತದಲ್ಲಿಯ ಸರಕುಗಳ ಸಮೃದ್ಧಿಯು ಫ್ರೆಂಚರ ಮನಸ್ಸನ್ನು ಸೆಳೆದಿತ್ತು, ಪೋರ್ತುಗೀಜರೂ ಡಚ್ಚರೂ ಲಾಭ ಪಡೆದುದನ್ನು ಅವರು ಕೇಳಿದ್ದರು, ಭಾರತದಲ್ಲಿ ತಾವೂ ಒಂದು ವ್ಯಾಪಾರಿ ಕಂಪನಿಯನ್ನು ಸ್ಥಾಪಿಸಿದರು (೧೬೬೪) ವ್ಯಾಪಾರವೂ ಒಳ್ಳೇ ಭರದಿಂದ ಸಾಗಿತು ತುಸು ಕಾಲದಲ್ಲಿಯೇ ಸುರತ, ಮಚ್ಛಲಿಪಟ್ಟಣ, ಪಾಂಡಿಚೆರಿಗಳಲ್ಲಿ ವಖಾರಗಳನ್ನು ಸ್ಥಾಪಿಸಿದರು ಮುಂದೆ ಫ್ರಾನ್ಸಿಸ್ ಮಾರ್ಟಿನ್ ಎಂಬವನು ಅಧಿಕಾರಿಯಾಗಿ ಬಂದನು, ಇಲ್ಲಿಯ ಅರಸರೊಂದಿಗೆ ಗೆಳೆತನವನ್ನು ಬೆಳೆಸಿ ಚಂದ್ರನಗರ, ಕಾಲಿಕತ್, ಬಾಲಾಸೋರ, ಪಾಟಣಾ, ಡಾಕಾ, ಕಾಶೀಮಬಝಾರ, ಯಾನಾನ, ಕಾರಿಕಲ್ಲುಗಳಲ್ಲಿ ಅಂಗಡಿಯನ್ನು ಸ್ಥಾಪಿಸಿದನು ಇದರಿಂದ ಬ್ರಿಟಿಶರಿಗೂ ಫ್ರೆಂಚರಿಗೂ ವ್ಯಾಪಾರದ ಏರಾಟ ನಡೆಯಿತು ಕ್ಲೈವ್ ಬಂದ ಕಾಲಕ್ಕೆ ಇಲ್ಲಿ ಫ್ರೆಂಚರು ಪ್ರಗತಿಪಥದಲ್ಲಿದ್ದರು, ಅವರೂ ವ್ಯಾಪಾರವನ್ನು ಬೆಳೆಸಿದ್ದರು, ರಾಜ್ಯಕಟ್ಟುವ ಸಿದ್ಧತೆಯನ್ನು ನಡೆಸಿದ್ದರು, ಬ್ರಿಟಿಶರನ್ನು ಬಗ್ಗುಬಡಿಯುವದಕ್ಕೆ ಪ್ರಯತ್ನಿಸುತ್ತಿದ್ದರು

(೨) **ಫ್ರೆಂಚರ ರಾಜ್ಯಸ್ಥಾಪನೆ** – ಡ್ಯೂಮಾಸ್ ಎಂಬ ಫ್ರೆಂಚ ಮುತ್ಸದ್ದಿಯು ರಾಜ್ಯವನ್ನು ಸ್ಥಾಪಿಸುವ ಆಸೆಯಿಂದಲೇ ಭಾರತಕ್ಕೆ ಬಂದನು ಅವನು ಅರ್ಕಾಡಿನ ನವಾಬ ದೋಸ್ತ ಅಲಿಯೊಡನೆ ಸ್ನೇಹವನ್ನು ಸಂಪಾದಿಸಿದನು ಅಯ್ದುನೂರು ಹಿಂದುಗಳನ್ನು ಕೂಡಿಸಿ ಶಿಕ್ಷಣ ಕೊಟ್ಟು ಸೈನ್ಯವನ್ನು ಸಿದ್ಧಗೊಳಿಸಿದನು ದಿಲ್ಲಿಯ ಬಾದಶಹನು ಡ್ಯೂಮಾಸ್‌ನಿಗೆ ನವಾಬ ಎಂಬ ಬಿರುದನ್ನು ಕೊಟ್ಟು, ಕಾರಿಕಲ್ ಬಂದರದ ಸ್ವಾಮಿತ್ವವನ್ನು ಒಪ್ಪಿಸಿದನು ಇದನ್ನೆಲ್ಲ ಕಂಡು ಬ್ರಿಟಿಶರ ಕಣ್ಣು ಕೆಂಪಗಾದುವು' ಫ್ರೆಂಚ ಬ್ರಿಟಿಶರಲ್ಲಿ ಸಂಪತ್ತು-ಸಾಮ್ರಾಜ್ಯಗಳ ವಿಷಯದಲ್ಲಿ ವೈಮನಸ್ಸು ಹುಟ್ಟಿತು

## ಅಭ್ಯಸನಗಳು

೧ ಭಾರತಕ್ಕೆ ಯಾವ ಯಾವ ಯುರೋಪಿಯನ್ನರು ಬಂದರು?

೨ ಕೆಳಗೆ ಕೊಟ್ಟ ವ್ಯಕ್ತಿಗಳು ಯಾವ ಸಂದರ್ಭಗಳಲ್ಲಿ ಭಾರತ-ಯುರೋಪಗಳ ಸಂಬಂಧವನ್ನು ಉಂಟುಮಾಡಿದರು?
ವಾಸ್ಕೊ-ಡಿ-ಗಾವಾ, ಅಲ್ಬುಕರ್ಕ, ಹೌಟ್‌ಮನ್, ಕ್ಲೈವ, ಹಾಕಿನ್ಸ, ಫ್ರಾನ್ಸಿಸ್ ಮಾರ್ಟಿನ್, ಡ್ಯೂಮಾಸ್

೩ ಡಚ್ಚರು ಹಾಗೂ ಇಂಗ್ಲಿಷರಲ್ಲಿ ಯಾಕೆ ಕಲಹವು ಹುಟ್ಟಿತು?

೪ ಭಾರತಕ್ಕೆ ಬಂದ ಯುರೋಪಿಯನ್ನರಲ್ಲಿ ಯಾವ ಗುಣಗಳನ್ನು ನೀವು ಮೆಚ್ಚುತ್ತೀರಿ? ಯಾಕ?

೫ ವಾಸ್ಕೊ-ಡಿ-ಗಾವಾ ಅಥವಾ ಅಲ್ಬುಕರ್ಕನು ತನ್ನ ಆತ್ಮಕಥೆಯನ್ನು ಹೇಳುವಂತೆ ಬಾಲಕರಿಂದ ಶಿಕ್ಷಕರು ಹೇಳಿಸಬೇಕು

---

# ೩. ಇಂಗ್ಲಿಷ್ ಮತ್ತು ಫ್ರೆಂಚ ಕಲಹಗಳು

**ಭಾರತದ ಆಗಿನ ಪರಿಸ್ಥಿತಿ**—ಹದಿನಾರನೇ ಶತಮಾನದಿಂದೀಚೆಗೆ ವಿದೇಶದ ವ್ಯಾಪಾರಿಗಳು ಭಾರತಕ್ಕೆ ಬರತೊಡಗಿದಾಗ, ಭಾರತದಲ್ಲಿ ಎಲ್ಲ ಕಡೆಗೂ ರಾಜಕೀಯ ಗೊಂದಲವು ತಲೆದೋರಿತ್ತು ಮೊಗಲ ಸಾಮ್ರಾಜ್ಯವು ಮುಳುಗುವ ಹಾದಿಯನ್ನು ಹಿಡಿದಿತ್ತು ಮರಾಠರು ದಿಲ್ಲಿಯ ಸಿಂಹಾಸನ ವನ್ನು ಸ್ವಾಧೀನಪಡಿಸಿಕೊಳ್ಳುವ ಸಾಹಸ ನಡೆಸಿದ್ದರು, ಆದರೆ ಅವರಿಗೆ ಶಕ್ತಿ ಸಾಲುವಂತಿರಲಿಲ್ಲ ನಿಜಾಮು, ಅರ್ಕಾಡಿನ ನವಾಬ ಮೊದಲಾದ ಸಣ್ಣ ಅರಸುಗಳು ಹೇಗಾದರೂ ತಿಂದುಂಡು ಸುಖದಿಂದ ಕಾಲಕಳೆಯುವ ಹವಣಿಕೆ ಯಲ್ಲಿದ್ದರು ಅಖಂಡ ಭಾರತದ ರಾಷ್ಟ್ರೀಯಭಾವನೆಯು ಯಾರಲ್ಲಿಯೂ ಇರಲಿಲ್ಲ ಈ ಪರಿಸ್ಥಿತಿಯು, ವಿದೇಶೀಯರಿಗೆ ಅನಾಯಾಸವಾಗಿಯೇ ಭಾರತ ವನ್ನು ಆಕ್ರಮಿಸಲು ಅನುಕೂಲವಾಯಿತು

**ಬ್ರಿಟಿಶ್ ಫ್ರೆಂಚರ ಮೇಲಾಟ**—ವ್ಯಾಪಾರಕ್ಕಾಗಿ ಮೊತ್ತಮೊದಲು ಪೋರ್ತುಗೀಜರೇ ಬಂದವರು ಅವರಿಗೆ ರಾಜ್ಯಕಟ್ಟುವ ಆಸೆ ಇದ್ದಿತು, ಆದರೆ, ಪೋರ್ತುಗಾಲದಂತಹ ಸಣ್ಣ ರಾಷ್ಟ್ರಕ್ಕೆ ಶಕ್ತಿ ಸಾಲಲಿಲ್ಲ ತರು ವಾಯ ಬಂದವರು ಹಾಲಂಡದ ಡಚ್ಚರು ಇವರೂ ವ್ಯಾಪಾರದ ಲಾಭ ಕ್ಕಷ್ಟೇ ಒಡೆಯರಾದರು! ಅಲ್ಲಿಂದ ಮುಂದೆ ತುಸು ಹೆಚ್ಚುಕಡಿಮೆ ಅಂತರ ದಿಂದ ಫ್ರೆಂಚ ಮತ್ತು ಬ್ರಿಟಿಶ್ ವ್ಯಾಪಾರಿಗಳು ಭಾರತದಲ್ಲಿ ಕಾಲಿಟ್ಟರು ಇವರಿಬ್ಬರಿಗೂ ಭಾರತದ ವ್ಯಾಪಾರವೂ ಬೇಕು, ಒಡೆತನವೂ ಬೇಕು, ಎಂದ ಮೇಲೆ ಒಬ್ಬರೊಬ್ಬರಲ್ಲಿ ಮೇಲಾಟ ಹುಟ್ಟುವದು ಸಹಜ ಅದ ರಲ್ಲಿಯೂ ಫ್ರೆಂಚರು ಮುತ್ಸದ್ದಿಗಳು, ಬ್ರಿಟಿಶರು ಸಾಹಸಿಗರು ಇಬ್ಬರಿಗೂ ತಮ್ಮ ಬಯಕೆಯನ್ನು ಪೂರ್ಣಮಾಡಿಕೊಳ್ಳಲು ಸಾಧ್ಯವಾಗುವಂತಿತ್ತು ಆದ್ದರಿಂದ ಭಾರತದಲ್ಲಿದ್ದ ಅನೈಕ್ಯದ ಉಪಯೋಗವನ್ನು ಇಬ್ಬರೂ ಮಾಡಿ ಕೊಂಡರು, ಒಬ್ಬೊಬ್ಬರು ಒಂದೊಂದು ಪಕ್ಷಕ್ಕೆ ಸೇರಿ ಒಬ್ಬರನ್ನೊಬ್ಬರು ಎದುರಿಸಿ ನಿಲ್ಲುತ್ತಿದ್ದರು

೧೮ನೆಯ ಶತಮಾನದ ಆರಂಭಕ್ಕೆ ಯುರೋಪಖಂಡದಲ್ಲಿ ಹತ್ತಾರು ಬ್ರಿಟಿಶ್ ಫ್ರೆಂಚ ಯುದ್ಧಗಳು ನಡೆದವು ಅದರ ಪ್ರತಿಕ್ರಿಯೆಯು ಭಾರತ ದಲ್ಲಿಯೂ ಈ ಎರಡು ಜನಾಂಗಗಳ ಮೇಲೆ ಆಗದೇ ಇರಲಿಲ್ಲ ಯುರೋಪ ಖಂಡದಲ್ಲಿ ಆಗಾಗ ಅವರವರಲ್ಲಿ ಒಪ್ಪಂದಗಳಾಗುತ್ತಿದ್ದರೂ ‘ಮಳೆ ನಿಂತರೂ ಮರದ ಹನಿ ನಿಲ್ಲಲಿಲ್ಲ’ ಎನ್ನುವಂತೆ, ಭಾರತದಲ್ಲಿ ಸಾಮ್ರಾಜ್ಯಸ್ಥಾಪನೆಯ ಸಲುವಾಗಿ ಬ್ರಿಟಿಶ್-ಫ್ರೆಂಚರ ಮೇಲಾಟವು ಬೆಳೆಯುತ್ತಲೇ ಇತ್ತು

**ಅರ್ಕಾಡಿನಲ್ಲಿ ಬ್ರಿಟಿಶ್-ಫ್ರೆಂಚರ ಪ್ರಥಮ ಯುದ್ಧ** –(೧೭೪೬-೧೭೪೮) ೧೭೪೬ರಿಂದ ೧೭೬೮ರ ವರೆಗೆ ಬ್ರಿಟಿಶ್-ಫ್ರೆಂಚರ ನಡುವೆ ಮೂರು ಯುದ್ಧಗಳಾದುವು ಇವುಗಳಲ್ಲಿ ಮೊದಲನೆಯ ಯುದ್ಧದ ಕಾರಣವೆಂದರೆ– ಯುರೋಪಖಂಡದಲ್ಲಿ ಆಸ್ಟ್ರಿಯಾ ಪಟ್ಟದ ಬಾಧ್ಯತೆಯ ಬಗೆಗೆ ಬ್ರಿಟಿಶ್-ಫ್ರೆಂಚರ ಕಾಳಗ ನಡೆಯಿತು ಅದರ ಬೇಗೆಯು ಭಾರತಕ್ಕೂ ಹಬ್ಬಿತು ಫ್ರೆಂಚರಲ್ಲಿ **ಡುಪ್ಲೆಯ** ಮುತ್ಸದ್ದಿತನ, **ಲಾಬೋರ್ಡೊನೆಯ** ಶೌರ್ಯ ಇವುಗಳಿಗೆ ಇಂಗ್ಲಿಷರು ಈಡಾಗಲಿಲ್ಲ ೧೭೪೬ರಲ್ಲಿ ಲಾಬೋರ್ಡೊನೆಯು ಡುಪ್ಲೆಯ ಸಲಹೆಯಂತೆ ಬ್ರಿಟಿಶರ ವಶದಲ್ಲಿದ್ದ ಮದ್ರಾಸವನ್ನು ವಶಪಡಿಸಿಕೊಂಡನು, ಅನೇಕ ಇಂಗ್ಲಿಷರನ್ನು ಸೆರೆಹಿಡಿದನು ಪಾಂಡಿಚೆರಿ, ಮದ್ರಾಸಗಳು ಈ ಮೊದಲು ಅರ್ಕಾಡಿನ ನವಾಬನಾದ ಅನ್ವರುದ್ದೀನನ ವಶದಲ್ಲಿದ್ದವು ಅವನು ಅವುಗಳನ್ನು ತಿರುಗಿ ಬೇಡಿದನು ಫ್ರೆಂಚರು ಕೊಡಲಿಲ್ಲ ಇಬ್ಬರಿಗೂ ಯುದ್ಧವಾಗಿ ನವಾಬನು ಸೋತನು ಇದನ್ನೇ ಕರ್ನಾಟಕದ ಮೊದಲನೆಯ ಯುದ್ಧವೆಂದು ಅನ್ನುವರು ಆ ಮೇಲೆ ಲಾಬೋರ್ಡೊನೆಯು ಇಂಗ್ಲಿಷರ **ಸೆಂಟ ಡೇವಿಡ್ ಕೋಟೆಯ** ಮೇಲೆ ದಾಳಿಮಾಡಿದನು ಅಷ್ಟರಲ್ಲಿ ಇಂಗ್ಲಿಷರಿಗೆ ಹೊಸ ಸಹಾಯಬಂದಿತು ಅವರು ಪಾಂಡಿಚೆರಿಯ ಮೇಲೆ ಏರಿಹೋದರು, ಅವರೂ ಯಶಸ್ವಿಯಾಗಲಿಲ್ಲ ಈ ಅಪಯಶಸ್ಸುಗಳು ಇಬ್ಬರನ್ನೂ ರೊಚ್ಚಿಗೆಬ್ಬಿಸಿದುವು, ಆದರೆ ಈ ಕಾಲಕ್ಕೆ ಯುರೋಪದಲ್ಲಿ ಬಡಿದಾಡುತ್ತಿದ್ದ ಫ್ರೆಂಚರೂ ಬ್ರಿಟಿಶರೂ ಒಪ್ಪಂದಮಾಡಿಕೊಂಡರು! ಆ ಕರಾರಿನಂತೆ ಭಾರತದಲ್ಲಿಯೂ ಯುದ್ಧವನ್ನು ಸಮಾಪ್ತಿಗೊಳಿಸಬೇಕಾಯಿತು. ಫ್ರೆಂಚರು ಮದ್ರಾಸನ್ನು ಇಂಗ್ಲಿಷರಿಗೆ ತಿರುಗಿ ಕೊಟ್ಟರು

**ಬ್ರಿಟಿಶ್-ಫ್ರೆಂಚರ ದ್ವಿತೀಯ ಯುದ್ಧ** (೧೭೪೯-೧೭೫೫) – **ಕಲಹಕ್ಕೆ ಕಾರಣ** – ಬ್ರಿಟಿಶ್-ಫ್ರೆಂಚರ ಮೊದಲನೆಯ ಯುದ್ಧವು ಮುಗಿಯುತ್ತಲೇ ಅರ್ಕಾಡಿನಲ್ಲಿ ಕಲಹದ ಚಿನ್ಹಗಳು ಮತ್ತೆ ಕಾಣಹತ್ತಿದವು. ೧೭೪೮ರಲ್ಲಿ ನಿಜಾಮ ಉಲ್ಮುಲ್ಕನು ತೀರಿಕೊಂಡನು ಆತನಿಗೆ ಗಾಝಿಉದ್ದೀನ, ನಾಸೀರಜಂಗ, ಸಲಾಬತಜಂಗ ಮುಂತಾದ ಆರು ಜನ ಮಕ್ಕಳಿದ್ದರು ಆದರೂ ತನ್ನ ಮಗಳ ಮಗ **ಮುಝಫರಜಂಗನೇ** ತನ್ನ ಸಿಂಹಾಸನಕ್ಕೆ ಬರಬೇಕೆಂದು ನಿಜಾಮನ ಇಚ್ಛೆಯಿತ್ತು, ಆದರೆ **ನಾಸೀರಜಂಗನೇ** ಪಟ್ಟವನ್ನು ಹಿಡಿದುಕೊಂಡನು. ಆದರಿಂದ ಮುಝಫರಜಂಗನು ಫ್ರೆಂಚರನ್ನು ಮೊರೆಹೊಕ್ಕನು

**ಅರ್ಕಾಡಿನಲ್ಲಿ:** – ನಿಜಾಮ ಉಲ್ಮುಲ್ಕನ ನಂಬಿಕೆಯ ಸರದಾರನಾದ **ಅನ್ವರುದ್ದೀನನು** ೧೭೪೯ರಲ್ಲಿ ತೀರಿಕೊಂಡನು. ಅವನ ಮಗ **ಮುಹಮ್ಮದ ಅಲಿಗೂ ಚಾಂದಾಸಾಹೇಬನಿಗೂ** ನವಾಬಪಟ್ಟದ ವಿಷಯವಾಗಿ ಜಗಳ

ಹುಟ್ಟಿತು ಚಾಂದಾಸಾಹೇಬನು (ಅನ್ವರುದ್ದೀನನಿಗಿಂತ) ಮೊದಲಿನ ನವಾಬನ ಅಳಿಯನು ಈತನು ಮರಾಠರ ಸೆರೆಯಲ್ಲಿ ಸಿಕ್ಕಿದ್ದನು ಡುಪ್ಲೆಯು ಏಳು ಲಕ್ಷ ರೂ ದಂಡತುಂಬಿ ಅವನನ್ನು ಬಿಡಿಸಿಕೊಂಡು ಬಂದಿದ್ದನು ಅದರಿಂದ ಡುಪ್ಲೆಗೂ ಚಾಂದಾಸಾಹೇಬನಿಗೂ ಒಳ್ಳೇ ಗೆಳೆತನವಿತ್ತು ಈಗ ನವಾಬನ ಪಟ್ಟದ ಸಲುವಾಗಿ ಚಾಂದಾಸಾಹೇಬನು ಫ್ರೆಂಚರನ್ನು ಮೊರೆಹೊಕ್ಕನು

**ಫ್ರೆಂಚರ ಮೇಲುಗೈ** — ಹೀಗೆ, ಭಾರತದ ಜನರು ಯುರೋಪೀಯರ ಸಹಾಯ ಕೋರಿ, ಅವರಿಗೆ ಶರಣಾಗತರಾಗುವದನ್ನು ನೋಡಿ, ಫ್ರೆಂಚರು ನಗುನಗುತ್ತ ಯುದ್ಧವನ್ನು ಸಾಗಿಸಿದರು ಮುಹಮ್ಮದ ಅಲಿಯು ಸೋತು ತ್ರಿಚನಾಪಳ್ಳಿಗೆ ಓಡಿಹೋದನು, ಚಾಂದಾಸಾಹೇಬನು ಅರ್ಕಾಡಿನ (ಕರ್ನಾಟಕದ) ನವಾಬನಾದನು ಚಾಂದಾಸಾಹೇಬನಿಂದ ಅರ್ಕಾಡಿನ ಕೆಲವು ಪ್ರದೇಶಗಳೂ ವಿಪುಲವಾದ ಕಾಣಿಕೆಯೂ ಫ್ರೆಂಚರಿಗೆ ಸಿಕ್ಕವು ಇತ್ತ, ಮುಝುಫರಜಂಗನೂ ಹೈದರಾಬಾದದ ನಿಜಾಮನಾದನು ಈತನು ಫ್ರೆಂಚರಿಗೆ ಉತ್ತರ ಸರಕಾರ ಪ್ರಾಂತವನ್ನು ಕೊಟ್ಟುದಲ್ಲದೆ, ಡುಪ್ಲೆಗೆ 'ಕರ್ನಾಟಕದ ಗವರ್ನರ' ಎಂಬ ಪದವಿಯನ್ನು ಕೊಟ್ಟನು

ಆ ಮೇಲೆ ಮುಝುಫರಜಂಗನನ್ನು ಪಠಾಣರು ಕೊಲೆಮಾಡಿದರು. ಕೂಡಲೇ ಫ್ರೆಂಚರು ಸಲಾಬತಜಂಗನನ್ನು ಪಟ್ಟಕ್ಕೆ ಕುಳ್ಳಿರಿಸಿದರು. ಇದರಿಂದ ಫ್ರೆಂಚರಿಗೆ ಎಷ್ಟೋ ಸೌಲಭ್ಯಗಳು ಸಿಕ್ಕವು ಹೀಗೆ, ಫ್ರೆಂಚರು ದಕ್ಷಿಣ ಭಾರತದಲ್ಲಿ ತಮ್ಮ ಒಡೆತನವನ್ನು ಸ್ಥಾಪಿಸಿದರು

**ಇಂಗ್ಲಿಷರು ಇದಿರಾದುದು** — ಫ್ರೆಂಚರ ಪ್ರಾಬಲ್ಯದಿಂದ ಮುಹಮ್ಮದ ಅಲಿಗೆ ನೆಲೆಸಿಕ್ಕದಂತಾಯಿತು ಅವನು ಫ್ರೆಂಚರ ಇದಿರಾಳಿಗಳಾದ ಇಂಗ್ಲಿಷರನ್ನು ಮೊರೆಹೊಕ್ಕನು ಈ ಸಂಧಿಯನ್ನೇ ಕಾಯುತ್ತಿದ್ದ ಕ್ಲೈವನು ಕಂಪನಿ ಸರಕಾರದ ಮನವೊಲಿಸಿ ಅವನಿಗ ಆಶ್ರಯವನ್ನು ಕೊಟ್ಟನು.

**ಕ್ಲೈವನ ಜಾಣತನ** — (೧೭೫೧) ಚಾಂದಾಸಾಹೇಬ ಮತ್ತು ಸಲಾಬತಜಂಗರಿಗೆ ಒಬ್ಬನೇ ವೈರಿಯಾಗಿದ್ದ ಮುಹಮ್ಮದಅಲಿಯನ್ನು ಹಣಿಯಬೇಕೆಂದು ಅವರು ತ್ರಿಚನಾಪಲ್ಲಿಯನ್ನು ಮುತ್ತಿದರು. ಈಹೊತ್ತಿಗೆ ಇಂಗ್ಲಿಷರು ಮುಹಮ್ಮದ ಅಲಿಯ ಸಹಾಯಕ್ಕೆ ತೋಫುಖಾನೆಯನ್ನು ಕಳಿಸಿದರು, ಆದರೆ ಅದು ಫ್ರೆಂಚರ ಕೈವಶವಾಯಿತು ಆಗ ಕ್ಲೈವನು ಮದ್ರಾಸದಲ್ಲಿ ಕಂಪನಿಯ ಕಾರಕೂನನಾಗಿದ್ದನು ತನ್ನ ಮೇಲ್ವಿಚಾರಕರಿಗೆ 'ಈಗ ನಾವು ಉಪಾಯವಾಗಿ ರಾಜಧಾನಿಯಾದ ಅರ್ಕಾಡನ್ನು ಮುತ್ತಿದರೆ ಚಾಂದಾಸಾಹೇಬನು ತಂತಾನೆ ಮುತ್ತಿಗೆಯನ್ನು ತೆಗೆಯುತ್ತಾನೆ' ಎಂದು ಸಲಹೆಕೊಟ್ಟನು. ಆದರೆ ಅಂತಹ ಮುತ್ತಿಗೆಯನ್ನು ಹಾಕುವ ವೀರಾಳು ಯಾರು? ಅದಕ್ಕಾಗಿ ಕಡೆಗೆ

ಕ್ಲೈವನೇ ಮುಂದಾದನು! ೨೦೦ ಇಂಗ್ಲಿಷ ಮತ್ತು ೩೦೦ ಹಿಂದೀ ಸೈನಿಕರನ್ನು ಸಂಗಡ ತಕ್ಕೊಂಡು ಕ್ಲೈವನು ಅರ್ಕಾಡನ್ನು ಮುತ್ತಿದನು ಚಾಂದಾ ಸಾಹೇಬನ ಮಗ ರಾಜಾಸಾಹೇಬನು ಇದಿರಾದನು ಅರ್ಕಾಡಿನ ದಂಡ ಯಾತ್ರೆಯು ಎರಡು ತಿಂಗಳು ಸಾಗಿತು, ಅದರಲ್ಲಿ ಕ್ಲೈವನು ಗೆದ್ದನು

**ಬ್ರಿಟಿಶ್-ಫ್ರೆಂಚರ ಪ್ರತ್ಯಕ್ಷ ಯುದ್ಧ** — ಆ ಮೇಲೆ ಮೇಜರ್ ಲಾರೆನ್ಸ ಮತ್ತು ಕ್ಲೈವ ಇಬ್ಬರೂ ಕೂಡಿ ತ್ರಿಚನಾಪಲ್ಲಿಯನ್ನು ಮುತ್ತಿದರು ಫ್ರೆಂಚರಿಗೂ ಇಂಗ್ಲಿಷರಿಗೂ ಪ್ರತ್ಯಕ್ಷ ಯುದ್ಧವಾಯಿತು ಇದರಲ್ಲಿ ಇಂಗ್ಲಿಷರು ಫ್ರೆಂಚರನ್ನು ಪೂರಾ ಸೋಲಿಸಿದರು! ಚಾಂದಾಸಾಹೇಬನು ಓಡಿಹೋದನು ಇಂಗ್ಲಿಷರು ಮುಹಮ್ಮದ ಅಲಿಯನ್ನು ಅರ್ಕಾಡಿನ ನವಾಬನನ್ನಾಗಿ ಮಾಡಿದರು ಇದನ್ನು ಕರ್ನಾಟಕದ ಎರಡನೆಯ ಯುದ್ಧವೆಂದು ಹೇಳುವರು

**ಡುಪ್ಲೆಯ ಕೊನೆಯ ಕಾಳಗ** — ಇಷ್ಟಾದರೂ ಡುಪ್ಲೆ ನಿರಾಶನಾಗಲಿಲ್ಲ ಮತ್ತೆ ಇಂಗ್ಲಿಷರೊಡನೆ ಕಾಳಗ ಹೂಡಿದನು ಅಷ್ಟರಲ್ಲಿ ಇಂಗ್ಲಿಷರಿಗೆ ಹೆಚ್ಚಿನ ಸಹಾಯದೊರೆತಿತು ಅದರಿಂದ ಫ್ರೆಂಚರು ಬಾಹೂರು ಚೆಂಗಲ್ಲು ಮೊದಲಾದ ಯುದ್ಧಗಳಲ್ಲಿ ಸೋತರು ಇವೇ ಡುಪ್ಲೆಯ ಕೊನೆಯ ಕಾಳಗಗಳು ಏಕೆಂದರೆ, ಇವನು ಫ್ರೆಂಚ ರಾಜ್ಯಸ್ಥಾಪನೆಯ ಸಲುವಾಗಿಯೇ ಇಷ್ಟೆಲ್ಲ ಮಾಡಿದನೆಂದು ಮೇಲ್ವಿಚಾರಕರು ಮೆಚ್ಚಲಿಲ್ಲ — ಸುಮ್ಮನೆ ಯುದ್ಧದ ಉಪದ್ವ್ಯಾಪಕ್ಕೆ ಬಿದ್ದು ವ್ಯಾಪಾರವನ್ನು ಹಾಳುಮಾಡಿದನು, ಬೊಕ್ಕಸವನ್ನು ಬರಿದುಮಾಡಿದನು, ಇಂಗ್ಲಿಷರನ್ನು ಮೈಮೇಲೆ ಹಾಕಿಕೊಂಡನು, ಎಂದು ಆರೋಪಹೊರಿಸಿದರು, ತಿರುಗಿ ಡುಪ್ಲೆಯನ್ನು ಫ್ರಾನ್ಸಕ್ಕೆ ಕರೆಸಿಕೊಂಡರು ಅಲ್ಲಿ ಅವನ ಬಾಳು ಬಹಳ ಗೋಳಿಗೀಡಾಯಿತು

ಡುಪ್ಲೆಯ ತರುವಾಯ ಬಂದ ಗವ್ಹರ್ನರನು ೧೭೫೫ರಲ್ಲಿ ಪಾಂಡಿಚೆರಿಯಲ್ಲಿ ಇಂಗ್ಲಿಷರೊಡನೆ ಒಪ್ಪಂದಮಾಡಿಕೊಂಡನು

**ಬ್ರಿಟಿಶ್-ಫ್ರೆಂಚರ ತೃತೀಯ ಯುದ್ಧ** — (೧೭೫೬-೧೭೬೩) ಬ್ರಿಟಿಶ್-ಫ್ರೆಂಚರ ನಡುವೆ ಒಪ್ಪಂದವಾಗಿದ್ದರೂ ಒಳಗಿಂದೊಳಗೇ ಹಗೆತನವು ಹೆಚ್ಚುತ್ತಲಿತ್ತು ೧೭೫೬ರಲ್ಲಿ ಯುರೋಪದೊಳಗೆ ಅವೆರಡೂ ರಾಜ್ಯಗಳಲ್ಲಿ ಹಲವಾರು ಕಾರಣಗಳಿಂದಾಗಿ ಕಾಳಗದ ಕಹಳೆಯನ್ನು ಊದಲಾಯಿತು. ಅದು ಒಂದೇ ಸವನೆ ಏಳು ವರುಷಗಳ ವರೆಗೆ ನಡೆಯಿತು ಇದೇ 'ಸಪ್ತವಾರ್ಷಿಕ ಯುದ್ಧ' ಎಂದು ಇತಿಹಾಸಪ್ರಸಿದ್ಧವಾಗಿದೆ

ಆ ಕಾಳಗದ ಕಹಳೆಯ ದನಿ ಭಾರತದಲ್ಲಿಯ ಬ್ರಿಟಿಶ್-ಫ್ರೆಂಚ್ ಜನಾಂಗಗಳ ಕಿವಿಗೂ ಕೇಳಿತು ಇಬ್ಬರೂ ಕತ್ತಿಗೆ ಕೈನೀಡಿದರು ಇನ್ನು

ಫ್ರೆಂಚರನ್ನು ಮುರಿದು ಮೂಲೆಗೊತ್ತಲೇಬೇಕೆಂದು ಬ್ರಿಟಿಶರು ಬದ್ಧಕಂಕಣ ರಾದರು, ಕೆಚ್ಚೆದೆಯ ಕ್ಲೈವನನ್ನು ಮದ್ರಾಸದ ಗವ್ಹರ್ನರನನ್ನಾಗಿ ಮಾಡಿದರು ಈ ಕಾಲಕ್ಕೆ ಫ್ರೆಂಚರಿಗಿಂತ ಇಂಗ್ಲಿಷರ ಹಡಗುಪಡೆ-ಸೈನ್ಯಸಲಕರಣೆಗಳು ದೊಡ್ಡ ಪ್ರಮಾಣದಲ್ಲಿದ್ದವು

ಇತ್ತ, ಫ್ರೆಂಚರು ತಮ್ಮ ಪರವಾಗಿ **ಕೌಂಟ-ಡಿ-ಲಾಲಿಯನ್ನು** ಪಾಂಡಿಚೆರಿಯ ಗವ್ಹರ್ನರ ಮತ್ತು ಸೇನಾಪತಿಯನ್ನು ಮಾಡಿದರು ಅವನು ಬಂದೊಡನೆಯೇ ನಿಜಾಮನ ದರಬಾರದಲ್ಲಿದ್ದ ಬುಸಿ ಎಂಬ ಫ್ರೆಂಚ ಸೇನಾ-ನಾಯಕನನ್ನು ಕರೆಸಿಕೊಂಡನು ಅವನ ಸಹಾಯದಿಂದ ಇಂಗ್ಲಿಷರ 'ಸೇಂಟ ಡೇವಿಡ್' ಕೋಟೆಯನ್ನು ಮುತ್ತಿದನು, ಆದರೆ, ಅವನಿಗೆ ಸಕಾಲಕ್ಕೆ ಹಣದ ಬೆಂಬಲ ದೊರೆಯಲಿಲ್ಲ, ಅದರಿಂದ ಅವನು ಸೋತು ಪಾಂಡಿಚೆರಿಗೆ ಓಡಿಹೋದನು

**ಉತ್ತರ ಸರಕಾರವು ಕೈಬಿಟ್ಟಿತು** — ಲಾಲಿಯು ಶೂರನು, ಆದರೆ, ಮುತ್ಸದ್ದಿಯಲ್ಲ ಅಲ್ಲದೆ, ಬಲು ದುಡುಕುವವನು ಬುಸಿಯನ್ನು ನಿಜಾಮ ಸರಕಾರದಿಂದ ಕರೆಸಿಕೊಂಡುದು ಅವನ ದುಡುಕುಬುದ್ಧಿಯಿಂದಾದ ರಾಜಕೀಯ ತಪ್ಪು ಇದರಿಂದ ನಿಜಾಮನಲ್ಲಿ ಫ್ರೆಂಚರ ವರ್ಚಸ್ಸು ಕಡಿಮೆಯಾಯಿತು, ಇಂಗ್ಲಿಷರಿಗೆ ಅಲ್ಲಿ ಕಾಲುಚಾಚಲು ಅನುವಾಯಿತು ಈ ಹೊತ್ತಿಗೆ ಸಲಾಬತಜಂಗನು ಲಾಲಿಯ ಸಹಾಯವನ್ನು ಕೇಳಿದನು ಅದು ದೊರೆಯಲಿಲ್ಲ, ಅದರಿಂದ ನಿಜಾಮನು ಇಂಗ್ಲಿಷರ ಮೊರೆಹೊಕ್ಕನು ಅವರು 'ಉತ್ತರ ಸರಕಾರವನ್ನು ತಮಗೆ ಒಪ್ಪಿಸಬೇಕು' ಎಂಬ ಕರಾರಿನಿಂದ ಅವನಿಗೆ ಆಶ್ರಯ ಕೊಟ್ಟರು ತಮ್ಮ ವಿಪತ್ಕಾಲಕ್ಕೆ ಯಾರು ನೆರವಾಗುತ್ತಾರೋ ಅವರು ಇಂಗ್ಲಿಷರಿರಲಿ, ಫ್ರೆಂಚರಿರಲಿ, ಅವರಲ್ಲಿ ತಮ್ಮನ್ನು ರಕ್ಷಿಸುವಷ್ಟು ಸೈನ್ಯವಿದ್ದರೆ ಸಾಕು, ಅವರಿಗೆ ಶರಣುಹೋಗುವುದು, ಇದೊಂದೇ ಆಗಿನ ಅರಸರ ರೀತಿಯಾಗಿತ್ತು ಕರ್ನಲ್ ಫೋರ್ಡನೆಂಬ ಇಂಗ್ಲಿಷ ಸರದಾರನು ಫ್ರೆಂಚರನ್ನು ಹೊರದೂಡಿ ಉತ್ತರ ಸರಕಾರ ಪ್ರಾಂತವನ್ನು ಪೂರಾ ಕೈವಶ ಮಾಡಿಕೊಂಡನು ಅಲ್ಲಿಂದಲೇ ಫ್ರೆಂಚರ ಅಳಿಗಾಲಕ್ಕೆ ಆರಂಭವಾಯಿತು

**ವಾಂಡಿವಾಶ ಕದನ** —(೧೭೬೧) ಆ ಮೇಲೆ ಲಾಲಿಯು ಮದ್ರಾಸವನ್ನು ಮತ್ತೆ ಮುತ್ತಿದನು ಈ ಯುದ್ಧದಲ್ಲಿ **ಸರ್ ಆಯರ ಕೂಟ** ಎಂಬ ಪ್ರಬಲ ಸೇನಾಪತಿಯು ಬ್ರಿಟಿಶ ಸೈನ್ಯದ ಮುಖ್ಯಸ್ಥನಾಗಿದ್ದನು ಸೈನಿಕರೂ ಸರಕಾರದವರೂ ಅವನಲ್ಲಿ ತುಂಬಾ ನಂಬಿಗೆಯಿಟ್ಟಿದ್ದರು ಆದರೆ ಲಾಲಿಯ ಸೊಕ್ಕಿನ ನಡತೆಯಿಂದ ಸ್ವತಃ ಬುಸಿಯೇ ಅವನಿಗೆ ಸಹಾಯಮಾಡಲಿಲ್ಲ ಲಾಲಿಗೂ ಕೂಟನಿಗೂ ವಾಂಡಿವಾಶದ ಹತ್ತಿರ ಕದನವಾಯಿತು ಲಾಲಿಯು ತಡವಿಲ್ಲದೆ

ಸೋತು ಪಾಂಡಿಚೆರಿಗೆ ಓಡಿದನು, ಬುಸಿಯು ಸೆರೆಯಾಳಾದನು ಆ ಮೇಲೆ ಇಂಗ್ಲಿಷರು ಫ್ರೆಂಚರ ಪಾಂಡಿಚೆರಿ, ಕಾರಿಕಲ್, ದೇವಿಕೋಟೆ, ಮಾಹಿ ರಾಜ್ಯಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು ಇದು ಕರ್ನಾಟಕದ ಮೂರನೆಯ ಯುದ್ಧ

೧೭೬೩ರಲ್ಲಿ ಸಪ್ತವಾರ್ಷಿಕ ಯುದ್ಧವೂ ಯುರೋಪದಲ್ಲಿ ನಿಂತಿತು ಫ್ರೆಂಚ-ಇಂಗ್ಲಿಷರಲ್ಲಿ ಒಪ್ಪಂದವಾಯಿತು ಇದರಿಂದ ಫ್ರೆಂಚರಿಗೆ ಭಾರತದಲ್ಲಿ ಚಂದ್ರನಗರ, ಪಾಂಡಿಚೆರಿ, ಕಾರಿಕಲ್ ಇವಿಷ್ಟೇ ಮರಳಿ ದೊರೆತವು ಇವು ಕೂಡ ಈಗ ಸ್ವತಂತ್ರಭಾರತದಲ್ಲಿ ಸೇರಿವೆ

**ಫ್ರೆಂಚರ ಪರಾಭವವಾಯಿತೇಕೆ?** — ಭಾರತದಲ್ಲಿ ಫ್ರೆಂಚರ ಈ ಪರಾಭವಕ್ಕೆ ಸಾಮಾನ್ಯವಾಗಿ ಕೆಲವು ರಾಜಕೀಯ ಕಾರಣಗಳನ್ನು ಹೇಳಬಹುದು (೧) ಇಂಗ್ಲಿಷರು ಸಮೃದ್ಧ ಪ್ರದೇಶದಲ್ಲಿ ಕುಳಿತು ಫ್ರೆಂಚರನ್ನು ಹೊಡೆದೋಡಿಸುವ ಒಂದೇ ವಿಚಾರವುಳ್ಳವರಾಗಿದ್ದರು ಅದನ್ನೇ ದಿನದಿನಕ್ಕೆ ಬಲಪಡಿಸ ಹತ್ತಿದರು, ಆದರೆ, ಫ್ರೆಂಚರು ಒಳನಾಡಿನ ಅರಸರ ಜಗಳದಲ್ಲಿ ಕೈಹಾಕಿದರು ಇದರಲ್ಲಿಯೇ ಅವರ ಸೈನ್ಯಶಕ್ತಿ ಕುಂದಿತು ಮೂಲ ಉದ್ದೇಶವು ದೂರದಲ್ಲಿಯೇ ಉಳಿಯಿತು (೨) ಫ್ರೆಂಚ ಸರಕಾರವು ಡುಪ್ಲೆಯಂತಹ ಬುದ್ಧಿವಂತ, ಕರ್ತವ್ಯದಕ್ಷ, ಸ್ವಾರ್ಥತ್ಯಾಗಿಯ ಗುಣವನ್ನು ಗೌರವಿಸಲಿಲ್ಲ, ಅವನಿಗೆ ಸಕಾಲಕ್ಕೆ ಸಹಾಯಮಾಡಲಿಲ್ಲ (೩) ಲಾಲಿಯಂತಹ ಚಂಚಲವೃತ್ತಿಯ ಅಧಿಕಾರಿಯ ಆಯ್ಕೆಮಾಡಿದುದು, ಇದರಿಂದ ಸರಿಯಾಗಿ ಸಿದ್ಧತೆಯಿಲ್ಲದೆ ಕಾರ್ಯಕ್ಕೆ ಕೈಹಾಕಿ ಅಪಜಯವನ್ನು ಪಡೆದಂತಾಯಿತು (೪) ಫ್ರೆಂಚ ಅಧಿಕಾರಿಗಳಲ್ಲಿ ಒಕ್ಕಟ್ಟಿರಲಿಲ್ಲ ಅದರಿಂದ ಯಾವ ನಿರ್ಣಯವೂ ಹೊತ್ತಿಗೆ ಸರಿಯಾಗಿ ಆಗುತ್ತಿರಲಿಲ್ಲ (೫) ಫ್ರೆಂಚರ ಹಡಗುಪಡೆಯು ಸಾಕಷ್ಟು ಬಲವಾಗಿರಲಿಲ್ಲ ಅದರಿಂದ, ಬ್ರಿಟಿಶರ ಬಲವಾದ ನಾವಿಕ ಸೈನ್ಯದ ಮುಂದೆ ಅವರ ಆಟವು ನಡೆಯಲಿಲ್ಲ (೬) ಫ್ರೆಂಚ್ ಸರಕಾರದ ಲಕ್ಷ್ಯವೆಲ್ಲ ಯುರೋಪದ ರಾಜಕಾರಣದ ಕಡೆಗೇ ಇತ್ತು ಬ್ರಿಟಿಶರ ದೇಶವು ಒಂದು ದ್ವೀಪವಾಗಿದ್ದುದರಿಂದ ಅವರಿಗೆ ಅದರ ರಕ್ಷಣೆಯು ಒಂದು ದೊಡ್ಡ ಸಮಸ್ಯೆಯಾಗಿರಲಿಲ್ಲ, ಆದರೆ, ಫ್ರೆಂಚರ ದೇಶವನ್ನು ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ಶತ್ರುಗಳು ಆಕ್ರಮಣಮಾಡಬಹುದಾಗಿತ್ತು, ಆದ್ದರಿಂದ ಫ್ರೆಂಚರ ಲಕ್ಷ್ಯವೆಲ್ಲ ತಾಯಿನಾಡನ್ನು ಉಳಿಸುವುದರಲ್ಲಿಯೇ ಕೇಂದ್ರೀಕೃತವಾಗಿತ್ತು ಈ ಮೂಲಕ ಕಂಪನಿಯ ಏಳ್ಗೆಯ ಕಡೆಗೆ ಅವರು ಸರಿಯಾಗಿ ಲಕ್ಷ್ಯ ಪೂರಯಿಸಲಿಲ್ಲ (೭) ಭಾರತದಲ್ಲಿಯ ಫ್ರೆಂಚ್ ಅಧಿಕಾರಿಗಳು ವ್ಯಾಪಾರವನ್ನು ದುರ್ಲಕ್ಷಿಸಿ ರಾಜ್ಯಸ್ಥಾಪನೆಯ ಕಡೆಗೇ ಪೂರಾ ಲಕ್ಷ್ಯವನ್ನು

ಪೂರಯಿಸಿದರು ಅದರಿಂದ, ಭಂಡವಲು ಬರಿದಾಗಹತ್ತಿತ್ತು ರಾಜಕೀಯ ಚಟುವಟಿಕೆಗಳಿಗೆ ಹಣದ ಪೂರೈಕೆಯಾಗಲಿಲ್ಲ

ಈ ಎಲ್ಲ ಪ್ರಮುಖ ಕಾರಣಗಳಿಂದಾಗಿ ಫ್ರೆಂಚರ ಪರಾಭವವಾಯಿತು

**ಡುಪ್ಲೆ** – ಈತನು ಒಬ್ಬ ಫ್ರೆಂಚ್ ವ್ಯಾಪಾರಸ್ಥನ ಮಗನು ಕುಶಾಗ್ರ ಬುದ್ಧಿಯವನೂ ಮುತ್ಸದ್ದಿಯೂ ಆಗಿದ್ದುದರಿಂದ ಭಾರತದಲ್ಲಿ ಫ್ರೆಂಚ್ ವಸಾಹತುಗಳಾದ ಪಾಂಡಿಚೇರಿ, ಚಂದ್ರನಗರಗಳ ಗವರ್ನರನಾಗಿ ಕ್ರಿ ಶ ೧೭೪೧ರಲ್ಲಿ ನೇಮಿಸಲ್ಪಟ್ಟನು ಇವನ ಜಾಣ್ಮೆಯಿಂದ ಭಾರತದಲ್ಲಿ ಫ್ರೆಂಚ್ ವ್ಯಾಪಾರವು ಚೆನ್ನಾಗಿ ಬಲಿಯಿತು ಈತನು ಭಾರತದಲ್ಲಿ ಹಲವು ವರ್ಷಗಳ ಕಾಲ ಇದ್ದುದರಿಂದ, ಆಗಿನ ಕಾಲದ ಉಳಿದ ಯಾವ ಯುರೋಪಿಯನ್ನನಿಗಿಂತಲೂ ಈತನಿಗೆ ಭಾರತದ ಸ್ಥಿತಿಯ ಜ್ಞಾನ ಚೆನ್ನಾಗಿದ್ದಿತು ಇವನು ಮಹತ್ವಾಕಾಂಕ್ಷಿ ಭಾರತದಲ್ಲಿ ವ್ಯಾಪಾರಕ್ಕಾಗಿ ಬಂದ ಉಳಿದ ಯುರೋಪಿಯರನ್ನೆಲ್ಲ ಹೊರಗಟ್ಟಿ, ವ್ಯಾಪಾರದ ಲಾಭವನ್ನೆಲ್ಲ ಫ್ರೆಂಚರೇ ಅನುಭವಿಸುವಂತಾಗಬೇಕೆಂದು ಇವನ ಹವ್ಯಾಸ, ಇಷ್ಟೇ ಅಲ್ಲ, ದಕ್ಷಿಣ ಭಾರತವನ್ನೆಲ್ಲ ತನ್ನ ಅಂಕಿತದಲ್ಲಿಟ್ಟುಕೊಂಡು ಆಳಬೇಕೆಂಬ ಹಿರಿ ಆಶೆಯೂ ಇವನಲ್ಲಿ ಮೂಡಿತ್ತು



ಡುಪ್ಲೆಯು

ಇದಕ್ಕನುಸಾರವಾಗಿ ದಕ್ಷಿಣದ ರಾಜಕಾರಣದಲ್ಲಿ ಡುಪ್ಲೆಯು ಕೈಹಾಕಿದನು ಕ್ರಿ ಶ ೧೭೪೭ರಲ್ಲಿ ಲಾಬೋರ್ಡೊನೆ ಎಂಬ ನಾಯಕನನ್ನು ಸೈನ್ಯದೊಂದಿಗೆ ಕಳುಹಿಸಿ, ಇಂಗ್ಲಿಷರ ವಶದಲ್ಲಿದ್ದ ಮದ್ರಾಸವನ್ನು ಗೆದ್ದುಕೊಂಡನು ಕ್ರಿ ಶ ೧೭೪೮ರಲ್ಲಿ ನಿಜಾಮನು ಸತ್ತ ಕೂಡಲೆ ಅಲ್ಲಿಯ ಪಟ್ಟಕ್ಕಾಗಿ ಜಗಳಗಳೆದ್ದವು ಮುಝುಫರಜಂಗನು ಡುಪ್ಲೆಯ ಸಹಾಯ ಕೇಳಿದನು ಕೂಡಲೆ ಡುಪ್ಲೆಯು ಅವನ ಪ್ರತಿಸ್ಪರ್ಧಿಯಾದ ನಾಸಿರಜಂಗನನ್ನು ಸೋಲಿಸಿ, ಮುಝುಫರಜಂಗನನ್ನು ಪಟ್ಟಕ್ಕೆ ಕೂಡ್ರಿಸಿದನು ಅದರಂತೆಯೇ ಅರ್ಕಾಡಿನ ನವಾಬನು ಕ್ರಿ ಶ ೧೭೪೯ರಲ್ಲಿ ತೀರಿಕೊಂಡ ಕೂಡಲೆ ಚಾಂದಾಸಾಹೇಬ ಮತ್ತು ಮುಹಮ್ಮದ ಅಲಿ ಇವರು ಪಟ್ಟಕ್ಕಾಗಿ ಜಗಳಾಡಹತ್ತಿದರು ಡುಪ್ಲೆಯು ಚಾಂದಾಸಾಹೇಬನನ್ನು ಪಟ್ಟಕ್ಕೆ ಕೂಡ್ರಿಸಿ, ಮುಹಮ್ಮದ ಅಲಿಯನ್ನು ಓಡಿಸಿದನು ಇದೆಲ್ಲ ಸಾಧ್ಯವಾಗಲಿಕ್ಕೆ ೪೦೦೦ ಹಿಂದೀ ಸೈನಿಕರಿಗೆ ಫ್ರೆಂಚ್

ಅಧಿಕಾರಿಗಳಿಂದ ಯುರೋಪಿಯನ್ ಪದ್ಧತಿಯಂತೆ ಸೈನಿಕ ಶಿಕ್ಷಣ ಕೊಡಿಸಿ ತಯಾರಿಸಿದ್ದನು, ಹೀಗಾಗಿ ದಕ್ಷಿಣದಲ್ಲೆಲ್ಲ ಡುಪ್ಲೆಯ ಪ್ರಭಾವವು ಬೆಳೆಯಿತು ಅವನಿಗೆ ನವಾಬನು "ಕರ್ನಾಟಕದ ಗವರ್ನರ" ಎಂಬ ಬಿರುದನ್ನು ಕೊಟ್ಟನು ಆದರೆ ಡುಪ್ಲೆಯು ದುರ್ದೈವಿ ಕೈಕೆಳಗಿನ ಫ್ರೆಂಚ್ ಅಧಿಕಾರಿಗಳು ಅವನೊಡನೆ ಚೆನ್ನಾಗಿ ಸಹಕರಿಸಲಿಲ್ಲ, ಇಷ್ಟೆಲ್ಲ ಫ್ರೆಂಚರ ಸತ್ತೆಯನ್ನು ಬೆಳಿಸಿದ ಅವನಿಗೆ ಸರಿಯಾಗಿ ಹಣದ ಸಹಾಯವನ್ನಾಗಲಿ, ಸೈನ್ಯ ಸಹಾಯವನ್ನಾಗಲಿ ಫ್ರೆಂಚ್ ಸರಕಾರವು ಪೂರಯಿಸಲಿಲ್ಲ ಅವನ ಕಾರ್ಯದ ಮಹತ್ತ್ವವನ್ನು ಅವರು ಅರಿತುಕೊಳ್ಳಲಿಲ್ಲ, ಅಂತೆಯೇ ಮುಂದೆ ಇಂಗ್ಲಿಷರ ರಾಬರ್ಟ ಕ್ಲೈವನು ಡುಪ್ಲೆಯ ಸದ್ದನ್ನಡಗಿಸಿದನು ಡುಪ್ಲೆಯು ಅನಾವಶ್ಯಕವಾಗಿ ರಾಜಕಾರಣದಲ್ಲಿ ಕೈಹಾಕಿ ಯುದ್ಧ ಮಾಡಿ ಬೊಕ್ಕಸವನ್ನು ಬರಿದು ಮಾಡಿದ ನೆಂದು ಫ್ರೆಂಚ್ ಸರಕಾರವು ಆರೋಪವನ್ನು ಹೊರಿಸಿ, ಅವನನ್ನು ಹಿಂದಕ್ಕೆ ಕರೆಸಿಕೊಂಡಿತು ಕೊನೆಗೆ ಕೈಯಲ್ಲಿದ್ದುದನ್ನೆಲ್ಲ ಕಳೆದುಕೊಂಡು, ಅತ್ಯಂತ ಬಡತನದಿಂದ ಕಾಲಕಳೆದು ಅವನು ಕ್ರಿ ಶ ೧೭೬೪ರಲ್ಲಿ ತೀರಿಕೊಂಡನು

## ಅಭ್ಯಸನಗಳು

೧ ಫ್ರೆಂಚರ ಪರಾಭವದ ಕಾರಣಗಳನ್ನು ಹೇಳಿರಿ

೨ ಭಾರತದಲ್ಲಿ ಫ್ರೆಂಚರ ರಾಜ್ಯಸ್ಥಾಪನೆಯ ದೃಷ್ಟಿಯಿಂದ ಕೆಳಗೆ ಕಾಣಿಸಿದ ವ್ಯಕ್ತಿಗಳ ಯಾವ ಯಾವ ಕೃತಿಗಳು ಯೋಗ್ಯವಾಗಿದ್ದವು? ಯಾವವು ಅಯೋಗ್ಯವಾಗಿದ್ದವು ? ಕೌಂಟ-ಡಿ-ಲಾಲಿ, ಬುಸಿ, ಲಾಬೋರ್ಡೊನೆ

೩ ಮುಝಫರಜಂಗ, ಸಲಾಬತಜಂಗ, ಮುಹಮ್ಮದ ಅಲಿ, ಚಾಂದಾಸಾಹೇಬ ಇವರ ನಡವಳಿಕೆಗಳು ಅವರ ಯಾವ ಗುಣಗಳನ್ನು ತೋರಿಸುತ್ತವೆ?

೪ ಇಂಗ್ಲಿಷ ಹಾಗು ಫ್ರೆಂಚರ ಜಗಳ ನಡೆದಾಗ ನೀವು ಅರ್ಕಾಡಿನ ನವಾಬ-ರಾಗಿದ್ದಿರೆಂದು ತಿಳಿಯಿರಿ ಆಗ ನೀವು ಅವರಿಬ್ಬರೊಡನೆ ಯಾವ ರೀತಿ-ಯಾಗಿ ನಡೆದುಕೊಳ್ಳುತ್ತಿದ್ದಿರಿ? ಯಾಕೆ?

೫ ಡುಪ್ಲೆಯ ವ್ಯಕ್ತಿತ್ವದ ಬಗಗೆ ಸಂಕ್ಷೇಪವಾಗಿ ಬರೆಯಿರಿ.

# ೪ ಇಂಗ್ಲಿಷರ ಆಳಿಕೆಯ ಆರಂಭ

**ನವಾಬ ಸಿರಾಜ ಉದ್ದೌಲ** —(೧೭೫೦) ಬಂಗಾಲದ ನವಾಬರಿಗೂ ದಿವಾಣರಿಗೂ ಇಂಗ್ಲಿಷರು ಆಗಾಗ ಬೆಲೆಯುಳ್ಳ ಕಾಣಿಕೆಗಳನ್ನು ಕೊಟ್ಟು, ಮರುಳುಮಾಡಿ, ಗೋವಿಂದಪುರ, ಕಾಲಿಘಾಟ (ಕಲಕತ್ತಾ), ಸುತನಟ್ಟಿ ಗ್ರಾಮಗಳನ್ನು ಕೊಂಡುಕೊಂಡು, ಬಂಗಾಲದ ಜಮೀನ-ದಾರರಾದರು (೧೬೯೮) ಮುಂದೆ ಹೆಚ್ಚಿನ ಸವಲತ್ತುಗಳನ್ನು ಪಡೆದುಕೊಂಡು, ಕಾಶೀಮಬಜಾರದಲ್ಲಿ ವಖಾರಹಾಕಿದರು ಬಂಗಾಲದ ಸುಭೇದಾರನಾದ ಅಲಿವರ್ದಿ ಖಾನನ ತರುವಾಯ ಅವನ ಮೊಮ್ಮಗನಾದ ಸಿರಾಜ ಉದ್ದೌಲನು ನವಾಬನಾದನು ಅಲಿವರ್ದಿಖಾನನು ಸಾಯುವಾಗ ಮೊಮ್ಮಗನಿಗೆ ಮಹತ್ತ್ವದ ಉಪದೇಶ ಮಾಡಿದನು "ಯುರೋಪಿಯನರು ಇಲ್ಲಿ ತಮ್ಮ ಆಡಳಿತವನ್ನು ಸ್ಥಾಪಿಸಬೇಕೆಂದಿದ್ದಾರೆ ಅದನ್ನು ಅಲಕ್ಷಿಸಬೇಡ ಮೊದಲು ಬ್ರಿಟಿಶರನ್ನು ಬೊಗ್ಗುಬಡಿ, ಆಮೇಲೆ ಉಳಿದವರೆಲ್ಲ ತಾವಾಗಿಯೇ ಶರಣಾಗತರಾಗುವರು ಬ್ರಿಟಿಶರಿಗೆ ಯಾವ ಬಗೆಯ ಅನುಕೂಲತೆಯನ್ನೂ ಮಾಡಿಕೊಡಬೇಡ ಅವರಿಗೆ ಅನುವು ಕೊಟ್ಟೆಯೆಂದರೆ ನಿನ್ನನ್ನು ನುಂಗಿದರೆಂದೇ ತಿಳಿ!"



ಸಿರಾಜಉದ್ದೌಲ

**ಸಿರಾಜ ಉದ್ದೌಲನ ಆಳಿಕೆ** — ಈ ಉಪದೇಶದಿಂದ ಸಿರಾಜನು ಎಚ್ಚರಗೊಂಡನು ಅದರಂತೆಯೇ ಇಂಗ್ಲಿಷರನ್ನು ಹಿಡಿತದಲ್ಲಿ ತರಬೇಕೆಂದು ಯತ್ನನಡೆಸಿದನು ಅಷ್ಟರಲ್ಲಿ ಈತನ ಅಣ್ಣನು ತೀರಿಕೊಂಡನು ಅವನ ಆಸ್ತಿಯ ಕಾರಭಾರವೆಲ್ಲ **ರಾಜವಲ್ಲಭ** ಎಂಬವನ ಕಡೆಗಿತ್ತು ಆತನು ಸರಿಯಾಗಿ ಲೆಕ್ಕವನ್ನು ಒಪ್ಪಿಸಲಿಲ್ಲವೆಂದು ಅವನನ್ನು ನವಾಬನು ಸೆರೆಯಲ್ಲಿಟ್ಟನು, ಆದರೆ, ಕಾರಭಾರಿಯ ಮಗ ಕಿಸನದಾಸನು ತಂದೆಯ ಸಂಪತ್ತನ್ನೆಲ್ಲ ತಕ್ಕೊಂಡು ಡಾಕಾದಲ್ಲಿ ಇಂಗ್ಲಿಷರ ಆಶ್ರಯದಲ್ಲಿ ನಿಂತನು ಅವನನ್ನು ತನಗೆ ಒಪ್ಪಿಸಬೇಕೆಂದು ಸಿರಾಜ ಉದ್ದೌಲನು ಇಂಗ್ಲಿಷರಿಗೆ ತಿಳಿಸಿದನು ಅವರು ಒಪ್ಪಲಿಲ್ಲ

ಈಹೊತ್ತಿಗೆ ಇಂಗ್ಲಿಷರು ಫ್ರೆಂಚರ ಹಾಗೂ ಮರಾಠರ ಬೆದರಿಕೆಯ

ನೆಪವನ್ನು ಮುಂದೆಮಾಡಿ 'ಫೋರ್ಟ ವಿಲಿಯಂ' ಕೋಟೆಯನ್ನು ಭದ್ರವಾಗಿ ಕಟ್ಟಿಸಿದರು ತನ್ನ ಅಪ್ಪಣೆಯಿಲ್ಲದ ಕಟ್ಟಿಸಿದುದರಿಂದ ಅದನ್ನು ಕೂಡಲೆ ಕೆಡವಬೇಕೆಂದು ನವಾಬನು ತನ್ನ ವಕೀಲನ ಸಂಗಡ ಹೇಳಿಕಳಿಸಿದನು ಇಂಗ್ಲಿಷರು ಈ ಮಾತನ್ನೂ ಕೇಳಲಿಲ್ಲ, ಇಷ್ಟೇ ಅಲ್ಲ, ವಕೀಲನಿಗೆ ಅಪಮಾನವನ್ನೂ ಮಾಡಿದರು

**ಇಂಗ್ಲಿಷರಿಗೆ ಇದಿರಾದುದು** —ಆಂಗ್ಲರ ಉನ್ಮತ್ತತೆಯಿಂದ ನವಾಬನ ಕಣ್ಣು ಕೆಂಪಗಾದವು ಆದರೂ ಅವನು ಒಳ್ಳೆಯ ಮಾತಿನಿಂದ ಸಂದರ್ಭವನ್ನು ಬಗೆಹರಿಸಲು ಪ್ರಯತ್ನಿಸಿದನು ಇಂಗ್ಲಿಷರು ತಮ್ಮ ಹಟವನ್ನೇ ನಡೆಸಿದರು. ಇಂಗ್ಲಿಷರ ಪಾರುಪತ್ಯಮಾಡಲು ಸಿರಾಜನು **ರಾಯದುರ್ಲಭ** ಎಂಬ ಸೇನಾಪತಿಯನ್ನು ದೊಡ್ಡ ದಂಡಿನೊಡನೆ ಕಳಿಸಿದನು ಅವನು ಇಂಗ್ಲಿಷರ ವಖಾರವನ್ನು ಮುತ್ತಿ ಮುಖ್ಯಸ್ಥನಾದ ವಾಟ್ಸನ್ನನನ್ನು ಕೈಸರೆಹಿಡಿದನು ಆ ಮೇಲೆ ನವಾಬನು ಸ್ವತಃ ಕಲಕತ್ತೆಯ ಮೇಲೆ ಏರಿಹೋದನು ಸಿರಾಜನ ಸುಸಜ್ಜಿತ ಸೈನ್ಯದಿದಿರಿಗೆ ಇಂಗ್ಲಿಷರು ತಡೆಯುವಂತಿರಲಿಲ್ಲ, ಬೇರೆ ಯಾರ ಬೆಂಬಲವೂ ಅವರಿಗೆ ಸಿಕ್ಕಲಿಲ್ಲ, ಇದರಿಂದ ಇಂಗ್ಲಿಷರಲ್ಲಿ ಕೆಲವರು ಓಡಿಹೋದರು, ಕೋಟೆಯಲ್ಲಿದ್ದವರು



ಹಳೆಯ ಕಲಕತ್ತೆಯ ನೋಟ

ಹಡಗುಹತ್ತಿ 'ಫೂಲ್ಟಾ' ಬಂದರಕ್ಕೆ ಬಂದರು ಉಳಿದವರನ್ನು ನವಾಬನು ಸೆರೆಹಿಡಿದನು, ಇಂಗ್ಲಿಷರ ಆಸ್ತಿಯನ್ನು ಜಪ್ತಮಾಡಿದನು ಈ ಹೊತ್ತಿಗೆ **ಅಡ್ಮಿರಲ್ ವಾಟ್ಸನ್** ಎಂಬ ನೌಕಾಸೇನಾಪತಿ ಮತ್ತು **ರಾಬರ್ಟ ಕ್ಲೈವ** ಮದ್ರಾಸದಲ್ಲಿದ್ದರು ಅವರಿಗೆ ಈ ಸುದ್ದಿ ತಿಳಿಯುತ್ತಲೇ ಸೈನ್ಯಸಹಿತ

ವಾಗಿ ಫೂಲ್ಟಾಕ್ಕೆ ಹೊರಟರು ಇತ್ತ ಕಲಕತ್ತೆಯಲ್ಲಿ ತನ್ನ ಪರವಾಗಿ ಮಾಣಿಕಚಂದ ಎಂಬ ಅಧಿಕಾರಿಯನ್ನು ಇಟ್ಟು ನವಾಬನು ಮುರ್ಶಿದಾಬಾದಕ್ಕೆ ಹಿಂದಿರುಗಿದನು

**ಕ್ಲೈವನು ಕಲಕತ್ತೆಯನ್ನು ಮರಳಿ ವಶವಡಿಸಿಕೊಂಡದ್ದು** — ಕ್ಲೈವನು ಕಲಕತ್ತೆಯ ಮೇಲೆ ಸಾಗಿದನು ಮಾಣಿಕಚಂದನು ಸೋತು ಓಡಿದನು. ಕ್ಲೈವನ ಕೈಗೆ ಕಲಕತ್ತೆ ಸಿಕ್ಕಿತು ಸಿರಾಜಉದ್ದೌಲನಿಗೆ ಈ ಸುದ್ದಿ ತಿಳಿಯಿತು ಅವನು ಉಪಾಯಗಾಣದೆ ಇಂಗ್ಲಿಷರೊಡನೆ ಒಪ್ಪಂದಕ್ಕೆ ಮುಂದಾದನು ಆದರೆ ಕ್ಲೈವನು ಸುಮ್ಮಸುಮ್ಮನೆ ಕಾಲವನ್ನು ತಳ್ಳಹತ್ತಿದನು ನವಾಬನು ಮತ್ತೆ ಕಲಕತ್ತೆಯ ಮೇಲೆ ಏರಿಹೋದನು 'ಡಂ ಡಂ' ಎಂಬಲ್ಲಿ ಯುದ್ಧವಾಯಿತು ನವಾಬನು ಸೋತು ಇಂಗ್ಲಿಷರ ಎಲ್ಲ ಕರಾರುಗಳಿಗೂ ಒಪ್ಪಿ ಒಪ್ಪಂದವನ್ನು ಮಾಡಿಕೊಂಡನು ಇಂಗ್ಲಿಷರು ಕಲಕತ್ತೆಯಲ್ಲಿ ಟಂಕಸಾಲೆಯನ್ನು ಹಾಕಿದರು

**ಚಂದ್ರನಗರದ ವಿಜಯ** — ಈ ತರುವಾಯ ಸಿರಾಜಉದ್ದೌಲನು ಇಂಗ್ಲಿಷರ ಆಮರಣ ವೈರಿಯಾದನು ಇಂಗ್ಲಿಷರೂ ಅವನನ್ನು ನಂಬಿರಲಿಲ್ಲ. ಒಬ್ಬರೊಬ್ಬರ ವಿರುದ್ಧ ಗುಪ್ತವಾಗಿ ಯುದ್ಧದ ಸಿದ್ಧತೆಯನ್ನು ನಡೆಸಿಯೇ ಇದ್ದರು. ಸಿರಾಜನು ಫ್ರೆಂಚರ ಸಹಾಯವನ್ನು ಪಡೆಯಬಯಸಿದನು ಈಹೊತ್ತಿಗೆ ಯುರೋಪದಲ್ಲಿ ಇಂಗ್ಲಿಷ-ಫ್ರೆಂಚ ಯುದ್ಧ ಆರಂಭವಾಗಿತ್ತು ಇದಿಷ್ಟೇ ಕ್ಲೈವನಿಗೆ ಸಾಕಾಯಿತು ಫ್ರೆಂಚರ ಚಂದ್ರನಗರವನ್ನು ಮುತ್ತಿ ಅದನ್ನು ವಶವಡಿಸಿಕೊಂಡನು ಇಷ್ಟಾದರೂ ಕ್ಲೈವನಿಗೆ ಸಿರಾಜನ ಹೆದರಿಕೆ ತಪ್ಪಿರಲಿಲ್ಲ ಅದರಿಂದ ಅವರವರಲ್ಲಿಯೇ ಒಡಕು ಹುಟ್ಟಿಸಬೇಕೆಂದು ಮೀರಜಾಫರನೆಂಬ ಮಂದಮತಿಯನ್ನು ಹುಡುಕಿದನು

**ಮೀರಜಾಫರನೊಡನೆ ಮಾತುಕತೆ** — ಮೀರಜಾಫರನು ಸಿರಾಜನ ಸೇನಾಪತಿ, ಅಲಿವರ್ದೀಖಾನನ ಬೀಗ ಸಾಧಿಸಿದರೆ ಬಂಗಾಲದ ಸುಭೇದಾರನಾಗಬೇಕೆಂದು ಅವನ ಇಚ್ಛೆ ಮೀರಜಾಫರನು ಸೈನಿಕರೆಲ್ಲರ ನಂಬಿಗೆಯನ್ನು ಪಡೆದಿದ್ದನು ಇದು ಕ್ಲೈವನಿಗೆ ತಿಳಿದಿತ್ತು ಅದಕ್ಕಾಗಿಯೇ ಅವನನ್ನು ಒಡಕೊಳ್ಳಲು ಪ್ರಯತ್ನಿಸಿದನು 'ಇಂಗ್ಲಿಷರು ನವಾಬನ ಮೇಲೆ ಏರಿಹೋದಾಗ ಮೀರಜಾಫರನು ಸೈನ್ಯಸಹಿತವಾಗಿ ಇಂಗ್ಲಿಷರಿಗೆ ಸಹಾಯ ಮಾಡಬೇಕು, ಈ ಉಪಕಾರಕ್ಕಾಗಿ ಅವರು ಮೀರಜಾಫರನನ್ನು ನವಾಬನನ್ನು ಮಾಡಬೇಕು' ಎಂದು ಕರಾರುಮಾಡಿಕೊಂಡರು. ಇದರಲ್ಲಿ **ಉಮೀಚಂದ**ನೆಂಬ ಸಾವುಕಾರನು ಮಧ್ಯಸ್ಥನಾಗಿದ್ದನು ಅವನಿಗೂ ಮುವ್ವತ್ತುಲಕ್ಷ ರೂಪಾಯಿ, ಸುಲಿಗೆಯಲ್ಲಿ ೧೦೦ಕ್ಕೆ ೫ರಂತೆ ಪಾಲು ಮತ್ತು

ಮುತ್ತು ಮಾಣಿಕಗಳಲ್ಲಿಯೂ ಭಾಗ-ಕೊಡುವುದಾಗಿ ಕ್ಲೈವನು ಕರಾರು ಮಾಡಿಕೊಂಡನು ಅದಕ್ಕಾಗಿ ಸುಳ್ಳು ಕರಾರುಪತ್ರವನ್ನು ಹುಟ್ಟಿಸಿ ಸುಳ್ಳು ಅಂಕಿತಗಳನ್ನು ಮಾಡಿಸಿದನು ಅಂತೂ ಉಮಿಾಚಂದನ ಮಧ್ಯಸ್ಥಿಕೆಯಿಂದ ಮಿಾರಜಾಫರನು ಇಂಗ್ಲಿಷರಿಗೆ ಸೈನ್ಯಸಹಾಯವನ್ನು ಕೊಡಲು ಒಪ್ಪಿದನು। ಯುದ್ಧದ ಸಿದ್ಧತೆ ನಡೆಯಿತು

**ಯುದ್ಧದ ಸಿದ್ಧತೆ** — ಹೀಗೆ ತನ್ನ ಸುತ್ತು ಕಾಳ್ಗಿಚ್ಚು ಉರಿದೇಳುತ್ತಿದ್ದಾಗ ಸಿರಾಜನು ಫ್ರೆಂಚ ಮತ್ತು ಡಚ್ಚರೊಡನೆ ಗುಪ್ತ ಪತ್ರವ್ಯವಹಾರದಲ್ಲಿ ತೊಡಗಿದ್ದನು, ಅವರ ಸೈನ್ಯಸಹಾಯವನ್ನು ಪಡೆಯುವ ಹವಣಿಕೆಯಲ್ಲಿದ್ದನು ಅಷ್ಟರಲ್ಲಿ, ದ್ರೋಹಿಯಾದ ಮಿಾರಜಾಫರನು ಯುದ್ಧಹೂಡಲು ನವಾಬನನ್ನು ಹುರಿದುಂಬಿಸಿದನು ನವಾಬನ ಸಿದ್ಧತೆಯು ಸಾಮಾನ್ಯವಾಗಿದ್ದರೂ ಸೇನಾಪತಿಯ ಮಾತಿಗೆ ಬಲಿಬಿದ್ದನು. ೧೭೫೭ರಲ್ಲಿ ಇಂಗ್ಲಿಷರೊಡನೆ ಜಗಳ ತೆಗೆದು, 'ಪ್ಲಾಸಿ' ಎಂಬಲ್ಲಿ ಬೀಡುಬಿಟ್ಟನು ಹುಗಳಿನದಿಯ ದಂಡೆಯ ಮೇಲೆ ಪೂರ್ವ ದಿಕ್ಕಿಗೆ ಅದೊಂದು ವಿಸ್ತಾರವಾದ ಬಯಲು, ಅಲ್ಲಿ ಪಲಾಶ ಎಂದರೆ ಮುತ್ತಲ ಗಿಡಗಳು ಹೆಚ್ಚಾಗಿರುವುದರಿಂದ ಅದಕ್ಕೆ ಪಲಾಶಿ (ಪ್ಲಾಶಿ) ಎಂಬ ಹೆಸರು ಬಂದಿದೆ ಇಂಗ್ಲಿಷರೂ ಸೈನ್ಯಸಹಿತವಾಗಿ ಅಲ್ಲಿ ಇದಿರಾದರು

**ಪ್ಲಾಸಿಯಲ್ಲಿ ಯುದ್ಧ** — ಮಿಾರಜಾಫರನ ಸೈನ್ಯದಲ್ಲಿ ಚಟುವಟಿಕೆಯೇ ಕಾಣಲಿಲ್ಲ, ಸಿರಾಜನು ದಿಗ್ಭ್ರಮೆಗೊಂಡನು ಅವನು ಮಿಾರಜಾಫರನ ಹತ್ತಿರ ಬಂದು, ತನ್ನ ಮುಂಡಾಸವನ್ನು ಅವನ ಕೈಯಲ್ಲಿ ಕೊಟ್ಟು — ನನ್ನನ್ನು ನೀನೇ ಕಾಯಬೇಕು — ಎಂದು ಹೇಳಿದುದೂ ಉಪಯೋಗವಾಗಲಿಲ್ಲ ಸಿರಾಜನು ಓಡಿಹೋದನು ಅವನನ್ನು ಮಿಾರಜಾಫರನ ಮಗನು ಕೊಲ್ಲಿಸಿದನು ಇಂಗ್ಲಿಷರಿಗೆ ಜಯವಾಯಿತು ಈ ಜಯದಿಂದ ಬ್ರಿಟಿಶರ ತಕ್ಕಡಿಯ ದಂಡಿಗೆಯೇ ರಾಜದಂಡವಾಗಿ ಮಾರ್ಪಟ್ಟಿತು! ಬಂಗಾಲದಲ್ಲಿ ಬ್ರಿಟಿಶ್ ಅರಸೊತ್ತಿಗೆಯು ಆರಂಭವಾಯಿತು (೧೭೫೭) ಬಂಗಾಲದ ನವಾಬನು ಇಂಗ್ಲಿಷರಿಗೆ ಅಂಕಿತನಾದನು. ಇಲ್ಲಿಯೂ ಭಾರತೀಯರ ಒಳಜಗಳವೇ ಪಾರತಂತ್ರ್ಯದ ವಿಷಬೀಜವನ್ನು ಬಿತ್ತಿತೆಂಬುದು ಸ್ಪಷ್ಟವಿದೆ, ಆಮೇಲೆ ಕರ್ನಲ್ ಫೋರ್ಡನು ಫ್ರೆಂಚರ ರಾಜ್ಯಗಳನ್ನು ಮುತ್ತಿ ವಶಪಡಿಸಿಕೊಂಡನು ಹೀಗಾಗಿ ಉತ್ತರಭಾಗದಲ್ಲೆಲ್ಲ ಬ್ರಿಟಿಶರ ಆಳ್ಕೆಗೆ ಆತಂಕವಿಲ್ಲದಾಯಿತು

**ಪ್ಲಾಸಿಯುದ್ಧದಿಂದ ಲಾಭ** — ಯುದ್ಧಾನಂತರ ಬ್ರಿಟಿಶರು ಮಿಾರಜಾಫರನನ್ನು ಬಂಗಾಲದ ನವಾಬನನ್ನು ಮಾಡಿದರು ಹೊಸ ನವಾಬನು ಆ ಸಮಾರಂಭದಲ್ಲಿ ಬಹು ಜನರಿಗೆ ಮೆಚ್ಚು ಕೊಟ್ಟನು ಕ್ಲೈವನ ಕರ್ತೃತ್ವಶಕ್ತಿಗಾಗಿ ಮೂವ್ವತ್ತುಲಕ್ಷ ರೂಪಾಯಿ ಮತ್ತು ಮೂರು ಲಕ್ಷದ ಜಹ

ಗೀರನ್ನು ಕೊಟ್ಟನು ಈ ಮೊದಲಿನ ಕರಾರಿನಂತೆ ಮೀರಜಾಫರನು ಕಂಪನಿಯವರಿಗೆ ಒಂದು ಕೋಟಿ ರೂಪಾಯಿಗಳನ್ನು ಕೊಡಬೇಕಾಗಿತ್ತು ಆದರೆ ಭಂಡಾರವೆಲ್ಲ ಬರಿಯದಾಗಿದ್ದುದರಿಂದ ಮುತ್ತು-ಮಾಣಿಕಗಳನ್ನು ಮಾರಿ ೯೫ ಲಕ್ಷ ರೂಪಾಯಿ ತುಂಬಿದನು ಉಳಿದ ಹಣಕ್ಕೆ ಕಲಕತ್ತೆಯ ನೆರೆಯ ೧೦ ಲಕ್ಷ ಉತ್ಪನ್ನದ ಸೀಮೆಯನ್ನು ಕೊಟ್ಟನು ಈ ಸಮಾರಂಭವು ಮುಗಿಯುವದರೊಳಗೆ ಬ್ರಿಟಿಶ ಅಧಿಕಾರಿಗಳಿಗೂ ಕಂಪನಿ ಸರಕಾರಕ್ಕೂ ಕೂಡಿ ಅಯ್ದಾರು ಕೋಟಿ ರೂಪಾಯಿ ದಕ್ಕಿದುವಂತೆ! ಅದರಲ್ಲಿ ಒಂದು ಕಾಸನ್ನು ಕೂಡ ಕ್ಲೈವನು ಉಮಾಚಂದನಿಗೆ ಕೊಡಲಿಲ್ಲ! ಇದರಲ್ಲಿ ಉಮಾಚಂದನ ದೇಶದ್ರೋಹಕ್ಕೆ ತಕ್ಕ ಶಾಸನವಾಯಿತಾದರೂ, ಕ್ಲೈವನ ಕುಟಿಲನೀತಿಯನ್ನು ಇತಿಹಾಸಕಾರರು ಎತ್ತಿತೋರಿಸುವಂತಾಯಿತು!

**ಮೀರಜಾಫರ ಮತ್ತು ಕ್ಲೈವ** — ಮೀರಜಾಫರನಿಗೆ ಇಂಗ್ಲಿಷರು ತನ್ನ ತಲೆಯ ಮೇಲೆ ಕುಳಿತುದು ಸೇರಲಿಲ್ಲ ಅದರಿಂದ ಡಚ್ಚರ ನೆರವನ್ನು ಪಡೆಯಲು ಗುಟ್ಟಾಗಿ ಪ್ರಯತ್ನಿಸಿದನು ಇದು ಕ್ಲೈವನಿಗೆ ತಿಳಿದ ಕೂಡಲೆ ಅವನು ಡಚ್ಚರ ಮೇಲೆ ಏರಿಹೋಗಿ, ಹುಗಳಿಯ ವಸತಿಯನ್ನು ವಶಮಾಡಿಕೊಂಡನು ಈಹೊತ್ತಿಗೆ ದಿಲ್ಲಿಯ ಶಹಾಆಲಮ ಬಾದಶಹನು, ಸುಜಾಉದ್ದೌಲ ಎಂಬ ಅಯೋಧ್ಯೆಯ ನವಾಬನನ್ನು, ಬಂಗಾಲವನ್ನು ಹಿಡಿದುಕೊಳ್ಳಬೇಕೆಂದು ಇಂಗ್ಲಿಷರ ಮೇಲೆ ಕಳಿಸಿದನು ಆದರೆ ಕ್ಲೈವನು ಮೀರಜಾಫರನಿಂದ ಬಾದಶಹನಿಗೆ ವಿಪುಲ ಹಣವನ್ನು ಕೊಡಿಸಿ, ಅವನನ್ನು ಸಮಾಧಾನಮಾಡಿದನು ಆ ಮೇಲೆ ಬ್ರಿಟಿಶ ಆಡಳಿತವನ್ನು ಬಂಗಾಲದಲ್ಲಿ ಬಹಿರಂಗವಾಗಿಯೇ ಸಾರಬೇಕೆಂದು ಕಂಪನಿ ಸರಕಾರಕ್ಕೆ ತಿಳಿಸಿದನು ಆ ಬಗೆಗೆ ಪ್ರಯತ್ನಿಸಲು ಇಂಗ್ಲಂಡಿಗೆ ಹೋದನು



ಮೀರಜಾಫರನು

**ಮೀರಕಾಸೀಮ** — ಕ್ಲೈವನ ಭಯತಪ್ಪಿದ ಕಂಪನಿ ಸರಕಾರದ ನೌಕರರು ರಾಜ್ಯದಲ್ಲಿ ಕೊಲೆಸುಲಿಗೆಗಳನ್ನು ನಡೆಸಿದರು ಇದರಿಂದ ನವಾಬನ ಪ್ರಜೆಗಳು ಹೌಹಾರಿದರು, ಆದರೆ, ಮೀರಜಾಫರನು ಇದನ್ನು ತಡೆಯಲು ಅಸಮರ್ಥನಾದನು ಜನರು ಮೀರಜಾಫರನನ್ನು ದೂರುತ್ತ ಆತನ ಅಳಿಯನಾದ **ಮೀರಕಾಸೀಮನನ್ನು** ನವಾಬನನ್ನಾಗಿ ಮಾಡಬೇಕೆಂದು ಬ್ರಿಟಿಶರನ್ನು

ಕೇಳಿಕೊಂಡರು ಮೀರಕಾಸೀಮನು ನವಾಬನಾದನು (೧೭೬೧) ಅದಕ್ಕೆ ಪ್ರತಿಫಲವಾಗಿ ಇಂಗ್ಲಿಷರಿಗೆ ಬರದ್ವಾನ, ಮಿದನಾಪುರ, ಚಿತಗಾಂಗ ಪರಗಣೆಗಳು ದೊರೆತವು



ಮೀರಕಾಸೀಮನು

**ಮೀರಕಾಸೀಮನ ಮಹತ್ವಾಕಾಂಕ್ಷೆ** — ಮೀರಕಾಸೀಮನು ಕೂಡ ಬಹಳ ಮಹತ್ವಾಕಾಂಕ್ಷಿ ಅವನಿಗೆ ಬ್ರಿಟಿಶರ ಆಳಾಗುವದು ಒಗ್ಗಲಿಲ್ಲ ಅದರಿಂದ ತನ್ನ ರಾಜಧಾನಿಯನ್ನು ಪಾಟಣಾದಿಂದ ಮೋಂಘೀರಕ್ಕೆ ಒಯ್ದನು ಅಲ್ಲಿ ಡಚ್ಚ ಮತ್ತು ಫ್ರೆಂಚರ ಸಹಾಯದಿಂದ ಸೈನ್ಯ-ಶಸ್ತ್ರಾಸ್ತ್ರಗಳನ್ನು ಬಲಪಡಿಸಿದನು, ಸುಂಕದ ನೆವದಿಂದ ಬ್ರಿಟಿಶರೊಡನೆ ಜಗಳವನ್ನು ತೆಗೆದನು

**ಪಾಟಣಾದ ಕೊಲೆ** — ನವಾಬನು ಇಂಗ್ಲಿಷರನ್ನು ಪಾಟಣಾದಲ್ಲಿ ಸೋಲಿಸಿದನು, ಕಾಶೀಮಬಾಜಾರವನ್ನು ಮುತ್ತಿ ಅಲ್ಲಿಯ ಇಂಗ್ಲಿಷರನ್ನೆಲ್ಲ ಸೆರೆಹಿಡಿದನು ಇದರಿಂದ ಕಂಪನಿಯವರು ಸಿಟ್ಟಾಗಿ ಮುದುಕ ಮೀರಜಾಫರನನ್ನು ಮತ್ತೆ ಪಟ್ಟಕ್ಕೆ ಕುಳ್ಳಿರಿಸಿದರು, ಮೀರಕಾಸೀಮನ ಮೇಲೆ ದಂಡೆತ್ತಿ ಹೋದರು ಈ ಯುದ್ಧದಲ್ಲಿ ಮೀರಕಾಸೀಮನು ಸೋತು ಮೋಂಘೀರಕ್ಕೆ ಓಡಿದನು ಶತ್ರುಸೈನ್ಯವು ಅಲ್ಲಿಯೂ ಬೆನ್ನಟ್ಟಿತು ಸಿಟ್ಟಿನಿಂದ ನವಾಬನು ತನ್ನ ಸೆರೆಸಿಕ್ಕ ಇಂಗ್ಲಿಷರನ್ನೆಲ್ಲ ಚೆಂಡಾಡಿಸಿ ಬಿಟ್ಟನು ಅದು **ಪಾಟಣಾಕೊಲೆ** ಯೆಂದು ಪ್ರಸಿದ್ಧವಾಗಿದೆ ಆದರೆ, ನವಾಬನಿಗೆ ಮೋಂಘೀರದಲ್ಲಿಯೂ ಉಳಿಗಾಲವಿರಲಿಲ್ಲ ಅವನು ಸೋತು ಅಯೋಧ್ಯೆಗೆ ಓಡಿಹೋದನು

**ಬಕ್ಸಾರದ ಕಾಳಗ** — (೧೭೬೪) ಆ ಮೇಲೆ ಮೀರಕಾಸೀಮನು ಅಯೋಧ್ಯೆಯ ನವಾಬ ಸುಜಾಉದ್ದೌಲ, ದಿಲ್ಲಿಯ ಬಾದಶಹ ಶಹಾಆಲಮ್ ಇವರನ್ನು ಕೂಡಿಕೊಂಡು ಇಂಗ್ಲಿಷರನ್ನು ಭಾರತದಿಂದ ಓಡಿಸಬೇಕೆಂಬ ಹಂಬಲದಿಂದ ಮತ್ತೆ ಬಕ್ಸಾರದ ಹತ್ತಿರ ಯುದ್ಧವನ್ನು ಹೂಡಿದನು ಇಂಗ್ಲಿಷರ ಕಡೆಗೆ ಹೆಕ್ಟರ ಮನ್ರೋ ಎಂಬ ಶೂರ ಸೇನಾಪತಿಯಿದ್ದನು ಈ ಯುದ್ಧದಲ್ಲಿ ಇಂಗ್ಲಿಷರಿಗೆ ಜಯವಾಯಿತು ಮೀರಕಾಸೀಮನು ಓಡಿಹೋದನು ಸುಜಾಉದ್ದೌಲನು ರೋಹಿಲಖಂಡಕ್ಕೆ ತಿರುಗಿದನು ಶಹಾಆಲಂ

ಇಂಗ್ಲಿಷರಿಗ ಅಧೀನನಾದನು ಇದರ ಪರಿಣಾಮವಾಗಿ ಇಂಗ್ಲಿಷರಿಗೆ ಅಲಹಾಬಾದದ ವರೆಗಿನ ಪ್ರದೇಶವು ಸಿಕ್ಕಿತು

**ಕ್ಲೈವನ ಪುನರಾಗಮನ** — ೧೭೬೫ರಲ್ಲಿ ಮತ್ತೆ ಕ್ಲೈವನು ಭಾರತದಲ್ಲಿ ಕಂಪನಿಸರಕಾರದ ಗವ್ಹರ್ನರನಾಗಿ ಬಂದನು ಬಂದೊಡನೆಯೇ ಮೀರ ಜಾಫರನನ್ನು ತೆಗೆದುಹಾಕಿ ಸಂಬಂಧವಿಲ್ಲದ ನಜೀಮುಉದ್ದೌಲನನ್ನು ಬಂಗಾಲದ ನವಾಬನನ್ನಾಗಿ ಮಾಡಿದನು, ಅಲ್ಲದೆ, ಬಂಗಾಲದ ನವಾಬನೊಂದಿಗೂ ಅಯೋಧ್ಯೆಯ ನವಾಬನೊಂದಿಗೂ ದಿಲ್ಲಿಯ ಬಾದಶಹನೊಂದಿಗೂ ಅನುಕೂಲವಾದ ಒಪ್ಪಂದಗಳನ್ನು ಮಾಡಿಕೊಂಡನು

**ನಜೀಮು ಉದ್ದೌಲನೊಡನೆ ಕರಾರು** — (೧) ನವಾಬನ ಕೈಕೆಳಗಿನ ಭಾರತೀಯ ಅಧಿಕಾರಿಗಳು ಬಂಗಾಲದ ನ್ಯಾಯ ವಿಚಾರಣೆ ಮತ್ತು ಅಂತರಿಕದ ವ್ಯವಸ್ಥೆಯನ್ನು ನೋಡತಕ್ಕದ್ದು (೨) ನವಾಬನು ವರ್ಷಕ್ಕೆ ಐವತ್ತು ಲಕ್ಷ ಉಂಬಳಿಯನ್ನು ಮಾತ್ರ ತಕ್ಕೊಳ್ಳಬೇಕು (೩) ಮಿಕ್ಕ ಉತ್ಪನ್ನದಲ್ಲಿ ಐವತ್ತು ಲಕ್ಷ ವೆಚ್ಚಮಾಡಿ ಇಂಗ್ಲಿಷ ಸೈನ್ಯವನ್ನಿಡಬೇಕು


ಸುಜಾಉದ್ದೌಲನು

**ಸುಜಾ ಉದ್ದೌಲನೊಡನೆ ಒಪ್ಪಂದ** — (೧) ಕಂಪನಿಯವರೊಡನೆ ಕಾಲು ಕೆದರಿ ಕಾದಿದ ತಪ್ಪಿಗಾಗಿ ಮೂವ್ವತ್ತು ಲಕ್ಷ ರೂಪಾಯಿ ದಂಡ ಕೊಡಬೇಕು (೨) ದಿಲ್ಲಿಯ ಬಾದಶಹನ ಖರ್ಚಿಗೆ ಕೋರಾ-ಅಲಹಾಬಾದಗಳನ್ನು ಕೊಡಬೇಕು (೩) ಅಯೋಧ್ಯಾ ಪ್ರಾಂತದಲ್ಲಿ ಕಂಪನಿಯವರ ಸರಕಿಗೆ ಸುಂಕ ವಿರತಕ್ಕುದಲ್ಲ (೪) ಸುಜಾಉದ್ದೌಲನ ಮಾಂಡಲಿಕನಾದ ಕಾಶಿಯ ಅರಸು ಬಲವಂತಸಿಂಗನು ಇಂಗ್ಲಿಷರಿಗ ಅಂಕಿತನಾಗಬೇಕು

**ದಿಲ್ಲಿಯ ಬಾದಶಹನೊಡನೆ ಒಪ್ಪಂದ** — (೧) ಮೊದಲು ಬಂಗಾಲ ಪ್ರಾಂತದಿಂದ ಸಿಗುತ್ತಿದ್ದ ೨ ಕೋಟಿಯ ಬದಲು ಇಪ್ಪತ್ತಾರು ಲಕ್ಷ ರೂಪಾಯಿಗಳನ್ನು ಮಾತ್ರ ಬಾದಶಹನಿಗ ಕೊಡಬೇಕು, (೨) ಕೋರಾ ಅಲಹಾಬಾದ ಪರಗಣೆಗಳಿಂದಲೇ ಬಾದಶಹನು ತನ್ನ ಖರ್ಚನ್ನು ನಡೆಸಿಕೊಳ್ಳಬೇಕು (೩) ಬಂಗಾಲ, ಬಿಹಾರ, ಓಡಿಸಾ ಪ್ರಾಂತಗಳ ಪೂರ್ಣ ಕಂದಾಯವು ಕಂಪನಿಯವರಿಗೇ ಸಲ್ಲತಕ್ಕದ್ದು

ರಾಬರ್ಟ ಕ್ಲೈವ — ಭಾರತದಲ್ಲಿ ಏರಿಕೆಯ ಸ್ಥಿತಿಯಲ್ಲಿದ್ದ ಫ್ರೆಂಚರನ್ನು ಹೊಡೆದೋಡಿಸಿ, ಇಲ್ಲಿಯ ರಾಜರನ್ನೂ ನವಾಬರನ್ನೂ ಹತ್ತಿಕ್ಕಿ, ತನ್ನ ಜೀವನ



ಕ್ಲೈವನು ಶಾಹೆಆಲಮುನಿಂದ ಸನದು ಪಡೆಯುವುದು

ವನ್ನೇ ಪಣಕ್ಕಿಟ್ಟು, ಬ್ರಿಟಿಶ ಸಾಮ್ರಾಜ್ಯದ ಭದ್ರವಾದ ಅಡಿಗಲ್ಲನ್ನು ಹಾಕಿದವನೇ ರಾಬರ್ಟ ಕ್ಲೈವ ಇವನು ಇಂಗ್ಲಂಡಿನಲ್ಲಿಯ ಮಾರ್ಕೆಟ್ ಡ್ರೇಟನ್ ಎಂಬಲ್ಲಿ ಕ್ರಿ ಶ ೧೭೨೫ರಲ್ಲಿ ಹುಟ್ಟಿದನು ಇವನ ತಂದೆ ವಕೀಲನಾಗಿದ್ದನು. ಚಿಕ್ಕಂದಿನಲ್ಲಿ ಅಭ್ಯಾಸದ ಕಡೆಗ ಕ್ಲೈವನ ಲಕ್ಷ್ಯವು ಎಳ್ಳಷ್ಟೂ ಇದ್ದಿಲ್ಲ, ಕಂಡ ಕಂಡವರೊಡನೆ ಜಗಳವಾಡಿಕೊಂಡು ಬರುತ್ತಿದ್ದನು ಇವನನ್ನು ಯಾವ ಕೆಲಸಕ್ಕೆ ಹಚ್ಚಬೇಕೆಂಬುದೊಂದು ತಂದೆಗೆ ದೊಡ್ಡ ಚಿಂತೆಯೇ ಆಗಿತ್ತು, ಕಡೆಗೆ ಕ್ರಿ ಶ ೧೭೪೩ರಲ್ಲಿ, ಈಸ್ಟ ಇಂಡಿಯಾ ಕಂಪನಿಯಲ್ಲಿ ಕಾರಕೂನಿಯ ಕೆಲಸವನ್ನು ಕೊಡಿಸಿ, ಇವನನ್ನು ಮದ್ರಾಸಕ್ಕೆ ಕಳಿಸಿದನು, ಆದರೆ ಉಡಾಳನಾದ ಈ ಉಂಡಾಡಿಗನಿಗೆ ಯಾವಾಗಲೂ



ಲಾರ್ಡ ಕ್ಲೈವ

ಒತ್ತಟ್ಟಿಗೇ ಕುಳಿತು ಬರೆಯುವ ಕೆಲಸವು ಬೇಸರವಾಯಿತು ಒಂದು ಸಾರಿ, ಪಿಸ್ತೂಲಿನಿಂದ ಹೊಡೆದುಕೊಂಡು ಆತ್ಮಹತ್ಯಮಾಡಿಕೊಳ್ಳಲು ಯತ್ನಿಸಿದನು. ಆದರೆ ಪ್ರಾಣಹೋಗಲಿಲ್ಲ

**ಸೈನ್ಯದಲ್ಲಿ ಸೇರ್ಪಡೆ** — ಫ್ರೆಂಚರು ಕ್ರಿ ಶ ೧೭೪೬ರಲ್ಲಿ ಮದ್ರಾಸನ್ನು ತೆಗೆದುಕೊಂಡಾಗ, ಕ್ಲೈವನು ಹಿಂದೀ ಉಡುಪು ಧರಿಸಿ, ಪಾರಾಗಿ ಸೆಂಟ ಡೇವಿಡ್ ಕೋಟೆಯನ್ನು ಸೇರಿದನು, ಮತ್ತು ಆ ಕೋಟೆಯ ರಕ್ಷಣೆಯಲ್ಲಿ ತನ್ನ ಪರಾಕ್ರಮವನ್ನು ತೋರಿಸಿದನು ಅಲ್ಲಿಯ ಗವ್ರ್ನರನು ಅವನ ಸಾಹಸಕ್ಕೆ ಮೆಚ್ಚಿ, ಅವನನ್ನು ಸೈನ್ಯದಲ್ಲಿ ಸಣ್ಣ ಅಧಿಕಾರಿಯನ್ನಾಗಿ ನಿಯಮಿಸಿದನು ಮುಂದೆ ಇಂಗ್ಲಿಷರು ಪಾಂಡಿಚೆರಿಯ ಮೇಲೆ ಏರಿ ಹೋದಾಗ ಇವನು ಇನ್ನಿಷ್ಟು ಶೌರ್ಯವನ್ನು ತೋರಿಸಿದನು ಅದರಿಂದ ಇವನನ್ನು 'ಲೆಫ್ಟನಂಟ'ನನ್ನಾಗಿ ನಿಯಮಿಸಿದರು

**ಪಡೆದ ವಿಜಯಗಳು** — ಫ್ರೆಂಚರು ಚಾಂದಾಸಾಹೇಬನನ್ನು ಆರ್ಕಾಡಿನ ನವಾಬನನ್ನಾಗಿ ಮಾಡಿದ ಬಳಿಕ, ಚಾಂದಾಸಾಹೇಬನು ತನ್ನ ಪ್ರತಿಸ್ಪರ್ಧಿಯಾದ ಮುಹಮ್ಮದ ಅಲಿಯನ್ನು ಸೆರೆಹಿಡಿಯಲೆಂದು ಅವನು ಅಡಗಿಕುಳಿತಿದ್ದ ತ್ರಿಚನಾಪಲ್ಲಿಗೆ ಮುತ್ತಿಗೆಹಾಕಿದನು ಆಗ ಮುಹಮ್ಮದ ಅಲಿಯು ಬ್ರಿಟಿಶರ ಸಹಾಯವನ್ನು ಕೇಳಿದನು ಕ್ಲೈವನು ಚಿಕ್ಕ ದಂಡಿನೊಡನೆ ಮೊದಲು ಆರ್ಕಾಡಿಗೆ ಮುತ್ತಿಗೆಹಾಕಿ, ಅದನ್ನು ವಶಪಡಿಸಿಕೊಂಡನು (ಕ್ರಿ ಶ. ೧೭೫೧) ಚಾಂದಾಸಾಹೇಬನು ಈ ಸುದ್ದಿಯನ್ನು ಕೇಳಿ ಆರ್ಕಾಡಿಗೆ ಸೈನ್ಯವನ್ನು ಕಳಿಸಿದನು ಮದ್ರಾಸದಿಂದ ಕ್ಲೈವನಿಗೆ ಸಹಾಯವು ಬಂದಿತು. ಅವನು ಚಾಂದಾಸಾಹೇಬನ ಸೈನ್ಯವನ್ನೂ ಫ್ರೆಂಚರನ್ನೂ ಸೋಲಿಸಿ, ಮುಹಮ್ಮದ ಅಲಿಯನ್ನು ಪಟ್ಟಕ್ಕೆ ಕೂಡ್ರಿಸಿದನು. ಇದರಿಂದ ಇಂಗ್ಲಿಷರ ಪ್ರಭಾವವು ಬೆಳೆಯಿತು ಮುಂದೆ ಅಸ್ವಾಸ್ಥ್ಯದ ಮೂಲಕ ಕ್ಲೈವನು ಇಂಗ್ಲಂಡಿಗೆ ಮರಳಿದನು ಅಲ್ಲಿ ಜನರು ಅವನನ್ನು ಬಹಳವಾಗಿ ಗೌರವಿಸಿದರು

ಮುಂದೆ ಬಂಗಾಲದ ನವಾಬನು ಕಲಕತ್ತೆಯನ್ನು ಕೈವಶಮಾಡಿಕೊಂಡು ಇಂಗ್ಲಿಷರನ್ನು ಪೀಡಿಸಹತ್ತಿದನು ಆಗ, ಮತ್ತೆ ಕ್ಲೈವನನ್ನು ಕಂಪನಿಯವರು ಬಂಗಾಲಕ್ಕೆ ಕಳಿಸಿದರು ಅವನು ಆಡ್ಮಿರಲ್ ವ್ಯಾಟ್ಸನ್ನನನ್ನು ಕೂಡಿಕೊಂಡು ಕಲಕತ್ತೆಯನ್ನು ಕೈವಶಮಾಡಿಕೊಂಡನು ಮೀರಜಾಫರನನ್ನು ಒಡೆಸಿಕೊಂಡು ಪ್ಲಾಸಿಯ ಕಾಳಗದಲ್ಲಿ (ಕ್ರಿ ಶ ೧೭೫೭) ಸಿರಾಜಉದ್ದೌಲನನ್ನು ಸೋಲಿಸಿ, ಮೀರಜಾಫರನನ್ನು ಬಂಗಾಲದ ನವಾಬನನ್ನಾಗಿ ಮಾಡಿದನು ಇದರಲ್ಲಿ ಹೇರಳ ಹಣವೂ ಕೆಲವು ಪರಗಣೆಗಳೂ ಇಂಗ್ಲಿಷರಿಗೆ ದೊರೆತವು ಮುಂದೆ, ಕ್ಲೈವನು ಚಂದ್ರನಗರವನ್ನು ಗೆದ್ದು, ಫ್ರೆಂಚರನ್ನು

ಸೋಲಿಸಿದನು ಇಂಗ್ಲಿಷರ ವಿರುದ್ಧವಾಗಿ ಮೀರಜಾಫರನಿಗೆ ಸಹಾಯ ಮಾಡಬೇಕೆಂದಿದ್ದ ಡಚ್ಚರನ್ನು ಸೋಲಿಸಿ, ಚಿನ್ಸುರಾ ಪಟ್ಟಣವನ್ನೂ ಅವರ ಹಡಗುಪಡೆಯನ್ನೂ ಕೈವಶಮಾಡಿಕೊಂಡನು, ಮತ್ತೆ ಇಂಗ್ಲಂಡಿಗ ಮರಳಿದನು (ಕ್ರಿ ಶ ೧೭೬೦) ಅಲ್ಲಿ ಅವನಿಗೆ ಅನೇಕ ಕಾಣಿಕೆಗಳೂ ಬಹು ಮರ್ಯಾದೆಯೂ 'ಲಾರ್ಡ್' ಪದವಿಯೂ ದೊರೆತವು

**ಕ್ಲೈವನ ಆಳಿಕೆ** – ಮತ್ತೆ ಭಾರತದಲ್ಲಿ ಅವ್ಯವಸ್ಥೆ ಪ್ರಾರಂಭವಾದದ್ದನ್ನು ನೋಡಿ, ಕಂಪನಿಯವರು ಕ್ರಿ ಶ ೧೭೬೫ರಲ್ಲಿ ಕ್ಲೈವನನ್ನು ಬಂಗಾಲದ




ಗವರ್ನರನನ್ನಾಗಿ ನಿಯಮಿಸಿ ಕಳಿಸಿದರು ಇಲ್ಲಿ ಬಂದ ಕೂಡಲೆ ಅವನು ತನಗೆ ಅನುಕೂಲವಾಗುವಂತೆ ದಿಲ್ಲಿಯ ಬಾದಶಹ, ಬಂಗಾಲ ಹಾಗೂ ಅಯೋಧ್ಯೆಗಳ ನವಾಬರೊಡನೆ ಒಪ್ಪಂದಮಾಡಿಕೊಂಡನು ಇದರಿಂದ ಇಂಗ್ಲಿಷರಿಗೆ ಎಷ್ಟೋ ಹೆಚ್ಚಿನ ಪ್ರದೇಶಗಳು ಸಿಕ್ಕವು ಬಂಗಾಲದಲ್ಲಿ ದಿವಾಣಿ

ಅಧಿಕಾರವೂ ಸಿಕ್ಕಿತು ಇಂಗ್ಲಿಷ ಅಧಿಕಾರಿಗಳು ತೆಗೆದುಕೊಳ್ಳುತ್ತಲಿದ್ದ ಲಂಚ-ಕಾಣಿಕೆಗಳನ್ನು ನಿಲ್ಲಿಸಿದನು, ಕೆಲಸಗಾರರ ಸಂಬಳವನ್ನು ಏರಿಸಿದನು ಆದರೆ ಅವನ ಇಬ್ಬಗೆಯ ಆಳಿಕೆಯ ಯೋಜನೆಯು ಯಶಸ್ವಿಯಾಗಲಿಲ್ಲ ಕಂದಾಯ ಹಾಗೂ ಸೈನ್ಯದ ವ್ಯವಸ್ಥೆ ಇಂಗ್ಲಿಷರ ಕಡೆಗೆ, ನ್ಯಾಯವಿಚಾರಣೆ ಮತ್ತು ಇತರ ವ್ಯವಸ್ಥೆ ನವಾಬರ ಕಡೆಗೆ ಹೀಗಾಗಿ ಎರಡೂ ಕಡೆಯವರು ಪ್ರಜೆಗಳನ್ನು ಸುಲಿದರು, ಜನರಲ್ಲಿ ಬಡತನ ಹೆಚ್ಚಿತು.

**ಕ್ಲೈವನ ಅಂತ್ಯ** —ಕ್ರಿ ಶ ೧೭೬೭ರಲ್ಲಿ ಅಸ್ವಸ್ಥತೆಯ ಮೂಲಕ ಕ್ಲೈವನು ಮತ್ತೆ ಇಂಗ್ಲಂಡಿಗೆ ತೆರಳಿದನು ಕಂಪನಿ ಮತ್ತು ಅರಸನಿಂದ ಮನ್ನಣೆ ಪಡೆದನು ಇವನ ವಿರುದ್ಧ ಪಕ್ಷದವರು "ಇವನು ಹಿಂದುಸ್ತಾನದ ಜನರನ್ನು ಸುಲಿದು ಕಂಪನಿಯ ಕೆಲಸವನ್ನು ಕೆಡಿಸಿದನು" ಎಂದು ಅಪವಾದ ಹೊರಿಸಿದರು ಪಾರ್ಲಿಮೆಂಟಿನವರು ವಿಚಾರಣೆ ನಡೆಸಿದರು ವಿಚಾರಣೆಯಲ್ಲಿ ಕ್ಲೈವನು ನಿರ್ದೋಷಿಯಾದನು, ಆದರೆ ಇದರಿಂದ ಅವನ ತಲೆ ಕೆಟ್ಟಿತು ಕ್ರಿ ಶ ೧೭೭೪ರಲ್ಲಿ ಆತ್ಮಹತ್ಯಮಾಡಿಕೊಂಡು ಸತ್ತನು

## ಅಭ್ಯಸನಗಳು

೧ ಕೆಳಗೆ ಬಂಗಾಲದ ನವಾಬರ ಹೆಸರುಗಳನ್ನು ಕೊಟ್ಟಿದೆ ಅವರು ನವಾಬರಾದ ಕ್ರಮಕ್ಕನುಸಾರವಾಗಿ ಹೆಸರುಗಳನ್ನು ಕ್ರಮಗೊಳಿಸಿ ಬರೆಯಿರಿ
ಮೀರಕಾಶೀಮ, ಸಿರಾಜ ಉದ್ದೌಲ, ಮೀರಜಾಫರ, ಅಲಿವರ್ದಿಖಾನ, ನಜೀಮ ಉದ್ದೌಲ

೨ ಬಂಗಾಲದಲ್ಲಿ ಕ್ಲೈವನ ಇಬ್ಬಗೆಯ ಆಳಿಕಯ ಪರಿಣಾಮಗಳೇನಾದವು?

೩ ಬಕ್ಸಾರ ಕಾಳಗದಲ್ಲಿ ಯುದ್ಧ ಮಾಡಿದ ಎರಡು ಪಕ್ಷಗಳು ಯಾವವು? ಭಾರತದ ಇತಿಹಾಸದಲ್ಲಿ ಅದರ ಮಹತ್ವವೇನು?

೪ ಕ್ಲೈವನು ಕೆಳಗಿನ ಮೂವರ ಕೂಡ ಮಾಡಿಕೊಂಡ ಒಪ್ಪಂದದ ಕರಾರುಗಳು ಯಾವವು? ಅದರ ಪರಿಣಾಮವೇನಾಯಿತು?
ನಜೀಮ ಉದ್ದೌಲ, ಸುಜಾಉದ್ದೌಲ, ಮತ್ತು ದಿಲ್ಲಿಯ ಬಾದಶಹ

೫ ಭಾರತದಲ್ಲಿ ಇಂಗ್ಲಿಷರ ನಿಜವಾದ ಆಳಿಕೆ ನೆಲೆಯೂರಲಿಕ್ಕೆ ಇಲ್ಲಿಯ ಜನರ ಯಾವ ದುರ್ಗುಣ ಕಾರಣವಾಯಿತು? ಪ್ಲಾಸಿ ಕಾಳಗದ ಉದಾಹರಣೆ ತಕ್ಕೊಂಡು ಸ್ಪಷ್ಟಪಡಿಸಿರಿ

## ೫ ವಾರನ್ ಹೇಸ್ಟಿಂಗ್ಸ

**ಹೇಸ್ಟಿಂಗ್ಸನು ಗವ್ಹರ್ನರನಾದುದು** — ಕಂಪನಿಯ ಆಡಳಿತದ ಅವ್ಯವಸ್ಥೆಯ ಸುದ್ದಿ ಎಲ್ಲ ಕಡೆಗೂ ಹಬ್ಬಿತು ಇದೇ ಸಮಯಕ್ಕೆ ಹೈದರ ಅಲಿಯು ನಿಜಾಮನ ಸಹಾಯದಿಂದ ಇಂಗ್ಲಿಷರ ಮೇಲೆ ಏರಿಹೋದನು ಇಬ್ಬರೂ ಕೂಡಿ ಕರ್ನಲ್ ವುಡ್‌ನನ್ನು ಸೋಲಿಸಿ ಮದ್ರಾಸನ್ನು ಮುತ್ತಿದರು ಇದೇ ಮೈಸೂರಿನ ಮೊದಲನೆಯ ಯುದ್ಧ ಇದರಲ್ಲಿ ಇಂಗ್ಲಿಷರು ಹೆದರಿ ಒಪ್ಪಂದಮಾಡಿಕೊಂಡರು ಈ ಮೊದಲು ಗದ್ದ ಉತ್ತರಸರಕಾರವನ್ನು ಇಂಗ್ಲಿಷರು ನಿಜಾಮನಿಗೆ ಬಿಟ್ಟುಬಿಡಬೇಕಾಯಿತು ಈ ಸ್ಥಿತಿಯನ್ನು ದೂರಮಾಡಲು ಕಂಪನಿಯವರು ಬುದ್ಧಿವಂತನೂ ಶೂರನೂ ಆದ ವಾರನ್ ಹೇಸ್ಟಿಂಗ್ಸನನ್ನು ಗವ್ಹರ್ನರ-ನನ್ನಾಗಿ ನಿಯಮಿಸಿದರು



ವಾರನ್ ಹೇಸ್ಟಿಂಗ್ಸ

**ವಾರನ್ ಹೇಸ್ಟಿಂಗ್ಸನ ಪೂರ್ವ ಪರಿಚಯ** — ವಾರನ್ ಹೇಸ್ಟಿಂಗ್ಸ ಬಡತನದ ಮೂಲಕ ೧೮ ವರುಷದವನಿರುವಾಗಲೇ ಕಂಪನಿಯಲ್ಲಿ ಕಾರಕೂನನಾಗಿ ಸೇರಿದನು ೧೭೫೦ರಲ್ಲಿ ಭಾರತಕ್ಕೆ ಬಂದನು ಕ್ಲೈವ ಈತನ ಬುದ್ಧಿವಂತಿಕೆಯನ್ನು ಕಂಡು ಈತನನ್ನು ಮೀರಜಾಫರನ ದರಬಾರದಲ್ಲಿ ಕಂಪನಿಯ ರಾಯಭಾರಿಯನ್ನಾಗಿ ನಿಯಮಿಸಿದನು. (೧೭೫೭) ಆ ಮೇಲೆ ಈತನು ೧೭೬೪ರಲ್ಲಿ ಇಂಗ್ಲಂಡಿಗೆ ಹೋದನು. ಅಲ್ಲಿಂದ ೧೭೬೯ರಲ್ಲಿ ಮದ್ರಾಸದ ಕೌನ್ಸಿಲರನಾಗಿ ಭಾರತಕ್ಕೆ ಬಂದನು. ಅಲ್ಲಿ ಅತ್ಯುತ್ತಮ ರೀತಿಯಿಂದ ಕೆಲಸಮಾಡಿ ತೋರಿಸಿದನು ಅದರಿಂದ ೧೭೭೨ರಲ್ಲಿ ಬಂಗಾಲದ ಗವ್ಹರ್ನರನಾದನು

**ಹಣವನ್ನು ಕೂಡಿಸಿದ್ದು** - ಆ ಕಾಲಕ್ಕೆ ಕ್ಲೈವನ ಇಬ್ಬಗೆಯ ಆಳಿಕೆಯಿಂದ ಹಣದ ಕೊರತೆ ಹೇರಳವಾಗಿತ್ತು ಹೇಸ್ಟಿಂಗ್ಸನು ಅದನ್ನು ತುಂಬುವ ಕಾರ್ಯಗಳನ್ನು ಕೈಕೊಂಡನು ಅವುಗಳಲ್ಲಿ ಮುಖ್ಯವಾದುವೆಂದರೆ (೧) ಬಂಗಾಲದ ಸುಭೇದಾರರ ಉಂಬಳಿಯನ್ನು ಅರುವತ್ತು ಲಕ್ಷದಿಂದ ಹದಿನೈದು ಲಕ್ಷಕ್ಕೆ ಇಳಿಸಿದನು (೨) ಸುಭೇದಾರರ ಕಾರಭಾರಿಗಳನ್ನು ಕಿತ್ತು,

ಜಿಲ್ಹೆಗೊಬ್ಬನಂತೆ ಇಂಗ್ಲಿಷ ಕಲೆಕ್ಟರನನ್ನು ನಿಯಮಿಸಿ ಆತನ ಕಡೆಗೆ ದಿವಾಣಿ-ನ್ಯಾಯಖಾತೆಗಳನ್ನು ಕೊಟ್ಟನು (೩) ಜಮೀನುದಾರಿ ಪದ್ಧತಿಯನ್ನು ಆರಂಭಿಸಿ, ಹೆಚ್ಚು ಹಣ ಕೊಟ್ಟವರಿಗೆ ಐದು ವರುಷಗಳ ವರೆಗೆ ಭೂಮಿಯ ಗುತ್ತಿಗೆಯನ್ನು ಕೊಟ್ಟನು (೪) ದಿಲ್ಲಿಯ ಬಾದಶಹನಿಗೆ ಕೊಡಮಾಡಿದ ಇಪ್ಪತ್ತಾರು ಲಕ್ಷದ ಕಾಣಿಕೆಯನ್ನು ಕಟ್ಟುಮಾಡಿದನು (೫) ಕ್ಲೈವನ ಕಾಲಕ್ಕೆ ಶಹಾಆಲಮನಿಗೆ ಕೊಟ್ಟಿದ್ದ ಅಲಹಾಬಾದ-ಕೋರಾ ಪರಗಣೆಗಳನ್ನು ಅವನು ಮರಾಠರಿಗೆ ಮಾರಿದ್ದ ಹಾಗೆ ಮಾಡಲು ಶಹನಿಗೆ ಅಧಿಕಾರವಿಲ್ಲವೆಂದು ಹೇಳಿ, ಆ ಪ್ರಾಂತವನ್ನು ಕಂಪನಿಯ ವಶಕ್ಕೆ ತಕ್ಕೊಂಡು ಅದನ್ನು ಸುಜಾ-ಉದ್ದೌಲನಿಗೆ ನಾಲ್ವತ್ತು ಲಕ್ಷ ರೂಪಾಯಿಗಳಿಗೆ ಮಾರಿದನು

**ಸುವ್ಯವಸ್ಥಾಶಾಸನ (ರೆಗ್ಯೂಲೇಟಿಂಗ ಆಕ್ಟ) ೧೭೭೩** — ದಿವಾಣಿ-ಅಧಿಕಾರವು ಸಿಕ್ಕಮೇಲೆ ಕಂಪನಿ ಸರಕಾರವು ಇಂಗ್ಲಂಡ ಸರಕಾರಕ್ಕೆ ನಾಲ್ವತ್ತು ಲಕ್ಷ ರೂಪಾಯಿ ಕೊಡುವದಾಗಿ ಒಪ್ಪಿಕೊಂಡಿತ್ತು, ಮತ್ತು ಪಾಲುಗಾರರಿಗೆ ಲಾಭದ ಆಶೆಯನ್ನು ಹಚ್ಚಿತ್ತು ಆದರೆ ಪ್ರತ್ಯಕ್ಷ ಆಡಳಿತದಲ್ಲಿ ಲಾಭವೆಲ್ಲ ಲೋಪವಾಯಿತು, ಇಂಗ್ಲಂಡದ ಸರಕಾರದಿಂದ ಸಾಲವನ್ನು ಕೇಳಬೇಕಾಯಿತು ಆ ಕಾಲಕ್ಕೆ **ಲಾರ್ಡ ನಾರ್ಥನು** ಇಂಗ್ಲಂಡಿನ ಮುಖ್ಯ ಮಂತ್ರಿ 'ಈಹೊತ್ತಿಗೆ ಹಣದ ಸಹಾಯಮಾಡಿದರೆ ಲಾಭವನ್ನು ಪಡೆಯಬಹುದು, ಅದರೊಡನೆಯೇ ಕಂಪನಿಯನ್ನೂ ಕಣ್ಣರಿಕೆಯಲ್ಲಿಟ್ಟುಕೊಳ್ಳಬಹುದು' ಎಂದು ಅವನು ವಿಚಾರಿಸಿದನು ಆತನ ಸೂಚನೆಯನ್ನು ಪಾರ್ಲಿಮೆಂಟು ಒಪ್ಪಿತು ಆಗ ಇಂಗ್ಲಂಡ ಸರಕಾರ ಮತ್ತು ಕಂಪನಿಸರಕಾರದ ಒಪ್ಪಿಗೆಯಿಂದ **ಸುವ್ಯವಸ್ಥಾಶಾಸನ** (ರೆಗ್ಯೂಲೇಟಿಂಗ ಆಕ್ಟ) ಬಳಕೆಯಲ್ಲಿ ಬಂದಿತು (೧೭೭೩)

**ಶಾಸನದ ವಿವರಗಳು** – (೧) ಬ್ರಿಟಿಶ ಸರಕಾರವು ಕಂಪನಿ ಸರಕಾರಕ್ಕೆ ಒಂದು ಕೋಟಿ ರೂಪಾಯಿ ಸಾಲ ಕೊಡಬೇಕು (೨) ಬಂಗಾಲದ ಗವ್ಹರ್ನರನಿಗೆ ಗವ್ಹರ್ನರ ಜನರಲ್ ಎಂದು ಹಸರಿಡಬೇಕು, ಮುಂಬಯಿ ಮದ್ರಾಸ ಗವ್ಹರ್ನರರ ಮೇಲೆ ಅವನ ಅಧಿಕಾರವಿರಬೇಕು, ಮತ್ತು ಐದು ವರ್ಷಕ್ಕೊಮ್ಮೆ ಈ ಅಧಿಕಾರಕ್ಕೆ ಹೊಸಬನನ್ನು ನಿಯಮಿಸಬೇಕು (೩) ಗವ್ಹರ್ನರ ಜನರಲನ ಸಹಾಯಕ್ಕೆ ನಾಲ್ವರು ಸಭಾಸದರಿರಬೇಕು ಅವರನ್ನು ಇಂಗ್ಲಂಡಿನವರೇ ನಿಯಮಿಸಬೇಕು ಈ ಐವರ ಸಭೆಯಲ್ಲಿ ಯಾವ ಆಡಳಿತದ ವಿಚಾರವೂ ಸರ್ವಾನುಮತದಿಂದ ಇಲ್ಲವೆ ಬಹುಮತದಿಂದ ನಿರ್ಣಯವಾಗಬೇಕು, ಅದರಂತೆಯೇ ಗವ್ಹರ್ನರ ಜನರಲ್ಲನು ಆಡಳಿತವನ್ನು ನಡೆಸಬೇಕು. (೪) ಭಾರತದ ಆಳಿಕೆಯ ಮುಖ್ಯ ವಿಷಯಗಳೆಲ್ಲವೂ ಇಂಗ್ಲಂಡಿನ ಮಂತ್ರಿಮಂಡಲದ ಅಧೀನದಲ್ಲಿಯೇ ನಡೆಯಬೇಕು (೫) ಕಲಕತ್ತೆಯಲ್ಲಿ ನ್ಯಾಯ

ವಿಚಾರಣೆಯ ವರಿಷ್ಠ ನ್ಯಾಯಾಲಯ (ಹೈಕೋರ್ಟು) ಸ್ಥಾಪಿತವಾಗಬೇಕು ಆ ಕೋರ್ಟಿನ ನ್ಯಾಯಾಧೀಶನಿಗೆ ಮೂರು ಜನ ಸಹಕಾರಿಗಳನ್ನು ಮಂತ್ರಿ ಮಂಡಲದವರೇ ನಿಯಮಿಸಿಕೊಡಬೇಕು (೬) ನ್ಯಾಯಾಧೀಶರ ಮೇಲೆ ಗವ್ಹರ್ನರ ಜನರಲ್ಲನ ಅಧಿಕಾರವಿರಬಾರದು (೭) ಕಂಪನಿಯ ಕೆಲಸಗಾರರು ಲಂಚ, ಕಾಣಿಕೆ ತೆಗೆದುಕೊಳ್ಳಬಾರದು, ಖಾಸಗಿ ವ್ಯಾಪಾರಗಳಲ್ಲಿ ತೊಡಗಬಾರದು (೮) ಡೈರೆಕ್ಟರರನ್ನು ಕಂಪನಿಯು ಆಗಾಗ ಬದಲಿಸಬೇಕು ಪ್ರತಿ ಇಪ್ಪತ್ತು ವರುಷಗಳಿಗೊಮ್ಮೆ ಕಂಪನಿಯ ಸನದನ್ನು ಪುನರ್ವಿಮರ್ಶಿಸಿ ಸುಧಾರಿಸಬೇಕು ಈ ಶಾಸನದಿಂದ ಭಾರತದಲ್ಲಿ ಕಂಪನಿ ಸರಕಾರದ ಕಾರಭಾರವನ್ನು ಪರ್ಯಾಯವಾಗಿ ಇಂಗ್ಲಂಡ ಸರಕಾರವೇ ಮಾಡುವಂತಾಯಿತು

**ಶಾಸನದಲ್ಲಿಯ ಕುಂದುಕೊರತೆಗಳು** — ಈ ಶಾಸನದಂತೆ ಬಂಗಾಲದ ಗವ್ಹರ್ನರನಾಗಿದ್ದ ವಾರನ್ ಹೇಸ್ಟಿಂಗ್ಸನು ಮೊದಲನೆಯ ಗವ್ಹರ್ನರ ಜನರಲನಾದನು ಆತನ ಸಭೆಯಲ್ಲಿ ನಾಲ್ವರು ಸಭಾಸದರ ನೇಮಕವಾಯಿತು, ಆದರೆ ಇವರಲ್ಲಿ ಮೂವರು ಹೇಸ್ಟಿಂಗ್ಸನ ವಿರೋಧಿಗಳು ಇದ್ದರು. ಅದರಿಂದ, ಬಹುಮತವು ಯಾವಾಗಲೂ ಗವ್ಹರ್ನರ ಜನರಲ್ಲನ ವಿರುದ್ಧವಾಗಿಯೇ ಆಗುತ್ತಿತ್ತು ಆದ್ದರಿಂದ ಹೇಸ್ಟಿಂಗ್ಸನು ಸಭಾಸದರ ಸೂತ್ರದ ಗೊಂಬೆಯಾದನು ಆದರೂ ಹೆದರದೆ ತನ್ನ ಕಾರ್ಯವನ್ನು ಮುಂದುವರಿಸಿದನು

**ರೋಹಿಲರೊಡನೆ ಯುದ್ಧ** — (೧೭೭೪) ಹಣದ ಕೊರತೆಯನ್ನು ತುಂಬುವದಕ್ಕಾಗಿಯೇ ಈ ಯುದ್ಧವಾಯಿತೆಂದು ಹೇಳಬಹುದು



ಚೈತಸಿಂಗ

ರೋಹಿಲಖಂಡ ಅಯೋಧ್ಯಾ ಪ್ರಾಂತದ ಪಶ್ಚಿಮಕ್ಕಿದೆ ಈ ಪ್ರಾಂತವನ್ನು ರೋಹಿಲರಿಂದ ತನ್ನ ಭಾಗಕ್ಕೆ ಕೂಡಿಸಿಕೊಳ್ಳಬೇಕೆಂದು ಅಯೋಧ್ಯೆಯ ನವಾಬನ ಅಪೇಕ್ಷೆ ಅದಕ್ಕಾಗಿ ಅವನು ಹೇಸ್ಟಿಂಗ್ಸನ ಸಹಾಯವನ್ನು ಕೇಳಿದನು ಕಂಪನಿಯ ಸೈನ್ಯದ ಬೆಂಬಲದಿಂದ ನವಾಬನಿಗೆ ಜಯವಾಯಿತು ಆತನು ಈ ಉಪಕಾರಕ್ಕಾಗಿ ಕಂಪನಿಗೆ ನಾಲ್ವತ್ತು ಲಕ್ಷ ರೂಪಾಯಿಗಳನ್ನು ಕೊಟ್ಟನು

**ಚೈತಸಿಂಗನನ್ನು ವಟ್ಟದಿಂದ ತಳ್ಳಿದುದು (೧೭೭೫)** — ಕಾಶಿಯ ರಾಜನಾದ ಚೈತಸಿಂಗನು ಇಂಗ್ಲಿಷರ ಮಾಂಡಲಿ-

ಕನು, ವರ್ಷಕ್ಕೆ ೨೨ ಲಕ್ಷ ರೂಪಾಯಿ ಕಪ್ಪ ಕೊಡುತ್ತಿದ್ದನು ಅದನ್ನು ಹೇಸಿಂಗ್ಸನು ೨೩ ಲಕ್ಷ ರೂಪಾಯಿಗೆ ಏರಿಸಿದನು, ಮತ್ತೆ ಇಂಗ್ಲಿಷ ಸೈನ್ಯವನ್ನು ಸ್ವತಃದ ಖರ್ಚಿನಿಂದ ಕಾಶಿಯಲ್ಲಿ ಇಟ್ಟುಕೊಳ್ಳಬೇಕೆಂದು ತಿಳಿಸಿದನು ಚೈತಸಿಂಗನು ಇದಕ್ಕೆ ಒಪ್ಪಲಿಲ್ಲ ಅದರಿಂದ ಹೇಸ್ಟಿಂಗ್ಸನು ದಂಡೆತ್ತಿ ಹೋಗಿ ಅವನನ್ನು ಸೆರೆಹಿಡಿದನು ಮುಂದೆ ಆತನನ್ನು ಪಟ್ಟದಿಂದ ತಳ್ಳಿಹಾಕಿ ಅವನ ತಮ್ಮನನ್ನು ಪಟ್ಟಕ್ಕೆ ಕುಳ್ಳಿರಿಸಿ, ವರ್ಷಕ್ಕೆ ನಾಲ್ವತ್ತುಲಕ್ಷ ರೂಪಾಯಿ ಕಪ್ಪಗಾಣಿಕೆಯನ್ನು ಗೊತ್ತುಮಾಡಿದನು

**ಅಯೋಧ್ಯೆಯ ಬೇಗಮುಳನ್ನು ಸುಲಿದುದು (೧೭೮೨)** — ಅಯೋಧ್ಯೆಯ ನವಾಬ ಸುಜಾಉದ್ದೌಲನು ಇಂಗ್ಲಿಷರ ಸಹಾಯಕ ಸೈನ್ಯವನ್ನು ಇಟ್ಟುಕೊಂಡಿದ್ದನು ಆ ಬಗೆಗೆ ಕೊಡತಕ್ಕ ಹಣವು ಎಷ್ಟೋ ಉಳಿದಿತ್ತು ೧೭೭೫ರಲ್ಲಿ ನವಾಬನು ಸತ್ತನು ಅವನ ಮಗ ಅಸಫಉದ್ದೌಲನು ಪಟ್ಟವೇರಿದನು ಅವನು ದುಂದುಗಾರನು ಅದರಿಂದ ಕಂಪನಿ ಸರಕಾರಕ್ಕೆ ಕೊಡತಕ್ಕ ಹಣ ವರುಷ ವರುಷ ಬೆಳೆಯಹತ್ತಿತು ವಾರನ್ ಹೇಸ್ಟಿಂಗ್ಸನು ಈ ಹಣಕ್ಕೆ ಒತ್ತಾಯ ಮಾಡಲು ಆರಂಭಿಸಿದನು ನವಾಬನು, ತನ್ನ ಭಂಡಾರವೆಲ್ಲ ತನ್ನ ತಾಯಿ-ಅಜ್ಜಿಯರಾದ ಬೇಗಮರ ವಶದಲ್ಲಿದೆ, ಇಂಗ್ಲಿಷರು ಸಹಾಯ ಮಾಡಿದರೆ ಅವರಿಂದ ತೆಗೆದುಕೊಡುವದಾಗಿ ಹೇಳಿದನು 'ಈ ಆಸ್ತಿಯ ಮೇಲೆ ಬೇಗಮರ ಹಕ್ಕಿದೆ, ಅದನ್ನು ದೋಚಿಕೊಳ್ಳುವುದಕ್ಕೆ ನವಾಬರಿಗೆ ಅಧಿಕಾರವಿಲ್ಲ' ಎಂದು ಗವ್ಹರ್ನರ ಜನರಲ್ಲನ ಸಭಾಸದರು ತೀರ್ಪುಕೊಟ್ಟರು ಆದರೂ ಹೇಸ್ಟಿಂಗ್ಸನು ಫೈಜಾಬಾದಕ್ಕೆ ದಂಡೆತ್ತಿ ಹೋಗಿ ಬೇಗಮರಿಂದ ಎಪ್ಪತ್ತಾರುಲಕ್ಷ ರೂಪಾಯಿ ಕಿತ್ತುಕೊಂಡನು

ಇಷ್ಟೆಲ್ಲ ಹಣವನ್ನು ಹೇಸ್ಟಿಂಗ್ಸನು ಸಿಕ್ಕಿದ ಕಡೆಯಿಂದೆಲ್ಲ ಬಲವಂತವಾಗಿ ದೋಚುವುದಕ್ಕೆ ಕಾರಣವೆಂದರೆ, ಅವನು ಎದುರಿಸಬೇಕಾಗಿ ಬಂದ ಮರಾಠರ ಹಾಗೂ ಹೈದರ ಅಲಿಯ ಹಗೆತನ, ಅಲ್ಲದೆ, ಭಾರತದಲ್ಲೆಲ್ಲ ಮತ್ತೊಮ್ಮೆ ಕಾಣಿಸಿಕೊಂಡ ಫ್ರೆಂಚರ ಫಿತೂರಿ

**ಮರಾಠಾ-ಇಂಗ್ಲಿಷರ ಮೊದಲನೆಯ ಯುದ್ಧ (೧೭೭೫-೧೭೮೨)** — ತನಗೆ ಪೇಶ್ವೆಯ ಪಟ್ಟವನ್ನು ಕೊಡಿಸಿದರೆ ರಾಜ್ಯದೊಳಗಿಂದ ಉತ್ಪನ್ನದ ಎಂಟನೆಯ ಪಾಲನ್ನು ಕೊಡುವದಾಗಿ ಹೇಳಿ ರಘುನಾಥರಾಯನು ಮುಂಬಯಿ ಗವ್ಹರ್ನರನೊಡನೆ ಸುರತದಲ್ಲಿ ಒಪ್ಪಂದಮಾಡಿಕೊಂಡನು ಅವನು ಇದಕ್ಕೆ ಗವ್ಹರ್ನರ ಜನರಲ್ ವಾರನ್ ಹೇಸ್ಟಿಂಗ್ಸನ ಒಪ್ಪಿಗೆಯನ್ನು ಪಡೆದಿರಲಿಲ್ಲ. ಹೇಸ್ಟಿಂಗ್ಸನಿಗೆ ಈ ಅತಿಕ್ರಮಣ ಸರಿದೋರಲಿಲ್ಲ ಅದರಿಂದ ಅವನು ಪೇಶವೆಯರೊಡನೆ ಹೊಸ ಒಪ್ಪಂದವನ್ನು ಮಾಡಿಕೊಂಡನು ಈ ಒಪ್ಪಂದ

ದಿಂದ ರಘುನಾಥರಾಯನಿಗೆ ಇಂಗ್ಲಿಷರು ನೆರವಾಗಬಾರದು, ಮತ್ತು ಪೇಶವೆಯರು ಇಂಗ್ಲಿಷರಿಗೆ ಸಾಷ್ಟಿ ಮುಂತಾದ ಬಂದರಗಳನ್ನೂ ೧೨ ಲಕ್ಷ ರೂಪಾಯಿಗಳನ್ನೂ ಕೊಡಬೇಕೆಂದಾಯಿತು ಇದರಿಂದ ಏನೂ ಪ್ರಯೋಜನವಾಗಲಿಲ್ಲ ಮುಂಬಯಿ ಸರಕಾರದವರು ಇದನ್ನು ಇಂಗ್ಲಂಡ ಸರಕಾರಕ್ಕೆ ತಿಳಿಸಿದರು ಅವರ ಹೇಳಿಕೆಯಂತೆ ಮತ್ತೆ ರಘುನಾಥರಾಯನನ್ನು ಕಟ್ಟಿಕೊಂಡು ಪೇಶವೆಯರ ವಿರುದ್ಧ ಯುದ್ಧಹೂಡಿ, ಸೋತು ಒಪ್ಪಂದವಾಡಿಕೊಂಡರು ಇದೆಲ್ಲವೂ ಗವ್ಹರ್ನರ ಜನರಲ್ಲನಿಗೆ ಅಪಮಾನವೆನಿಸಿತು ಕರ್ನಲ್ ಗೊಡಾರ್ಡನ ಸೇನಾಧಿಪತ್ಯದಲ್ಲಿ ಪೇಶವೆಯರೊಡನೆ ಯುದ್ಧ ಹೂಡಿದನು ಈ ಪ್ರಸಂಗದಲ್ಲಿ ಪೇಶವೆಯರೂ ಮರಾಠಾ ಸರದಾರರೂ ಒಟ್ಟಾಗಿ, ಇಂಗ್ಲಿಷರನ್ನು ಮುರಿದೇಬಿಡಬೇಕೆಂದು ನಿಂತರು ಹೇಸ್ಟಿಂಗ್ಸನು ಹೆದರಿ **ಸಾಲ್ಬಾಯಿಯಲ್ಲಿ** ನಾನಾಫಡಣವೀಸನೊಡನೆ ಒಪ್ಪಂದಮಾಡಿಕೊಂಡನು ಈ ಕಾರ್ಯದಲ್ಲಿ **ಮಹದಾಜಿ ಸಿಂದೆ** ಮಧ್ಯಸ್ಥಿಕೆಯನ್ನು ಮಾಡಿದನು

**ಸಾಲ್ಬಾಯಿ ಒಪ್ಪಂದ** (೧೭೮೨)—(೧) ಪೇಶವೆಯರು ರಘುನಾಥರಾಯನಿಗೆ ಉಂಬಳಿಯನ್ನು ಕೊಟ್ಟು ಕೋಪರಗಾಂವದಲ್ಲಿಡಬೇಕು (೨) ಸಾಷ್ಟಿ ನಡುಗಡ್ಡೆಯನ್ನು ಇಂಗ್ಲಿಷರು ಇಟ್ಟುಕೊಳ್ಳಬೇಕು ಪೇಶವೆಯರಿಂದ ಗೆದ್ದ ಮಿಕ್ಕ ರಾಜ್ಯವನ್ನು ತಿರುಗಿ ಕೊಡಬೇಕು (೩) ಪೇಶವೆಯರು ಇಂಗ್ಲಿಷರ ಶತ್ರುಗಳಿಗೆ ನೆರವಾಗಬಾರದು (೪) ಗಾಯಕವಾಡ ಸಂಸ್ಥಾನಿಕನು ಪೇಶವೆಯರಿಗೆ ಕಪ್ಪವನ್ನು ಕೊಡಬೇಕು, ಮೊದಲಿನಂತೆಯೇ ಸಂಸ್ಥಾನಿಕನಾಗಬೇಕು, ಇದಕ್ಕೆ ಸಿಂದೆಯು ಹೊಣೆಗಾರನಾಗಿರಬೇಕು, ಹೀಗೆ ಬ್ರಿಟಿಶರು ಮರಾಠರ ನಡುವೆ ಭೇದವನ್ನು ಬಿತ್ತಿ ತಮ್ಮ ರಾಜ್ಯತಂತ್ರವನ್ನು ಹೂಡಿದರು

**ಮೈಸೂರ ೨ನೆಯ ಯುದ್ಧ** (೧೭೮೦–೧೭೮೪)—ಹಿಂದೆ ಹೈದರ ಅಲಿ ಮದ್ರಾಸಿನಲ್ಲಿ ಇಂಗ್ಲಿಷರೊಡನೆ ಒಪ್ಪಂದಮಾಡಿಕೊಂಡಿದ್ದನಲ್ಲವೆ? ಮುಂದೆ ಆತನ ಮೇಲೆ ಮರಾಠರು ದಂಡೆತ್ತಿ ಬಂದಾಗ, ಆ ಒಪ್ಪಂದದಂತೆ ಇಂಗ್ಲಿಷರು ಹೈದರನಿಗೆ ಸಹಾಯಮಾಡಬೇಕಿತ್ತು, ಆದರೆ, ಮಾಡಲಿಲ್ಲ ಇದಲ್ಲದೆ ೧೭೭೮ರಲ್ಲಿ ಇಂಗ್ಲಿಷ-ಫ್ರೆಂಚರಿಗೆ ಯುದ್ಧವಾಯಿತು ಅದರಲ್ಲಿ ಇಂಗ್ಲಿಷರು ಮಾಹಿ ಬಂದರವನ್ನು ಹಿಡಿದುಕೊಂಡರು ಇದರ ಮುಖಾಂತರವಾಗಿಯೇ ಫ್ರೆಂಚರು ಹೈದರ ಅಲಿಗೆ ಯುದ್ಧ ಸಾಮಗ್ರಿಗಳನ್ನು ಪೂರಯಿಸುತ್ತಿದ್ದರು ಈಗ ಆ ಸಹಾಯ ಕಟ್ಟಾಯಿತು, ಅದರಿಂದ ಮಾಹಿಯನ್ನು ಬಿಟ್ಟುಕೊಡಬೇಕೆಂದು ಅವನು ಇಂಗ್ಲಿಷರಿಗೆ ತಿಳಿಸಿದನು ಅವರು ಒಪ್ಪಲಿಲ್ಲ. ಆಗ ಹೈದರನು ಇಂಗ್ಲಿಷರನ್ನು ಹೊಡೆದಟ್ಟಬೇಕೆಂದು ಮದ್ರಾಸಿಗೆ ಮುತ್ತಿಗೆ ಇಟ್ಟನು.

ಮೈಸೂರುಸೈನ್ಯದ ಕಡೆಗೆ ಹೈದರಾ, ಆತನ ಮಗ ಟೀಪು ಇಬ್ಬರೂ ಸೈನ್ಯಸಂಚಾಲಕರು, ಇಂಗ್ಲಿಷರ ಕಡೆಗೆ ಕರ್ನಲ್ ಬೇಲಿ, ಸರ ಹೆಕ್ಟರ್ ಮನ್ರೋ ಸೇನಾಪತಿಗಳು ಈ ಯುದ್ಧದಲ್ಲಿ ಬೇಲಿ ಸೆರೆಸಿಕ್ಕನು ಮನ್ರೋ ಮದ್ರಾಸಿಗೆ ಓಡಿದನು ಹೈದರ ಅಲಿ ವೆಲ್ಲೂರು-ಆರ್ಕಾಡುಗಳನ್ನು ಗೆದ್ದು ಪಾಂಡಿಚೇರಿಯನ್ನು ಮುತ್ತಿದನು

ಈ ಸುದ್ದಿ ಹೇಸ್ಟಿಂಗ್ಸನಿಗೆ ತಿಳಿಯಿತು **ಸರ್ ಅಯರ್‌ಕೂಟನನ್ನು** ಜಲಮಾರ್ಗವಾಗಿಯೂ, **ಪಿಯರಸನನನ್ನು** ಭೂಮಾರ್ಗವಾಗಿಯೂ ದೊಡ್ಡ ದಂಡಿನೊಡನೆ ಕಳುಹಿದನು ಅವರು ಮೈಸೂರವರನ್ನು ಪೋರ್ಟ್‌ನೋವೋ, ಶಿವಲಿಂಗಗಡ, ಪೋಲಿಲೂರಲ್ಲಿ ಸೋಲಿಸಿದರು, ಕೊನೆಗೆ ಆರ್ಣಿಯಲ್ಲಿ ನಿಕರದ ಕಾಳೆಗವೆಸಗಿತು ಹೈದರನು ಸೋತು ಮಲಬಾರಿನ ಕಡೆಗೆ ಓಡಿದನು ಮುಂದೆ ಯುದ್ಧ ನಡೆಸಬೇಕೆನ್ನುವದರೊಳಗೇ ೧೭೮೨ರಲ್ಲಿ ತಿ ರಿಕೊಂಡನು

**ಮಂಗಳೂರು ಒಪ್ಪಂದ** (೧೭೮೪) —ಈ ಸಮುಯಕ್ಕೆ ಟೀಪು ಮಂಗಳೂರು ಕಡೆಗೆ ಸಾಗಿದ್ದನು ಅದು ಕರ್ನಲ್ ಕ್ಯಾಂಬೆಲ್ಲನ ವಶದಲ್ಲಿತ್ತು ಈ ಹೊತ್ತಿಗೆ ಮುಂಬಯಿಯಿಂದ ಮ್ಯಾಥ್ಯು ಎಂಬ ದಳವಾಯಿ ದಂಡೆತ್ತಿ ಬಂದು ಮೈಸೂರುರಾಜ್ಯದ ಬಿದಿರ ಕೋಟೆಯನ್ನು ಹಿಡಿದುಕೊಂಡನು, ಇದೇ ಹೊತ್ತಿಗೆ ಮದ್ರಾಸದಿಂದ ಹೊರಟ ಇಂಗ್ಲಿಷಸೈನ್ಯವು ಶ್ರೀರಂಗಪಟ್ಟಣದ ಕಡೆಗೆ ಸಾಗಿತ್ತು ಟೀಪು ತೀವ್ರವೇ ಮ್ಯಾಥ್ಯುನನ್ನು ಮಣ್ಣುಮುಕ್ಕಿಸಿ ಅವರನ್ನೆಲ್ಲ ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಕಳುಹಿದನು, ಮತ್ತೆ ಮಂಗಳೂರನ್ನು ಮುತ್ತಿ ಕ್ಯಾಂಬೆಲನನ್ನು ಮೆತ್ತಗೆ ಮಾಡಿದನು ಇಂಗ್ಲಿಷರು ಹೆದರಿ ಟೀಪುವಿನೊಡನೆ ಮಂಗಳೂರಲ್ಲಿ ಒಪ್ಪಂದಮಾಡಿಕೊಂಡರು, ಪರಸ್ಪರರು ಗೆದ್ದುಕೊಂಡ ಸೀಮೆಗಳನ್ನೂ ಸೆರೆಹಿಡಿದ ಸೆರೆಯಾಳುಗಳನ್ನೂ ಮೊದಲಿದ್ದಂತೆಯೇ ಅವರವರಿಗೆ ಒಪ್ಪಿಸಬೇಕೆಂದು ಕರಾರು ಆಯಿತು

**ಪಿಟ್ಟನ ಭಾರತೀಯ ಶಾಸನ (ಪಿಟ್ಟನ ಇಂಡಿಯಾ ಆಕ್ಟ್)** ೧೭೮೪ — ಈ ಹೊತ್ತಿಗೆ ಇಂಗ್ಲಿಷರ ಹಿಡಿತದಿಂದ ಅಮೇರಿಕೆ ಹೊರಗಾಯಿತು ಅಮೇರಿಕದವರಿಗೆ ಫ್ರೆಂಚಸೈನ್ಯವೂ ನೌಕಾಬಲವೂ ಸಹಾಯಮಾಡಿದ್ದವು, ಆದ್ದರಿಂದ ಫ್ರೆಂಚರ ಸೊಕ್ಕು ಹೆಚ್ಚಿತು ಈ ಕ್ರಾಂತಿಯುದ್ಧದಲ್ಲಿ ಬ್ರಿಟಿಶರಿಗೆ ಬಲವಾದ ಪೆಟ್ಟುಬಿದ್ದಿತು ಅದರಿಂದ ಅವರು ಭಾರತದಲ್ಲಿ ತಮ್ಮ ಆಳಿಕೆಯನ್ನು ಸ್ಥಿರಪಡಿಸಬೇಕೆಂದು ಪೂರ್ಣ ಮನಸ್ಸು ಹಾಕಿದರು ರೆಗ್ಯುಲೇಟಿಂಗ್ ಆ್ಯಕ್ಟನಿಂದಾಗಿದ್ದ ಅವ್ಯವಸ್ಥೆಯನ್ನು ಸರಿಗೊಳಿಸಲು ಮನಸ್ಸು ಮಾಡಿದರು ಆ ಕಾಲಕ್ಕೆ **ಪಿಟ್** ಎಂಬ ಮುತ್ಸದ್ದಿಯು ಇಂಗ್ಲಂಡಿನ ಮುಖ್ಯ

ಮಂತ್ರಿಯಾಗಿ ಇದ್ದನು ಆತನು ಭಾರತದಲ್ಲಿ ಸರಕಾರವನ್ನು ಸ್ಥಿರಪಡಿಸುವ ಬಗೆಗೆ ಹೊಸದೊಂದು ಶಾಸನವನ್ನು ಪಾರ್ಲಿಮೆಂಟಿನ ಇದಿರಿಗೆ ಇಟ್ಟನು

(೧) ಕಂಪನಿಯ ಡೈರೆಕ್ಟರರಿಗೆ ಭಾರತದ ವ್ಯಾಪಾರವನ್ನು ಮಾತ್ರ ಪೂರಾ ಒಪ್ಪಿಸಬೇಕು (೨) ಪಾರ್ಲಮೆಂಟಿನವರು ‹ಬೋರ್ಡ ಆಫ್ ಕಂಟ್ರೋಲ್' ಎಂದು ಆರು ಜನ ಸಭಾಸದರ ಸಮಿತಿಯನ್ನು ನಿಯಮಿಸಬೇಕು, ಅವರಿಗೆ ಯುದ್ಧ-ಸಂಧಾನಗಳ ಬಗೆಗೆ ಸಂಪೂರ್ಣ ಅಧಿಕಾರವನ್ನು ಕೊಡಬೇಕು (೩) ಗವ್ಹರ್ನರ ಜನರಲ್ಲನಿಗೆ ಇದ್ದ ಸೇನಾಪತಿಗಳನ್ನು ನಿಯಮಿಸುವ ಅಧಿಕಾರವು ಪಾರ್ಲಿಮೆಂಟಿಗೇ ಇರಬೇಕು. (೪) ಗವ್ಹರ್ನರ ಜನರಲ್ಲನ ಕೌನ್ಸಿಲಿನ ಸಭಾಸದರು ತಮ್ಮ ಬಹುಮತದಿಂದ ಯಾವುದನ್ನೂ ನಿರ್ಧರಿಸುವಂತಿಲ್ಲ (೫) ಮದ್ರಾಸು-ಮುಂಬಯಿಗಳ ಗವ್ಹರ್ನರರ ಮೇಲೆ ಗವ್ಹರ್ನರ ಜನರಲ್ಲನ ಅಧಿಕಾರವಿರತಕ್ಕದ್ದು

ಇದು ಪಾರ್ಲಿಮೆಂಟಿನಲ್ಲಿ ‹ಪಿಟ್ಟನ ಇಂಡಿಯಾ ಆ್ಯಕ್ಟ' ಎಂಬ ಹೆಸರಿನಿಂದ ಪಾಸಾಗಿ ಬಳಕೆಯಲ್ಲಿ ಬಂದಿತು ಇದರಿಂದ ಭಾರತದಲ್ಲಿಯ ಕಂಪನಿ ಸರಕಾರದ ಆಡಳಿತವೆಲ್ಲವೂ ಬ್ರಿಟಿಶ ಮಂತ್ರಿಗಳ ಕೈಸೇರಿತು

**ಹೇಸ್ಟಿಂಗ್ಸನ ನ್ಯಾಯವಿಚಾರಣೆ** — ಈ ಹೊಸ ಕಾಯಿದೆಯಿಂದ ಅಸಮಾಧಾನಪಟ್ಟು, ಹೇಸ್ಟಿಂಗ್ಸನು ರಾಜೀನಾಮೆ ಕೊಟ್ಟು, ೧೭೮೫ರಲ್ಲಿ ಇಂಗ್ಲಂಡಿಗೆ ಹೋದನು ಆಗ ಅರಸನಾಗಿದ್ದ ಮೂರನೆಯ ಜಾರ್ಜನು ಈತನನ್ನು ಬಹುವಾಗಿ ಮನ್ನಿಸಿದನು ಆದರೆ, ಫ್ರಾನ್ಸಿಸ್ ಮೊದಲಾದವರು ಹೇಸ್ಟಿಂಗ್ಸನ ಅನ್ಯಾಯದ ಆಳಿಕೆಯನ್ನು ದೂರಿಕೊಳ್ಳಹತ್ತಿದರು ಕಂಪನಿಯ ಡೈರೆಕ್ಟರರು ಹೇಸ್ಟಿಂಗ್ಸನನ್ನು ಆಪಾದನೆಗೆ ಗುರಿಮಾಡಿದರು ಹನ್ನೊಂದು ಮುಖ್ಯ ಆರೋಪಗಳ ಬಗೆಗೆ ಅವನನ್ನು ಪಾರ್ಲಿಮೆಂಟ್ ಸಭೆಯ ನ್ಯಾಯಾಲಯದ ಇದಿರಿಗೆ ಎಳೆತಂದರು ಪ್ರಸಿದ್ಧ ವಾಗ್ಮಿಗಳಾದ **ಬರ್ಕ, ಶೆರಿಡನ್** ಮೊದಲಾದವರು ಹೇಸ್ಟಿಂಗ್ಸನು ಭಾರತದ ರೈತರ ಮೇಲೆ ಮಾಡಿದ ಅನ್ಯಾಯಗಳನ್ನು ಬಲವಾಗಿ ಖಂಡಿಸಿದರು!

ಈ ವಿಚಾರಣೆಯು ಏಳು ವರ್ಷಗಳ ವರೆಗೆ ನಡೆಯಿತು ಹೇಸ್ಟಿಂಗ್ಸನೂ ತನ್ನ ಪಕ್ಷವನ್ನು ಸಮರ್ಥನ ಮಾಡಿಕೊಂಡನು, ಬ್ರಿಟಿಶರ ಹಿತಕ್ಕಾಗಿಯೇ ಇದೆಲ್ಲವನ್ನು ಮಾಡಿದನೆಂದು ಮಾತ್ರ ಎಲ್ಲರಿಗೂ ಎನಿಸುತ್ತಿತ್ತು ಆ ಏಳು ವರುಷಗಳ ಅವಧಿಯಲ್ಲಿ ಹೇಸ್ಟಿಂಗ್ಸನ ಕೈಯಲ್ಲಿ ಕಾಸು ಕೂಡ ಉಳಿದಿರಲಿಲ್ಲ, ಈ ಬಡತನದ ಬವಣೆಯ ಶಿಕ್ಷೆಯೇ ಅವನಿಗೆ ಸಾಕಾಗಿತ್ತು ಇದನ್ನೆಲ್ಲ ಮನದಂದು ನ್ಯಾಯಾಧೀಶರು ಅವನು ‹ನಿರ್ದೋಷಿ ಎಂದು

ತೀರ್ಪುಕೊಟ್ಟರು! ಆ ಮೇಲೆ ಕಂಪನಿಯವರು ಅವನಿಗೆ ೪೦೦೦ ಪೌಂಡು ವಿಶ್ರಾಂತಿವೇತನವನ್ನು ಕೊಟ್ಟರು ಅವನು ೧೮೧೮ರಲ್ಲಿ ಮಡಿದನು

**ಹೇಸ್ಟಿಂಗ್ಸನ ತರುವಾಯ** — ವಾರನ್ ಹೇಸ್ಟಿಂಗ್ಸನು ಹೋದ ಮೇಲೆ ಮುಖ್ಯ ಸಭಾಸದನಾದ ಮ್ಯಾಕ್‌ಫರ್ಸನ್ ಆಡಳಿತವನ್ನು ವಹಿಸಿಕೊಂಡನು ಕಂಪನಿಯ ಸ್ಥಿತಿಯು ಪೂರಾ ಹದಗೆಟ್ಟಿತು ಆದುದರಿಂದ ಕಂಪನಿಯವರು ಅಮೇರಿಕೆಯ ಯುದ್ಧದಲ್ಲಿ ಕರ್ತವ್ಯದಕ್ಷನೆಂದು ಹೆಸರಾಗಿದ್ದ ಲಾರ್ಡ ಕಾರ್ನವಾಲೀಸನನ್ನು ಗವ್ಹರ್ನರ ಜನರಲ್ಲನನ್ನಾಗಿ ನಿಯಮಿಸಿ ಭಾರತಕ್ಕೆ ಕಳಿಸಿದರು


ಲಾರ್ಡ ಕಾರ್ನವಾಲೀಸನು

ಅವನು ಕೆಲವು ಸುಧಾರಣೆಗಳನ್ನು ಮಾಡಿದನು ವಾರನ್ ಹೇಸ್ಟಿಂಗ್ಸನು ಅನುಸರಿಸಿದ ಗುತ್ತಿಗೆಯ ಪದ್ಧತಿಯಿಂದ ಸಕಾಲಕ್ಕೆ ಹಣ ಬರುತ್ತಿದ್ದಿಲ್ಲ ಗುತ್ತಿಗೆದಾರರು ರೈತರನ್ನು ಅತಿಯಾಗಿ ದುಡಿಸಿಕೊಳ್ಳುತ್ತಿದ್ದರು ಇದರಿಂದ ಪ್ರಜೆಗಳಿಗೂ ಕ್ಷೇಮವಾಗಿರಲಿಲ್ಲ, ಆದ್ದರಿಂದ ಕಾರ್ನವಾಲೀಸನು ಬ್ರಿಟಿಶ ಸರಕಾರದ ಒಪ್ಪಿಗೆ ಪಡೆದು, ಸ್ಥಿರಕಂದಾಯ ಪದ್ಧತಿಯನ್ನು ಬಳಕೆಯಲ್ಲಿ ತಂದನು ಸಿರಿವಂತರಾದವರಿಗೆ ಹಣದ ಮಾನಕ್ಕೆ ತಕ್ಕಂತೆ ಭೂಮಿಯನ್ನು ವಂಶಪರಂಪರೆಯಾಗಿ ಕೊಡುವದು, ಅದಕ್ಕೆ ಪ್ರತಿಫಲವಾಗಿ ಪ್ರತಿವರುಷ ಮುಂಗಡವಾಗಿ ಹೆಚ್ಚು ಹಣವನ್ನು ತೆಗೆದುಕೊಳ್ಳುವದು ಇದೇ ಸ್ಥಿರಕಂದಾಯ ಪದ್ಧತಿ ಇದರಿಂದಲೂ ಜಮಿನುದಾರರಿಗಷ್ಟೇ ಲಾಭವಾಯಿತು. ಪ್ರಜೆಗಳ ಗೋಳು ತಪ್ಪಲಿಲ್ಲ

ಆಡಳಿತದಲ್ಲಿಯೂ ಸುಧಾರಣೆಯಾಯಿತು ಕಂದಾಯ ಹಾಗೂ ನ್ಯಾಯ ಖಾತೆಗಳೆರಡೂ ಕಲೆಕ್ಟರನ ಕಡೆಗೆ ಇದ್ದವು ಅವುಗಳನ್ನು ಬೇರ್ಪಡಿಸಿ, ಕಂದಾಯವನ್ನಷ್ಟೇ ಕಲೆಕ್ಟರನ ಕಡೆಗೆ ಒಪ್ಪಿಸಿದನು ನ್ಯಾಯದಾನಕ್ಕೆ ದಿವಾಣಿ-ಫೌಜದಾರಿ ಕೋರ್ಟುಗಳನ್ನೂ ಜಿಲ್ಹೆಗೊಂದರಂತೆ ಮುಖ್ಯ ನ್ಯಾಯಾಧೀಶನ ಕಚೇರಿಯನ್ನೂ ಪ್ರಾರಂಭಿಸಿದನು ಇವರೆಲ್ಲರ ಮೇಲೆ ಕಲಕತ್ತಾ, ಪಾಟಣಾ, ಡಾಕಾ ಮತ್ತು ಮುರ್ಶಿದಾಬಾದಗಳಲ್ಲಿ ನಾಲ್ಕು ಹಾಯಕೋರ್ಟುಗಳಾದವು ಅಲ್ಲಿಯ ಅಧಿಕಾರಿಗಳೆಲ್ಲ ಯುರೋಪಿಯನರು ಅವರಿಗೆ

ಸಲಹೆಕೊಡಲಿಕ್ಕೆ ಮಾತ್ರ ಹಿಂದುಪಂಡಿತರು ಮತ್ತು ಮುಸಲ್ಮಾನ ಕಾಜಿಗಳು ಇದ್ದರು ಇದೇ ಆತನು ಪ್ರಾರಂಭಿಸಿದ ಬ್ರಿಟಿಶರ ಆಡಳಿತಪದ್ಧತಿಯ ಉಕ್ಕಿನ ಚೌಕಟ್ಟು (ಸ್ಟೀಲ ಫ್ರೇಮ್)

**ಮೈಸೂರಿನ ಯುದ್ಧ** –(ಕ್ರಿ ಶ ೧೭೯೦) ಆ ಕಾಲಕ್ಕೆ ಇಂಗ್ಲಿಷರಿಗೆ ಪ್ರಬಲ ಶತ್ರುಗಳೆಂದರೆ ಟೀಪು, ನಿಜಾಮ, ಮತ್ತು ಪೇಶವೆ ಇವರಲ್ಲಿ ಟೀಪುವು ಫ್ರೆಂಚರ ಸ್ನೇಹವನ್ನು ಸಂಪಾದಿಸಿ, ಇಂಗ್ಲಿಷರನ್ನು ಹೊರ-ಗಟ್ಟಲು ಯತ್ನಿಸಿದ್ದನು ಇದು ಕಾರ್ನವಾಲೀಸನಿಗೆ ತಿಳಿಯಿತು ಅವನನ್ನು ಮೊದಲು ಹಣಿಯುವದಕ್ಕಾಗಿ ಪೇಶವೆಯರನ್ನೂ ನಿಜಾಮನನ್ನೂ ಕೂಡಿಸಿಕೊಂಡನು ನಾನಾ-ಫಡಣವೀಸನಂತಹ ಮುತ್ಸದ್ದಿಯು ಬ್ರಿಟಿಶರ ಈ ಬಲೆಯಲ್ಲಿ ಸಿಕ್ಕು ಬಿದ್ದುದು ಭಾರತದ ದುರ್ದೈವ ಈ ಸಮಯಕ್ಕೆ ಕೋಚೀನ ಮತ್ತು ತ್ರಾವಣಕೋರದ ಅರಸರಲ್ಲಿ ಡಚ್ಚರ ರಾಜ್ಯಗಳ ಬಗಗೆ ಜಗಳ ಪ್ರಾರಂಭವಾಯಿತು ಟೀಪುವು ಕೋಚೀನದ ಪಕ್ಷವಹಿಸಿ ತ್ರಾವಣಕೋರದ ಮೇಲೆ ಏರಿ ಹೋದನು ಆಗ ಇಂಗ್ಲಿಷರು ತ್ರಾವಣಕೋರದ ಸಹಾಯಕ್ಕೆ ಹೋದರು ಇದರಿಂದಲೇ ಮೈಸೂರಿನ ಮೂರನೆಯ ಯುದ್ಧವು ಪ್ರಾರಂಭವಾಯಿತು ಮರಾಠರು, ನಿಜಾಮನು ಇಂಗ್ಲಿಷರು ಒಟ್ಟಾಗಿಯೇ ಟೀಪುವನ್ನು ಬೆನ್ನಟ್ಟಿದರು ಭಾರತೀಯರ ಒಡಕೇ ಅವರ ಅಳಿಗಾಲಕ್ಕೆ ಕಾರಣವೆಂಬದು ಇಲ್ಲಿಯೂ ಕಂಡುಬರುತ್ತದೆ ಟೀಪು ಹಿಂದಕ್ಕೆ ಸರಿಯುತ್ತ ಶ್ರೀರಂಗಪಟ್ಟಣವನ್ನು ಸೇರಿದನು! ಅಲ್ಲಿಯೂ ಆತನ ಹಗಗಳು ಬೆನ್ನಟ್ಟಿಬಂದರು ಆಗ ಟೀಪು ಇಂಗ್ಲಿಷರೊಡನೆ ಒಪ್ಪಂದಮಾಡಿಕೊಂಡನು ಇದರಿಂದ ಟೀಪು ಯುದ್ಧದ ವೆಚ್ಚಕ್ಕೆಂದು ಇಂಗ್ಲಿಷರಿಗೆ ಮೂರುಕೋಟಿ ರೂಪಾಯಿಗಳನ್ನು ಕೊಡಬೇಕಾಯಿತು ಆ ಹಣ ಮುಟ್ಟುವ ವರೆಗೆ ಅವನು ತನ್ನ ಇಬ್ಬರು ಮಕ್ಕಳನ್ನು ಒತ್ತೆ ಇಡಬೇಕಾಯಿತು, ಇದಲ್ಲದ ಮಲಬಾರ, ಕೊಡಗು, ಕೊಯಿಮುತ್ತೂರು ಮುಂತಾದ ೪೦ ಲಕ್ಷ ಉತ್ಪನ್ನದ ಸೀಮೆ ಇಂಗ್ಲಿಷರಿಗೆ ದೊರೆಯಿತು ಇದರಿಂದ ನರ್ಮದೆಯಿಂದ ಕೃಷ್ಣೆಯ ವರೆಗಿನ ಪ್ರದೇಶವು



ಟೀಪು ಸುಲ್ತಾನನು

ಮರಾಠರಿಗೂ ಕೃಷ್ಣಾ-ವೆನ್ನಾರ ನದಿಗಳ ನಡುವಿನ ಪ್ರದೇಶವು ನಿಜಾಮನಿಗೂ ದೊರೆತವು

ಕಾರ್ನವಾಲೀಸನು ಬಿಗುವಿನ ಆಡಳಿತವನ್ನು ಸಾಗಿಸಿದನು ಅಷ್ಟರಲ್ಲಿ ಯುರೋಪದಲ್ಲಿ ಫ್ರೆಂಚ-ಇಂಗ್ಲಿಷರ ಯುದ್ಧ ಸುರುವಾದ್ದರಿಂದ ಬ್ರಿಟಿಶ ಸರಕಾರವು ಅವನನ್ನು ಇಂಗ್ಲಂಡಿಗೆ ಕರೆಸಿಕೊಂಡಿತು ಅವನು ಕ್ರಿ ಶ ೧೭೯೩ರಲ್ಲಿ ತನ್ನ ಅಧಿಕಾರವನ್ನು ಕಂಪನಿಯ ಸಭಾಸದ ಸರ್ ಜಾನ್ ಶೋರನಿಗೆ ಒಪ್ಪಿಸಿ ಇಂಗ್ಲಂಡಿಗೆ ತೆರಳಿದನು ಸರ್ ಜಾನ್ ಶೋರನು ಕ್ರಿ ಶ ೧೭೯೩ರಿಂದ ೧೭೯೮ರ ವರೆಗೆ ಆಡಳಿತವನ್ನು ಸಾಗಿಸಿದನು ಆದರ ಬ್ರಿಟಿಶ ಸರಕಾರವು ಇವನನ್ನು ಪಂಜರದೊಳಗಿಟ್ಟ ಸಿಂಹನಂತೆ ಮಾಡಿತ್ತು ಇಲ್ಲಿಯ ದೇಶೀಯ ಅರಸರ ಜಗಳಗಳಲ್ಲಿ ಕೈಹಾಕಬಾರದು, ಕಂಪನಿಯ ಅಧಿಕಾರಿಗಳು ರಾಜ್ಯವಿಸ್ತಾರಮಾಡಿ, ಹೊಣೆಯನ್ನು ಹೆಚ್ಚಿಸಿಕೊಳ್ಳಬಾರದು, ಅವಶ್ಯವೆನಿಸಿದಲ್ಲಿ ಸಂರಕ್ಷಕ ಯುದ್ಧಗಳನ್ನು ಮಾತ್ರ ಮಾಡಬಹುದು, ಹೀಗೆ ಕಟ್ಟಳೆಗಳನ್ನು ಹಾಕಿದರು ಈಗ ನಿಜಾಮನಿಗೂ ಮರಾಠರಿಗೂ ಕಾಳಗ ಪ್ರಾರಂಭವಾಯಿತು ಒಪ್ಪಂದದ ಕರಾರಿನಂತೆ ನಿಜಾಮನು ಇಂಗ್ಲಿಷರ ಸಹಾಯವನ್ನು ಬೇಡಿದನು, ಆದರೆ ಸರ್ ಜಾನಶೋರನು ದೇಶೀಯ ಅರಸರ ಆ ಜಗಳದಲ್ಲಿ ಕೈಹಾಕುವಂತಿರಲಿಲ್ಲ, ಆದ್ದರಿಂದ ಸಹಾಯಮಾಡ ಲಿಲ್ಲ ನಿಜಾಮನಿಗೆ ಸೋಲಾಯಿತು ಅವನು ಸಿಟ್ಟಿಗೆದ್ದು ತನ್ನ ದರಬಾರ ದಿಂದ ಇಂಗ್ಲಿಷರನ್ನು ಕಿತ್ತುಹಾಕಿ ಫ್ರೆಂಚರಿಗೆ ಆಶ್ರಯಕೊಟ್ಟನು ಹೀಗೆ ಇವನ ಆಳಿಕೆಯಲ್ಲಿ ಫ್ರೆಂಚರ ಪ್ರಭಾವವು ಬೆಳೆಯತೊಡಗಿತು

## ಅಭ್ಯಾಸನಗಳು

೧ ವಾರನ್ ಹೇಸ್ಟಿಂಗ್ಸನ ನ್ಯಾಯವಿಚಾರಣೆಗೆ ನಿಯಮಿಸಲ್ಪಟ್ಟ ಒಬ್ಬ ಬ್ರಿಟಿಶ ಜಜ್ಜರು ನೀವು ಎಂದು ತಿಳಿಯಿರಿ ನೀವು ಕೊಡುವ ನಿರ್ಣಯವೇನು? ಅದರ ಕಾರಣಗಳೇನು?

೨ ವಾರನ್ ಹೇಸ್ಟಿಂಗ್ಸನಿಂದ ನೀವು ಕಲಿತುಕೊಳ್ಳಬಹುದಾದ ಉತ್ತಮ ಗುಣ-ಗಳು ಯಾವವು ?

೩. ಸಾಲ್ಬಾಯಿಯ ಒಪ್ಪಂದವು ಯಾರ ಯಾರ ನಡುವೆ ಆಯಿತು? ಅದರ ಕರಾರುಗಳು ಯಾವವು?

೪ ಟೀಪು ರಣ ಕೌಶಲ್ಯವನ್ನು ತೋರಿಸಿದ ಪ್ರಸಂಗಗಳು ಯಾವವು?

೫ ಸಂಕ್ಷಿಪ್ತ ಟಿಪ್ಪಣಿಗಳನ್ನು ಬರೆಯಿರಿ.
(ಅ) ಸ್ಥಿರಕಂದಾಯ ಪದ್ಧತಿ, (ಆ) ಪಿಟ್ಟನ ಇಂಡಿಯಾ ಬಿಲ್ಲು (ಇ) ಕಾರ್ನವಾಲೀಸನ ಆಡಳಿತದ ಉಕ್ಕಿನ ಚೌಕಟ್ಟು

# ಭಾರತಕ್ಕೆ ಯುರೋಪಿಯನರ ಆಗಮನ - ಇಂಗ್ಲಿಷ ಸತ್ತಾರಂಭ

ಪ್ರಮಾಣ ▭ = ೨ ವರ್ಷಗಳು

ಕ್ರಿಸ್ತಶಕ

೧೪೯೦

೧೫೦೦

೧೪೯೮ ವಾಸ್ಕೋ ಡ ಗಾಮನು ಭಾರತಕ್ಕೆ ಬಂದದ್ದು

೧೫೦೫ ಪೋರ್ತುಗೀಜ ಗವ್ಹರ್ನರನಾಗಿ ಅಲ್ಮೇಡಾನು ಭಾರತಕ್ಕೆ ಬಂದದ್ದು

೧೫೧೦ ಗೋವೆಯು ಪೋರ್ತುಗೀಜರ ವಶವಾದದ್ದು

೧೫೦೯ ಆಲ್ಬುಕರ್ಕನು ಭಾರತಕ್ಕೆ ಬಂದದ್ದು

ಪೋರ್ತುಗೀಜರ ಪ್ರಾಬಲ್ಯ (೧೫೦೦–೧೬೦೦)

೧೫೭೯ ಥಾಮಸ್ ಸ್ಟೀಫನ್‌ಸನ್ನನು ಭಾರತಕ್ಕೆ ಬಂದದ್ದು

೧೫೯೬ ಡಚ್ಚರು ಭಾರತಕ್ಕೆ ಬಂದದ್ದು

೧೬೦೦

೧೬೦೦ ಇಂಗ್ಲಿಷ ಈಸ್ಟ ಇಂಡಿಯಾ ಕಂಪನಿ ಸ್ಥಾಪನೆ

೧೬೩೪ ಇಂಗ್ಲಿಷರು ಕಲಕತ್ತೆಯನ್ನು ದೊರಕಿಸಿದ್ದು

೧೬೩೯ ಇಂಗ್ಲಿಷರಿಗೆ ಮದರಾಸಿನ ದಾನ

೧೬೬೧ ಇಂಗ್ಲಿಷರಿಗೆ ಮುಂಬಯಿಯ ಬಳುವಳಿ

೧೬೬೪ ಫ್ರೆಂಚರು ಭಾರತಕ್ಕೆ ಬಂದದ್ದು

೧೭೦೦

೧೭೦೮ ಸಂಯುಕ್ತ ಈಸ್ಟ ಇಂಡಿಯಾ ಕಂಪನಿಯು ರೂಪುಗೊಂಡದ್ದು

೧೭೪೫ ಡೂಪ್ಲೆಯು ಫ್ರೆಂಚ ಗವ್ಹರ್ನರನಾಗಿ - ಭಾರತಕ್ಕೆ ಬಂದದ್ದು

೧೭೪೬ ಮೊದಲನೆಯ ಇಂಗ್ಲಿಷ ಫ್ರೆಂಚ್ ಯುದ್ಧ

೧೭೪೮ ಹೈದರಾಬಾದಿನ ನಿಜಾಮನ ಮರಣ

೧೭೫೧ ಅರ್ಕಾಟದ ಮುತ್ತಿಗೆ

೧೭೫೫ ಪಾಂಡಿಚೆರಿ ಒಪ್ಪಂದ - ಎರಡನೆಯ ಇಂಗ್ಲಿಷ-ಫ್ರೆಂಚ ಯುದ್ಧದ ಸಮಾಪ್ತಿ

೧೭೫೭ ಪ್ಲಾಸಿಯ ಕಾಳಗ

೧೭೫೮ ಕ್ಲೈವನು ಡಚ್ಚರನ್ನು ಸೋಲಿಸಿದ್ದು

೧೭೬೦ ವಾಂಡಿವಾಶದ ಕಾಳಗ

೧೭೬೪ ಬಕ್ಸಾರದ ಕಾಳಗ

೧೭೬೪ ಡೂಪ್ಲೆಯ ಮರಣ

೧೭೬೯ ಮದರಾಸ ಒಪ್ಪಂದ - ಮೊದಲನೆಯ ಇಂಗ್ಲಿಷ ಮೈಸೂರು ಯುದ್ಧದ ಮುಕ್ತಾಯ

೧೭೭೨ ಪಾರ್ಲಿಮೆಂಟನಲ್ಲಿ ಕ್ಲೈವನ ವಿಚಾರಣೆ

೧೭೭೩ ರೆಗ್ಯುಲೇಟಿಂಗ ಆ್ಯಕ್ಟ

೧೭೭೪ ಕ್ಲೈವನ ಆತ್ಮಹತ್ಯೆ

೧೮೦೦

# ೬ ಬ್ರಿಟಿಶ್ ಪ್ರಭುತ್ವದ ಸ್ಥಾಪನೆ

## ಲಾರ್ಡ ವೆಲ್ಲೆಸ್ಲಿ

**ಲಾರ್ಡ ವೆಲ್ಲೆಸ್ಲಿ** —(೧೭೯೮-೧೮೦೫) ಸರ್ ಜಾನ್ ಶೋರನ ಮಿದುವುತನದ ಆಳಿಕೆಯಿಂದ ಇಂಗ್ಲಿಷರ ಆಳಿಕೆಯ ಬೇರು ಸಡಿಲಿದ್ದುವು ಇದೇ ಹೊತ್ತಿಗೆ ಯುರೋಪದಲ್ಲಿ ಜಗದ್ವಿಖ್ಯಾತ ನೆಪೋಲಿಯನನು ಬಿರುಗಾಳಿಯಂತೆ ಜಯದ ಮೇಲೆ ಜಯವನ್ನು ಸಂಪಾದಿಸುತ್ತ ಹೊರಟಿದ್ದನು. 'ಭಾರತವನ್ನೂ ಗೆದ್ದುಬಿಡುತ್ತೇನೆ' ಎಂಬ ಕನನನ್ನು ಆತನು ಆಗಾಗ ಕಾಣುತ್ತಿದ್ದನು ಪೂರ್ವ-ದೇಶಗಳಿಗೆ ಅಲೆಗ್ಝಾಂಡರನಂತೆ ದಿಗ್ವಿಜಯಕ್ಕಾಗಿ ಹೊರಡುವದಕ್ಕೆ ಪೀಠಿಕೆಯೋ ಎಂಬಂತೆ ಅವನು ಈಜಿಪ್ತಿಗೂ ನುಗ್ಗಿದನು

ಆದ್ದರಿಂದ, ಬ್ರಿಟಿಶರಿಗೆ ಭಾರತವನ್ನು ಭದ್ರಮಾಡಿಕೊಳ್ಳದೆ ಗತ್ಯಂತರವಿರಲಿಲ್ಲ ಇದಕ್ಕಾಗಿ ಏರಾಟಿಕೆಯ ಹುರುಪಿನ ಅಧಿಕಾರಿಯೇ ಬೇಕಾಗಿದ್ದನು ಅದಕ್ಕೆ ತಕ್ಕಂತೆ ಮುತ್ಸದ್ದಿತನ-ಕರ್ತವ್ಯದಕ್ಷತೆಗಳಿಗೂ ಕೊರತೆಯಾಗಬಾರದು, ಮತ್ತು ಭಾರತದ ಅಂತರಂಗದ ಪೂರ್ಣ ಅರಿವುಳ್ಳವನೂ ಬ್ರಿಟಿಶ್ ಸಾಮ್ರಾಜ್ಯದ ಕಟ್ಟಭಿಮಾನಿಯೂ ಇರಬೇಕಾಗಿತ್ತು ಈ ಎಲ್ಲ ಗುಣಗಳೂ ಲಾರ್ಡ ವೆಲ್ಲೆಸ್ಲಿಯಲ್ಲಿ ಇದ್ದವು ಆತನು ಕಂಪನಿಯ ಡೈರೆಕ್ಟರ ಮಂಡಲದಲ್ಲಿರುವಾಗ—'ಭಾರತದಲ್ಲಿ ಬ್ರಿಟಿಶರು ಮಿದುವುತನವನ್ನು ತೋರಿಸಿ ಉಪಯೋಗವಿಲ್ಲ, ಏರಾಟ ಮಾಡಿಯಾದರೂ ಎಲ್ಲ ಕಡೆಗೂ ಏಕಸೂತ್ರದ ಆಳಿಕೆಯನ್ನು ಆರಂಭಿಸುವದು ಅವಶ್ಯವಿದೆ, ಅದರಿಂದಲೇ ಬ್ರಿಟಿಶ್ ಸಾರ್ವಭೌಮತ್ವವು ಪ್ರಸ್ಥಾಪಿತವಾಗುವದು'—ಎನ್ನುತ್ತಿದ್ದನು, ಅದಕ್ಕೆ ತಕ್ಕ ಉತ್ಸಾಹವನ್ನೂ ತೋರುತ್ತಿದ್ದನು ಈ ಮಹತ್ವಾಕಾಂಕ್ಷೆಗೆ ತಕ್ಕಂತೆ ಈತನ ತಮ್ಮ ಆರ್ಥರ ವೆಲ್ಲೆಸ್ಲಿ ಎಂಬ ಶೂರನು ಭಾರತದಲ್ಲಿ ಸೇನಾಪತಿಯಾಗಿದ್ದನು ಇದೆಲ್ಲವನ್ನೂ ವಿಚಾರ ಮಾಡಿ, ಬ್ರಿಟಿಶ್ ಸರಕಾರ ಲಾರ್ಡ ವೆಲ್ಲೆಸ್ಲಿಯನ್ನೇ ಗವ್ಹರ್ನರ ಜನರಲ್ಲನನ್ನಾಗಿ ನಿಯಮಿಸಿತು

**ರಾಜಕೀಯ ಪರಿಸ್ಥಿತಿ** —ಲಾರ್ಡ ವೆಲ್ಲೆಸ್ಲಿಯು ಭಾರತಕ್ಕೆ ಬಂದ ಕಾಲಕ್ಕೆ ಸಿಂದೆ, ಹೋಳಕರ ಮೊದಲಾದ ವೀರರು ಸ್ವತಂತ್ರರಾಜರಾಗಿ ರಾಜ್ಯವನ್ನು ವಿಸ್ತರಿಸುವ ಹವಣಿಕೆಯಲ್ಲಿದ್ದರು ನಿಜಾಮನು ಒಳಗಿಂದೊಳಗೇ ಹಲ್ಲು ಮಸೆಯುತ್ತ ತನ್ನ ಸೈನಿಕರಿಗೆ ಫ್ರೆಂಚರಿಂದ ಸೈನಿಕಶಿಕ್ಷಣವನ್ನು ಕೊಡಿಸಲು ಆರಂಭಿಸಿದ್ದನು ಟೀಪುವಂತೂ ಬ್ರಿಟಿಶರನ್ನು ಬಡಿದೋಡಿಸಿಯೇ ತೀರುವೆನೆಂದು ಪಣತೊಟ್ಟಿದ್ದನು, ಇದರ ಸಿದ್ಧತೆಗಾಗಿ ಅಫಗಾನಿಸ್ತಾನದ ಝುಮಾನ

ಶಹನು ಫ್ರಾನ್ಸದ ನೆಪೋಲಿಯನನೊಡನೆ ಪತ್ರವ್ಯವಹಾರವನ್ನು ನಡೆಸಿದ್ದನು, ಈ ಹೊತ್ತಿಗೆ ನೆಪೋಲಿಯನ್ ಇಜಿಪ್ತವನ್ನು ಗೆದ್ದು ಭಾರತದತ್ತ ಹೊರಳು ವುದರಲ್ಲಿದ್ದನು!

**ವೆಲ್ಲೆಸ್ಲಿಯ ರಾಜ್ಯನೀತಿ** — ಈ ಹೊತ್ತಿಗೆ, ಭಾರತದ ಪ್ರಜೆಗಳಲ್ಲಿ ಹೆಚ್ಚಾದ ಹುರುಪು ಹುಮ್ಮಸಗಳಿರಲಿಲ್ಲ, ಆದರೂ ದೇಶೀಯ ರಾಜರಲ್ಲಿ ಭಕ್ತಿಯನ್ನಿಟ್ಟಿದ್ದರು ಅದರಿಂದ ಆ ರಾಜರನ್ನೇ ಕೈಯಲ್ಲಿ ತಗೆದುಕೊಳ್ಳಲು ವೆಲ್ಲೆಸ್ಲಿ ಹೊಂಚು ಹಾಕಿದನು ಆಗಿನ ಅರಸುಗಳಲ್ಲಿ ಮೂರು ವರ್ಗಗಳಾಗುವಂತಿದ್ದವು, (೧) ಕೇವಲ ವಿಲಾಸಿಗಳಾದ ಸಣ್ಣಪುಟ್ಟ ಸಂಸ್ಥಾನಿಕರು, (೨) ಗೆಳೆತನವನ್ನು ಬಳೆಯಿಸಿದರ ಮೆಚ್ಚಿ ಬರಬಹುದಾದ ಸಂಸ್ಥಾನಿಕರು, (೩) ಏರಾಟದಿಂದಲೇ ಅಡಗಿಸಬೇಕಾದವರು — ಟೀಪು, ಸಿಂದೆ, ಹೋಳಕರ ಮೊದಲಾದವರು ಇವರಲ್ಲಿ ಮೊದಲನೆಯ ಗುಂಪಿನವರ ಹೆದರಿಕೆಯಿರಲಿಲ್ಲ ಮೂರನೆಯ ಗುಂಪಿನವರು ಏರಾಟದ ಹೊರತು ಬಗ್ಗುವಂತಿರಲಿಲ್ಲ ಅದರಿಂದ ವೆಲ್ಲೆಸ್ಲಿಯು ಎರಡನೆಯ ಗುಂಪಿನವರನ್ನೇ ಮೊದಲು ಎಳೆದು ಕೊಳ್ಳುವ ಕಾರ್ಯಕ್ಕೆ ಕೈಹಾಕಿದನು ಅದಕ್ಕಾಗಿ ಸಹಾಯಕ ಸೈನ್ಯಯೋಜನೆಯನ್ನು ಸಿದ್ಧಗೊಳಿಸಿದನು



ಲಾರ್ಡ ವೆಲ್ಲೆಸ್ಲಿ

**ಸಹಾಯಕ ಸೈನ್ಯಯೋಜನೆ** — ಭಾರತದಲ್ಲಿ ಬ್ರಿಟಿಶರ ಸಾಮ್ರಾಜ್ಯವನ್ನು ಸ್ಥಾಪಿಸುವದಕ್ಕೆ ಬ್ರಿಟಿಶ್ ಸೈನಿಕರಿಗೆ ತಕ್ಕ ಸೈನ್ಯಶಿಕ್ಷಣವನ್ನು ಕೊಡುವ ಕಾಲೇಜನ್ನು ಕಲಕತ್ತೆಯಲ್ಲಿ ತೆರೆದನು ಅಲ್ಲಿಯ ಶಿಕ್ಷಣ ಪದ್ಧತಿಯು ಸಾಮಾನ್ಯ ಸಂಸ್ಥಾನಿಕರ ಮನಸ್ಸನ್ನು ಸೆಳೆಯುವಂತೆ ಮಾಡಿದನು ಮೊದಲೇ ತಮ್ಮ ತಮ್ಮಲ್ಲಿ ಜಗಳವಾಡುತ್ತಿದ್ದ ಭಾರತೀಯ ಅರಸುಗಳಿಗೆ ಇದೊಂದು ತರದ ಪ್ರೋತ್ಸಾಹನವೆ ಆಯಿತು ಈ ಸೈನ್ಯವನ್ನು ಸಹಾಯಕ್ಕೆ ಕೊಡುವ ಬಗೆಗೆ ವೆಲ್ಲೆಸ್ಲಿಯು ಕೆಲವು ಕರಾರುಗಳನ್ನು ಮಾಡಿಟ್ಟನು, (೧) ಈ ಸೈನ್ಯವನ್ನು ಇರಿಸಿಕೊಂಡವರು ಬ್ರಿಟಿಶರ ಸಾರ್ವಭೌಮತ್ವವನ್ನು ಒಪ್ಪಬೇಕು (೨) ಸೈನ್ಯದ ವೆಚ್ಚಕ್ಕಾಗಿ ಪ್ರತಿವರ್ಷ ನಿಯಮಿತವಾದ ಹಣವನ್ನು ಕೊಡಬೇಕು, ಇಲ್ಲವೆ ಅಷ್ಟು ಉತ್ಪನ್ನದ ಸೀಮೆಯನ್ನು ಬಿಟ್ಟುಕೊಡಬೇಕು (೩) ಇಂಗ್ಲಿಷರ ಶತ್ರುಗಳನ್ನು ತಮ್ಮ ರಾಜ್ಯದಲ್ಲಿ ಅಧಿಕಾರಸ್ಥಾನದಲ್ಲಿಯಾಗಲಿ

ಬೇರ ರೀತಿಯಲ್ಲಾಗಲಿ ಇಟ್ಟುಕೊಳ್ಳಕೂಡದು. (೪) ದೇಶೀಯ ಅರಸುಗಳು ತಮ್ಮತಮ್ಮೊಳಗೆ ಯುದ್ಧವನ್ನಾಗಲಿ ಒಪ್ಪಂದವನ್ನಾಗಲಿ ಮಾಡಬಾರದು ಆ ಬಗಗ ಬ್ರಿಟಿಶರು ಹೇಳಿದುದನ್ನೇ ಎಲ್ಲರೂ ಆಚರಣೆಯಲ್ಲಿ ತರಬೇಕು (೫) ಇಂಗ್ಲಿಷರು ಅವಶ್ಯವೆನಿಸಿದಾಗ ಈ ಸಹಾಯಕಸೈನ್ಯವನ್ನು ಬೇಕಾದಲ್ಲಿ ಬೇಕಾದಂತೆ ಉಪಯೋಗಿಸಿಕೊಳ್ಳಬಲ್ಲರು. ಇದೇ ಸಹಾಯಕಸೈನ್ಯ ಯೋಜನೆ ಅಥವಾ ಸಬ್‌ಸಿಡಿಯರಿ ಸಿಸ್ಟಿಮ್

**ಯೋಜನೆಯ ಉಪಯೋಗ** — ಈ ಯೋಜನೆಯಿಂದ ಇಂಗ್ಲಿಷರು ಕಾಸಿನ ಖರ್ಚಿಲ್ಲದೆ ತಮ್ಮ ಸೈನ್ಯವನ್ನು ದೇಶದಲ್ಲೆಲ್ಲ ಪಸರಿಸುವಂತಾಯಿತು, ಬರಿಯ ಮಾತಿನಿಂದಲೇ ಮಾಂಡಲಿಕರನ್ನು ಮಾಡಿಕೊಂಡಂತಾಯಿತು, ಪರಕೀಯರ ಪ್ರಭಾವವನ್ನು ಕೂಡ ಕಡಮೆಮಾಡಿದಂತಾಯಿತು ಈ ಯೋಜನೆಯ ಪ್ರಚಾರದ ಪರಿಣಾಮವು ಹೀಗಾಯಿತು (೧) ಸರ ಜಾನ್ ಶೋಅರನ ಕಾಲ ದಿಂದ ನಿಜಾಮನು ಇಂಗ್ಲಿಷರ ಶತ್ರುವಾಗಿದ್ದನು, ಆದರೆ ವೆಲ್ಲೆಸ್ಲಿಯು ನಿಜಾಮನನ್ನು ತನ್ನ ಬಲೆಯಲ್ಲಿ ಎಳದುಕೊಂಡನು ಫ್ರೆಂಚ ಸೈನ್ಯವನ್ನು ಅಲ್ಲಿಂದ ತೆಗೆಸಿ ಆ ಸ್ಥಳದಲ್ಲಿ ಇಂಗ್ಲಿಷ ಸೈನ್ಯವನ್ನು ನಿಯಮಿಸಿದನು ಇದ ರಿಂದ ಟೀಪುವಿನ ವಿರುದ್ಧವಾಗಿ ಇಂಗ್ಲಿಷರಿಗೆ ಬಲವಾದ ಬೆಂಬಲ ಸಿಕ್ಕಂತಾ ಯಿತು (೨) ಪೇಶವೆ ಬಾಜೀರಾಯನು ವಸಯಿ ಒಪ್ಪಂದದಂತೆ ನೆರವಿನ ಸೈನ್ಯವನ್ನು ತನ್ನಲ್ಲಿಟ್ಟುಕೊಂಡನು (೩) ಗಾಯಕವಾಡನಲ್ಲಿಯೂ ಈ ಸಹಾಯಕ-ಸೈನ್ಯ ಸೇರಿತು (೪) ಅಯೋಧ್ಯೆಯ ವಜೀರನೂ ಸಹಾಯಕ ಸೈನ್ಯವನ್ನು ತನ್ನಲ್ಲಿ ಇಟ್ಟುಕೊಂಡನು.

ಇದರಿಂದ ಬ್ರಿಟಿಶ್ ಸಾಮ್ರಾಜ್ಯದ ಬೇರುಗಳು ದೂರ ದೂರ ಪಸರಿಸ ಹತ್ತಿದವು ಇಷ್ಟಾಗುತ್ತಲೇ ವೆಲ್ಲೆಸ್ಲಿಯು ನಿಸ್ಸತ್ವದ ಕೆಲವು ಸಂಸ್ಥಾನಿಕರಿಗೆ ಉಂಬಳಿ ಕೊಟ್ಟು ಅವರ ರಾಜ್ಯಗಳನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು, ಹೀಗೆ ಕೂಡಿಸಿಕೊಂಡ ರಾಜ್ಯಗಳು —

**ತಂಜಾವರ** —೧೭೭೧ರಲ್ಲಿ ಇಂಗ್ಲಿಷರು ತಂಜಾವರ ರಾಜ್ಯವನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ಇದು ಡೈರೆಕ್ಟರರಿಗೆ ಒಪ್ಪಿಗೆಯಾಗಲಿಲ್ಲ ಅದರಿಂದ, ಅದನ್ನು ತುಳಜಾಜಿಗೆ ತಿರಿಗಿ ಕೊಟ್ಟು ಆತನಲ್ಲಿ ಇಂಗ್ಲಿಷ ಸೈನ್ಯ ವನ್ನಿಟ್ಟರು, ಅದಕ್ಕೆ ಪ್ರತಿಯಾಗಿ ೨೭೭ ಹಳ್ಳಿಗಳನ್ನು ತೆಗೆದುಕೊಂಡರು. ಆತನ ತರುವಾಯ ಅಮರಸಿಂಹ-ಸರಫೋಜಿ ಇವರ ನಡುವೆ ಪಟ್ಟದ ಸಲು ವಾಗಿ ಜಗಳಕ್ಕೆ ಆರಂಭವಾಯಿತು ವೆಲ್ಲೆಸ್ಲಿಯು ಸರಫೋಜಿಗೆ ಉಂಬಳಿ ಯನ್ನು ಗೊತ್ತುಮಾಡಿ ತಂಜಾವರ ರಾಜ್ಯವನ್ನು ತಮ್ಮ ರಾಜ್ಯಕ್ಕೆ ಕೂಡಿಸಿ ಕೊಂಡನು

**ಅರ್ಕಾಡು** — ಅರ್ಕಾಡಿನ ನವಾಬನಾದ ಮುಹಮ್ಮದ ಅಲಿಯು ಮರಣ ಹೊಂದಿದ ತರುವಾಯ ಅವನ ಮಗ ಉಮದತ್ ಉಮರನು ನವಾಬ ಸಾದನು ಅವನು ಟೀಪುಸುಲ್ತಾನನೊಡನೆ ಸಂಬಂಧವನ್ನಿಟ್ಟುಕೊಂಡನೆಂದು ಇಂಗ್ಲಿಷರು ಆರೋಪ ಹೊರಿಸಿದರು ತುಸು ದಿನಗಳಲ್ಲಿಯೇ ಅವನೂ ನತ್ತನು ಆ ಮೇಲೆ ಅವನ ಸಂಬಂಧಿಕರಿಗೆ ಉಂಬಳಿಯನ್ನು ಗೊತ್ತುಮಾಡಿ ಅರ್ಕಾಡನ್ನು ವಶಮಾಡಿಕೊಂಡರು

**ಅಯೋಧ್ಯೆ** – 'ಅಯೋಧ್ಯೆಯ ನವಾಬ ಸಾದತಅಲಿಯು ಅಫಗಾನಿಸ್ತಾನದ ಅರಸರೊಡನೆ ಸಂಬಂಧವನ್ನಿಟ್ಟುಕೊಂಡಿದ್ದಾನೆ, ಟೀಪುವಿನೊಡನೆ ಸಂಚು ನಡೆಸಿದ್ದಾನೆ' ಎಂದು ಆರೋಪ ಹೊರಿಸಿ, ವೆಲ್ಲೆಸ್ಲಿಯು ಅವನಲ್ಲಿ ಬಲವಂತವಾಗಿಯೇ ಸಹಾಯಕ ಸೈನ್ಯವನ್ನಿಟ್ಟನು, ಅದರ ವೆಚ್ಚಕ್ಕಾಗಿ ೧½ ಕೋಟಿ ರೂಪಾಯಿ ಉತ್ಪನ್ನದ ಗಂಗಾ-ಯಮುನಾ ಮಧ್ಯದ ಫಲವತ್ ಪ್ರದೇಶ ಮತ್ತು ರೋಹಿಲಖಂಡಗಳನ್ನು ತೆಗೆದುಕೊಂಡನು

**ಸುರತ** — ಸುರತದ ನವಾಬನ ಆಳಿಕೆ ಸರಿಯಾಗಿಲ್ಲವೆಂದು ಅವನಿಗೆ ಉಂಬಳಿಯನ್ನು ಕೊಟ್ಟು, ವೆಲ್ಲೆಸ್ಲಿಯು ಆ ಸಂಸ್ಥಾನವನ್ನು ಬ್ರಿಟಿಶ್ ಆಡಳಿತಕ್ಕೆ ಕೂಡಿಸಿಕೊಂಡನು

ಈ ರೀತಿಯಾಗಿ ವೆಲ್ಲೆಸ್ಲಿಯು ಬೆಂಬಲ ಕೊಟ್ಟು ಬೆದರಿಕೆ ತೋರಿಸಿ ರಾಜ್ಯವನ್ನು ವಿಸ್ತರಿಸಿದನು ಬಲಿಷ್ಠ ವೈರಿಗಳ ವಿರುದ್ಧವಾಗಿ ಬ್ರಿಟಿಶ ಶಕ್ತಿಯನ್ನು ಬೆಳೆಸಿಕೊಂಡನು ಅಲ್ಲದೆ, ಏರಾಟದ ತಂತ್ರಕ್ಕೂ ಕೈಹಾಕಿದನು

**ಮೈಸೂರಿನ ನಾಲ್ಕನೆಯ ನಿಕರದ ಯುದ್ಧ (೧೭೯೯)—ಕಾರಣ** - ಶ್ರೀರಂಗಪಟ್ಟಣದ ಒಪ್ಪಂದದಿಂದ ಟೀಪು ಇಂಗ್ಲಿಷರಿಗೆ ಅಂಕಿತನಾದಂತೆಯೇ ಆಗಿತ್ತು, ಆದರೂ ಅವನು ನೆಪೋಲಿಯನನೊಡನೆ ಪತ್ರವ್ಯವಹಾರವನ್ನು ನಡೆಸಿದ್ದನು, ಅದರಂತೆ ಹಲವು ಫ್ರೆಂಚ ಸೈನಿಕರು ಮಂಗಳೂರವರೆಗೂ ಬಂದಿದ್ದರು ಇದು ವೆಲ್ಲೆಸ್ಲಿಗೆ ತಿಳಿಯಿತು ಕೂಡಲೆ—'ಫ್ರೆಂಚ ಸೈನ್ಯವನ್ನು ಕಿತ್ತು ಸಹಾಯಕ ಸೈನ್ಯಪದ್ಧತಿಗೆ ಒಪ್ಪಬೇಕು, ಮತ್ತು ಬ್ರಿಟಿಶ್ ಸೈನ್ಯವನ್ನು ಇಟ್ಟುಕೊಳ್ಳಬೇಕು'—ಎಂದು ಟೀಪುವಿಗೆ ತಿಳಿಸಿದನು ಅವನಿಂದ ಯಾವ ಉತ್ತರವೂ ಬರಲಿಲ್ಲ ವಲ್ಲೆಸ್ಲಿಯು ನಿಜಾಮನನ್ನು ಕೂಡಿಕೊಂಡು ಯುದ್ಧವನ್ನೇ ಆರಂಭಿಸಿದನು ಮರಾಠರ ಬೆಂಬಲವು ಮಾತ್ರ ಹೊತ್ತಿಗೆ ಸರಿಯಾಗಿ ಬರಲಿಲ್ಲ ಮೈಸೂರಿನ ಅನೇಕ ಪಾಳೆಯಗಾರರೂ ಹಿಂದಿನ ರಾಜಮನೆತನದ ಅನುಯಾಯಿಗಳೂ ಇಂಗ್ಲಿಷರಿಗೆ ಸಹಾಯಮಾಡುವದಾಗಿ ವಾಗ್ದಾನ ಮಾಡಿದ್ದರು

**ಶ್ರೀರಂಗಪಟ್ಟಣದ ಮುತ್ತಿಗೆ** — ಜನರಲ್ **ಹ್ಯಾರೀಸ್**ನು ೨೦ ಸಾವಿರ ಸೈನ್ಯ, ಮತ್ತು ೨೦೦ ತೋಫುಗಳನ್ನು ತಕ್ಕೊಂಡು, ಮದ್ರಾಸದಿಂದ ಸಾಗಿ ಬಂದನು, ಆರ್ಥರ ವೆಲ್ಲೆಸ್ಲಿಯು ಆತನೊಡನೆಯೇ ಇದ್ದನು ಮುಂಬಯಿ ಯಿಂದ ಜನರಲ್ ಸ್ಟುಅರ್ಟನು ಒಂದು ಸೇನೆಯೊಡನೆ ಶ್ರೀರಂಗಪಟ್ಟಣಕ್ಕೆ ಹೊರಟನು ಈತನೊಡನೆ **ಜನರಲ್ ಬೇಯರ್ಡ** ಇದ್ದನು ಇವೆರಡೂ ಸೈನ್ಯ ಗಳನ್ನು ಟೀಪುವು ಬೇರೆ ಬೇರೆಯಾಗಿ ನಡುದಾರಿಯಲ್ಲಿಯೇ ಇದಿರಿಸಿದನು, ಆದರೆ ದುರ್ದೈವದಿಂದ ಸೋತು ಹಿಂತಿರುಗಿದನು ಶ್ರೀರಂಗಪಟ್ಟಣವನ್ನು ಸೇರಿ ಭದ್ರವಾಗಿ ಸಿದ್ಧತೆಯನ್ನಿಟ್ಟುಕೊಂಡನು

ಶ್ರೀರಂಗಪಟ್ಟಣದ ಏಳು ಸುತ್ತಿನ ಕೋಟೆಯು ಬಲು ಭದ್ರವಾಗಿದೆ, ಅದು ಕಾವೇರಿ ನದಿಯ ದಂಡೆಯಲ್ಲಿದೆ ನದಿಯಲ್ಲಿ ನೀರಿನ ಪೂರೈಕೆ ಯಿದ್ದರೆ ಕೋಟೆಯ ಕಂದಕಗಳೆಲ್ಲ ನೀರು ತುಂಬುವಂತೆ ಯಂತ್ರಗಳ ಯೋಜನೆ ಇತ್ತು, ಆದರೆ ಅವನ ದುರ್ದೈವಕ್ಕೆ ಹೊಳೆಯೆಲ್ಲ ಆಗ ಬತ್ತಿ ಹೋಗಿತ್ತು. ಕಾವೇರಿಯ ಮತ್ತೊಂದು ದಂಡೆಯ ಮೇಲೆ ಇಂಗ್ಲಿಷ-ನಿಜಾಮ-ಮರಾಠರು ಬೀಡುಬಿಟ್ಟಿದ್ದರು

ಇಂಗ್ಲಿಷರು ಇದ್ದಲ್ಲಿಂದಲೇ ತೋಫು ಹಾರಿಸಿ ಕೋಟೆಯ ಗೋಡೆಗಳನ್ನು ಕೆಡಹುವ ವಿಫಲಯತ್ನ ಮಾಡಿದರು ಆದರೆ ಟೀಪುವಿನ ಅಧಿಕಾರೀ ವರ್ಗದಲ್ಲಿ ಒಡಕು ಹುಟ್ಟಿತ್ತು ಪೂರ್ಣಯ್ಯ ಮಂತ್ರಿ, ಮೀರಸಾದಕ ಎಂಬ ಕಾರ ಭಾರಿಗಳ ತಂತ್ರದಿಂದ ಇಂಗ್ಲಿಷರಿಗೆ ಕೋಟೆಯನ್ನು ಹೊಗುವದಕ್ಕೆ ದಾರಿ ಸಿಕ್ಕಿತು ಜನರಲ್ ಬೇಯರ್ಡನು ಈ ಮೊದಲು ಶ್ರೀರಂಗಪಟ್ಟಣದ ಸೆರೆಮನೆಯಲ್ಲಿದ್ದ, ಅದರಿಂದ ದಾರಿಯ ಗೊತ್ತು-ಮಟ್ಟುಗಳನ್ನು ಬಲ್ಲವ ನಾಗಿದ್ದ ಒಳಗಿನ ಜನರ ನೆರವು ಸಿಕ್ಕುತ್ತಲೇ ಜನರಲ್ ಬೇಯರ್ಡನೇ ಸೈನ್ಯಸಹಿತ ಮುಂದಾಗಿ ಕಾವೇರಿಯನ್ನು ದಾಟಿದ, ಕೋಟೆಯ ಗೋಡೆಗಳನ್ನು ಒಡೆದು ಒಳಗೆ ನುಗ್ಗಿದ ದೂರದಿಂದ ಇಂಗ್ಲಿಷರ ತೋಫುಗಳಂತೂ ತೆರಪಿಲ್ಲದೆ ಗುಂಡಿನ ಮಳೆಗರೆಯುತ್ತಿದ್ದವು

ಈ ಸುದ್ದಿ ಟೀಪುವಿಗೆ ತಿಳಿಯಿತು ಅವನು ಖಡ್ಗಪಾಣಿಯಾಗಿ ಅರಮನೆ ಯಿಂದ ಹೊರಟನು ತನ್ನ ದಂಡಾಳುಗಳನ್ನು ಹುರಿಗೊಳಿಸುತ್ತ ಶತ್ರುಗಳನ್ನು ತುಂಡರಿಸಲು ಸಿದ್ಧನಾದನು ಅಷ್ಟರಲ್ಲಿ ಅವನಿಗೆ ಎರಡುಮೂರು ಗುಂಡು ಗಳು ಬಡಿದು ಪ್ರಾಣಬಿಟ್ಟನು

**ಶವಸಂಸ್ಕಾರ** — ಟೀಪು ಸಾಯುತ್ತಲೇ ಕೋಟೆಯ ಬಾಗಿಲುಗಳೆಲ್ಲ ತೆರೆದವು ಇಂಗ್ಲಿಷರೆಲ್ಲ ಗೆಲುವಿನ ದನಿಯೊಡನೆ ಒಳಹೊಕ್ಕರು, ಟೀಪುವಿನ ಹೆಣವನ್ನು ಹುಡುಕಿ ರಾಜಮರ್ಯಾದೆಯಿಂದ ಆತನ ಶವವನ್ನು ಗಂಜಾಮುದಲ್ಲಿ

ಹೈದರನ ಗೋರಿಯ ಹತ್ತಿರವೇ ಗೋರಿಗೊಳಿಸಿದರು ಇಂದಿಗೂ ಗಂಜಾಮದಲ್ಲಿ ಆ ಗೋರಿಯನ್ನು ನೋಡಬಹುದು

**ಮೈಸೂರು ರಾಜ್ಯವ್ಯವಸ್ಥೆ** — ಈ ಪ್ರಸಂಗದಲ್ಲಿ ಬ್ರಿಟಿಶರು ಮಹಾ ಮುತ್ಸದ್ದಿತನದಿಂದ ಮುನ್ನಡೆಯಬೇಕಾಯಿತು ಏಕೆಂದರೆ, ಗೆದ್ದ ರಾಜ್ಯದಲ್ಲಿ ನಿಜಾಮನಿಗೂ ಪಾಲನ್ನು ಕೊಡಬೇಕಾಗಿತ್ತು ಮೊದಲು ಮೈಸೂರಿನ ಮೂಲ ಒಡೆಯರ ಅರಸುಮನೆತನದ ಲಕ್ಷ್ಮಮ್ಮಣ್ಣಿಯ ಬೇಡಿಕೆಯಂತ ಆಕೆಯ ಅಯ್ದು ವರುಷದ ಮಗ ಮುಮ್ಮಡಿ ಕೃಷ್ಣರಾಜನನ್ನು ಮೈಸೂರ ಪಟ್ಟಕ್ಕೆ ಕುಳ್ಳಿರಿಸಿದರು, ರಾಜನ ಪೂರಾ ಮೇಲ್ವಿಚಾರಣೆಯನ್ನು ತಾವೇ ವಹಿಸಿಕೊಂಡರು ಮೈಸೂರಿನಲ್ಲಿ ಸಹಾಯಕ ಸೈನ್ಯವನ್ನಿಟ್ಟು ಮುವತ್ತುಲಕ್ಷ ಖಂಡಣಿಯನ್ನು ಗೊತ್ತುಮಾಡಿದರು ಟೀಪುವಿನ ಉಳಿದ ರಾಜ್ಯದಲ್ಲಿ ನಿಜಾಮನಿಗೆ ಮುವತ್ತು ಲಕ್ಷ ಉತ್ಪನ್ನದ ಸೀಮೆ ಹೋಯಿತು, ಬ್ರಿಟಿಶರಿಗೆ ಕೋಯಿಮತ್ತೂರು, ಉತ್ತರ ಕನ್ನಡ ಭಾಗಗಳು ದೊರೆತವು ಟೀಪುವಿನ ವಂಶಸ್ಥರು ಒಂಬತ್ತು ಲಕ್ಷ ರೂಪಾಯಿಗಳ ಉಂಬಳಿಯನ್ನು ತಕ್ಕೊಂಡು, ವೆಲ್ಲೂರಿನ ಸ್ಥಾನಬದ್ಧ ಸೆರೆಯಲ್ಲಿರುವಂತಾಯಿತು

ಈ ಬ್ರಿಟಿಶ್ ಸಾಮ್ರಾಜ್ಯದ ಹಬ್ಬುಗೆಯ ಕಾರ್ಯದಲ್ಲಿ ಶಕ್ತಿಮೀರಿ ಸಾಹಸ ಮಾಡಿದುದಕ್ಕಾಗಿ ವೆಲ್ಲೆಸ್ಲಿಗೆ 'ಮಾರ್ಕ್ವಿಸ್' ಎಂಬ ಬಿರುದು ದೊರೆಯಿತು, ಮತ್ತು ಮುಕ್ಕಾಲು ಲಕ್ಷ ರೂಪಾಯಿ ವರ್ಷಾಶನ ಸಿಕ್ಕಿತು

**ಸಾಮ್ರಾಜ್ಯ ಮುನ್ನಡೆ** — ಟೀಪುವಿನ ತರುವಾಯ ಇಂಗ್ಲಿಷರನ್ನು ಇದಿರಿಸುವ ಗಂಡುಗಲಿಗಳಾರೂ ಉಳಿಯಲಿಲ್ಲ ಅದರಿಂದ ಮೈಸೂರಿನ ನಾಲ್ಕನೆಯ ಯುದ್ಧದಲ್ಲಿಯೇ ಬ್ರಿಟಿಶ್ ಸಾಮ್ರಾಜ್ಯದ ಬೇರು ದೂರದ ವರೆಗೂ ಇಳಿದವೆಂದು ಹೇಳಬಹುದು

**ಮರಾಠರೊಡನೆ ಎರಡನೆಯ ಯುದ್ಧ** —(೧೮೦೩) ಈ ಕಾಲಕ್ಕೆ ಇಂಗ್ಲಿಷರಿಗ ಉಳಿದ ಪ್ರಬಲ ಶತ್ರುಗಳೆಂದರೆ ಮರಾಠರು ಬಾಜಿರಾಯನೊಡನೆ ಇಂಗ್ಲಿಷರು ಮಾಡಿಕೊಂಡ ವಸಯಿ ಒಪ್ಪಂದವು ಸಿಂದೆ-ಭೋಸಲೆ-ಹೋಳಕರ ಮೊದಲಾದ ಸ್ವಾತಂತ್ರ್ಯಪ್ರೇಮಿಗಳಿಗೆ ಸಮ್ಮತವಿರಲಿಲ್ಲ ಅವರನ್ನು ಮೆತ್ತಗೆ ಮಾಡದೆ ಬ್ರಿಟಿಶರು ಕಾಲೂರಿ ನಿಲ್ಲುವಂತಿರಲಿಲ್ಲ ಅದರಿಂದ ಸಿಂದೆ-ಭೋಸಲೆಯರನ್ನು ಲಾಸ್ವಾರಿ, ದೇವಗಾಂವ, ಅಸಾಯಿ ಈ ಯುದ್ಧಗಳಲ್ಲಿ ವೆಲ್ಲೆಸ್ಲಿಯು ಸೋಲಿಸಿದನು ಇಬ್ಬರನ್ನೂ ಒಪ್ಪಂದದ ಹಿಡಿತದಲ್ಲಿ ತಂದು ಅವರಲ್ಲಿ ಸಹಾಯಕ ಸೈನ್ಯವನ್ನಿಟ್ಟನು ಅದಕ್ಕೆ ಪ್ರತಿಯಾಗಿ ಸಿಂದೆನಿಂದ ಭಡೋಚ, ಭೋಸಲೆಯಿಂದ ಕಟಕ ಪ್ರಾಂತಗಳು ಸಿಕ್ಕವು ಹೋಳ್ಕರನೊಡನೆ ಮಾತ್ರ ಇನ್ನೂ ಯುದ್ಧ ಸಾಗಿತ್ತು ಜನರಲ್ ಲೇಕನು ಬ್ರಿಟಿಶ್

ಸೈನ್ಯದ ಪರವಾಗಿ ಹೋರಾಡುತ್ತಿದ್ದನು ಆದರೆ, ವೆಲ್ಲೆಸ್ಲಿಯ ಈ ಪರಾಟದ ಧೋರಣೆಯು ಕಂಪನಿಯ ಡೈರೆಕ್ಟರರ ಮನಸ್ಸಿಗೆ ಬರಲಿಲ್ಲ ಅದರಿಂದ ಯುದ್ಧ ನಡೆದಿರುವಾಗಲೇ ವೆಲ್ಲೆಸ್ಲಿಯನ್ನು ಇಂಗ್ಲಂಡಿಗೆ ಹಿಂದಿರುಗಿ ಕರೆಸಿಕೊಂಡರು (೧೮೦೫) ಆ ಮೇಲೆ ಹೋಳಕರನೊಡನೆ ಒಪ್ಪಂದವಾಯಿತು ಕರಾರಿನಂತೆ ಅವನು ತನ್ನಲ್ಲಿ ಸಹಾಯಕ ಸೈನ್ಯವನ್ನು ಇಟ್ಟುಕೊಳ್ಳಬೇಕಾಯಿತು ಹೀಗೆ ಮರಾಠರೆಲ್ಲ ಮಿತ್ರಗಾದರು

**ವೆಲ್ಲೆಸ್ಲಿಯ ಯೋಗ್ಯತೆ** — ಸಮಯಕ್ಕ ತಕ್ಕ ಸೂಚಕಬುದ್ಧಿ ಪ್ರಸಂಗಕ್ಕೆ ಎದೆಯೊಡ್ಡಿ ನಿಲ್ಲುವ ಧೈರ್ಯ, ಆತ್ಮವಿಶ್ವಾಸ ಸಂಧಿಸಾಧಿಸಿ ಮುನ್ನು

ಲಾರ್ಡ ವೆಲ್ಲೆಸ್ಲಿ ಕಾಲದ
ಬ್ರಿಟಿಶ್ ಹಿಂದುಸ್ತಾನ
೧೮೦೫

ಗ್ಗುವ ಮಹತ್ವಾಕಾಂಕ್ಷೆ ಇವುಗಳಿಂದ ವೆಲ್ಲೆಸ್ಲಿಯು ಅಸಾಮಾನ್ಯನೆಂದೇ ಹೇಳಬಹುದು ಬ್ರಿಟಿಶ ಸಾಮ್ರಾಜ್ಯವನ್ನು ಭಾರತದಲ್ಲಿ ನೆಲೆನಿಲ್ಲಿಸಿ ದವನು ಈತನೇ. ಅದರಿಂದ ಲಂಡನದಲ್ಲಿಯ ಇಂಡಿಯಾ ಹೌಸಿನ

(ಭಾರತದ ಕಚೇರಿ) ಮುಂದೆ ಈತನ ಪ್ರತಿಮೆಯನ್ನು ನಿಲ್ಲಿಸಿ ಗೌರವಿಸಲಾಗಿದೆ

ವೆಲ್ಲೆಸ್ಲಿ ಗೆಲ್ಲುವದರಲ್ಲಿ ಗಟ್ಟಿಗನಿದ್ದಂತೆ ಆಡಳಿತದಲ್ಲಿಯೂ ಬಲ್ಲಿದನಾಗಿದ್ದನು ಭಾರತೀಯ ಇತಿಹಾಸ-ಸಾಹಿತ್ಯಗಳನ್ನು ಅಭ್ಯಾಸಮಾಡುವುದಕ್ಕೆ ಈತನು ಒಂದು ವಿದ್ಯಾಸಂಸ್ಥೆಯನ್ನು ಸ್ಥಾಪಿಸಿದನು ಸಹಾಯಕಸೈನ್ಯ ಯೋಜನೆಯಿಂದ ಭಾರತದಲ್ಲಿ ತಾತ್ಪೂರ್ತಿಕ ಶಾಂತಿಯನ್ನು ಸ್ಥಾಪಿಸಿದನು.

## ಅಭ್ಯಸನಗಳು

೧ ಲಾರ್ಡ ವೆಲ್ಲೆಸ್ಲಿಯನ್ನು ಗವರ್ನರ ಜನರಲ್ಲನನ್ನಾಗಿ ನಿಯಮಿಸಿದುದೇಕೆ? ಅವನ ಧ್ಯೇಯ ಧೋರಣಗಳಾವುವು?

೨ ಸಹಾಯಕಸೈನ್ಯ ಪದ್ಧತಿಯೆಂದರೇನು? ಅದರ ಪರಿಣಾಮವೇನಾಯಿತು?

೩ ಮೈಸೂರಿನ ನಾಲ್ಕನೆಯ ಯುದ್ಧವು ಯಾರ ಯಾರ ನಡುವ ಆಯಿತು? ಯಾರು ಸೋತರು? ಯಾಕೆ?

೪ ವೆಲ್ಲೆಸ್ಲಿಯ ಪ್ರತಿಮೆಯನ್ನು ಎಲ್ಲಿ ನಿಲ್ಲಿಸಿದ್ದಾರೆ? ಅವನನ್ನು ಅಷ್ಟು ಗೌರವಿಸಲು ಕಾರಣವೇನು?

## ೭ ಬ್ರಿಟಿಶ್ ರಾಜ್ಯವನ್ನು ಸ್ಥಿರಗೊಳಿಸಿದ್ದು

**ಲಾರ್ಡ ಕಾರ್ನವಾಲೀಸ** —ಲಾರ್ಡ ವೆಲ್ಲೆಸ್ಲಿಯು ಏರಾಟದ ಧೋರಣೆಯಿಂದ ಬ್ರಿಟಿಶರಿಗೆ ಭಾರತದ ಬಹುಭಾಗ ಸಿಕ್ಕಿತು, ಆದರೆ ಬೊಕ್ಕಸವು ಬರಿದಾಗತೊಡಗಿತು ಸೈನಿಕರ ಸಂಬಳವೂ ಕಟ್ಟಾಯಿತು ಆದುದರಿಂದ ಕ್ರಿ ಶ ೧೮೦೫ರಲ್ಲಿ ತಟಸ್ಥ ಧೋರಣೆಯ ಲಾರ್ಡ ಕಾರ್ನವಾಲೀಸನನ್ನು ಎರಡನೆಯ ಸಲ ಗವ್ಹರ್ನರ ಜನರಲ್ಲನನ್ನಾಗಿ ಕಳಿಸಿದರು ಆತನು ಅಲ್ಲಲ್ಲಿ ನಡೆದ ಯುದ್ಧಗಳನ್ನು ನಿಲ್ಲಿಸಿ, ದಿಲ್ಲಿಯ ಶಹಾ ಅಲಮನಿಗೆ ರಾಜಮರ್ಯಾದೆ ಮಾಡಿ, ಆತನ ಕಾವಲಿಗಾಗಿ ಬಲವಾದ ಬ್ರಿಟಿಶ್ ಸೈನ್ಯವನ್ನು ಇಟ್ಟನು ಭಾರತಕ್ಕೆ ಬಂದ ಮೂರು ತಿಂಗಳೊಳಗೇ ಅವನ ಅವಸಾನವಾಯಿತು ಆತನ ತರುವಾಯ ಗವ್ಹರ್ನರ ಜನರಲ್ಲನಾದ ಸರ ಜಾರ್ಜ ಬಾರ್ಲೋನೂ ಅದೇ ಧೋರಣಯನ್ನೇ ಅನುಸರಿಸಿದನು ಆದರೆ ಮದ್ರಾಸದ ಗವ್ಹರ್ನರನಾದ ಬೆಂಟಿಂಕನು ಸೈನಿಕರ ಉಡುಪು-ತೊಡುಪುಗಳ ಬಗೆಗೆ ವಿಶಿಷ್ಟ ನಿಯಮಗಳನ್ನು ಮಾಡಿದ್ದರಿಂದ ವೆಲ್ಲೂರಲ್ಲಿ ದಂಗೆ ಎದ್ದಿತು ಕಂಪನಿ ಸರಕಾರದವರು ಬೆಂಟಿಂಕನನ್ನು ತಿರುಗಿ ಕರೆಸಿಕೊಂಡರು ಬಾರ್ಲೋನನ್ನು ಮದ್ರಾಸದ ಗವ್ಹರ್ನರನನ್ನಾಗಿ ಮಾಡಿದರು ಇದರಿಂದ ದಂಗೆ ನಿಂತಿತು

**ಲಾರ್ಡ ಮಿಂಟೊ** —ಕ್ರಿ ಶ (೧೮೦೭-೧೮೧೩) ಆ ಮೇಲೆ ಗವ್ಹರ್ನರ ಜನರಲ್ಲನಾಗಿ ಬಂದ ಲಾರ್ಡ ಮಿಂಟೋನು ತಟಸ್ಥ ಧೋರಣೆಯನ್ನೇ ಇದಿರಿಗಿಟ್ಟುಕೊಂಡು ಬಂದಿದ್ದನು, ಆದರೆ ವಾಯವ್ಯ ಗಡಿಸೀಮೆಯ ಮಾರ್ಗವಾಗಿ ನೆಪೋಲಿಯನನು ಭಾರತಕ್ಕೆ ಬರಬಹುದೆಂದು ತಿಳಿದು, ಇರಾಣಕ್ಕೆ ಸರ್ ಜಾನ್ ಮಾಲ್ಕಮನನ್ನು ರಾಯಭಾರಿಯನ್ನಾಗಿ ಕಳಿಸಿದನು ಅದು ಯಶಸ್ವಿಯಾಯಿತು ವಾಯವ್ಯ ಗಡಿಯಲ್ಲಿದ್ದ ಶೀಖ ಅರಸನಾದ ರಣಜಿತ ಸಿಂಗನೊಡನೆಯೂ ಒಪ್ಪಂದಮಾಡಿಕೊಂಡನು ಈ ಸಮಯಕ್ಕೆ ಹೋಳಕರನ ಹಸ್ತಕರಾದ ಪೆಂಡಾರಿಗಳು ರಾಜಪುತಾನಾ, ಮಾಳವಾ, ಗುಜರಾತಗಳಲ್ಲಿ ಕೊಲೆಸುಲಿಗೆಗಳನ್ನು ನಡೆಸಿದರು ಜನರಿಗೆ ಬ್ರಿಟಿಶರ ಅಧೀನದಲ್ಲಿದ್ದ ಪ್ರದೇಶದಲ್ಲಿಯ ಆಡಳಿತವೇ ಒಳ್ಳೆಯದೆನಿಸತೊಡಗಿತು

**ಕಂಟಕಗಳ ನಿರ್ಮೂಲನ** —ತರುವಾಯ ಕ್ರಿ ಶ ೧೮೧೩ರಲ್ಲಿ ಗವ್ಹರ್ನರ ಜನರಲ್ಲನಾದ **ಲಾರ್ಡ ಹೇಸ್ಟಿಂಗ್ಸನು** ಕ್ರಿ ಶ ೧೮೨೩ರ ವರೆಗೆ ಇದ್ದು ಬ್ರಿಟಿಶರ ಸತ್ತೆಗೆ ಅಲ್ಲಲ್ಲಿ ಅಡ್ಡಾಗಬಹುದಾದ ಕಂಟಕಗಳನ್ನೆಲ್ಲ ಬೇರುಸಹಿತ ಕಿತ್ತಿತೆಗೆದನು ಇದಕ್ಕಾಗಿ ಅವನು ಏರಾಟದ ಧೋರಣೆಯನ್ನೇ ಅನುಸರಿಸ ಬೇಕಾಯಿತು. ಇಲ್ಲಿಯ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಮೊದಲು

ಭಾರತದ ಸಂಚಾರವನ್ನು ಕೈಕೊಂಡನು ಹಿಮಾಲಯದ ದಕ್ಷಿಣಕ್ಕೆ ಇದ್ದ ನೇಪಾಳದ ಗುರ್ಖರು ಸುತ್ತಣ ಪ್ರದೇಶದಲ್ಲಿ ದಾಳಿಮಾಡಿ ಇಂಗ್ಲಿಷರ ಐನೂರು ಹಳ್ಳಿಗಳನ್ನು ಹಿಡಿದುಕೊಂಡರು, ಮುಂದೆ ನಾಗಿ ಮತ್ತೆ ಕೆಲವು ಇಂಗ್ಲಿಷರ ಠಾಣ್ಯಗಳನ್ನು ಹಿಡಿದು ಕೊಂಡರು ಇಂಗ್ಲಿಷರಿಗೆ ಎಷ್ಟೋ ಹಾನಿ ಯಾಯಿತು ಕೊನೆಗೆ ಹೇಸ್ಟಿಂಗ್ಸನು **ಕರ್ನಲ್ ಲೋನಿಯನ್ನು** ಕಳಿಸಿದನು ಅವನು ಗುರ್ಖರ ದೊರೆಯಾದ ಅಮರ-ಸಿಂಗನನ್ನು ಮಲಾವುನಾ ಕೋಟೆಯಲ್ಲಿ ಕೊಳೆಹಾಕಿ, ಗುರ್ಖರನ್ನು ಪೂರಾ ಸೋಲಿಸಿದನು ಕ್ರಿ ಶ ೧೮೧೬ರಲ್ಲಿ ಗುರ್ಖರು ಒಪ್ಪಂದಮಾಡಿಕೊಂಡರು ಇದರಿಂದ ಗುರ್ಖರು ಇಂಗ್ಲಿಷರ ಮಿತ್ರರಾದರು ಅನೇಕರು ಇಂಗ್ಲಿಷರ ಸೈನ್ಯದಲ್ಲಿ ಸೇರ್ಪಡೆಯಾದರು ಇಂಗ್ಲಿಷರ ಸಾಮ್ರಾಜ್ಯದ ಸ್ಥಿರತೆಗೆ ಅವರಿಂದ ಮುಂದೆ ಎಷ್ಟೋ ಸಹಾಯವಾಯಿತು



ಲಾರ್ಡ ಹೇಸ್ಟಿಂಗ್ಸ

ಇದೇ ಕಾಲದಲ್ಲಿ ಪೆಂಡಾರಿಗಳು ಸಿಕ್ಕ ಸಿಕ್ಕಲ್ಲಿ ಕೊಲೆಸುಲಿಗೆ ನಡೆಸಿ ಸೈನ್ಯವು ಬೆನ್ನಟ್ಟುತ್ತಲೇ ಓಡಿಹೋಗುತ್ತಿದ್ದರು ಆಗ ಹೇಸ್ಟಿಂಗ್ಸನು ಬಲವಾದ ಸೈನ್ಯವನ್ನು ನಾಲ್ಕೂ ಕಡೆಗಳಿಂದ ಅವರ ಮೇಲೆ ಕಳಿಸಿದನು ಪೆಂಡಾರಿಗಳು ನಡುವೆ ಸಿಕ್ಕು ನುಗ್ಗಾದರು ಅವರ ಮುಂದಾಳುಗಳಾದ ವಾಸಿಲ ಮುಹಮ್ಮದ ಮತ್ತು ಚಿತ್ತೂ ಅವರು ಕ್ರಿ ಶ ೧೮೧೭ರಲ್ಲಿ ತೀರಿಕೊಂಡರು ಉಳಿದವರು ಒಪ್ಪಂದಮಾಡಿಕೊಂಡರು ಯೋಗ್ಯರಾದ ಕೆಲವರಿಗೆ ಇಂಗ್ಲಿಷರು ಜಹಗೀರುಗಳನ್ನು ಹಾಕಿಕೊಟ್ಟರು ಇಲ್ಲಿಗೆ ಪೆಂಡಾರಿಗಳ ಸದ್ದು ಅಡಗಿತು

ಅತ್ತ ಮರಾಠರಲ್ಲಿ ಸಿಂದೆ, ಹೋಳಕರರು ಮತ್ತೊಮ್ಮೆ ಸ್ವಾತಂತ್ರ್ಯ ಯುದ್ಧವನ್ನು ಹೂಡಲು ಎರಡನೆಯ ಬಾಜೀರಾಯನನ್ನು ಹುರಿದುಂಬಿಸಹತ್ತಿದರು ಮರಾಠರ ಸೈನ್ಯವು ಸಿದ್ಧವಾಯಿತು **ಬಾಪೂ ಗೋಖಲೆ, ತ್ರಿಯಂಬಕಜಿ ಡೇಂಗಳೆ** ಎಂಬ ಶೂರರು ಸೇನಾಪತಿಗಳಾದರು, ಆದರೆ ಇಂಗ್ಲಿಷರೂ ಸಿದ್ಧತೆಯಲ್ಲಿಯೇ ಇದ್ದರು ಖಡಕಿಯಲ್ಲಿ ಕಾಳಗವಾಗಿ ಮರಾಠರು ಸೋತರು ಪುಣೆಯು ಇಂಗ್ಲಿಷರ ವಶಕ್ಕೆ ಬಂದಿತು ಬಾಜೀರಾಯನು ಕೋರೇಗಾಂವಕ್ಕೆ ಓಡಿಹೋದನು ಬಾಪೂ ಗೋಖಲೆಯು ವೀರಸ್ವರ್ಗವನ್ನು ಪಡೆದನು ಬಾಜೀರಾಯನು ಸಿಂದೆ, ಹೋಳಕರರ ಸಹಾಯವನ್ನು ಪಡೆ

ಯಲು ಹೋಗುತ್ತಿದ್ದಾಗ ಇಂಗ್ಲಿಷರ ಕೈಯಲ್ಲಿ ಸಿಕ್ಕನು ವರ್ಷಕ್ಕೆ ಎಂಟು ಲಕ್ಷ ರೂಪಾಯಿ ಉಂಬಳಿಯನ್ನು ಗೊತ್ತುಮಾಡಿ ಅವನನ್ನು ಬ್ರಹ್ಮಾವರ್ತಕ್ಕೆ ಕಳಿಸಿದರು ಉಳಿದವರು ಇಂಗ್ಲಿಷರ ಮಾಂಡಲಿಕರಾದರು ಹೀಗೆ ಕ್ರಿ ಶ ೧೮೧೮ರಲ್ಲಿ ಪೇಶ್ವೆಯರ ರಾಜ್ಯವು ಇಂಗ್ಲಿಷರ ಕೈಸೇರಿತು




ಹೀಗೆ ಇಂಗ್ಲಿಷರ ರಾಜ್ಯವನ್ನು ಸ್ಥಿರಗೊಳಿಸಿ ಹೇಸ್ಟಿಂಗ್ಸನು ಉಳಿದ ಸುಧಾರಣೆಗಳಿಗೆ ಕೈಹಾಕಿದನು ಇಂಗ್ಲಂಡಿನಿಂದ ಬರುವ ಸರಕುಗಳ ಮೇಲಿನ ಸುಂಕವನ್ನು ತಗೆದುಹಾಕಿದನು ಇದರಿಂದ ಇಂಗ್ಲಂಡಿನ ವ್ಯಾಪಾರಕ್ಕೆ ಕಳೆಯೇರಿ, ಭಾರತದ ವ್ಯಾಪಾರವು ಕಳೆಗುಂದಿತು ಹೊಸ ಹೊಸ ಶಾಲೆಕಾಲೇಜುಗಳನ್ನು ಪ್ರಾರಂಭಿಸಿ, ಇಂಗ್ಲಿಷ್ ಭಾಷೆಯ ಪ್ರಸಾರ ಮಾಡಿದನು ಯಮುನಾನದಿಯ ಕಾಲುವೆಯನ್ನು ಸರಿಪಡಿಸಿದನು ಕಲಕತ್ತಾ ಪಟ್ಟಣವನ್ನು ಸುಂದರವಾಗಿ ಮಾಡಿದವನೂ ಇವನೇ

**ಲಾರ್ಡ್ ಅಮ್ಹರ್ಸ್ಟ್** —(೧೮೨೩-೧೮೨೮) ಹೇಸ್ಟಿಂಗ್ಸನ ತರುವಾಯ ಬಂದ ಲಾರ್ಡ್ ಅಮ್ಹರ್ಸ್ಟನ ಕಾಲದಲ್ಲಿ ನಡೆದ ಮುಖ್ಯ ಘಟನೆಗಳೆಂದರೆ, ಬ್ರಹ್ಮದೇಶದ ಯುದ್ಧ, ಭರತಪುರದ ಮುತ್ತಿಗೆ

**ಬ್ರಹ್ಮದೇಶದ ಯುದ್ಧ** —ಭಾರತದ ಪೂರ್ವದಿಕ್ಕಿನಲ್ಲಿ ಬ್ರಹ್ಮದೇಶವು ಇದೆ ಬ್ರಿಟಿಶ್ ಸೈನಿಕರು ಬ್ರಹ್ಮದೇಶದಲ್ಲಿ ಸುಲಿಗೆಯನ್ನು ಸಾಗಿಸಿದ್ದರಿಂದ ಬ್ರಹ್ಮೀ ಅರಸು ಸಿಟ್ಟಾಗಿ ಬ್ರಿಟಿಶರ ಆಸಾಮು, ಕಾಚಾರ, ಮಣಿಪುರ ಪ್ರಾಂತಗಳನ್ನೂ ಸಿಲ್ಹೆಟ-ಚಿತಗಾಂಗ ಜಿಲ್ಹೆಗಳನ್ನೂ ವಶಪಡಿಸಿಕೊಂಡನು ಬ್ರಹ್ಮದೇಶದ ಸೇನಾಪತಿ ಮಹಾಬಂದೂಲನು ಪ್ರಬಲಸೇನೆಯೊಡನೆ ಬ್ರಿಟಿಶರ ಮೇಲೆ ದಂಡೆತ್ತಿಹೋದನು

ಲಾರ್ಡ್ ಅಮ್ಹರ್ಸ್ಟನು ನೆಲ-ಜಲಮಾರ್ಗವಾಗಿ ಸೈನ್ಯವನ್ನು ಕಳಿಸಿ ರಂಗೂನನ್ನು ಮುತ್ತಿದನು ಮಹಾಬಂದೂಲನ ಹೊಡೆತಕ್ಕೆ ಇಂಗ್ಲಿಷ ಸೈನ್ಯವು ತತ್ತರಿಸಿತು 'ದೊನೆಬು ರಣಭೂಮಿಯಲ್ಲಿಯಂತೂ ಇಂಗ್ಲಿಷರು ತೀರ ಹಣ್ಣಾದರು ಆದರೆ, ಅಷ್ಟರಲ್ಲಿ ಮಹಾಬಂದೂಲನು ಗುಂಡುತಾಗಿ ಸತ್ತನು ಬ್ರಹ್ಮೀಯರು ಹೆದರಿ ಒಪ್ಪಂದಮಾಡಿಕೊಂಡರು

(೧) ಆಸಾಮು, ಆರಾಕಾನ, ತೇನಾಸರಿಂ ಪ್ರಾಂತಗಳು ಇಂಗ್ಲಿಷರ ಕಡೆಗೆ ಇರಬೇಕು (೨) ಯುದ್ಧದ ಖರ್ಚಿನ ಸಲುವಾಗಿ ಬ್ರಹ್ಮೀರಾಜನು ಇಂಗ್ಲಿಷರಿಗೆ ೧ ಕೋಟಿ ರೂಪಾಯಿ ಕೊಡಬೇಕು (೩) ಬ್ರಹ್ಮೀ ದರಬಾರದಲ್ಲಿ ಇಂಗ್ಲಿಷ ರೆಸಿಡೆಂಟನಿರಬೇಕು ಇವೇ ಆ ಒಪ್ಪಂದದ ಮುಖ್ಯ ಕರಾರುಗಳು

**ಭರತಪುರದ ಮುತ್ತಿಗೆ** —(೧೮೨೬) ಭರತಪುರದ ಶೂರ ಜಾಟ ರಾಜಮನೆತನದ ಅಂತಃಕಲಹಗಳಿಂದಾಗಿ, ಆ ದೇಶದ ಆಗು-ಹೋಗುಗಳು ಹದಗೆಟ್ಟವು ಆದ್ದರಿಂದ, ಬ್ರಿಟಿಶರು ಒಂದು ದಂಡನ್ನು ಕಳುಹಿ, ಅಭೇದ್ಯವೆನಿಸಿದ್ದ ಆ ದುರ್ಗವನ್ನು ಮದ್ದುಗುಂಡುಗಳಿಂದ ಒಡೆದು, ಆಡಳಿತವನ್ನು ತಮ್ಮ ವಶಕ್ಕೆ ತೆಗೆದುಕೊಂಡರು

### ಅಭ್ಯಾಸನಗಳು

೧ ನೆಪೋಲಿಯನ್ನನು ಭಾರತಕ್ಕೆ ಬರಬಹುದಾದ ಮಾರ್ಗವನ್ನು ಬ್ರಿಟಿಶರು ಹೇಗೆ ಕಟ್ಟುಮಾಡಿದರು?

೨ ಗುರ್ಖರ ಪರಾಕ್ರಮವು ಯಾವ ಸಂಗತಿಗಳಿಂದ ಕಂಡುಬರುತ್ತದೆ?

೩ ಕರ್ನಲ್ ಲೋನಿ, ವಾಸಿಲ ಮಹಮ್ಮದ, ಬಾಪುಗೋಖಲೆ ಮಹಾಬಂದೂಲ ಈ ಹೆಸರುಗಳು ಇತಿಹಾಸದಲ್ಲಿ ಬಂದ ಸಂದರ್ಭಗಳನ್ನು ಹೇಳಿರಿ

೪. ಲಾರ್ಡ್ ಹೇಸ್ಟಿಂಗ್ಸನು ಮಾಡಿದ ಮಹತ್ಕಾರ್ಯಗಳು ಯಾವವು?

೫. ಬ್ರಹ್ಮದೇಶದ ಯುದ್ಧವು ಯಾಕೆ ಆಯಿತು? ಅದರ ಪರಿಣಾಮಗಳೇನಾದವು?

---

# ೮ ಸುಧಾರಣಾ ಯುಗ

## ಲಾರ್ಡ್ ವಿಲಿಯಂ ಬೆಂಟಿಂಕ್

**ಲಾರ್ಡ್ ವಿಲಿಯಂ ಬೆಂಟಿಂಕನ ಪೂರ್ವಪರಿಚಯ** — ಲಾರ್ಡ್ ಅಮ್ಹರ್ಸ್ಟನ ತರುವಾಯ ಬಂದ ಲಾರ್ಡ ವಿಲಿಯಂ ಬೆಂಟಿಂಕನು ಹಿಂದೆ ಸರ್ ಜಾರ್ಜ್ ಬಾರ್ಲೋನ ಕಾಲಕ್ಕೆ ಮದ್ರಾಸ ಗವ್ಹರ್ನರನಾಗಿದ್ದನು ಹಿಂದುಗಳ ಧರ್ಮದ ಕೆಲವು ಅಹಿತಕಾರಿ ಆಚಾರಗಳನ್ನು ಬಿಡಿಸಬೇಕೆಂದು ಆಗಿನಿಂದಲೂ ಆತನ ಇಚ್ಛೆ, ಅದಕ್ಕಾಗಿಯೇ ತನ್ನ ಪ್ರಾಂತದ ಸೈನಿಕರಲ್ಲಿ ಸಮವಸ್ತ್ರ-ಸಮರೂಪಗಳಿರುವಂತೆ ಅಪ್ಪಣೆಯನ್ನು ಹೊರಡಿಸಿದ್ದನು ಸೈನಿಕರು ತಪ್ಪು ತಿಳಿವಳಿಕೆಯಿಂದ ವೆಲ್ಲೂರಲ್ಲಿ ದಂಗೆಯನ್ನೆಬ್ಬಿಸಿದರು ಕಂಪನಿಯವರೂ ಅದೇ ಆರೋಪದಿಂದ ಆತನನ್ನು ಇಂಗ್ಲಂಡಿಗೆ ಕರೆಸಿಕೊಂಡರು. ಈಗ ಅದೇ ಸುಧಾರಕನೇ ಗವ್ಹರ್ನರ್ ಜನರಲ್ಲನಾಗಿ ಭಾರತಕ್ಕೆ ಹೊರಟನು



ವಿಲಿಯಂ ಬೆಂಟಿಂಕ್

**ಉದಾರಮತವಾದ** — ೧೮೩೦ರಲ್ಲಿ ಇಂಗ್ಲಂಡಿನ ಪಾರ್ಲಿಮೆಂಟಿನಲ್ಲಿ ಪ್ರಜಾಪ್ರಭುತ್ವವನ್ನು ಹೆಚ್ಚು ವಿಸ್ತರಿಸುವ ವಿಚಾರವು ಎಲ್ಲರ ತಲೆಯಲ್ಲಿ ಬಂದಿತು. ಅದರೊಡನೆಯೆ ಗುಲಾಮರ ವ್ಯಾಪಾರವನ್ನು ನಿಲ್ಲಿಸುವುದು, ಸ್ಥಾನಿಕ ಸ್ವರಾಜ್ಯ ಸುಧಾರಣೆ, ಶಿಕ್ಷಣ ಪ್ರಸಾರ, ವ್ಯಕ್ತಿಸ್ವಾತಂತ್ರ್ಯ ಸಂರಕ್ಷಣ ಮುಂತಾದ ಮಹತ್ತ್ವದ ವಿಚಾರಗಳ ಗಾಳಿಯೂ ಇಂಗ್ಲಂಡಿನಲ್ಲಿ ಸುಳಿದಾಡಿತು ಇವೆಲ್ಲ ವಿಚಾರಗಳೂ ಪಾರ್ಲಿಮೆಂಟಿನ ಒಪ್ಪಿಗೆಯನ್ನು ಪಡೆದುವು ಅಂದಿನಿಂದಲೇ ಅಲ್ಲಿ ಉದಾರಮತವಾದದ ಉಗಮವಾಯಿತು ಈ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡೇ ಲಾರ್ಡ್ ವಿಲಿಯಂ ಬೆಂಟಿಂಕ್ ಮತ್ತು **ಲಾರ್ಡ ಮೆಕಾಲೇ** ಮುಂತಾದ ಸುಧಾರಣಾವಾದಿಗಳು ಭಾರತಕ್ಕೆ ಬಂದರು

**ನವಯುಗದ ಆರಂಭ** — ೧೭೫೭ರಲ್ಲಿಯ ಪ್ಲಾಸಿಯುದ್ಧದಿಂದ ಭಾರತದಲ್ಲಿ ಬ್ರಿಟಿಶ್ ಪ್ರಭುತ್ವದ ಸ್ಥಾಪನೆಯಾಯಿತು ಅಂದಿನಿಂದ ಇಂದಿನವರೆಗೆ ಎಂದರೆ ೧೮೨೮ನೆಯ ಇಸ್ವಿಯ ವರೆಗಿನ ಎಪ್ಪತ್ತು ವರುಷಗಳ ಕಾಲದಲ್ಲಿ, ಕೇವಲ ರಾಜಕೀಯ ದೃಷ್ಟಿಯಿಂದಲೇ ಅದನ್ನು ಸ್ಥಿರಗೊಳಿಸುವ ಕಾರ್ಯವನ್ನು

ಎಲ್ಲ ಗವ್ಹರ್ನರರೂ ಗವ್ಹರ್ನರ್ ಜನರಲರೂ ಮಾಡಿದರು ಪ್ರಜೆಗಳ ಏಳ್ಗೆಗಾಗಿ ಯಾರೂ ಯತ್ನಿಸಿರಲಿಲ್ಲ, ಅಲ್ಲದೆ ಹಾಗ ಯತ್ನಿಸಬೇಕೆಂದು ಭಾರತೀಯರೂ ಬೇಡಿರಲಿಲ್ಲ ಈಗ ಒಮ್ಮೆಲೆ ಎರಡೂ ಕೈಗಳು ಕೂಡಿದವು ಅತ್ತ ಆಳರಸರು ಭಾರತೀಯ ಸಮಾಜಸುಧಾರಣೆಯ ವಿಚಾರಗಳನ್ನು ಬಳಕೆಯಲ್ಲಿ ತರಲು ಯತ್ನಿಸಿದರು, ಇತ್ತ ರಾಜಾ ರಾಮಮೋಹನರಾಯ ರಂತಹ ಸುಧಾರಣಾವಾದಿ ಭಾರತೀಯರು ಬೇಡಿಕೆಗಳನ್ನಿಟ್ಟರು ಇವೆರಡರ ಸಂಗಮದಿಂದಲೇ ನವಯುಗದ ನಿರ್ಮಾಣಕ್ಕೆ ಆರಂಭವಾಯಿತು

**ಭಾರತೀಯ ಸಮಾಜಸ್ಥಿತಿ** — ಲಾರ್ಡ್ ಬೆಂಟಿಂಕನ ಸಾಮಾಜಿಕ ಸುಧಾರಣೆಗಳನ್ನು ತಿಳಿದುಕೊಳ್ಳುವ ಮೊದಲು, ಆ ಕಾಲದಲ್ಲಿ ಭಾರತೀಯ ಸಮಾಜಸ್ಥಿತಿ ಹೇಗಿದ್ದಿತು, ಮೂಢ ನಂಬಿಕೆಗಳಿಂದ ಯಾವ ಯಾವ ಅನಾ-ಹುತಗಳು ಆಗುತ್ತಿದ್ದುವು ಎಂಬುದನ್ನು ಅರಿತುಕೊಳ್ಳಬೇಕು ಆಗಿನ ಪರಿಸ್ಥಿತಿಯ ವಿಮರ್ಶೆಮಾಡಿ ಲಾರ್ಡ್ ಹೇಸ್ಟಿಂಗ್ಸನು ತನ್ನ ದಿನಚರಿಯಲ್ಲಿ ಬರೆದಿರುವದೇನೆಂದರೆ—"ಇಲ್ಲಿಯ (ಭಾರತದಲ್ಲಿಯ) ಜನರು ಇನ್ನೂ ಶೈಶವಾವಸ್ಥೆಯಲ್ಲಿಯೇ ಇದ್ದಾರೆ ನಿಜವಾಗಿ ಇಂಗ್ಲಿಷ ಹುಡುಗರಲ್ಲಿ ಕೂಡ ಇವರಿಗಿಂತ ಹೆಚ್ಚಿನ ಚಿಕಿತ್ಸಕ ಬುದ್ಧಿಯಿದೆ ದೇವ-ಧರ್ಮಗಳ ಹುಚ್ಚು ಹೇಳ ಕೂಡದಷ್ಟು ಓಣಿಓಣಿಗೆ ಮಸೀದೆ-ಮಠಗಳನ್ನು ಕಾಣಬಹುದು ದೇವತೆ ಗಳ ಸಂಖ್ಯೆ ದಿನದಿನಕ್ಕೂ ಬೆಳೆಯುತ್ತಿದೆ ಸ್ತ್ರೀಯರಿಗೆ ಸಮಾಜದಲ್ಲಿ ಸ್ಥಾನ-ಮಾನಗಳೇ ಇಲ್ಲ ಎಂದಮೇಲೆ, ಗಂಡನ ಶವದ ಸಂಗಡವೇ ಸುಟ್ಟು ಹೋಗದೆ ಅವರಿಗೆ ಬೇರೆ ಹಾದಿಯೇ ಇಲ್ಲ "

ಈ ಹುಚ್ಚಾಟಗಳನ್ನು ಹೊಡೆದೋಡಿಸುವದೇ ಬೆಂಟಿಂಕನ ಉದ್ದೇಶ ವಾಗಿತ್ತು ಅದಕ್ಕಾಗಿ ಆತನು ಕೈಕೊಂಡ ಕಾರ್ಯಗಳನ್ನು ಸ್ವಲ್ಪ ವಿವರ ವಾಗಿಯೇ ತಿಳಿದುಕೊಳ್ಳಬೇಕು

**ಸತಿಹೋಗುವ ಪದ್ಧತಿ** — ಸತಿಹೋಗುವದು ಎಂದರೆ, ಸತ್ತ ಗಂಡನ ಶವವನ್ನು ಸುಡುವ ಉರಿಯಲ್ಲಿಯೇ ಹೆಂಡತಿಯೂ ಜೀವಂತವಾಗಿ ಸುಟ್ಟು ಕೊಂಡು ಸಾಯುವದು, ಇದನ್ನೇ ಸಹಗಮನವೆಂದೂ ಹೇಳುತ್ತಾರೆ ಈ ದುರಂತ ದೃಶ್ಯಗಳು ದಿನದಿನಕ್ಕೆ ಹೆಚ್ಚಾಗತೊಡಗಿದ್ದುವು. ೧೮೧೫ರಲ್ಲಿ ೩೭೮ ಜನ ಸ್ತ್ರೀಯರು ಸತಿಹೋಗಿದ್ದರು, ೧೮೧೮ರಲ್ಲಿ ಆ ಸಂಖ್ಯೆ ೮೩೯ಕ್ಕೆ ಏರಿತು!

**ಶಿಶುಹತ್ಯೆ** — ಗೊಂಡ, ಭಿಲ್ಲ, ಮೇರ ಮೊದಲಾದ ಗುಡ್ಡಗಾಡು ಜಾತಿ ಗಳಲ್ಲಿ ಕೆಲವು ಜನ ಮೂಢರು, ಹೆಣ್ಣುಕೂಸು ಹುಟ್ಟಿದ ಕೂಡಲೆ ಅದರ ಕುತ್ತಿಗೆ ಹಿಸುಕಿಬಿಡುತ್ತಿದ್ದರು. ಈ ದುಷ್ಟ ಪದ್ಧತಿಯೂ ಸರಕಾರ ಮತ್ತು ಸಮಾಜಗಳ ಮನಸ್ಸನ್ನು ನೋಯಿಸಿತು

**ಬಲಿದಾನ** — ಇದೇ ಕಾಡುಜನರಲ್ಲಿ ದೇವತೆಗಳ ಹೆಸರಿನಿಂದ ಮನುಷ್ಯರನ್ನು ಬಲಿಕೊಡುವ ದುಷ್ಟರೂಢಿಯೂ ಇದ್ದಿತು ಇದರಿಂದ ಸಂತುಷ್ಟರಾದ ದೇವತೆಗಳು ತಮ್ಮ ಬಯಕೆಗಳನ್ನು ಸಲ್ಲಿಸುವರೆಂದು ಅವರ ತಿಳಿವಳಿಕೆ ಈ ಮೂಢರೂಢಿಯೂ ಸರಕಾರ ಮತ್ತು ಸಮಾಜಗಳ ಹೃದಯವನ್ನು ಹಿಂಡಿತು

**ಹೊಸ ಶಾಸನಗಳು** — ಲಾರ್ಡ್ ವಿಲಿಯಂ ಬಂಟಿಂಕನು ಈ ದುಷ್ಟರೂಢಿಗಳನ್ನು ನಿಲ್ಲಿಸುವದಕ್ಕೆ ಶಾಸನ (ಕಾಯದೆ) ನಿರ್ಮಾಣವಾಗಬೇಕೆಂದು ಮನಗಂಡನು, ಆದರೆ ಧಾರ್ಮಿಕವಿಚಾರದಲ್ಲಿ ಕೈಹಾಕಿದ ಅಪವಾದವೆಲ್ಲಿ ಬರುವದೋ—ಎಂದು ಹೆದರುತ್ತಿದ್ದನು ಈ ಕಾಲಕ್ಕೆ ರಾಜಾ ರಾಮಮೋಹನರಾಯರೆಂಬ ಬಂಗಾಲೀ ಭಾರತೀಯ ಸದ್ಗೃಹಸ್ಥರೂ, ಪರದೇಶದ ಕೆಲವು ಮಿಶನರಿಗಳೂ ಬೆಂಟಿಂಕನಿಗೆ ಬೆಂಬಲಕೊಟ್ಟರು ಅವರು ಈ ಎಲ್ಲ ದುರಂತಗಳನ್ನು ಕರುಳುಕರಗುವಂತೆ ತಿಳಿಸಿದರು, ಅವನ ಹೃದಯಪರಿವರ್ತನೆ ಮಾಡಿದರು ೧೮೨೯ನೆಯ ಡಿಶಂಬರ ನಾಲ್ಕನೆಯ ದಿನಾಂಕಕ್ಕೆ 'ಸಹಗಮನ ನಿರೋಧ, ಶಿಶುಹತ್ಯ ನಿರೋಧ, ಬಲಿದಾನ ನಿರೋಧ' ಮೊದಲಾದ ಶಾಸನಗಳನ್ನು ಮಾಡಿದರು "ಸಹಗಮನ ಮೊದಲಾದ ದುಷ್ಟರೂಢಿಗಳನ್ನು ಬಳಕೆಯಲ್ಲಿ ತರುವ ಮತ್ತು ಅದಕ್ಕೆ ಬೆಂಬಲ ಕೊಡುವ ಎಲ್ಲರಿಗೂ, ಕೊಲೆಯ ಆರೋಪದ ಮೇಲೆ ದೇಹಾಂತಶಾಸನವಾಗುವದು" ಎಂದು ಸಾರಿದರು ಇಷ್ಟಾದಮೇಲೆ ಈ ದುಷ್ಟರೂಢಿಗಳು ನಿಂತವು!

**ರಕ್ಕರನ್ನು ತಡೆದುದು** – ರಕ್ಕರು ಪೆಂಡಾರಿಗಳಂತೆಯೆ ಪುಂಡಜನರು, ಆದರೆ ಒಂದು ಜನಾಂಗವಲ್ಲ ಗೊತ್ತಾದ ರೀತಿ-ನೀತಿಗಳಿಗೆ ಹೊಂದಿಕೊಂಡವರಲ್ಲ ಇವರ ಬಗೆಗೆ ಇತಿಹಾಸಕಾರರು ಹೇಳುವದೆಂದರೆ ಬ್ರಿಟಿಶ ಆಳಿಕೆಯಲ್ಲಿ ತಮ್ಮ ಏರಾಟಕ್ಕೆ ಆಸ್ಪದವಿಲ್ಲವೆಂದು ಗೊತ್ತಾಗಿ, ದೇಶೀಯ ರಾಜರುಗಳು ಒಮ್ಮೆಲೆ ಸೈನಿಕರನ್ನು ತೆಗೆದುಬಿಟ್ಟರು ಹೀಗೆ ಕೆಲಸಗೇಡಿಗಳಾದ ಸೈನಿಕರೇ ಗುಂಪುಗಟ್ಟಿಕೊಂಡು ಗುಡ್ಡ-ಗವಿ-ದಟ್ಟಡವಿಗಳಲ್ಲಿರುತ್ತಿದ್ದರು ಮೋಸದಿಂದ ಜನರ ಕೊಲೆಸುಲಿಗೆ ಮಾಡಿ ಹೊಟ್ಟೆ ತುಂಬಿಕೊಳ್ಳುವುದೇ ಇವರ ಉದ್ಯೋಗ ಈ ರಕ್ಕುತನದಿಂದಲೇ ಇವರಿಗೆ ರಕ್ಕರೆಂದು ಹೆಸರು ಬಂದಿದೆ ಈ ರಕ್ಕುತನದ ಪಾಪವನ್ನು ಕಳೆದುಕೊಳ್ಳುವದಕ್ಕೆ ಅವರು ಕಾಳೀದೇವಿಗೆ ಮೊರೆಹೊಗುತ್ತಿದ್ದರು ಸುಲಿಗೆಯ ಕಾಲಕ್ಕೆ ಸಿಕ್ಕ ಜನರನ್ನೆಲ್ಲ ಕೊಂದು ದೇವಿಗೆ ಬಲಿಕೊಡುತ್ತಿದ್ದರು ಹೀಗೆ ಜನರಿಂದ ಹಣ, ದೇವತೆಯಿಂದ ಪುಣ್ಯ—ಎರಡೂ ಒಂದೇ ಕಾಲಕ್ಕೆ ಸಿಗುತ್ತವೆಂದು ರಕ್ಕರು ತಿಳಿದಿದ್ದರು. ಇದರಿಂದ ಇವರ ಹಾವಳಿ ಹೆಚ್ಚಾಯಿತು ಬೆಂಟಿಂಕನು ಈ ಜನರನ್ನು ಅಡಗಿಸುವದಕ್ಕೆ **ಕರ್ನಲ್ ಸ್ಲೀಮನ್** ಎಂಬ ಶೂರ ಸೇನಾಪತಿ

ಯನ್ನು ಕಳುಹಿದನು ಆತನು ರಕ್ಕರನ್ನು ಎಲ್ಲ ಕಡೆಯಿಂದಲೂ ಮುತ್ತಿ ಚೆಂಡಾಡಿಸಿ ಬಿಟ್ಟನು ಶರಣಾಗತರಾದವರನ್ನು ಕ್ಷಮಿಸಿ ಯೋಗ್ಯ ಉದ್ಯೋಗ ಗಳಲ್ಲಿ ತೊಡಗಿಸಿದನು ಅವರ ಉಪಜೀವನಕ್ಕೆ ಹಾದಿಯನ್ನು ಹಾಕಿ ಕೊಟ್ಟನು! ಇದರಿಂದ, ರಕ್ಕರನ್ನು ತಡೆಹಿಡಿಯುವ ಮಹತ್ತ್ವದ ಕೆಲಸವು ಮುಗಿಯಿತು! ದೇಶದಲ್ಲಿ ಶಾಂತಿ ನೆಲೆಸಿತು

**ಶಿಕ್ಷಣ ಸುಧಾರಣೆ** – ಭಾರತದಲ್ಲಿ ಬ್ರಿಟಿಶರ ರಾಜ್ಯವು ದಿನದಿನಕ್ಕೆ ಬೆಳೆಯುಹತ್ತಿತು ತಳದಿಂದ ತುದಿಯವರೆಗೆ ಎಲ್ಲ ಹೊಣೆಗಾರ ಕೆಲಸಗಳನ್ನೂ ಇಂಗ್ಲಿಷರೇ ನೋಡಿಕೊಳ್ಳುವದು ಹೇಗೆ? ಅದರಿಂದಾಗಿ ತಮ್ಮ ಕೆಲಸಗಳನ್ನು ನಿರ್ವಹಿಸುವದಕ್ಕಾದರೂ ಕೆಳಗಿನ ತರಗತಿಯ ನೌಕರರನ್ನು ಸಿದ್ಧಮಾಡಿ-ಕೊಳ್ಳುವುದು ಸರಕಾರಕ್ಕೆ ಅನಿವಾರ್ಯವಾಯಿತು

ಈ ವರೆಗೆ ಆಳುತ್ತಿದ್ದ ಕೆಲವು ಗವ್ಹರ್ನರ್ ಜನರಲರು ಹಿಂದುಗಳು ಹಿಂದುಳಿದಷ್ಟೂ ಹಿತವೆಂದೇ ಭಾವಿಸಿದ್ದರು, ಆದರೆ ಮಾರ್ಕ್ವಿಸ್ ವೆಲ್ಲೆಸ್ಲಿಯ ಕಾಲದಿಂದ ಸಂಸ್ಕೃತ ವಿದ್ಯೆಗೆ ಪ್ರೋತ್ಸಾಹನ ಸಿಕ್ಕಿತು ಹೇಸ್ಟಿಂಗ್ಸನ ಕಾಲಕ್ಕೆ ಅಲ್ಲಲ್ಲಿ ಶಾಲೆಗಳಾದವು ಸರಕಾರವೇ ಸ್ಥಾಪಿಸಿದ ಕೆಲವು ಸಂಸ್ಥೆಗಳಲ್ಲಿ ಯುರೋಪದ ವಿದ್ವಾಂಸರು ಸಂಸ್ಕೃತದ ಅಧ್ಯಯನ ನಡೆಸಿದರು ಅಂತೂ ಸಂಸ್ಕೃತಭಾಷೆಯು ಅಲ್ಲಲ್ಲಿ ಮತ್ತೆ ತಲೆಯೆತ್ತಿತು, ಆದರೆ, ಜನಸಾಮಾನ್ಯ ರಿಗೆ ಇದರಿಂದೇನು ಉಪಯೋಗ? ಈಗಲೂ ಅವರು ಅಸಂಸ್ಕೃತರಾಗಿಯೇ ಉಳಿಯತಕ್ಕವರು ಇಂತಹರನ್ನು ಆಳುವದು ಸರಕಾರಕ್ಕೂ ತಲೆಹೊರೆ 'ಹಿಂದುಗಳಿಗೆ ಶಿಕ್ಷಣ ಕೊಡುವದು ಅತ್ಯವಶ್ಯವಿದೆ' ಎಂದು ಬೆಂಟಿಂಕನು ಬ್ರಿಟಿಶ್ ಸರಕಾರಕ್ಕೆ ತಿಳಿಸಿದನು, ಆದರೆ, ಯಾವ ಬಗೆಯ ಶಿಕ್ಷಣ? ಪೌರಸ್ತ್ಯ (ಪೂರ್ವ ಅಥವಾ ಭಾರತದ) ಶಿಕ್ಷಣವೋ ಪಾಶ್ಚಿಮಾತ್ಯ (ಬ್ರಿಟಿಶರ) ಶಿಕ್ಷಣವೊ? ಇದರ ನಿರ್ಣಯಕ್ಕೆ ಒಂದು ಸಮಿತಿಯ ನೇಮಕವಾಯಿತು! ಆದರಲ್ಲಿ **ಹೊರೇಸ್ ವಿಲ್ಸನ್,** ಸರ್ ಚಾರ್ಲ್ಸ ಟ್ರಿವೆಲಿಯನ್, ಲಾರ್ಡ್ ಮೆಕಾಲೆ ಮೊದಲಾದವರು ಪ್ರಮುಖರು ವಿಲ್ಸನ್ ಪಕ್ಷದವರು ಸಂಸ್ಕೃತ ವನ್ನೂ ಭಾರತೀಯ ಸಂಸ್ಕೃತಿಯನ್ನೂ ಕಲಿಸಬೇಕೆಂದು ಪ್ರತಿಪಾದಿಸಿದರು, ಅದಕ್ಕೆ ವಿರುದ್ಧವಾಗಿ ಲಾರ್ಡ್ ಮೆಕಾಲೆ ಪಕ್ಷದವರು – ಹಿಂದುಗಳಿಗೆ ಇಂಗ್ಲಿಷನ್ನು ಕಲಿಸಿ ಅವರಿಗೆ ಆಧುನಿಕ ಶಾಸ್ತ್ರೀಯಜ್ಞಾನದ, ಭೌತಿಕ, ಜಗತ್ತಿನ ಪರಿಚಯ ಮಾಡಿಕೊಡುವದು ಅವಶ್ಯವಿದೆ—ಎಂದು ಪ್ರತಿಪಾದಿ ಸಿದರು

ಈ ಹೊತ್ತಿಗೆ ರಾಜಾ ರಾಮಮೋಹನರಾಯರೂ ಇಂಗ್ಲಿಷ್ ಶಿಕ್ಷಣದ ಆವಶ್ಯಕತೆಯ ಆಂದೋಲನವನ್ನು ಬಲವಾಗಿ ನಡೆಸಿದ್ದರು ಇದೊಂದು

ಮೆಕಾಲೆಗೆ ಅನುಕೂಲವೇ ಆಯಿತು ಲಾರ್ಡ್ ಬೆಂಟಿಂಕನೂ ಇದೇ ಮತವನ್ನೇ ಎತ್ತಿಹಿಡಿದನು ಹೀಗಾಗಿ ಮೆಕಾಲೆಯ ಮತವೇ ಮುಂದೆ ಬಂದಿತು, ಅದರಂತೆ ನಿರ್ಣಯವಾಯಿತು ಹಿಂದುಗಳ ಬೇಡಿಕೆಯನ್ನು ಮನ್ನಿಸಿದುದರಿಂದ, ಹಿಂದುಗಳು ರಾಜನಿಷ್ಠರಾಗಿ ಉಳಿಯುವಂತಾಯಿತು ಅಲ್ಲದೆ ಸಣ್ಣಪುಟ್ಟ ನೌಕರಿಗಳಿಗಾಗಿ ಸ್ವಲ್ಪ ಸಂಬಳದಲ್ಲಿ ಭಾರತೀಯನೌಕರರು ಸಿಕ್ಕುವಂತಾಯಿತು !

ಅಂತು ಮೆಕಾಲೆಯ ಮತದಂತೆ ಭಾರತೀಯರಿಗೆ ಇಂಗ್ಲಿಷ್ ಶಿಕ್ಷಣವನ್ನು ಕೊಡತಕ್ಕದೆಂದು ನಿರ್ಣಯವಾಯಿತು (೧೮೩೫) ಅದರಂತೆ ಜಾತಿ-ಗೋತ್ರಗಳನ್ನು ನೋಡದೆ ಸರಕಾರೀ ಶಾಲೆಗಳಲ್ಲಿ ಶಿಕ್ಷಣವನ್ನು ಪಡೆಯುವವರಿಗ ನೌಕರಿಗಳನ್ನು ಕೊಡಲಾಗುವದೆಂದೂ ಸಾರಲಾಯಿತು ಈ ಎರಡೂ ಶಾಸನಗಳಂತೆ ಮುಂಬಯಿಯಲ್ಲಿ **ಎಲ್‌ಫಿನ್‌ಸ್ಟನ್ ಕಾಲೇಜು**, ಕಲಕತ್ತೆಯಲ್ಲಿ ವೈದ್ಯಕೀಯ ಕಾಲೇಜುಗಳಾದವು. ಹಿಂದೀ ವಿದ್ಯಾರ್ಥಿಗಳು ಇಂಗ್ಲಿಷನ್ನು ಅಭ್ಯಸಿಸಹತ್ತಿದರು

**ನ್ಯಾಯದಾನ ಪದ್ಧತಿಯಲ್ಲಿ ಸುಧಾರಣೆ**—(೧) ಈ ಪೂರ್ವದಲ್ಲಿ ಕೆಲವು 'ಸಂಚಾರಿ ಕೋರ್ಟು'ಗಳಿದ್ದುವು ಈಗ ಅವುಗಳನ್ನು ನಿಲ್ಲಿಸಿ, ಆ ಕೆಲಸಗಳನ್ನು ಜಿಲ್ಲಾ ನ್ಯಾಯಾಧೀಶರಿಗೆ ಒಪ್ಪಿಸಿದರು (೨) ಪ್ರತಿಯೊಂದು ಕೋರ್ಟಿನಲ್ಲಿಯೂ ಆಯಾ ಪ್ರಾಂತದಲ್ಲಿಯ ಪ್ರಚಲಿತ ಭಾಷೆಯೇ ಬಳಕೆಯ ಭಾಷೆಯಾಯಿತು (೩) ಮೊದಲು ನ್ಯಾಯನಿರ್ಣಯವಾಗಲು ಬಹಳ ತಡ-ವಾಗುತ್ತಿದ್ದಿತು ಬೆಂಟಿಂಕನು ಈ ಸ್ಥಿತಿಯನ್ನು ಸುಧಾರಿಸುವದಕ್ಕೆ ನ್ಯಾಯಾ-ಧೀಶರ ಸಂಖ್ಯೆಯನ್ನು ಬೆಳೆಸಿದನು, ಅವರ ಸಂಬಳವನ್ನೂ ಹೆಚ್ಚಿಸಿದನು (೪) ಅಲಹಾಬಾದದಲ್ಲಿ ಮತ್ತೊಂದು ಹೈಕೋರ್ಟು ಸ್ಥಾಪಿತವಾಯಿತು (೫) ನ್ಯಾಯಾಧೀಶರ ಅಧಿಕಾರಕ್ಕೆ, ಯೋಗ್ಯರಾದ ಹಿಂದೀಯರನ್ನೂ ನಿಯಮಿಸುವ ನಿರ್ಣಯವಾಯಿತು!

**ಆಡಳಿತದ ವ್ಯವಸ್ಥೆ** (೧) ಮೊಗಲರ ಕಾಲದಿಂದಲೂ ಪಾರ್ಸೀ ಭಾಷೆಯೇ ಸರಕಾರದ ಕಾಗದಪತ್ರಗಳಲ್ಲಿ ಬಳಕೆಯಲ್ಲಿತ್ತು ಈಗ ಆಯಾ ಪ್ರದೇಶದ ಪ್ರಾಂತೀಯ ಭಾಷೆಯೂ ಇಂಗ್ಲಿಷೂ ಬಳಕೆಯಲ್ಲಿ ಬಂದವು (೨) ಯೋಗ್ಯತಾನುಸಾರವಾಗಿ ಹಿಂದೀಜನರಿಗೂ ಕಂದಾಯ ಮತ್ತು ನ್ಯಾಯ-ವಿಭಾಗದಲ್ಲಿ ಅಧಿಕಾರಸ್ಥಳಗಳು ಸಿಕ್ಕಹತ್ತಿದವು (೩) ಅಫುವಿನ ಮಾರಾಟಕ್ಕೆ ಗುತ್ತಿಗೆಯ ಪದ್ಧತಿಯನ್ನು ಆರಂಭಿಸಿದುದರಿಂದ ಅದರ ಉತ್ಪನ್ನ ಬೆಳೆಯಿತು (೪) ನೌಕರದಾರರ ಸಂಬಳದ ಪ್ರಮಾಣವು ಗೊತ್ತಾಯಿತು (೫) ಸೈನ್ಯದಲ್ಲಿ 'ಭತ್ತೆ' ಪದ್ಧತಿ ನಿಂತಿತು

**ಸಂಸ್ಥಾನಗಳ ಸಂಬಂಧ** — ಬ್ರಿಟಿಶರ ಮಾಂಡಲಿಕರಾದ ಅರಸರು ಸಂಸ್ಥಾನ ಸಂರಕ್ಷಣೆಯನ್ನು ಬ್ರಿಟಿಶರಿಗೆ ಬಿಟ್ಟು, ತಾವು ವಿಲಾಸ-ವೈಭವಗಳಿಗೆ ಮನ ಸೋತರು ಇಂತಹ ಸಂಸ್ಥಾನಗಳಲ್ಲಿ ಪ್ರಜೆಗಳು ದಂಗೆ ಎದ್ದಾಗ, ಶಾಂತಿರಕ್ಷಣೆಯ ಹೊರೆಯನ್ನು ಬ್ರಿಟಿಶರೇ ಹೂರಬೇಕಾಯಿತು ಇಂತಹವುಗಳಲ್ಲಿ ಮುಖ್ಯವಾದುವೆಂದರೆ —



ಮೈಸೂರು ಕೃಷ್ಣರಾಜನು

**ಮೈಸೂರು** — ಮೈಸೂರಿನ ಮುಮ್ಮಡಿ ಕೃಷ್ಣರಾಜನು ವಿಲಾಸಪ್ರಿಯನಾಗಿ ಆಡಳಿತವನ್ನು ಅಯೋಗ್ಯರ ಕೈಯ್ಯಲ್ಲಿ ಕೊಟ್ಟನು ಹೀಗೆ ಮಾಡಬೇಡಿರೆಂದು ರಸಿಡೆಂಟನು ಹೇಳಿದರೂ ಆ ರಾಜನು ಕಿವಿಗೊಡಲಿಲ್ಲ ಪ್ರಜೆಗಳು ಕಷ್ಟವನ್ನು ತಾಳಲಾರದ ದಂಗೆಯೆಬ್ಬಿಸಿದರು ಇಂಗ್ಲಿಷರು ದಂಗೆಯನ್ನು ಅಡಗಿಸಿದರು ಅರಸನಿಗೆ ವೇತನವನ್ನು ಗೊತ್ತುಮಾಡಿ ಸಂಸ್ಥಾನದ ಆಡಳಿತವನ್ನು ರೆಸಿಡೆಂಟನಿಗೆ ಒಪ್ಪಿಸಿದರು (೧೮೩೧)

**ಕೊಡಗು** — ಕೊಡಗಿನ ವೀರರಾಜೇಂದ್ರನು ಟೀಪುವಿಗೆ ಇದಿರಾಗಿ ಕಾದಾಡಿದ ಕಡುಗಲಿ, ಆದರೆ ಮುಪ್ಪಿನಕಾಲದಲ್ಲಿ ಅವನಿಗೆ ಹುಚ್ಚುಹಿಡಿಯಿತು ಅದರಿಂದ ಅವನನ್ನು ಪಟ್ಟದಿಂದ ತಳ್ಳಿ, ಅವನಿಗೆ ಗಂಡುಸಂತತಿಯಿಲ್ಲದುದರಿಂದ ಆ ರಾಜ್ಯವನ್ನು ಇಂಗ್ಲಿಷ್ ರಾಜ್ಯಕ್ಕೆ ಕೂಡಿಸಲಾಯಿತು (೧೮೩೪)

**ಕಂಪನಿಯ ಸನದಿನ ಪುನರ್ವಿಮರ್ಶೆ** — ೧೮೩೩ರಲ್ಲಿ ಕಂಪನಿಯ ಸನದಿನ ಪುನರ್ವಿಮರ್ಶೆ ನಡೆಯಿತು ಅದರಲ್ಲಿ (೧) ಕಂಪನಿಯವರು ವ್ಯಾಪಾರವನ್ನು ಬಿಟ್ಟು ಬರಿಯ ಆಡಳಿತವನ್ನಷ್ಟೇ ನೋಡಿಕೊಳ್ಳಬೇಕು (೨) ವ್ಯಾಪಾರ ಮಾಡಲು ಎಲ್ಲರಿಗೂ ಮುಕ್ತದ್ವಾರವಿದೆ (೩) ಭಾರತದಲ್ಲಿಯ ಬ್ರಿಟಿಶ ರಾಜ್ಯಕ್ಕೆ ಇಂಗ್ಲಂಡಿನ ಅರಸನೇ ಬಾದಶಹ (೪) ಕಂಪನಿಯವರು ಕೆಲಸವನ್ನು ನಡೆಸುವ ಪಂಚರು (೫) ಯುರೋಪಿಯನರು ಭಾರತದಲ್ಲಿ ಬೇಕಾದ ಕಡೆ ಭೂಮಿಯನ್ನು ಕೊಂಡು ಸ್ಥಿರವಾಗಿ ನೆಲಸಬಹುದು. (೬) ಕಂಪನಿಯ ಪಾಲುಗಾರರಿಗೆ ಭಾರತದ ಬೊಕ್ಕಸದಿಂದ ೧೦೦ಕ್ಕೆ ೧೦॥ಯಂತೆ ಬಡ್ಡಿಯನ್ನು ಕೊಡಬೇಕು (೭) ಚೀನದ ಸಂಗಡ ಬೇಕಾದವರು ವ್ಯಾಪಾರವನ್ನು ನಡೆಸಬಹುದು—ಎಂದು ಕರಾರುಗಳಾದುವು.

ಇದರಿಂದ ಯುರೋಪಿಯನರು ಬಂಗಾಲ, ಆಸಾಮ, ನೀಲಗಿರಿ, ಕೊಡಗು ಪ್ರಾಂತಗಳಲ್ಲಿ ನೆಲಸಿ ಚಹಾ, ಕಾಫಿ, ನೀಲಿ ತೋಟಗಳನ್ನು ಬೆಳೆಸಿ ಮಾರಾಟ ಮಾಡತೊಡಗಿದರು

ಇದೇ ಕಾಲಕ್ಕೆ ಭಾರತಸರಕಾರದವರು ಆಗ್ರಾ ಅಯೋಧ್ಯಾ ಪ್ರಾಂತಗಳನ್ನು ಕೂಡಿಸಿ ಸಂಯುಕ್ತಪ್ರಾಂತವನ್ನು ಮಾಡಿದರು

## ಅಭ್ಯಸನಗಳು

೧ ಕೆಳಗಿನ ವ್ಯಕ್ತಿಗಳು ಮಾಡಿದ ಒಂದೊಂದು ಮಹತ್ಕಾರ್ಯವನ್ನು ಒಂದೊಂದು ವಾಕ್ಯದಲ್ಲಿ ಹೇಳಿರಿ
ಕರ್ನಲ್ ಸ್ಲೀಮನ್, ಮೆಕಾಲೇ, ಹೊರೇಸ್ ವಿಲ್ಸನ್, ಅಲೆಗ್ಝಾಂಡರ್ ಡಫ್

೨ ಬೆಂಟಿಂಕನು ಮಾಡಿದ ಸಾಮಾಜಿಕ ಸುಧಾರಣೆಗಳು ಯಾವುವು?

೩ ಅವನಿಂದ ನ್ಯಾಯದಾನಪದ್ಧತಿಯಲ್ಲಿ ಯಾವ ಯಾವ ಬದಲಾವಣೆಗಳಾದುವು?

೪ ಯುರೋಪಿಯನರು ಇಲ್ಲಿ ನೆಲಸಲು ಬೆಂಟಿಂಕನು ಮಾಡಿಕೊಟ್ಟ ಅನುಕೂಲತೆ ಯಾವುದು?

೫ ಪೌರ್ವಾತ್ಯ ಶಿಕ್ಷಣ ಒಳ್ಳೆಯದೋ? ಪಾಶ್ಚಿಮಾತ್ಯ ಶಿಕ್ಷಣ ಒಳ್ಳೆಯದೋ? (ಶಿಕ್ಷಕರು ಶಾಲೆಯಲ್ಲಿ ಚರ್ಚೆಯನ್ನು ಏರ್ಪಡಿಸಬೇಕು ಒಂದು ಗುಂಪಿಗೆ ಹೊರೇಸ್ ವಿಲ್ಸನ್ನನ, ಇನ್ನೊಂದು ಗುಂಪಿಗೆ ಮೆಕಾಲೇನ ಹೆಸರು ಇಡಬೇಕು )

---

# ೮ ಶೀಖರ ಪರಿಳಿತ

**ವಾಯವ್ಯದಲ್ಲಿ ತೊಡಕು** —ಲಾರ್ಡ್ ಬೆಂಟಿಂಕನ ಆಳಿಕೆಯ ಶಾಂತ-ವಾತಾವರಣದಲ್ಲಿ, ಭಾರತದ ಬಹುಭಾಗದಲ್ಲಿ ಶಾಂತತೆ ನೆಲಸಿತು, ಆದರೆ, ವಾಯವ್ಯ ಗಡಿಸೀಮೆಯಲ್ಲಿ ಮಾತ್ರ ಗಡಿಬಿಡಿಯು ಇದ್ದೇ ಇತ್ತು ಸಿಂಧ, ಪಂಜಾಬ, ಅಫಗಾಣಿಸ್ತಾನ, ಇರಾಣಗಳಲ್ಲಿ ಪರಾಟಗಳು ನಡೆದೇ ಇದ್ದುವು ಅಫಗಾಣಿಸ್ತಾನದ ಪಟ್ಟದ ಬಗೆಗೆ ದೋಸ್ತ ಮುಹಮ್ಮದ, ಶಹಾಸೂಜಾ, ಅಕಬರಖಾನರಲ್ಲಿ ಬಡಿದಾಟ ನಡೆದಿತ್ತು ಭಾರತದ ರಕ್ಷಣೆಯ ದೃಷ್ಟಿಯಿಂದ ಇಂಗ್ಲಿಷರು ಅದರಲ್ಲಿ ಕೈಹಾಕಲೇ ಬೇಕಾಯಿತು ಆದರೆ, ಇದರಲ್ಲಿ ಅವರಿಗಾದ ಜನ-ಧನಹಾನಿಗಳು ಅಷ್ಟಿಷ್ಟಲ್ಲ ಮೆಟಕಾಫ್ ಮತ್ತು ಆಕ್ಲಂಡ್ ಗವ್ಹರ್ನರ್ ಜನರಲರ ಆಳಿಕೆಯಲ್ಲಿ ಈ ದುರ್ದೈವದ ಪ್ರಸಂಗಗಳು ನಡೆದುವು ಮುಂದೆ ಬಂದ ಲಾರ್ಡ್ ಎಲೆನ್‌ಬರೋ, ಇವೆಲ್ಲವುಗಳ ಸೇಡನ್ನು ತೀರಿಸಿಕೊಂಡನು. ಅದೇ ಸಮಯದಲ್ಲಿ ಸಿಂಧದ ಅಮೀರನೂ ಗಡಿಬಿಡಿಯನ್ನೆಬ್ಬಿಸಿದನು. **ಸರ್ ಚಾರ್ಲ್‌ಸ್ ನೇಪಿಯರನೆಂಬ** ಶೂರ ಸೇನಾಪತಿಯು ಸಿಂಧದ ಅಮೀರನನ್ನು ಮೆತ್ತಗೆ ಮಾಡಿ, ಆ ಪ್ರದೇಶವನ್ನು ಬ್ರಿಟಿಶ್ ಆಧಿಪತ್ಯಕ್ಕೆ ಒಳಪಡಿಸಿದನು ಇನ್ನುಳಿದವರೆಂದರೆ ಶೀಖರು, ಅವರೂ ವಾಯುವ್ಯಭಾಗದವರೇ ಅವರು ಈ ಮೊದಲೇ ಮಿತ್ರರಾಗಿದ್ದರೂ ಈಗ ಶತ್ರುಗಳಾಗಿದ್ದರು ರಾಜ್ಯದಾಶೆ ಏನನ್ನೂ ಮಾಡಬಲ್ಲದು! ಇದೊಂದು ಜನಾಂಗವನ್ನು ಗೆದ್ದುಕೊಂಡರೆ ಬ್ರಿಟಿಶ್ ಪ್ರಭುತ್ವಕ್ಕೆ ಸಂಪೂರ್ಣವಾಗಿ ಸ್ಥಿರತೆ ಬರಬಹುದಾಗಿತ್ತು ಗುರ್ಖರಂತೆ ಶೀಖರೂ ಮೀರಿದ ವೀರಾಳುಗಳು, ಮೆಚ್ಚಿದರೆ ಮಿಗಿಲಾದ ಮಿತ್ರರು! ಇದನ್ನು ಬ್ರಿಟಿಶರು ಚೆನ್ನಾಗಿ ಮನಗಂಡಿದ್ದರು ಇದನ್ನು ನಾವೂ ಮನಗಾಣಬೇಕಾದರೆ ಶೀಖರ ಸಾದ್ಯಂತಚರಿತ್ರವನ್ನು ತಿಳಿದುಕೊಳ್ಳುವದು ಅತ್ಯವಶ್ಯವಾಗಿದೆ

**ಶೀಖರ ಸಂಕ್ಷಿಪ್ತಪರಿಚಯ** —ಗುರುನಾನಕನಿಂದ ಧರ್ಮದ ಮತ್ತು ಸತ್ಯದ ತತ್ತ್ವಗಳ ಮೇಲೆ ಶೀಖಪಂಥವು ಸ್ಥಾಪಿತವಾಯಿತಲ್ಲವೆ? ಮುಂದಿನ ಗುರುಪರಂಪರೆಯಲ್ಲಿ ಮುಸಲ್ಮಾನ ಬಾದಶಹರಿಂದ ಅವರಿಗೆ ಕಡುಕಷ್ಟಗಳೊದಗಿದುವು ಔರಂಗಜೇಬ ಬಾದಶಹನ ಕಾಲದಲ್ಲಿ ಗುರು ತೇಜಸಿಂಗರ ಅಮಾನುಷ ಕೊಲೆಯಾಯಿತು ಆಗಿನ ಪರಿಸ್ಥಿತಿಯನ್ನರಿತ ಗುರುಗೋವಿಂದಸಿಂಹರು ಶೀಖರಿಗೆ 'ಪಂಚ ಕಕಾರ'ಗಳನ್ನು ಅಳವಡಿಸಿ, ಶೀಖರನ್ನು 'ಸಂಗ್ರಾಮಸಿಂಹ'ರನ್ನಾಗಿ ಪರಿವರ್ತಿಸಿದರು ಆ ಮೇಲೆ ಅವರು ತಮ್ಮ ಶಕ್ತಿಸಾಹಸ

ಗಳಿಂದ ಚಿಕ್ಕ ಚಿಕ್ಕ ರಾಜ್ಯಗಳನ್ನು ಕಟ್ಟಿಕೊಂಡರು. ಪಂಜಾಬದಲ್ಲಿಯೇ ಶೀಖರ ಹನ್ನೆರಡು ಚಿಕ್ಕ ರಾಜ್ಯಗಳಾದವು ಅವುಗಳಿಗೆ 'ಮಿಸಲ' ಎಂದು ಹೆಸರು.

**ಸಂಸ್ಥಾನಗಳ ಸಮನ್ವಯ (ಒಟ್ಟುಗೂಡಿಸುವದು)** — ಆದರೆ, ಈ ರೀತಿಯಾಗಿ ಬಿಡಿಬಿಡಿ ಸಂಸ್ಥಾನಗಳಿಂದ ಶೀಖರ ಶಕ್ತಿ ಹಂಚಿಹೋಗುವುದೆಂದೂ ಎಲ್ಲರೂ ಒಟ್ಟಾಗದೆ ತಮ್ಮ ಪ್ರಬಲಶಕ್ತಿ ಪ್ರಕಟವಾಗಲಾರದೆಂದೂ ಕೆಲವರು ಐಕ್ಯಕ್ಕಾಗಿ ಪ್ರಯತ್ನಿಸಿದರು ಅವರಲ್ಲಿ ಮಹಾನ್ ಸಿಂಗನೇ ಮೊದಲಿಗನು, ಆದರೆ ಆತನ ಪ್ರಯತ್ನಕ್ಕೆ ಯಶ ದೊರೆಯಲಿಲ್ಲ ಮುಂದೆ ಆತನ ಮಗ ರಣಜಿತಸಿಂಗನೆಂಬ ವೀರನು ತನ್ನ ಸವಿಮಾತಿನಿಂದಲೂ ಸತ್ತ್ವಶಾಲಿತ್ವದಿಂದಲೂ ಎಲ್ಲ ಶೀಖರನ್ನೂ ಒಟ್ಟಾಗಿಸಿದನು, ಎಲ್ಲರಿಗೂ ತಾನೇ ದೊರೆಯಾದನು


ರಣಜಿತ ಸಿಂಗ

**ರಣಜಿತಸಿಂಗ** — (೧೭೮೦-೧೮೩೯) ಕ್ರಿ ಶ ೧೭೮೦ನೆಯ ವರುಷ ಪಂಜಾಬದಲ್ಲಿ ರಣಜಿತಸಿಂಗನ ಜನ್ಮವಾಯಿತು ಈತನು ವೀರಾಳು ವಿದ್ಯೆಯನ್ನೇನೂ ಕಲಿಯಲಿಲ್ಲ, ಆದರೆ ಯುದ್ಧವಿದ್ಯೆಯಲ್ಲಿ ನಿಪುಣನಾದ ಇವನನ್ನು ನೋಡಿದರೆ, ಭಯಬರುವಷ್ಟು ಭಯಂಕರ ರೂಪು ಇವನದು ಮೋರೆಯ ಮೇಲೆ ಮೈಲಿಯ ಕಲೆಗಳು, ಒಂದು ಕಣ್ಣು ಕುರುಡು, ಆದರೂ ವೀರತೇಜ ಮಿರುಗುತ್ತಿತ್ತು ೧೦ ವರ್ಷದವನಿದ್ದಾಗಲೇ ಸೈನಿಕಸಾಹಸವನ್ನು ಆರಂಭಮಾಡಿದನು ತೋಫುಗಳನ್ನು ಹಾರಿಸುವದು, ಕುದುರೆಗಳನ್ನೇರುವದು ಇವುಗಳಲ್ಲಿ ನಿಪುಣನಾದನು ಬ್ರಿಟಿಶರನ್ನು ತನ್ನ ಶಕ್ತಿ-ಸಾಹಸ-ದಕ್ಷತೆಗಳಿಂದ ದಂಗುಪಡಿಸಿ, ಅವರೊಡನೆ ಒಪ್ಪಂದ ಮಾಡಿಕೊಂಡು ಮಿತ್ರತ್ವದಿಂದ ಇದ್ದನು

**ಸೈನ್ಯಸಿದ್ಧತೆ** — ರಣಜಿತಸಿಂಗನು ತೀಕ್ಷ್ಣಬುದ್ಧಿಯ ದೂರದರ್ಶಿ. ಕುಳಿತಲ್ಲಿಂದಲೇ ಯಾವುದನ್ನೂ ಒಳಹೊಕ್ಕು ನೋಡುತ್ತಿದ್ದನು ಆಗಿನ ಕಾಲದಲ್ಲಿ ಇಂಗ್ಲಿಷರೂ ಫ್ರೆಂಚರೂ ಯುದ್ಧವಿದ್ಯೆಯಲ್ಲಿ ನಿಪುಣರಾಗಿದ್ದರು ಫ್ರೆಂಚ ಸೇನಾಪತಿಗಳಾದ ಕರ್ನಲ್ ಅಲಾರ್ಡ, ಕರ್ನಲ್ ವೆಂಚುರಾ ಅವರು, ನೆಪೋಲಿಯನನ ಕೈಯಿಂದ ಶಿಕ್ಷಣವನ್ನು ಪಡೆದವರು ಅವರಿಂದಲೇ ರಣಜಿತಸಿಂಗನು ತನ್ನ ಸೈನ್ಯಕ್ಕೆ ಯುದ್ಧಶಿಕ್ಷಣವನ್ನು ಕೊಡಿಸಿದನು ಆತನ ತೋಫುಖಾನೆಯೂ ದೊಡ್ಡದು, ೮೦ ಸಾವಿರ ಶೂರ ಶೀಖರ ಸೈನ್ಯವು ಅವನಲ್ಲಿತ್ತು ಯಮುನಾನದಿಯ ವರೆಗೂ ರಾಜ್ಯವನ್ನು ವಿಸ್ತರಿಸಬೇಕೆಂದು

ಆತನ ಹೆಬ್ಬಯಕೆಯಿತ್ತು, ಆದರೆ, ಅವನ ದುರ್ದೈವದಿಂದ ಸತಲಜ ನದಿಯ ಮಟ್ಟಿಗೇ ಆಳುತ್ತ, ಬ್ರಿಟಿಶರೊಂದಿಗೆ ಆ ರೀತಿ ಒಪ್ಪಂದ ಮಾಡಿಕೊಂಡು ಸಮಾಧಾನ ಹೊಂದಬೇಕಾಯಿತು ಈ ನಿರ್ಣಯವು ಅಮೃತಸರದ ಒಪ್ಪಂದವೆಂದು ಮಿಂಟೋನ ಕಾಲಕ್ಕೆ ಆಯಿತು ಮುಂದೆ ರಣಜಿತಸಿಂಗನು ಇಂಗ್ಲಿಷರ ಮಿತ್ರನಾಗಿಯೇ ಉಳಿದು ೧೮೩೯ರಲ್ಲಿ ಮರಣಹೊಂದಿದನು

**ರಣಜಿತಸಿಂಗನ ತರುವಾಯ** — ರಣಜಿತಸಿಂಗನು ಸಾಯುವ ಸಮಯದಲ್ಲಿ ಅಫಗಾಣಿಸ್ತಾನದೊಡನೆ ಶೀಖರ ಯುದ್ಧ ಸಾಗಿತ್ತು ಆ ಇಕ್ಕಟ್ಟಿನ ಸಮಯದಲ್ಲಿಯೇ ಈತನ ಮರಣವಾಯಿತು ಆ ಮೇಲೆ ಅವನ ಮಗನಾದ ಖರಕಸಿಂಗನು ಪಟ್ಟಕ್ಕೆ ಬಂದನು ಅವನ ರಾಜ್ಯದಲ್ಲಿ ಅನಾಯಕತೆಯು ಹಬ್ಬಿತು ಜನರು ತಮ್ಮತಮ್ಮೊಳಗೆ ಕೊಲೆ-ಸುಲಿಗೆಗಳನ್ನು ಆರಂಭಿಸಿದರು. ಆ ಮೇಲೆ ಹಲವರ ತಂತ್ರದಿಂದ ಅಯ್ದು ವರುಷದ ದಿಲೀಪಸಿಂಗನು ಪಟ್ಟಕ್ಕೆ ಬಂದನು ದಿಲೀಪನ ತಾಯಿಯಾದ ಜಿಂದನ್ ರಾಣಿಯೇ ಎಲ್ಲ ಕಾರಭಾರವನ್ನು ಮಾಡಹತ್ತಿದಳು ಆಕೆಗೆ ಲಾಲಸಿಂಗ-ತೇಜಸಿಂಗರೆಂಬ ಸರದಾರರು ಸಲಹೆಗಾರರಿದ್ದರು ಆದರೆ, ತೋಳ್ತೀಟಿಯ ಶೀಖಸೈನ್ಯಕ್ಕೆ ಈ ತಟಸ್ಥವೃತ್ತಿ ತಡೆಯಲಿಲ್ಲ ಅವರು ಏನಾದರೊಂದು ಕಾರಣದಿಂದ ಬ್ರಿಟಿಶರೊಂದಿಗೆ ಯುದ್ಧಪ್ರಸಂಗವನ್ನು ಬಯಸುತ್ತಿದ್ದರು ಅದರಿಂದ ಅವರು ಪದೇಪದೇ ರಾಣಿಗೆ ತೊಂದರೆ ಕೊಡಹತ್ತಿದರು ಹಾಗೆಯೇ ಬಿಟ್ಟಿದ್ದರೆ ಈ ಸೈನಿಕರು ಕೊಲೆ-ಸುಲಿಗೆಗಳಿಂದ ರಾಜ್ಯದಲ್ಲಿ ಹಾಹಾಕಾರ ಎಬ್ಬಿಸಬಹುದಿತ್ತು ಜಿಂದನರಾಣಿ, ದಿಲ್ಲಿಯ ಮೇಲೆ ಏರಿಹೋಗುವದಕ್ಕೆ ಸೈನಿಕರಿಗೆ ಅಪ್ಪಣೆ ಕೊಟ್ಟಳು ಇದರಲ್ಲಿ ರಾಣಿಯು ಮೂರುಬಗೆಯ ಲಾಭಗಳನ್ನು ಕಣ್ಣೆದಿರಿಗಿಟ್ಟುಕೊಂಡಿದ್ದಳು (೧) ಸೈನ್ಯ ಹೊರಗಿದ್ದಷ್ಟು ಕಾಲವೂ ರಾಜ್ಯದಲ್ಲಿ ಕೊಲೆ-ಸುಲಿಗೆಗಳು ನಿಂತು ಶಾಂತಿಯುಂಟಾಗುವದು (೨) ಅನಾಯಾಸವಾಗಿ ಶೀಖರು ಜಯಶಾಲಿಗಳೇ ಆದರೆ, ರಾಜ್ಯವು ಮತ್ತಿಷ್ಟು ವಿಸ್ತಾರವಾಗುವದು (೩) ಒಂದು ವೇಳೆ ಸೋತರೆ ಸೈನಿಕರ ಉಪಟಳವು ಕಡಿಮೆಯಾಗುವದು, ಆಗ ಬ್ರಿಟಿಶರೊಡನೆ ಒಪ್ಪಂದಮಾಡಿಕೊಂಡು ನೆಮ್ಮದಿಯಾಗಿ ಬಾಳಬಹುದು

**ಶೀಖರ ಮೊದಲನೆಯ ಯುದ್ಧ** — (೧೮೪೫-೧೮೪೬) ರಾಣಿಯ ಒಪ್ಪಿಗೆಯು ಸಿಕ್ಕ ಮೇಲೆ, ಶೀಖರು ರಣಾವೇಶದಿಂದ ಸತಲಜ ನದಿಯನ್ನು ದಾಟಿದರು ಕಂಪನಿ ರಾಜ್ಯದಲ್ಲಿ ಅವರು ಹಾವಳಿಯನ್ನು ನಡೆಸಿದರು ಕಂಪನಿ ಸರಕಾರದ ಸೇನಾಪತಿ **ಸರ್ ಹ್ಯುಗೋ** ಇವರನ್ನು ತಡೆದನು ಮುಡಕಿ ಎಂಬಲ್ಲಿ ಮೊದಲು ಕಾಳಗವಾಯಿತು ಬ್ರಿಟಿಶರು ಸಕಲ ಸನ್ನಾಹಮಾಡಿಕೊಂಡಿದ್ದರೂ ಶೀಖರನ್ನು ಸೋಲಿಸಲಿಕ್ಕಾಗಲಿಲ್ಲ ಇಂಗ್ಲಿಷರು ಮತ್ತೆ ಸೈನ್ಯಸಹಾಯವನ್ನು

ಹೆಚಿ ಸಿಕೊಂಡು, ಮುಂದೆ ಫಿರೋಜಪುರ-ಅಲಿವಾಲ-ಸೆಬ್ರಾವ್ಹೂನ ಯುದ್ಧ
ಗಳಲ್ಲಿ ಜಯಶಾಲಿಗಳಾದರು ಕೊನೆಗೆ **ಲಾಹೋರ**ದಲ್ಲಿ ಒಪ್ಪಂದವಾಯಿತು
(೧೮೪೬)

**ಲಾಹೋರ ಒಪ್ಪಂದದ ಕರಾರುಗಳು** —(೧) ಶೀಖಸೈನ್ಯವು ೨೫
ಸಾವಿರಕ್ಕಿಂತ ಹೆಚ್ಚಿಗಿರಕೂಡದು (೨) ಅವರು ಯುದ್ಧದಲ್ಲಿ ಉಪಯೋಗಿಸಿದ
ತೋಫುಗಳನ್ನು ಇಂಗ್ಲಿಷರಿಗೆ ಕೊಡಬೇಕು (೩) ಸತಲಜ ನದಿಯಿಂದ
ಈಚೆಗಿನ ಎಲ್ಲ ಪ್ರದೇಶವೂ, ಜಾಲಂದರದ ದುಆಬವೂ ಇಂಗ್ಲಿಷರಿಗೆ,
ಉಳಿದುದಕ್ಕೆಲ್ಲ ದಿಲೀಪಸಿಂಗನೇ ಒಡೆಯ (೪) ಯುದ್ಧದ ಖರ್ಚಿಗೆಂದು
ಶೀಖರು, ೧॥ ಕೋಟಿ ರೂಪಾಯಿಗಳನ್ನು ಇಂಗ್ಲಿಷರಿಗೆ ಕೊಡಬೇಕು (೫)
ಸರ್ ಹೆನ್ರಿ ಲಾರೆನ್ಸನು ಶೀಖರಾಜ್ಯದಲ್ಲಿ ರಸಿಡೆಂಟನಾಗಬೇಕು, ಆತನ ಹೇಳಿಕೆ
ಯಂತೆಯೇ ರಾಣಿಯು ಕಾರಭಾರವನ್ನು ಸಾಗಿಸಬೇಕು ಒಪ್ಪಂದವಾದ
ಮೇಲೆ ಇಂಗ್ಲಿಷರು ಆಗ ಶೀಖರಿಗೆ ಸೇರಿದ್ದ ಕಾಶ್ಮೀರಪ್ರಾಂತವನ್ನು ಗುಲಾಬ-
ಸಿಂಗನಿಗೆ ಒಂದು ಕೋಟಿ ರೂಪಾಯಿಗಳಿಗೆ ಮಾರಿದರು, ಏಕೆಂದರೆ,
ಗುಲಾಬಸಿಂಗನು ಈ ಯುದ್ಧದಲ್ಲಿ ಬ್ರಿಟಿಶರಿಗೆ ಬಹಳ ಸಹಾಯ ಮಾಡಿದ್ದನು
ಇಲ್ಲಿಯೂ ಬ್ರಿಟಿಶರ ಜಯಕ್ಕೆ ಭಾರತೀಯರ ಅನೈಕ್ಯವೇ ಕಾರಣವಾಯಿತು

ಈ ಎಲ್ಲ ಕಾರ್ಯಗಳನ್ನೂ ಗವ್ಹರ್ನರ್ ಜನರಲ್ ಲಾರ್ಡ್ ಹಾರ್ಡಿಂಜನು
ಬುದ್ಧಿವಂತಿಕೆಯಿಂದಲೇ ನೆರವೇರಿಸಿದನೆಂದು ಹೇಳಬಹುದು ಈತನಿಂದ
ಬ್ರಿಟಿಶ್ ಸಾಮ್ರಾಜ್ಯದ ಸತ್ತ್ವವೇನೂ ಕಡಮೆಯಾಗಲಿಲ್ಲ, ತಟಸ್ಥಧೋರಣೆಗೂ
ಭಂಗಬರಲಿಲ್ಲ ಈತನ ತರುವಾಯ ಕೇವಲ ಸಾಮ್ರಾಜ್ಯವಾದಿ ಲಾರ್ಡ್
**ಡಾಲಹೌಸಿ** ಗವ್ಹರ್ನರ ಜನರಲನಾಗಿ ಭಾರತಕ್ಕೆ ಬಂದನು ಈತನ
ಕಾಲದಲ್ಲಿ ಎರಡನೆಯ ಶೀಖಯುದ್ಧವಾಯಿತು

**ಶೀಖರ ೨ನೆಯ ಯುದ್ಧ**, (೧೮೪೮-೧೮೪೯) **ಕಾರಣ** — ಪ್ರತಿವರುಷವೂ
ಲಾಹೋರದ ರಾಜ್ಯಕ್ಕೆ ಕಪ್ಪಕೊಡುತ್ತಿದ್ದ ಮೂಲಸಿಂಗನು, ಮುಲ್ತಾನದಲ್ಲಿ
ಸುಭೇದಾರನಾಗಿದ್ದನು ರಣಜಿತಸಿಂಗನ ಕಾಲದಿಂದಲೂ ಈ ಸುಭೇ-
ದಾರಿಕೆಯು ಈತನ ಹಿರಿಯರಿಗೆ ಬಂದಿತ್ತು ಆಗ ಮೂಲಸಿಂಗನು ಬಹಳ
ಪ್ರಬಲನಾಗಿದ್ದನು ಲಾಹೋರ ರಾಜ್ಯದ ಅವ್ಯವಸ್ಥೆಯನ್ನು ಕಂಡು ಅವನು
ತಾನು ಕೊಡುತ್ತಿದ್ದ ಕಪ್ಪವನ್ನು ನಿಲ್ಲಿಸಿದನು ರೆಸಿಡೆಂಟ್ ಲಾರೆನ್ಸನು ಆ
ಹಣವನ್ನು ಕೇಳಲು ಕಳಿಸಿದನು, ಮೂಲರಾಜನು ಹಣವನ್ನೂ ಕೊಡಲಿಲ್ಲ,
ಲೆಕ್ಕವನ್ನೂ ತೋರಿಸಲಿಲ್ಲ ಆಗ ಲಾಹೋರ ಸರಕಾರವು ಮೂಲರಾಜನ
ಬದಲು ಖಾನಸಿಂಗ್ ಎಂಬವನನ್ನು ಸುಭೇದಾರನನ್ನಾಗಿ ನಿಯಮಿಸಿ, ಅವನ
ಸಹಾಯಕ್ಕೆ ಇಬ್ಬರು ಇಂಗ್ಲಿಷ ಅಧಿಕಾರಿಗಳನ್ನು ಇಟ್ಟರು

ಮುಲ್ತಾನಿ ಜನರಿಗೆ ಈ ಹೊಸ ವ್ಯವಸ್ಥೆಯು ಸೇರಲಿಲ್ಲ ಅಲ್ಲಿಯ ಇಂಗ್ಲಿಷ ಅಧಿಕಾರಿಗಳನ್ನು ಚೆಂಡಾಡಿಬಿಟ್ಟರು ಆ ಮೇಲೆ ಶೀಖರೆಲ್ಲ ಒಟ್ಟಾಗಿ ಬ್ರಿಟಿಶರ ವಿರುದ್ಧ ಬಂಡನ್ನೇ ಎಬ್ಬಿಸಿದರು, ಮೂಲರಾಜನು ಅವರಿಗೆ ಮುಂದಾಳಾದನು

ಬ್ರಿಟಿಶರ ಸೈನ್ಯಕ್ಕೂ ಶೀಖರಿಗೂ ರಾಮಪುರದಲ್ಲಿ ಯುದ್ಧವಾಯಿತು. ಆಗ ಇಂಗ್ಲಿಷರ ಕೈ ಮೇಲಾಯಿತು ಚಿಲಿಯನವಾಲಾ ಗುಜರಾಣವಾಲಾಗಳಲ್ಲಿ ಮತ್ತೆ ಕೈಗೆ ಕೈ ಹತ್ತಿತು ಕೊನೆಯ ಯುದ್ಧದಲ್ಲಿ ಮೂಲರಾಜ, ಶೇಅರ್‌ಸಿಂಗ, ಛತ್ರಸಿಂಗ ಎಲ್ಲರೂ ಸೋತು ಶರಣಾಗತರಾದರು (೧೮೪೯)

**ಯುದ್ಧದ ಪರಿಣಾಮ** — ಡಾಲಹೌಸಿಯು ಪಂಜಾಬದ ಶೀಖರ ರಾಜ್ಯವನ್ನು ಬ್ರಿಟಿಶಭಾರತಕ್ಕೆ ಕೂಡಿಸಿಕೊಂಡನು, ದಿಲೀಪಸಿಂಗನಿಗೆ ವರ್ಷಕ್ಕೆ ಐದು ಲಕ್ಷ ರೂಪಾಯಿ ಉಂಬಳಿಯನ್ನು ಗೊತ್ತುಮಾಡಿದನು ಅವನು ಇಂಗ್ಲಂಡಿಗೆ ಹೋಗಿ ಕ್ರಿಸ್ತೀಧರ್ಮವನ್ನು ಸ್ವೀಕರಿಸಿ ಅಲ್ಲಿಯೇ ಮಡಿದನು ಅಲ್ಲಿ ಇರುವಾಗ, ತನ್ನ ತಂದೆಯ ಕಾಲದಿಂದ ಬಂದ ಕೋಹಿನೂರ್ ರತ್ನವನ್ನು ವಿಕ್ಟೋರಿಯಾ ಮಹಾರಾಣಿಗೆ ಕೊಟ್ಟನಂತೆ! ಈ ಯುದ್ಧದ ತರುವಾಯ ಇಂಗ್ಲಿಷರು ಶೀಖರ ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡು, ಅವರನ್ನು ಒಕ್ಕಲತನಕ್ಕೆ ಹಚ್ಚಿದರು, ಕೆಲವರನ್ನು ಮಾತ್ರ ಸೈನ್ಯದಲ್ಲಿ ಸೇರಿಸಿದರು ಈಗಲೂ ಶೀಖಸೈನಿಕರು ಭಾರತದ ಸೈನ್ಯದ ಮಹತ್ತ್ವದ ಭಾಗವಾಗಿದ್ದಾರೆ

## ಅಭ್ಯಸನಗಳು

೧ ಸರ್ ಚಾರ್ಲಸ್ ನೇಪಿಯರ್, ಸರ್ ಹ್ಯೂಗೋ, ಮೂಲಸಿಂಗ, ಇವರ ಹೆಸರುಗಳು ಶೀಖರ ಇತಿಹಾಸದಲ್ಲಿ ಯಾವ ಸಂದರ್ಭಗಳಲ್ಲಿ ಬಂದಿವೆ?

೨ ರಣಜಿತಸಿಂಗನಿಂದ ನೀವು ಕಲಿತುಕೊಳ್ಳಬಹುದಾದ ಗುಣಗಳು ಯಾವವು? ಸಂಕ್ಷಿಪ್ತವಾಗಿ ಅವನ ಚರಿತ್ರೆಯನ್ನು ಹೇಳಿರಿ

೩ ಬ್ರಿಟಿಷರು ಶೀಖರೊಡನೆ ಮುಖ್ಯವಾಗಿ ಎಷ್ಟು ಯುದ್ಧಗಳನ್ನು ಮಾಡಿದರು? ಅವುಗಳ ಪರಿಣಾಮವೇನಾಯಿತು?

---

# ೧೦ ಲಾರ್ಡ್ ಡಾಲ್‌ಹೌಸಿ

**ಲಾರ್ಡ್ ಡಾಲಹೌಸಿಯ ಪೂರ್ವಪರಿಚಯ** — ಡಾಲ್‌ಹೌಸಿಯು ಸ್ಕಾಟ್ಲಂಡಿನಲ್ಲಿ ಹುಟ್ಟಿದನು ಚಿಕ್ಕಂದಿನಿಂದಲೂ ಬುದ್ಧಿಯಲ್ಲಿ ಚುರುಕು ಪ್ರಕೃತಿಯಿಂದ ಅಶಕ್ತನಾದರೂ ಈತ ಕರ್ತವ್ಯದಕ್ಷನು ಅಚಲವಾದ ಆತ್ಮವಿಶ್ವಾಸಿ, ಅದರೊಡನೆ ಹಟಮಾರಿಯೂ ಅಹುದು ಬರೆಹದಲ್ಲಿ ಬಲ್ಲಿದನು ಇವೆಲ್ಲ ಗುಣಗಳಿಂದ ತನ್ನ ವಯಸ್ಸಿನ ೨೫ನೆಯ ವರುಷದಲ್ಲಿಯೇ ಇವನು ಬ್ರಿಟಿಶ ಪಾರ್ಲಿಮೆಂಟಿಗೆ ಆರಿಸಿಬಂದನು ಆಗಿನ ಬ್ರಿಟಿಶ್ ಮುಖ್ಯಮಂತ್ರಿ ಪೀಲನಿಗೆ ಪ್ರೀತಿಪಾತ್ರನಾದನು ಹಾಗೆಯೇ ಬೆಳೆಯುತ್ತ ಬ್ರಿಟಿಶ ವ್ಯಾಪಾರಶಾಖೆಯ ಅಧ್ಯಕ್ಷಪದವಿಯನ್ನು ಪಡೆದನು ಮುಂದೆ ಭಾರತದ ಗವ್ಹರ್ನರ್ ಜನರಲನಾಗಿ ಬಂದನು ಆಗ ಇವನಿಗೆ ಕೇವಲ ೩೫ ವರುಷ ಇವನ ದರ್ಪಕ್ಕೆ ಕೈಕೆಳಗಿನವರೆಲ್ಲ ಗದಗುಟ್ಟಿ ನಡುಗುತ್ತಿದ್ದರು 'ಬ್ರಿಟಿಶರ ಒಡೆತನಕ್ಕೆ ಸೇರಿಕೊಂಡರೆ ಮಾತ್ರ, ಭಾರತದ ಜನರಿಗೆ ಸುಖ-ಸಂಪತ್ತುಗಳು ದೊರೆಯುವವು' ಎಂಬುದೇ ಡಾಲ್‌ಹೌಸಿಯ ಅಚಲನಂಬಿಕೆ ಇವನ ಬಿರುಗಾಳಿಯಂತಹ ಆಳಿಕೆಯೇ ಆ ಕಾಲದ ಭಾರತದ ಶಾಂತಿಸಾಗರದಲ್ಲಿ ಪ್ರಕ್ಷುಬ್ಧ ತೆರೆಗಳನ್ನು ಎಬ್ಬಿಸಲು ಕಾರಣವಾಯಿತು!



ಲಾರ್ಡ್ ಡಾಲ್‌ಹೌಸಿ

**ಶೀಖರ ಎರಡನೆಯ ಯುದ್ಧ** — ಹಿಂದಿನ ಪಾಠದಿಂದ ಈ ಯುದ್ಧದ ಕಾರಣ — ವಿವರ — ಪರಿಣಾಮಗಳೆಲ್ಲ ತಿಳಿದಿವೆ ಮೊದಲನೆಯ ಹೊಡೆತಕ್ಕೇ ಡಾಲ್‌ಹೌಸಿಯು ಪಂಜಾಬ ಪ್ರಾಂತವನ್ನು ಗೆದ್ದನು

**ಬ್ರಹ್ಮದೇಶದ ಎರಡನೆಯ ಯುದ್ಧ** — ಬ್ರಹ್ಮೀಜನರು ಬಹಳ ಸ್ವಾಭಿಮಾನಿಗಳು ಯಂದಬು ಒಪ್ಪಂದದಂತೆ ಬ್ರಿಟಿಶ್ ರೆಸಿಡೆಂಟನನ್ನು ದರಬಾರದಲ್ಲಿಟ್ಟು-ಕೊಳ್ಳಬೇಕಾದುದು ಅವರ ಅಭಿಮಾನಕ್ಕೆ ಅಪಮಾನವೆನಿಸಿತು ಅದರಿಂದ ಅವರು ಬ್ರಿಟಿಷ್ ರೆಸಿಡೆಂಟನನ್ನು ಕಡೆಗಣಿಸಹತ್ತಿದರು ೧೮೩೭ರಲ್ಲಿ ಅಲ್ಲಿಯ ರಾಜನು ರೆಸಿಡೆಂಟನನ್ನು ಹೊರದೂಡಿಯೆ ಬಿಟ್ಟನು ಅಭಿಮಾನಿಯಾದ ಡಾಲ್‌ಹೌಸಿಗೆ ಈ ಅಪಮಾನವನ್ನು ತಡೆಯಲಾಗಲಿಲ್ಲ

**ಸಮರಸನ್ನಾಹ** — ಎರಡು ಹಡಗುಪಡೆಗಳ ಸಹಿತವಾಗಿ ಕಾಮೋಡೋರ್ ಲ್ಯಾಂಬರ್ಟನನ್ನು ಡಾಲ್‌ಹೌಸಿಯು ರಂಗೂನದ ಮೇಲೆ ಕಳಿಸಿದನು. ಇಂಗ್ಲಿಷರ ಮತ್ತೊಂದು ಹಡಗು ಇರಾವತಿ ನದಿಯೊಳಗಿಂದ ಹೋಗುತ್ತಿತ್ತು.

ಬ್ರಹ್ಮೀ ಜನರು ಅದರ ಮೇಲೆ ತೋಫುಹಾರಿಸಿದರು ಇದರಿಂದ ಸಿಟ್ಟಾಗಿ ಸ್ವತಃ ಡಾಲ್‌ಹೌಸಿಯು, ಜನರಲ್ ಗಾರ್ಡನ್ ಸೇನಾಪತಿಯೊಡನೆ ಯುದ್ಧಕ್ಕೆ ಹೊರಟನು

**ಯುದ್ಧಪ್ರಸಂಗ** — ಇಷ್ಟೊಂದು ಸುಸಜ್ಜಿತವಾಗಿ ಬಂದ ಸೈನ್ಯದೆದುರು ಬ್ರಹ್ಮೀಯರು ತಡೆಯಲಿಲ್ಲ ಯುದ್ಧದಲ್ಲಿ ಬ್ರಹ್ಮದೇಶದ ಅರಸು ಮಡಿದನು ಡಾಲ್‌ಹೌಸಿಯು ವೇಗೂ ಪ್ರಾಂತವನ್ನು ಬ್ರಿಟಿಶರ ರಾಜ್ಯಕ್ಕೆ ಕೂಡಿಸಿದನು, 'ಅದಕ್ಕೆ ಬ್ರಿಟಿಶ್ ಬರ್ಮಾ' ಎಂದು ಹೆಸರಿಟ್ಟು ಆಡಳಿತಕ್ಕೆ ಒಬ್ಬ ಚೀಫ ಕಮಿಶನರರನ್ನು ನಿಯಮಿಸಿದನು

**'ಲ್ಯಾಪ್ಸ್' ಇಲ್ಲವೆ ಹಕ್ಕುಗೇಡಿತನದ ತತ್ತ್ವ** — ಡಾಲ್‌ಹೌಸಿಯ ಕಾಲದಲ್ಲಿ ಬ್ರಿಟಿಶರ ಪ್ರಭುತ್ವದ ಮುಂದೆ ಹಿಂದೀ ಅರಸರ ಪರಾಕ್ರಮಕ್ಕೆ ಆಸ್ಪದವಿಲ್ಲ-ದಂತಾಗಿ ಅವರು ಸುಖವಿಲಾಸಿಗಳಾದರು ಇಂತಹದ ಅಲಕ್ಷ್ಯದ ಆಳಿಕೆಯಲ್ಲಿ ಪ್ರಜೆಗಳು ಗೋಳಿಗೀಡಾಗ ಬೇಕಾದುದು ಸ್ವಾಭಾವಿಕ ಅವರಿಗೆ ಬ್ರಿಟಿಶರ ಶಿಸ್ತು, ಶಾಂತಿಪಾಲನೆಯ ರೀತಿ ,ನ್ಯಾಯಾಸ್ಥಾನಗಳ ಏರ್ಪಾಡು — ಇವೇ ಒಳ್ಳೆಯವಾಗಿ ತೋರುತ್ತಿದ್ದವು ಅದರಿಂದ, ತಮಗಾದ ಕಿರುಕುಳ ಕಷ್ಟಗಳನ್ನು ಬ್ರಿಟಿಶ ಸರಕಾರಕ್ಕೆ ತಿಳಿಸಹತ್ತಿದರು ಡಾಲ್‌ಹೌಸಿಗೂ ಇಷ್ಟೇ ನೆವ ಸಾಕಾಗಿತ್ತು ಸಂಸ್ಥಾನಿಕರ ಸಲುವಾಗಿ ಕೆಲವು ಕಟ್ಟಳೆಗಳನ್ನು ಹೊರಡಿಸಿದನು

(೧) ಬ್ರಿಟಿಶರಿಗೆ ಕಪ್ಪಗಾಣಿಕೆಗಳನ್ನು ಸಲ್ಲಿಸುತ್ತಿರುವ ಸಂಸ್ಥಾನಿಕರಿಗೆ ಸಂತತಿ ಇಲ್ಲವಾದರೆ, ದತ್ತಕತೆಗೆದುಕೊಳ್ಳುವ ಬಗೆಗೆ ಬ್ರಿಟಿಶರ ಒಪ್ಪಿಗೆ-ಯನ್ನು ಪಡೆಯಲೆ ಬೇಕು, ಹಾಗೆ ದತ್ತಕ ತೆಗೆದುಕೊಂಡ ಮಗನಿಗೆ ಪಟ್ಟ ಕಟ್ಟಲೇ ಬೇಕೆಂಬುದಕ್ಕೆ ಬ್ರಿಟಿಶರು ಬದ್ಧರಲ್ಲ (೨) ಬ್ರಿಟಿಶರಿಂದ ಉಂಬಳಿ-ಯನ್ನು ಪಡೆಯುತ್ತಿರುವ ಸಂಸ್ಥಾನಿಕರಂತೂ ಸಂತತಿ ಇಲ್ಲದವರಿದ್ದರೆ ಅವರು ದತ್ತಕತೆಗೆದುಕೊಳ್ಳತಕ್ಕದ್ದೇ ಅಲ್ಲ ಅವರ ತರುವಾಯ ಅದು ಬ್ರಿಟಿಶರದೇ ರಾಜ್ಯ ಇದನ್ನೇ "ಲ್ಯಾಪ್ಸ್" ಪದ್ಧತಿ ಎಂದು ಹೇಳುವರು

**'ಲ್ಯಾಪ್ಸ್' ಆದ ಇಲ್ಲವೆ ಹಕ್ಕುಕಳೆದುಕೊಂಡ ಸಂಸ್ಥಾನಗಳು —**

(೧) **ಸಾತಾರೆ** — (೧೮೪೮) ಸಾತಾರೆಯ ಪ್ರತಾಪಸಿಂಹರಾಜನು ದತ್ತಕ ತೆಗೆದುಕೊಂಡಿದ್ದನು ಈ ಅಪ್ಪಣೆ ಹೊರಟ ಮೇಲೆ ಆ ದತ್ತಕವನ್ನು ತೆಗೆದುಹಾಕಿ, ಸಾತಾರೆಯನ್ನು ಬ್ರಿಟಿಶರ ರಾಜ್ಯಕ್ಕೆ ಕೂಡಿಸಲಾಯಿತು, ಅರಸುಮನೆತನಕ್ಕೆ ಉಂಬಳಿಯು ಗೊತ್ತಾಯಿತು

(೨) **ಝಾಂಸಿ** — (೧೮೫೩) ನಾಗಪುರದ ರಘೋಜಿ ಭೋಸಲೆಯು ಮಕ್ಕಳಿಲ್ಲದೆ ಮಡಿದನು ಅದು ಹತ್ತಿಬೆಳೆಯುವ ಉತ್ತಮ ಪ್ರದೇಶವು

ಅದರಿಂದ, ಡಾಲ್‌ಹೌಸಿಯು ದತ್ತಕಕ್ಕೆ ಅಪ್ಪಣೆ ಕೊಡದೆ, ಉಂಬಳಿ ಗೊತ್ತು ಮಾಡಿ ಆ ಸಂಸ್ಥಾನವನ್ನು ವಶಕ್ಕೆ ತಕ್ಕೊಂಡನು

**(೩) ಆರ್ಕಾಡು** —(೧೮೫೩) ಆರ್ಕಾಡಿನ ನವಾಬ ಮಹಮ್ಮದ ಗೌಸ-ನಿಗೆ ಸಂತತಿ ಇರಲಿಲ್ಲ ಬ್ರಿಟಿಶರು ಆ ಮನೆತನಕ್ಕೆ ಹೊಟ್ಟೆಬಟ್ಟೆಗಳ ವೆಚ್ಚಕ್ಕೆ ಮಾತ್ರ ಸಾಲುವಷ್ಟು ಉಂಬಳಿಕೊಟ್ಟು ಆರ್ಕಾಡನ್ನು ಅರಗಿಸಿಕೊಂಡರು

**ತಂಜಾವರ, ಸಂಬಳಪುರ, ಜೈತಪುರ** — (೧೮೫೫) ಈ ರಾಜ್ಯಗಳ ಅರಸ-ರೆಲ್ಲ ನಿಪುತ್ರಿಕರಾಗಿಯೇ ಮಡಿದರು ಅವರಿಗೂ ಉಂಬಳಿಯ ವ್ಯವಸ್ಥೆಯನ್ನು ಮಾಡಿ ಸಂಸ್ಥಾನಗಳ ಹಕ್ಕನ್ನು ಕಸಿದುಕೊಂಡರು

**ಅಯೋಧ್ಯೆ** —(೧೮೫೬) ಅಯೋಧ್ಯೆಯ ಕೊನೆಯ ನವಾಬ ಮಜೀದ-ಅಲ್ಲಿಯು ಕೇವಲ ವಿಲಾಸಿ, ದುರ್ಬಲ ಅವನ ಮೇಲೆ ದುರಾಚಾರ ಮತ್ತು ಪ್ರಜಾಪೀಡೆಗಳ ಆರೋಪವನ್ನಿಟ್ಟು ಅವನಿಗೆ ಉಂಬಳಿಯನ್ನು ಗೊತ್ತುಮಾಡಿ, ಇಡಿ ಅಯೋಧ್ಯೆಯನ್ನು ಬ್ರಿಟಿಶರ ರಾಜ್ಯದಲ್ಲಿ ಅಡಕಮಾಡಿದರು

**ಖೈರಪುರ** — (೧೮೫೩) ಖೈರಪುರದ ಅಮೀರ ಅಲೀ ಮುರಾದನ ಮೇಲೆ ಡಾಲ್‌ಹೌಸಿಯು ತುಂಟತನದ ಆರೋಪ ಹೊರಿಸಿ, ಅವನ ರಾಜ್ಯವನ್ನು ಕಸಿದುಕೊಂಡು, ಅವನ ವೆಚ್ಚಕ್ಕೆಂದು ೩-೪ ಲಕ್ಷ ಉತ್ಪನ್ನದ ಸೀಮೆಯನ್ನು ಉಳಿಸಿದನು

**ಸಿಕ್ಕಿಮು ಸಂಸ್ಥಾನ** — ನೇಪಾಳ-ಭೂತಾನಗಳ ನಡುವಿನ ಸಣ್ಣ ಸಂಸ್ಥಾನ ವಿದು ದಾರ್ಜಿಲಿಂಗ ಎಂಬ ಸುಂದರ ಸ್ಥಳ, ಈ ಸಂಸ್ಥಾನದ ಸೀಮೆಯಲ್ಲಿದೆ ಬೇಸಗೆಯ ವಸತಿಗೆ ನಂದನವನವಿದು ಆದ್ದರಿಂದ ಸಿಕ್ಕಿಮ ಸಂಸ್ಥಾನಿಕನ ಮೇಲೆ ಸೊಕ್ಕಿನ ನಡತೆಯ ಆರೋಪವನ್ನು ಹೇರಿ, ಆ ರಾಜ್ಯವನ್ನು ತಕ್ಕೊಂಡನು ಅಲ್ಲಿ ಈಗ ಬ್ರಿಟಿಶರ ಚಹದ ತೋಟಗಳಿವೆ

**ವರ್ಹಾಡ ಪ್ರಾಂತ** —(೧೮೫೪)— ಸಹಾಯಕಸೈನ್ಯದ ಸಲುವಾಗಿ ನಿಜಾಮುಶಹನು ಕೊಡತಕ್ಕ ಹಣವು ೮೦ ಲಕ್ಷದ ವರೆಗೂ ಉಳಿದಿತ್ತು ಡಾಲ್‌ಹೌಸಿಯು ಆ ಹಣಕ್ಕೆ ಒತ್ತಾಯ ಹಚ್ಚಿದನು, ನಿಜಾಮುಶಹನು ಹೇಗೋ ಮಾಡಿ ೪೦ ಲಕ್ಷ ರೂಪಾಯಿ ಮುಟ್ಟಿಸಿ, ಉಳಿದ ಹಣಕ್ಕಾಗಿ ವರ್ಹಾಡಪ್ರಾಂತ ಮತ್ತು ರಾಯಚೂರು ನಲದುರ್ಗಗಳನ್ನು ಬಿಟ್ಟುಕೊಟ್ಟನು

**ಅನ್ಯಾಯದ ಅತಿರೇಕ** — ಎರಡನೆಯ ಬಾಜೀರಾಯನಿಗೆ ಉಂಬಳಿ-ಯನ್ನು ಗೊತ್ತುಮಾಡಿ, ಬ್ರಿಟಿಶರು ಆತನನ್ನು ಬ್ರಹ್ಮಾವರ್ತದಲ್ಲಿಟ್ಟಿದ್ದರು ಅವನು ೧೮೫೧ರಲ್ಲಿ ಸಾಯುವ ಮುನ್ನವೇ ಧೋಂಡೋಪಂತ ಅಥವಾ ನಾನಾ ಸಾಹೇಬ ಎಂಬವನನ್ನು ದತ್ತಕತೆಗೆದುಕೊಂಡಿದ್ದನು ತಂದೆಯ ಮರಣದ ತರುವಾಯ ನಾನಾಸಾಹೇಬನು, ತನಗೆ ಸಲ್ಲತಕ್ಕ ಉಂಬಳಿಯನ್ನು ಬೇಡಿದನು

'ಅದು ಬಾಜೀರಾಯನ ಮಟ್ಟಿಗೇ' ಎಂದು ಡಾಲ್‌ಹೌಸಿಯಿಂದ ಉತ್ತರ ದೊರೆ-ಯಿತು ಈ ಉನ್ಮತ್ತ ಉತ್ತರದಿಂದ ನಾನಾಸಾಹೇಬನ ಕಣ್ಣು ಕೆಂಪಗಾದವು! ಅವನಿಗೆ, ಬ್ರಿಟಿಶ ಸಾಮ್ರಾಜ್ಯದ ಕುಗೆಗೆ ಸೇಡಿನ ಬುದ್ಧಿ ಅಂದೆಯೆ ಉಂಟಾಯಿತು, ಆದರೆ ಆಗ ಸಮಯ ಅನುಕೂಲವಾಗಿರಲಿಲ್ಲ, ತಂದೆಯ ೨೩ ಲಕ್ಷದ ಆಸ್ತಿಯನ್ನಷ್ಟೇ ತಕ್ಕೊಂಡು ಸುಮ್ಮನಾದನು

## ಡಾಲ್‌ಹೌಸಿಯ ಸುಧಾರಣೆಗಳು

**ಸುಧಾರಣೆಗಳು-ಉಗಿಬಂಡಿ** — ಒಳದೇಶದಲ್ಲಿ ಸರಕುಗಳ ಹೇರಾಟಕ್ಕೂ ಸೈನ್ಯದ ಸಾಗಾಟಕ್ಕೂ ಅನುಕೂಲವಾಗುವಂತೆ ೧೮೫೩ರಲ್ಲಿ, ಮುಂಬಯಿ-ಯಿಂದ ಠಾಣೆಯವರೆಗೆ ಉಗಿಬಂಡಿಗಳು ಓಡಾಡಹತ್ತಿದವು ಮುಂದೆ ರೈಲು-ದಾರಿಯು ದಿನದಿನಕ್ಕೂ ಬೆಳೆಯುತ್ತ ಭಾರತದ ತುಂಬ ಪಸರಿಸಿತು

**ಅಂಚೆ ಮತ್ತು ತಂತಿ** — ಅದುವರೆಗೂ ಕುದುರೆಗಳ ಮೇಲೆ ಇಲ್ಲವೆ ಕಾಲುನಡಿಗೆಯಿಂದ ಪತ್ರಗಳ ಸಾಗಾಟ ನಡೆಯುತ್ತಿತ್ತು ಡಾಲ್‌ಹೌಸಿಯ ಕಾಲದಿಂದ ಈಗಿರುವ ಅಂಚೆ ಮತ್ತು ತಂತಿಯ ಖಾತೆಗಳ ವ್ಯವಸ್ಥೆಯಾಯಿತು ಪತ್ರವ್ಯವಹಾರಕ್ಕಾಗಿ ೧ ದುಡ್ಡಿನ ಬೆಲೆಯ ಕಾರ್ಡು ಹುಟ್ಟಿತು

**ಸಾರ್ವಜನಿಕ ಸೌಕರ್ಯ** — (೧) ಲಾರ್ಡ್ ಹಾರ್ಡಿಂಜನ ಕಾಲದಲ್ಲಿ ಆರಂಭವಾದ ಗಂಗಾನದಿಯ ಕಾಲುವೆ ಈತನ ಆಳಿಕೆಯಲ್ಲಿ ಮುಗಿಯಿತು. (೨) ಕಲಕತ್ತೆಯಿಂದ ಪಂಜಾಬದ ವರೆಗೆ ದೊಡ್ಡ ರಸ್ತೆಯಾಯಿತು (೩) ಸಾರ್ವಜನಿಕ ಶಿಕ್ಷಣಖಾತೆಯನ್ನು ಆರಂಭಿಸಿ ಭಾರತದ ತುಂಬ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟವು (೪) ಭಾರತೀಯರು ಸಿವ್ಹಿಲ್ ಸರ್ವೀಸ್ ಪರೀಕ್ಷೆಗೆ ಹೋಗಲು ಅಪ್ಪಣೆ ದೊರೆಯಿತು

**ಕಂಪನಿಯ ಸನದಿನ ಪುನರ್ವಿಮರ್ಶೆ** — (೧೮೫೩) ಡಾಲ್‌ಹೌಸಿಯ ಆಳಿಕೆಯಲ್ಲಿ ಕಂಪನಿಯ ಸನದಿನ ಅವಧಿಯು ಮತ್ತೆ ಬೆಳೆಯಿತು ಕಂಪನಿಯ ಮಂಡಲಕ್ಕೆ ಶಾಸನಸಭೆಯ ಸ್ವರೂಪವನ್ನು ಕೊಟ್ಟು, ಅದಕ್ಕೆ ಸರಕಾರದ ಪರವಾಗಿ ಹನ್ನೆರಡು ಜನ ಸಭಾಸದರನ್ನು ನಿಯಮಿಸಿದರು

**ಭಾರತಕ್ಕೆ ಹಾನಿ** — ಡಾಲ್‌ಹೌಸಿಯ ಸುಧಾರಣೆಯ ಮುಖ್ಯ ಉದ್ದೇಶ-ವೆಲ್ಲ 'ಬ್ರಿಟಿಶ ಸಾಮ್ರಾಜ್ಯಕ್ಕೆ ಅನುಕೂಲವಾಗಲಿ' ಎಂಬುದೇ ಆಗಿತ್ತು. ಅದರಿಂದ ಭಾರತೀಯರಿಗೆ ಅನೇಕ ರೀತಿಯಿಂದ ಆರ್ಥಿಕ ಆಪತ್ತುಂಟಾಯಿತು ಈ ಕಾಲದಲ್ಲಿ ಭಾರತದಲ್ಲಿಯ ಕಬ್ಬಿಣ-ತಾಮ್ರ-ಹಿತ್ತಾಳೆಯ ಒಡವೆಗಳೂ, ಜರಿಯ ಕೆಲಸದ ವಸ್ತುಗಳೂ, ಬಣ್ಣದ ಮತ್ತು ಗಂಧದ ಕಟ್ಟಿಗೆಯ ಕೆಲಸ

ಗಳೂ, ಜಮಖಾನೆ-ಹತ್ತಿಯ-ಬಟ್ಟೆ, ರೇಶ್ಮೆಯ ಬಟ್ಟೆ ಮೊದಲಾದುವೂ, ಅಂದ-ಚೆಂದ ನಯ ತಾಳಿಕೆ-ಬಾಳಿಕೆಗಳಲ್ಲಿ ಹೆಸರಾಗಿದ್ದುವು ತಂಬಾಕ, ಹತ್ತಿ, ಕಾಫಿ, ನೀಲಿ, ಅಫು, ಮಸಾಲೆಯ ಪದಾರ್ಥಗಳು, ಭಾರತದಲ್ಲಿ ಆಗ ಹೇರಳ




ವಾಗಿ ಹುಟ್ಟುತ್ತಿದ್ದುವು ಇವುಗಳ ಮೇಲೆ ಸುಂಕದ ಭಾರವಿರಲಿಲ್ಲವಾದುದರಿಂದ, ಅತಿ ಅಗ್ಗಳತೆಯಲ್ಲಿ ಮಾರಿದರೂ ವ್ಯಾಪಾರಿಗಳಿಗೆ ಲಾಭವಿತ್ತು ಜನರೂ ತಮ್ಮ ದುಡಿತದಿಂದ ಶಾಂತಿ-ಸಮೃದ್ಧಿಗಳನ್ನು ಅನುಭವಿಸುತ್ತಿದ್ದರು ಡಾಲ್‌ಹೌಸಿಗೆ ಭಾರತೀಯರ ಈ ಸಿರಿವಂತಿಕೆಯನ್ನು ನೋಡುವುದಾಗಲಿಲ್ಲ. ಅದರಿಂದ ಭಾರತೀಯ ಸರಕುಗಳ ಮೇಲ ಒಳಹೊರಗಿನ ವ್ಯಾಪಾರಕ್ಕೆ

ಭಾರವಾದ ಸುಂಕವನ್ನು ಹೇರಿದನು ಇದರಿಂದ ಪದಾರ್ಥಗಳ ಬೆಲೆಯು ಹಿಡಿತ ಮೀರಿ ಏರಿತು ಹೊರದೇಶದ ವ್ಯಾಪಾರವಂತೂ ಕಟ್ಟಾಯಿತು ಪರದೇಶದ ಸರಕುಗಳು ಈ ದೇಶಕ್ಕೆ ಬಂದು ಇಲ್ಲಿಯ ಸಾಮಾನುಗಳಿಗಿಂತ ಅಗ್ಗ ಬೆಲೆಯಲ್ಲಿ ಮಾರಾಟವಾಗಹತ್ತಿದುವು ಇದರಿಂದ ಭಾರತೀಯರ ವ್ಯಾಪಾರ-ಕೈಗಾರಿಕೆಗಳು ಮಣ್ಣುಗೂಡಿದುವು

## ಅಭ್ಯಾಸನಗಳು

೧ 'ಲ್ಯಾಪ್ಸ್' ಇಲ್ಲವ 'ಹಕ್ಕುಗೇಡಿತನ' ಪದ್ಧತಿಯೆಂದರೇನು? ಅದರಿಂದ ಯಾವ ಯಾವ ಸಂಸ್ಥಾನಗಳು ಹಕ್ಕನ್ನು ಕಳೆದುಕೊಂಡು ಬ್ರಿಟಿಶರ ರಾಜ್ಯದಲ್ಲಿ ಸೇರಿಸಲ್ಪಟ್ಟವು?

೨ ಅವ್ಯವಸ್ಥೆಯ ಆರೋಪ ಹೊರಿಸಿ ಡಾಲ್‌ಹೌಸಿಯು ಯಾವ ಯಾವ ಸಂಸ್ಥಾನಗಳನ್ನು ನುಂಗಿದನು?

೩ ಇವನು ಮಾಡಿದ ಸುಧಾರಣೆಗಳಾವವು?

೪ ನಮ್ಮ ದೇಶದ ವ್ಯಾಪಾರ-ಉದ್ದಿಮೆಗಳಿಗ ಡಾಲ್‌ಹೌಸಿಯು ಹೇಗೆ ಪೆಟ್ಟು ಕೊಟ್ಟನೆಂಬುದನ್ನು ಹೇಳಿರಿ

೫ ಬ್ರಿಟಿಶರ ವಿರುದ್ಧ ಸೇಡಿನ ಬುದ್ಧಿ ಹುಟ್ಟಿದ್ದು ಯಾರಲ್ಲಿ? ಯಾಕ?

---

# ೧೧ ಇಂಗ್ಲಿಷರ ಆಳಿಕೆಯ ಪ್ರತಿಕ್ರಿಯೆ

(ಭಾರತದ ಆರ್ಥಿಕ ಹಾಗೂ ಸಾಮಾಜಿಕ ಜೀವನದ ಮೇಲೆ ಇಂಗ್ಲಿಷರ ಆಳಿಕೆಯಿಂದಾದ ಪರಿಣಾಮ )

**ವ್ಯಾಪಾರಿಗಳು ಅರಸರಾದರು**—ಬ್ರಿಟಿಶರು ಭಾರತಕ್ಕೆ ಮೊದಲು ಬಂದುದು ವ್ಯಾಪಾರಕ್ಕಾಗಿ ಮಾತ್ರ, ಆದರೆ ಇಲ್ಲಿಯ ಆಗಿನ ಆಳರಸರ ಒಳಜಗಳಗಳ ಮೂಲಕ ಹಾಗೂ ಫ್ರೆಂಚ, ಡಚ್ಚ ಮೊದಲಾದ ಇತರ ವಿದೇಶೀಯ ವ್ಯಾಪಾರಿಗಳೊಡನೆ ನಡೆದ ಏರಾಟದ ಮೂಲಕ, ಅವರು ಇಲ್ಲಿಯ ರಾಜ-ಕಾರ್ಯದಲ್ಲಿ ಕೈಹಾಕಬೇಕಾಯಿತು ಇಂಗ್ಲಿಷರ ಸಾಹಸ ಹಾಗೂ ಸತತೋದ್ಯೋಗಕ್ಕೆ ದೈವವೂ ಅನುಕೂಲವಾಯಿತು ಬರುಬರುತ್ತ ಭಾರತದಲ್ಲಿ ಅವರ ರಾಜ್ಯವು ವಿಸ್ತಾರವಾಯಿತು, ಸ್ಥಿರವಾಗಿಯೂ ನಿಲ್ಲುವಂತಾಯಿತು ಕ್ರಿ ಶ ೧೬೦೦ರಿಂದ ಕ್ರಿ ಶ ೧೭೫೭ರ ವರೆಗೆ ಎಂದರೆ ಪ್ಲಾಸಿ ಕಾಳಗದ ವರೆಗೆ, ಇಂಗ್ಲಿಷರು ಭಾರತದಲ್ಲಿ ಕಾಲೂರಿ ನಿಲ್ಲಲಿಕ್ಕೆ ಹೋರಾಟ ನಡೆಸಬೇಕಾಯಿತು ಇಲ್ಲಿಂದ ಸುಮಾರು ನೂರುವರುಷ ಎಂದರೆ ಕ್ರಿ ಶ ೧೮೫೭ರ ವರೆಗೆ, ತಮ್ಮ ರಾಜ್ಯವಿಸ್ತಾರ ಹಾಗೂ ಭದ್ರತೆಗಳ ದೃಷ್ಟಿಯಿಂದ ಎಷ್ಟೋ ಯೋಜನೆಗಳನ್ನು ಬಳಕೆಯಲ್ಲಿ ತಂದರು ಅದರಿಂದ ಭಾರತದ ಆರ್ಥಿಕ ಮತ್ತು ನಾಮಾಜಿಕ ಜೀವನದ ಮೇಲೆ ವಿಶೇಷ ಪರಿಣಾಮಗಳಾದವು ಅವುಗಳನ್ನು ಸಂಕ್ಷೇಪವಾಗಿ ನೋಡುವ

**ಆರ್ಥಿಕ ಪರಿಸ್ಥಿತಿ**—ಭಾರತವು ಮುಖ್ಯವಾಗಿ ಒಕ್ಕಲುತನದ ದೇಶ, ಆದರೂ ವಿದೇಶೀ ವ್ಯಾಪಾರಿಗಳು ಒಳಸೇರುವ ಮೊದಲು ಇಲ್ಲಿ ಉದ್ಯೋಗ-ಕೈಗಾರಿಕೆಗಳು ವಿಶೇಷವಾಗಿ ಬೆಳೆದಿದ್ದುವು ಆದುದರಿಂದಲೇ ಭಾರತದಿಂದ ಹೊರನಾಡುಗಳಿಗೆ ಬಟ್ಟೆಗಳು, ಒಡವೆಗಳು, ಆಭರಣಗಳು, ಸಕ್ಕರೆ, ಅಫು ಹಾಗೂ ಇತರ ಸಾಮಾನುಗಳು ರಫ್ತಾಗುತ್ತಿದ್ದುವು ಇಲ್ಲಿಂದ ಪರದೇಶಗಳಿಗೆ ಹೋಗುತ್ತಿದ್ದ ಹಣದ ಮೂರರಷ್ಟು ಹಣವು, ಪರದೇಶದಿಂದ ಭಾರತಕ್ಕೆ ಬರುತ್ತಿತ್ತು ಕಲಾಕೌಶಲ್ಯವೂ ವಿಶೇಷವಾಗಿ ಪ್ರಗತಿಹೊಂದಿದ್ದಿತು, ಹೊರನಾಡಿನವರು ಅದನ್ನು ಕಂಡು ಬೆರಳುಕಚ್ಚುವಂತಾಗಿತ್ತು ಹೀಗೆ ಸಂಪತ್-ಸಮೃದ್ಧಿಯಿಂದ ತುಂಬಿತುಳುಕುವ ನಮ್ಮ ಭಾರತದ ಮೇಲೆ, ಬ್ರಿಟಿಶರ ಆಳಿಕೆಯಿಂದ ವಿಪರೀತಪರಿಣಾಮವಾಯಿತು ರಾಜಕೀಯ ಹೋರಾಟಗಳ ಮೂಲಕ ದೇಶದಲ್ಲಿ ಅಶಾಂತತೆ ನೆಲಸಿತು ಸೈನಿಕರು ಪುಂಡ-ತನ ಮಾಡುತ್ತಿದ್ದರು ಅಧಿಕಾರಿಗಳು ಜನರನ್ನು ಸುಲಿಯತೊಡಗಿದರು ಆಗಲೇ ಜನರಲ್ಲಿ ಬಡತನವು ತಲೆದೋರತೊಡಗಿತು ಇದ್ದ ಕಲಾಕುಶಲರಿಗೆ

ಉತ್ತೇಜನವು ಸಿಗದ್ದರಿಂದ, ಎಷ್ಟೋ ಕುಶಲಕಲಾಸಂಪನ್ನರು ಯುದ್ಧದಲ್ಲಿ ಸೇರ್ಪಡೆಯಾಗಬೇಕಾಯಿತು ಇದರಿಂದ ಕಲೆಗಳು ಕಳೆಗುಂದಿದುವು ಕ್ಲೈವನ ಇಬ್ಬಗೆಯ ಆಳಿಕೆಯ ಪರಿಣಾಮವಾಗಿ ಬಂಗಾಲದ ನವಾಬನ ಕಡೆಯವರೂ ಇಂಗ್ಲಿಷ ಅಧಿಕಾರಿಗಳೂ ಜನರಿಂದ ಹಣವನ್ನೆತ್ತತೊಡಗಿದರು ಬಡವರ ಗೋಳನ್ನು ಕೇಳುವವರು ಇಲ್ಲದಂತಾಯಿತು ವಾರನ್ ಹೇಸ್ಟಿಂಗ್ಸನು ಗುತ್ತಿಗೆಯ ಪದ್ಧತಿಯನ್ನು ಪ್ರಾರಂಭಿಸಿದ್ದರಿಂದ, ಗುತ್ತಿಗೆಯವರಿಗೆ ಮಾತ್ರ ಲಾಭದೊರೆತು, ಅಧಿಕಾರಿಗಳ ಲಂಚಗುಳಿತನ ಹೆಚ್ಚಿತು ಪ್ರಜೆಗಳಿಗೆ ಉಪದ್ರವ ಹೆಚ್ಚಾಯಿತು ಕಾರ್ನವಾಲೀಸನು ಬಳಕೆಯಲ್ಲಿ ತಂದ ಸ್ಥಿರ-ಕಂದಾಯುಪದ್ಧತಿಯು ಕೇವಲ ಹಣವಂತರಿಗೆ ಹೆಚ್ಚು ಹಣಗಳಿಸಲು ದಾರಿಯನ್ನು ಮಾಡಿಕೊಟ್ಟಂತಾಯಿತು ಲಾರ್ಡ್ ಹೇಸ್ಟಿಂಗ್ಸನು ಪ್ರಾರಂಭಿಸಿದ ಜಮೀನುದಾರೀ ಪದ್ಧತಿಯಿಂದ ರೈತರೆಲ್ಲ ಜಮೀನುದಾರರ ದವಡೆಯಲ್ಲಿ ಸಿಕ್ಕರು ತರುವಾಯ ಬಂದ ಗವ್ಹರ್ನರ್‌ಜನರಲ್ಲರು ಬ್ರಿಟಿಶ ಸರಕುಗಳ ಮೇಲಿನ ಸುಂಕವನ್ನು ತೆಗೆದುಹಾಕಿ, ಭಾರತೀಯ ಸರಕುಗಳ ಹೊರ ಹಾಗೂ ಒಳವ್ಯಾಪಾರಗಳೆರಡರ ಮೇಲೂ ಸುಂಕವನ್ನು ಹೇರಿದರು ಇದರಿಂದ ಇಂಗ್ಲಿಷರ ಸರಕುಗಳು ಭಾರತೀಯ ಸರಕುಗಳಿಗಿಂತ ಅಗ್ಗಬೆಲೆಗೆ ದೊರೆಯತೊಡಗಿದುವು ಅವರ ವ್ಯಾಪಾರೋದ್ಯೋಗಗಳು ಬೆಳೆದುವು, ನಮ್ಮ ವ್ಯಾಪಾರೋದ್ಯೋಗಗಳು ಕುಗ್ಗಿದುವು ಆಗ ಜಗತ್ಪ್ರಸಿದ್ಧವಾಗಿದ್ದ ಡಾಕಾ ಮಲಮಲು, ಕಾಶ್ಮೀರದ ಉಣ್ಣೆಯ ಬಟ್ಟೆ, ಕಾನ್‌ಪುರ ಒಡವೆಗಳು ಇವುಗಳ ವ್ಯಾಪಾರ ಕಟ್ಟಾಗಹತ್ತಿತು ಕುಶಲೋದ್ಯೋಗಿಗಳು ನಿರು-ದ್ಯೋಗಿಗಳಾಗಹತ್ತಿದರು ಕೆಲವು ನೇಕಾರರು ನೇಕಾರಿಕೆ ಬಿಟ್ಟು ಒಕ್ಕಲು-ತನಕ್ಕೆ ನಿಂತರು ಈ ಸಮಯದಲ್ಲಿ ಯುರೋಪದಲ್ಲಿ ಯಾಂತ್ರಿಕಯುಗವು ಏರಿಕೆಗೆ ಬರತೊಡಗಿತ್ತು ಅದರ ಪರಿಣಾಮವಾಗಿ, ಯಂತ್ರದಿಂದ ತಯಾರಾದ ಬಟ್ಟೆ ಮತ್ತು ಇತರ ವಸ್ತುಗಳ ಬೆಲೆ ಕಡಿಮೆಯಾಗಿ, ಅಷ್ಟೇ ಬೆಲೆಯಲ್ಲಿ ಕೈಗಾರಿಕೆಯಿಂದ ಅವುಗಳನ್ನು ಭಾರತದಲ್ಲಿ ತಯಾರಿಸುವುದು ಅಶಕ್ಯವಾಯಿತು, ಆದುದರಿಂದ ಬ್ರಿಟಿಶರ ವ್ಯಾಪಾರವು ಮೆಲ್ಲಗೆ ಬೆಳೆಯಿತು ಭಾರತದ ವ್ಯಾಪಾರವು ಕುಗ್ಗಿತು ಇದರಿಂದ ಭಾರತವು ಬಡತನದ ತವರುಮನೆಯಾಗತೊಡಗಿದ್ದು ಆಶ್ಚರ್ಯವಲ್ಲ ಇಂತಹ ಸ್ಥಿತಿಯಲ್ಲಿಯೂ ಜಮಶೇಟಜಿ ಟಾಟಾ ಅವರು, ಕ್ರಿ ಶ ೧೮೫೪ರಲ್ಲಿ ಮುಂಬಯಿಯಲ್ಲಿ ನೂಲುವ—ನೇಯುವ ಅರಳೆಯ ಗಿರಣಿಗಳನ್ನು ಪ್ರಾರಂಭಿಸಿದರು ಕೆಲವು ವರ್ಷಗಳ ಅನಂತರ ನಾಗಪುರ, ಅಹಮ್ಮದಾಬಾದ, ಸೊಲ್ಲಾಪುರಗಳಲ್ಲಿ ಗಿರಣಿಗಳು ಹುಟ್ಟಿದುವು ಇದರಿಂದ ಬ್ರಿಟಿಶರ ವ್ಯಾಪಾರಕ್ಕೆ ಧಕ್ಕೆ ತಗಲಹತ್ತಿದ್ದರಿಂದ, ಅವರು ತಮಗೆ

ಅನುಕೂಲ ಕಾಯದೆಗಳನ್ನು ಮಾಡಿ, ಭಾರತದ ವ್ಯಾಪಾರಕ್ಕೆ ಪೆಟ್ಟುಕೊಡುವ ಹಂಚಿಕೆ ಹಾಕತೊಡಗಿದರು, ಆದರೆ ಸರಕಾರದ ಈ ಪ್ರಯತ್ನವು ಜನರಿಗ ಗೊತ್ತಾಗಿ, ಭಾರತದಲ್ಲಿ ರಾಷ್ಟ್ರೀಯ ಮನೋವೃತ್ತಿಯು ಹುಟ್ಟಿತು ಇದರಿಂದ ಯಾವ ಪರಿಣಾಮಗಳಾದುವೆಂಬದನ್ನು, ಮುಂದೆ ರಾಷ್ಟ್ರೀಯತೆಯ ಬೆಳವಣಿಗೆಯನ್ನು ಕುರಿತು ವಿವೇಚಿಸುವಾಗ ನೋಡುವಾ

**ಸಾಮಾಜಿಕ ಸ್ಥಿತಿ** — ಮೊದ-ಮೊದಲು ಇಂಗ್ಲಿಷರು ಭಾರತದ ಧಾರ್ಮಿಕ ಇಲ್ಲವೆ ಸಾಮಾಜಿಕ ಕಟ್ಟುನಿಟ್ಟುಗಳಲ್ಲಿ ಕೈಹಾಕುತ್ತಿರಲಿಲ್ಲ ಜನರಲ್ಲಿ ಕೆಲವು ಮೂಢನಂಬಿಕೆಗಳೂ ಅನಿಷ್ಟ ಸಂಪ್ರದಾಯಗಳೂ ಇದ್ದದ್ದು ಅವರಿಗೆ ತಿಳಿದಿತ್ತು ಆದರೆ ಅವುಗಳಲ್ಲಿ ಕೈಹಾಕಿದರೆ, ತಮ್ಮ ವ್ಯಾಪಾರಕ್ಕೂ ರಾಜ್ಯ-ಸತ್ತೆಗೂ ಧಕ್ಕೆ ತಗಲಬಹುದೆಂದು ಬುದ್ಧಿವಂತರಾದ ಇಂಗ್ಲಿಷರು ಅದರಲ್ಲಿ ಕೈಹಾಕಲಿಲ್ಲ, ಆದರೆ ತಮ್ಮ ಸತ್ತೆಗೆ ಸ್ಥಿರತೆಯುಂಟಾಗುತ್ತಲೆ ಬೆಂಟಿಂಕನು ಸುಧಾರಣೆಯ ಪ್ರವರ್ತಕನಾದನು. ಆಗ, ಗಂಡನು ಸತ್ತಕೂಡಲೆ ಹೆಂಡತಿಯು ಆತನ ಶವದೊಡನೆ ಅಗ್ನಿಯಲ್ಲಿ ಹಾರಿಕೊಂಡು ಸತ್ತುಹೋಗುವ ದುಷ್ಟಪದ್ಧತಿಯೂ, ಹೆಣ್ಣುಕೂಸು ಹುಟ್ಟಿದ ಕೂಡಲೆ ಅದನ್ನು ಕೊಂದು ಹಾಕುವ ಕಾಡುಜನರ ರೂಢಿಯೂ, ಕಾಳಿಕಾದೇವಿಯನ್ನು ತೃಪ್ತಿಪಡಿಸಲು ನರಬಲಿಯನ್ನು ಕೊಡುವ ಪುಂಡರ ಪೀಡೆಯೂ—ಬಳಕೆಯಲ್ಲಿದ್ದುದನ್ನು ನೋಡಿ, ಸುಧಾರಣಾವಾದಿಗಳ ಮನಸ್ಸು ನೊಂದಿತು ಅವರ ಬೆಂಬಲದಿಂದ ಬೆಂಟಿಂಕನು ಕಾಯದೆಗಳನ್ನು ಮಾಡಿದನು ಅಂತಹ ಅಪರಾಧ ಮಾಡಿದವರಿಗೂ ಅದಕ್ಕೆ ಪ್ರೋತ್ಸಾಹನಕೊಟ್ಟವರಿಗೂ ದೇಹಾಂತಶಿಕ್ಷೆ ವಿಧಿಸಲಾಗುವುದೆಂದು ಸಾರಿದನು, ಆದುದರಿಂದ ಈ ದುಷ್ಟಪದ್ಧತಿಗಳು ನಿರ್ನಾಮವಾದುವು ಆದರೆ ಕೆಲವು ಸನಾತನಿಗಳ ಮನಸ್ಸಿಗೆ ಇಂತಹ ಕಾಯದೆಗಳು ರುಚಿಸಲಿಲ್ಲ ಮುಂದೆ ಪ್ರಾರಂಭವಾದ ಕ್ರಿ ಶ ೧೮೫೭ರ ಸ್ವಾತಂತ್ರ್ಯಸಂಗ್ರಾಮಕ್ಕೆ ಇದೂ ಒಂದು ಕಾರಣವಾಯಿತು

**ಶಿಕ್ಷಣ** — ನಿಜವಾದ ಶಿಕ್ಷಣಸುಧಾರಣೆಯಾಗಬೇಕಾದರೆ ಜನಸಾಮಾನ್ಯರಲ್ಲಿ ಶಿಕ್ಷಣದ ಪ್ರಸಾರವಾಗಲೇಬೇಕೆಂದು, ಈ ಮೊದಲು ಭಾರತಕ್ಕೆ ಬಂದಿದ್ದ ಚಾರ್ಲಸ್ ಗ್ರ್ಯಾಂಟನೆಂಬವನು ಅರಿತಿದ್ದನು, ಮತ್ತು ಹಿಂದುಸ್ತಾನದ ಆಗಿನ ಪರಿಸ್ಥಿತಿ ಹಾಗೂ ಅದನ್ನು ಸುಧಾರಿಸುವ ಉಪಾಯಗಳನ್ನು ಕುರಿತು ಆತನು ಕ್ರಿ ಶ ೧೭೯೨ರಲ್ಲಿ ಒಂದು ಪ್ರಬಂಧವನ್ನು ಪ್ರಕಟಿಸಿದನು ಅದರಲ್ಲಿ ಭಾರತದ ಆಗಿನ ಹೀನದೆಸೆಯನ್ನು ತೋರಿಸಲು ಅನೇಕ ಅತಿಶಯೋಕ್ತಿಗಳನ್ನು ಉಪಯೋಗಿಸಿದ್ದರೂ, ಒಟ್ಟಿನಲ್ಲಿ ಕೆಟ್ಟುಹೋದ ಪರಿಸ್ಥಿತಿಯು ಸುಧಾರಿಸಬೇಕಾದರೆ ಉತ್ತಮಶಿಕ್ಷಣ ಅವಶ್ಯ—ಎಂಬ ಮಾತು ಮಾತ್ರ ಸತ್ಯವಾಗಿತ್ತು,

ಆದರೆ ಎರಡು ಮಹತ್ತ್ವದ ಮಾತುಗಳನ್ನು ನಿರ್ಧರಿಸಬೇಕಾಗಿತ್ತು ಶಿಕ್ಷಣದ ವಿಷಯವು ಪಾಶ್ಚಿಮಾತ್ಯ ವಿಜ್ಞಾನ, ಸಂಸ್ಕೃತಿ, ಇತಿಹಾಸ ಇವುಗಳಾಗಿರಬೇಕೋ ಅಥವಾ ಪೌರ್ವಾತ್ಯ ತತ್ತ್ವಜ್ಞಾನ, ಸಾಹಿತ್ಯ, ಗಣಿತ ಇತ್ಯಾದಿ ಆಗಿರಬೇಕೋ?—ಎಂಬುದು ಒಂದು, ಎರಡನೆಯದಾಗಿ, ಕಲಿಸತಕ್ಕ ವಿಷಯವನ್ನು ಆಗಿನ ಭಾರತದ ರಾಜಭಾಷೆಗಳಾದ ಸಂಸ್ಕೃತ ಮತ್ತು ಪರ್ಸಿಯನ್ ಭಾಷೆಗಳ ಮುಖಾಂತರ ಕಲಿಸಬೇಕೋ ಅಥವಾ ಇಂಗ್ಲಿಷ ಭಾಷೆಯ ಮುಖಾಂತರವೋ? – ಇಲ್ಲವೆ ಇವೆಲ್ಲವನ್ನೂ ಬಿಟ್ಟು ಜನರ ಮಾತೃಭಾಷೆಗಳಾದ ಕನ್ನಡ, ಗುಜರಾತಿ, ಮರಾಠಿ, ಹಿಂದಿ ಮೊದಲಾದ ಭಾಷೆಗಳನ್ನು ಬಳಸಬೇಕೋ?—ಈ ಎರಡೂ ಮಾತುಗಳ ನಿರ್ಧಾರವು ಬೆಂಟಿಂಕನ ಕಾಲದಲ್ಲಿ ಆಯಿತು ವಿದ್ವಾಂಸನಾದ ಇಂಗ್ಲಿಷ ಸಭಾಸದ ಮೆಕಾಲೆಯ ಪ್ರಯತ್ನಕ್ಕೆ ಹಿಂದೂ ಪಂಡಿತನಾದ ರಾಜಾರಾಮಮೋಹನರಾಯನ ಬೆಂಬಲ ಸಿಕ್ಕು, ಭಾರತೀಯ ತತ್ತ್ವಜ್ಞಾನ, ಪಾಶ್ಚಿಮಾತ್ಯ ವಿಜ್ಞಾನ ಹಾಗೂ ಸಾಹಿತ್ಯ ಮತ್ತು ಶಾಸ್ತ್ರಗಳನ್ನು ಇಂಗ್ಲಿಷ ಭಾಷೆಯ ಮುಖಾಂತರವೇ ಕಲಿಸಬೇಕೆಂದು ನಿರ್ಣಯವಾಯಿತು ಅಂದಿನಿಂದ ಇಂಗ್ಲಿಷ ಶಿಕ್ಷಣಕ್ಕೆ ಕಳೆ ಏರಿತು ಇದರಿಂದ ಭಾರತದ ಭಾಷೆಗಳು ಮೂಲೆಗುಂಪಾಗತೊಡಗಿದುವು. ಇಂಗ್ಲಿಷ ಕಲಿತವನೇ ಸುಸಂಸ್ಕೃತನೆನಿಸಿಕೊಳ್ಳಹತ್ತಿದನು ಕಲಿತವರು ಎಂದರೆ ಇಂಗ್ಲಿಷ ಕಲಿತವರು—ಎಂಬರ್ಥ ಪ್ರಚಾರದಲ್ಲಿ ಬಂತು ಇಂಗ್ಲಿಷ ವಿದ್ಯೆಯನ್ನು ಕಲಿತು ನೌಕರಿದೊರಕಿಸುವುದೊಂದು ಧ್ಯೇಯವೇ ಆಯಿತು ಇಷ್ಟೆಲ್ಲ ಹಾನಿಯಾದರೂ, ಹಿಂದೀಯರೆಲ್ಲ ಒಂದೇ ವಿಚಾರಸರಣಿಯಲ್ಲಿ ಒಂದೇ ಭಾಷೆಯ ಮುಖಾಂತರ ಒಟ್ಟುಗೂಡಲು ಅವಕಾಶ ಸಿಕ್ಕಿತು ಎಂಬುದನ್ನು ಮಾತ್ರ ಮರೆಯುವಂತಿಲ್ಲ

ಶಿಕ್ಷಣದಲ್ಲಿ ಈ ಮೊದಲು ಕೆಲವು ಸ್ತ್ರೀಯರು ಮಾತ್ರ ಹೆಸರು ಗಳಿಸಿದ ಕತೆಗಳನ್ನು ಓದಿದ್ದೇವೆ, ಆದರೆ ಭಾರತದಲ್ಲಿ ಆಗ ಸಾಮಾನ್ಯವಾಗಿ ಸ್ತ್ರೀಶಿಕ್ಷಣ ಹೆಚ್ಚು ಪ್ರಚಾರದಲ್ಲಿ ಇರಲಿಲ್ಲ ಮೊಗಲರ ಆಳಿಕೆಯಲ್ಲಿ ಅಲ್ಲಲ್ಲಿ ಕೆಲವು ಶಾಲೆಗಳಿದ್ದರೂ, ಸ್ತ್ರೀಶಿಕ್ಷಣ ವಿಶೇಷ ಮುಂದುವರಿದಿದ್ದಿಲ್ಲ ರಾಜಕೀಯ ಅವ್ಯವಸ್ಥೆಯ ಕಾಲದಲ್ಲಿ ಸ್ತ್ರೀಶಿಕ್ಷಣವು ಸಂಪೂರ್ಣವಾಗಿ ಅಲಕ್ಷ್ಯಿಸಲ್ಪಟ್ಟಿತ್ತು, ಆದರೆ ಬ್ರಿಟಿಶರ ಆಳಿಕೆಯು ಸ್ಥಿರಗೊಳ್ಳುತ್ತಲೇ, ಈ ದಿಸೆಯಲ್ಲಿ ಪ್ರಯತ್ನವು ಪ್ರಾರಂಭವಾಯಿತು ಮುಂದೆ ಪಂಡಿತ ಈಶ್ವರಚಂದ್ರವಿದ್ಯಾಸಾಗರ, ಪಂಡಿತಾ ರಮಾಬಾಯಿ, ಪ್ರೊ ಕರ್ವೆ ಮೊದಲಾದವರು ಈ ಪ್ರಯತ್ನವನ್ನು ಮುಂದೆ ಸಾಗಿಸಿದರು

## ಅಭ್ಯಾಸನಗಳು

೧ ಯುರೋಪಿಯನರು ಭಾರತದಲ್ಲಿ ಸೇರುವ ಮೊದಲು ಭಾರತದ ಆರ್ಥಿಕ ಪರಿಸ್ಥಿತಿ ಹೇಗೆ ಇತ್ತು? ಹಾಗಿರಲು ಕಾರಣವೇನು?

೨ ಬ್ರಿಟಿಶರ ಆಳಿಕೆಯಿಂದ ಯಾವ ಯಾವ ಮಾರ್ಪಾಡುಗಳು ತಲೆದೋರ ಹತ್ತಿದವು?

೩ ಯಾವ ಸಾಮಾಜಿಕ ದುಷ್ಟಪದ್ಧತಿಗಳು ಭಾರತದಲ್ಲಿದ್ದವು? ಅವುಗಳನ್ನು ಯಾರು ನಿರ್ನಾಮಮಾಡಿದರು? ಯಾವ ಉಪಾಯದಿಂದ?

೪, ಪೌರ್ವಾತ್ಯಶಿಕ್ಷಣ, ಪಾಶ್ಚಿಮಾತ್ಯಶಿಕ್ಷಣ ಇವೆರಡರಲ್ಲಿ ಭಾರತಕ್ಕೆ ಯಾವುದರಿಂದ ಹೆಚ್ಚು ಹಿತವಾಗುವಂತೆ ಇತ್ತು? ಅದು ಹೇಗೆ?

೫ ಸ್ತ್ರೀಶಿಕ್ಷಣಕ್ಕಾಗಿ ಪ್ರಯತ್ನಿಸಿದವರು ಯಾರು ಯಾರು?

---

# ೧೨. ಭಾರತದ ಸ್ವಾತಂತ್ರ್ಯಸಮರ—೧೮೫೭

**ಲಾರ್ಡ್ ಕ್ಯಾನಿಂಗ** (೧೮೫೬-೧೮೬೨) **ಪರಿಚಯ**—ಲಾರ್ಡ್ ಡಾಲ್‌ಹೌಸಿಯ ತರುವಾಯ ಲಾರ್ಡ್ ಕ್ಯಾನಿಂಗನು ಭಾರತದ ಗವ್ಹನರ ಜನರಲನಾಗಿ ಬಂದನು ಈತನ ಧೋರಣ, ಕರ್ತವ್ಯದಕ್ಷತೆ, ಬುದ್ಧಿವಂತಿಕೆ, ಮತ್ತು ಶಾಂತವೃತ್ತಿ ಇವು ಎಲ್ಲರ ಮೆಚ್ಚುಗೆಯನ್ನು ಪಡೆದಿದ್ದುವು ಡಾಲ್‌ಹೌಸಿಯ ಆಕ್ರಮಣದ ಧೋರಣೆಯಿಂದ ಏಳಬಹುದಾದ ಜ್ವಾಲೆಯನ್ನು ಶಾಂತಮಾಡಬೇಕಾದರೆ ಕ್ಯಾನಿಂಗನೇ ಯೋಗ್ಯನೆಂದು, ಇಂಗ್ಲಂಡಿನಲ್ಲಿ ಎಲ್ಲರ ಮತವಾಯಿತು ಭಾರತಕ್ಕೆ ಗವ್ಹರ್ನರ್ ಜನರಲನಾಗಿ ಹೊರಡುವ ಮುನ್ನ ಆತನಿಗೆ ಒಂದು ಸಂತೋಷಕೂಟವನ್ನು ಏರ್ಪಡಿಸಿದ್ದರು ಅದರಲ್ಲಿ ಆತನು—“ಇಂದು ಭಾರತದ ಆಕಾಶದಲ್ಲಿ ಸಣ್ಣಸಣ್ಣ ಬಿಳಿಯ ಮೋಡಗಳು ತೇಲಿದಂತೆ ಕಾಣುತ್ತಿವೆ, ಆದರೆ ಕ್ಷಿಪ್ರದಲ್ಲಿಯೇ ಅವೇ ಕಾರ್ಮೋಡಗಳಾಗಿ ಮಾರ್ಪಡುವುವು ಎಲ್ಲಕಡೆಗೂ ಕಗ್ಗತ್ತಲು ಮುಸುಕುವುದು, ಬ್ರಿಟಿಶರನ್ನು ಕಂಗೆಡಿಸುವುದು” ಎಂದು ಮುನ್ನುಡಿದನು, ಈ ಭವಿಷ್ಯಕ್ಕೆ ಎದೆಗೊಡುವುದಕ್ಕೆ ಸಿದ್ಧನಾಗಿಯೇ ಭಾರತಕ್ಕೆ ಕಾಲಿಟ್ಟನು



ಲಾರ್ಡ್ ಕ್ಯಾನಿಂಗ

**ಇರಾಣದ ಯುದ್ಧ**—(೧೮೫೬) ಲಾರ್ಡ್ ಕ್ಯಾನಿಂಗನು ಇನ್ನೂ ಬರು-ಬರುತ್ತಲೇ ಹೊರಗಿನ ಪೀಡೆಯನ್ನು ಪರಿಹರಿಸಬೇಕಾಯಿತು. ಇರಾಣ-ಅಫಗಾನಿಸ್ತಾನಗಳ ನಡುವೆ ಆಗಾಗ ಕಲಹದ ಹೊಗೆಯಾಡುತ್ತಲೇ ಇತ್ತು ಇರಾಣದ ಶಹನು, ಬ್ರಿಟಿಶರ ಮಿತ್ರನಾದ ಅಫಗಾನಿಸ್ತಾನದ ದೋಸ್ತ ಮಹಮ್ಮದನನ್ನು ಕೆಣಕಿದನು, ಅವನ ರಾಜಧಾನಿಯಾದ ಹಿರಾತನ್ನು ಹಿಡಿದು-ಕೊಂಡನು ಲಾರ್ಡ್ ಕ್ಯಾನಿಂಗನು ಜೇಮ್ಸ ಔಟ್ರ್ಯಾಮ ಎಂಬ ಸೇನಾಪತಿಯನ್ನು ಇರಾಣದ ಮೇಲೆ ದಂಡೆತ್ತಿ ಕಳುಹಿದನು ಬ್ರಿಟಿಶರಿಗೆ ಜಯವಾಯಿತು, ಶಹನು ಒಪ್ಪಂದಮಾಡಿಕೊಂಡನು

**೧೮೫೭ರ ಸ್ವಾತಂತ್ರ್ಯಸಮರ**—ಲಾರ್ಡ್ ಕ್ಯಾನಿಂಗನು ಭಾರತದ ವಾತಾವರಣವನ್ನು ಸೂಕ್ಷ್ಮರೀತಿಯಿಂದ ನೋಡಿದನು ಅಲ್ಲಲ್ಲಿ ಕಾರ್ಮೋಡಗಳು ಎದ್ದೇಳತೀರುವುವೆಂದು ತೋರಹತ್ತಿತು ಇತ್ತ ಭಾರತೀಯರಲ್ಲಿಯೂ ಸೇಡಿನ ಸಿಡಿಮದ್ದನ್ನು ಸಂಗ್ರಹಮಾಡುವುದು ಮುಗಿದಿತ್ತು, ಗೊತ್ತಾದ ಒಂದೇ

ಒಂದು ದಿನ ಅದಕ್ಕೆ ಕೊಳ್ಳಿಯನ್ನು ಕೊಡುವ ಎತ್ತುಗಡೆ ನಡೆದಿತ್ತು ಮುಂದಿನ ಗಡಿಬಿಡಿಯನ್ನು ತಿಳಿದುಕೊಳ್ಳುವ ಮೊದಲು ಅದರ ಹಿನ್ನೆಲೆಯಲ್ಲಿ ಏನೇನು ನಡೆದಿತ್ತೆಂಬುದನ್ನು ನೋಡೋಣ

**ರಾಜಕೀಯ ಕಾರಣಗಳು** —(೧) ಲಾರ್ಡ್ ಡಾಲ್‌ಹೌಸಿಯು ಉಗಿಬಂಡಿ, ಪೋಸ್ಟು, ತಾರುಗಳನ್ನು ಆರಂಭಿಸಿದನಷ್ಟೆ! ಅವೆಲ್ಲವೂ ತಮ್ಮ ಸಾಮ್ರಾಜ್ಯದ ಭದ್ರತೆಗಾಗಿಯೇ ಇವೆ, ಹೊರತಾಗಿ ಹಿಂದುಗಳ ಹಿತಕ್ಕಾಗಿ ಅಲ್ಲ—ಎಂಬ ಕಲ್ಪನೆ ಜನರಲ್ಲಿ ಬೇರುಬಿಟ್ಟಿತು (೨) ಆ ಕಾಲದಲ್ಲಿ ಭಾರತೀಯರು ತಮ್ಮ ಅರಸರನ್ನು ದೇವರ ಸಮಾನವಾಗಿ ತಿಳಿಯುತ್ತಿದ್ದರು ಡಾಲ್‌ಹೌಸಿಯು ಅವರನ್ನೆಲ್ಲ ನಿರ್ಮೂಲ ಮಾಡಿದುದರಿಂದ, ಭಾರತೀಯರಿಗೆ ದೇವದ್ರೋಹ ದಷ್ಟೇ ಕೆಡುಕೆನಿಸಿತು ಆದ್ದರಿಂದ ಸಂಸ್ಥಾನಿಕರೂ, ಪ್ರಜೆಗಳೂ ಕೂಡಿಯೇ ಬ್ರಿಟಿಶರ ಮೇಲೆ ಸಿಟ್ಟಾದರು (೩) ಅಯೋಧ್ಯೆ-ಬಂಗಾಲಗಳ ಜಮೀನದಾರಿ ಯನ್ನು ನಿರ್ಮೂಲ ಮಾಡಿದುದರಿಂದ, ಸಿರಿವಂತರೆಲ್ಲ ನೇಡುತೀರಿಸಿಕೊಳ್ಳ ಬೇಕೆನ್ನಹತ್ತಿದರು (೪) ದಿಲ್ಲಿಯ ಕೊನೆಯ ಮೊಗಲ ಬಾದಶಹ **ಬಹದ್ದೂರ** ಶಹನಿಗೆ ದಿಲ್ಲಿಯ ಸಿಂಹಾಸನವನ್ನು ಬಿಟ್ಟುಹೋಗಲು ಡಾಲ್‌ಹೌಸಿಯು ಅಪ್ಪಣೆ ಮಾಡಿದ್ದನು, ಅದರಿಂದ ಮುಸಲ್ಮಾನರೂ ಕೋಪಗೊಂಡರು (೫) ತಂದೆಯ ಉಂಬಳಿಯನ್ನು ತನಗೆ ಕೊಡಲಿಲ್ಲವೆಂದು ನಾನಾಸಾಹೇಬ ಪೇಶವೆಯು ಬಂಡೆಬ್ಬಿಸಲು ಸಿದ್ಧತೆ ನಡೆಸಿದನು (೬) ಸ್ವಾಭಿಮಾನಿಯಾದ ಝಾಂಸಿಯ ಲಕ್ಷ್ಮೀಬಾಯಿಗೆ ದತ್ತಕತೆಗೆದುಕೊಳ್ಳಲು ಒಪ್ಪಿಗೆ ಕೊಡಲಿಲ್ಲ, ಮತ್ತು ಆಕೆಯ ಮೇಲೆ ಅವಿಶ್ವಾಸವನ್ನು ತೋರಿಸಿದರು

**ಧಾರ್ಮಿಕ ಕಾರಣಗಳು** —ಆ ಕಾಲಕ್ಕೆ ಕ್ರಿಶ್ಚನ ಮಿಶನರಿ ಜನರ ನುಳಿದಾಟ ವಿಶೇಷವಾಗಿತ್ತು ಧರ್ಮಾಂತರ ಮಾಡುವ ಕೆಲಸವೂ ನಡೆದಿತ್ತು ಪಾದ್ರಿಸಾಲೆಗಳಲ್ಲಿ ಕ್ರಿಸ್ತಧರ್ಮಬೋಧನೆಯು ನಡೆಯುತ್ತಿತ್ತು 'ಹಿಂದೂ ಧರ್ಮವನ್ನು ಹಾಳುಮಾಡುವುದಕ್ಕಾಗಿಯೇ ಇದೆಲ್ಲ ನಡೆದಿದೆ' ಎಂದು ಹಿಂದುಗಳ ಭಾವನೆಯಾಯಿತು. ಇದೇಹೊತ್ತಿಗೆ ಪುನರ್ವಿವಾಹಕ್ಕೆ ಒಪ್ಪಿಗೆ ಯನ್ನು ಕೊಟ್ಟುದೂ ಹಿಂದೂಧರ್ಮಕ್ಕೆ ದೊಡ್ಡ ಆಘಾತವೆನಿಸಿತು ಶೀಖರೂ ರಜಪೂತರೂ ತಮ್ಮ ಪೂರ್ವಜರ ರಾಜ್ಯವನ್ನು ಮತ್ತೆ ಗಳಿಸಲು ಎಣಿಕೆ ಹಾಕುತ್ತಿದ್ದರು

**ಸೈನಿಕಕಾರಣ** —ಭಾರತದಲ್ಲಿ ಇಷ್ಟೊಂದು ಗಡಿಬಿಡಿಯು ನಡೆದಿರು ವಾಗ ಬ್ರಿಟಿಶರ ಸೈನ್ಯವು ಭಾರತದಲ್ಲಿಯೇ ಇರಬೇಕಾಗಿತ್ತು, ಆದರೆ ರಸಿಯಾ, ತುರ್ಕಸ್ತಾನ, ಅಫಘಾನಿಸ್ತಾನ, ಇರಾಣಗಳಲ್ಲಿ ಮತ್ತೆಯೂ ಕಲಹವೇಳುವ ಲಕ್ಷಣವು ಇದ್ದಿತು, ಅದಕ್ಕಾಗಿ ಇಂಗ್ಲಿಷರು ತಮ್ಮ ಕೆಂಪುಸೈನ್ಯದ ಬಹು-

ಭಾಗವನ್ನು ಭಾರತದ ಹೊರಗೇ ಇಟ್ಟರು ದೇಶದಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಹಿಂದೀಯರ ಪಡೆಗಳೇ ಹೆಚ್ಚಾಗಿದ್ದುವು

**ಸ್ವಾತಂತ್ರ್ಯಸಂಗ್ರಾಮದ ತಾತ್ಕಾಲಿಕ ಕಾರಣ** — ಹೀಗ ಸಿಡಿಮದ್ದು ಕಾಯ್ದು ಕುಳಿತಿರುವಾಗ, ಅದು ಸ್ಫೋಟವಾಗುವುದಕ್ಕೆ ನಣ್ಣದೊಂದು ಕಿಡಿ ಬಿದ್ದರೂ ನಾಕಾಗಿತ್ತು ಅಂತಹ ಪ್ರಸಂಗವೂ ತಾನಾಗಿಯೆ ಒದಗಿತು ೧೮೫೭ನೆಯ ಇಸವಿ—ಜನವರಿ ತಿಂಗಳಲ್ಲಿ ಸಿಪಾಯಿಗಳಿಗೆ 'ಎನ್‌ಫೀಲ್ಡ್' ಎಂಬ ಹೆಸರಿನ ಕಾಡತೂಸುಗಳನ್ನು ಉಪಯೋಗಕ್ಕೆ ಕೊಟ್ಟರು ಅವುಗಳ ತುದಿಯನ್ನು ಹಲ್ಲುಗಳಿಂದ ಕಚ್ಚಿ ತೆಗೆಯಬೇಕಾಗುತ್ತಿತ್ತು ಆ ತುದಿಗೆ ಹಂದಿಯ ಮತ್ತು ಆಕಳ ನೆಣವನ್ನು ಹಚ್ಚಿದ್ದರೆಂಬ ಸುದ್ದಿ ಬಹಿರಂಗವಾಗಿಯೇ ಹರಡಿತು

ನಿಜವಾಗಿಯೂ ತಮ್ಮೆಲ್ಲರನ್ನೂ ಕುಲಗೆಡಿಸುವುದಕ್ಕಾಗಿಯೇ ಬ್ರಿಟಿಶರು ಈ ಮಂಗನಾಟವನ್ನು ಹೂಡಿದ್ದಾರೆಂದು ಎಲ್ಲರ ತಿಳಿವಳಿಕೆಯಾಯಿತು ಏಕೆಂದರೆ ಹಿಂದುಗಳಿಗೆ ಆಕಳು ಪೂಜ್ಯ, ಮುಸಲ್ಮಾನರಿಗ ಹಂದಿ ನಿಷಿದ್ಧ ಆದುದರಿಂದ ಪ್ರಾಣಹೋಗುವ ಪ್ರಸಂಗಬಂದರೂ, ಆ ಕಾಡತೂಸುಗಳನ್ನು ಉಪಯೋಗಿಸತಕ್ಕದ್ದಲ್ಲ, ಪ್ರಸಂಗಬಂದರೆ ಈ ಧರ್ಮದ್ರೋಹದ ಬಗಗ ಬ್ರಿಟಿಶರ ಮೇಲೆ ಸೇಡು ತೀರಿಸಿಕೊಳ್ಳತಕ್ಕದ್ದು— ಎಂದು ಹಿಂದೀ ಸೈನಿಕರು ನಿಶ್ಚಯಿಸಿದರು ಅಂತು ಭಾರತದ ತುಂಬೆಲ್ಲ ಸೇಡಿನ ಸುರಂಗವು ಸಿದ್ಧವಾಯಿತು

**ಸಂಗ್ರಾಮದ ಪ್ರಾರಂಭ** — ೧೮೫೭ನೆಯ ಫೆಬ್ರುವರಿ ೧೯ನೆಯ ದಿನಾಂಕ, ರಾಣಿಗಂಜದಲ್ಲಿ ಸೈನ್ಯದ ೧೯ನೆಯ ಗುಂಪಿನಲ್ಲಿ ಕವಾಯಿತು ನಡೆದಿತ್ತು ಕಮಾಂಡರನು ಕಾಡತೂಸುಗಳನ್ನು ಹಾಕಲು ಹೇಳಿದನು ಸೈನಿಕರು ಅವುಗಳಿಗೆ ಕೈಗಳನ್ನು ಕೂಡ ಹಚ್ಚುವುದಿಲ್ಲವೆಂದು ಹೇಳಿದರು ಕೂಡಲೆ ಅವರೆಲ್ಲರನ್ನೂ ಕೆಲಸದಿಂದ ತೆಗೆಯಲಾಯಿತು, ಅವರಲ್ಲಿ ಅನೇಕರಿಗ ೫ರಿಂದ ೧೦ ವರುಷಗಳ ವರೆಗೆ ಕಠಿಣ ಶಿಕ್ಷೆಯನ್ನು ಕೊಡಲಾಯಿತು

ಕೆಲಸವನ್ನು ಕಳೆದಕೊಂಡ ಸೈನಿಕರು ಹೆಚ್ಚಾಗಿ ಅಯೋಧ್ಯಾ-ರೋಹಿಲ ಖಂಡದವರು ಆ ಭಾಗದಲ್ಲಿಯೇ ಹಿಂದೀಸೈನ್ಯಗಳು ಹೆಚ್ಚಾಗಿದ್ದುವು ಇವರೆಲ್ಲ ರಾಣಿಗಂಜದ ಸುದ್ದಿಯನ್ನು ಆ ಸೈನಿಕರಲ್ಲಿ ಹರಡಿದರು. ಮುಂದೆ ತಿಂಗಳೆರಡು ತಿಂಗಳೊಳಗಾಗಿ ಎಲ್ಲ ಸೈನ್ಯಗಳ ಸೈನಿಕರೂ ಬಂಡಾಯಕ್ಕೆ ಸಿದ್ಧರಾದರು

**ಮೀರತದ ಬಂಡಾಯ** — ೧೮೫೭ನೆಯ ಮೇ ೬ನೆಯ ದಿನಾಂಕ, ಅನೇಕ ಠಾಣ್ಯಾಗಳಲ್ಲಿ ಸಿಪಾಯಿಗಳು ಒಟ್ಟಾಗಿ ಅಧಿಕಾರಿಗಳನ್ನು ಗುಂಡಿಗೆ ಬಲಿ

ಕೊಟ್ಟರು, ಸೆರೆಮನೆಗಳಿಗೆ ಬೆಂಕಿಹಚ್ಚಿ, ಸೆರೆಯಾಳುಗಳನ್ನು ಬಿಡುಗಡೆ ಮಾಡಿದರು. ಆ ಮೇಲೆ ಆ ಬಂಡುಗಾರರು ಬ್ರಿಟಿಶರ ದಂಡನ್ನು ಚದರಿಸುತ್ತ ದಿಲ್ಲಿಯ ದಾರಿಯನ್ನು ಹಿಡಿದರು ನಡುವೆ ಆಗ್ರಾ ಪಟ್ಟಣವನ್ನು ವಶಮಾಡಿಕೊಂಡರು

**ದಿಲ್ಲಿಯಲ್ಲಿ ದುರಂತ** – ಬೆಳಗುಮುಂಜಾವಿನ ಸಮಯದಲ್ಲಿ, ಆ ಸ್ವಾತಂತ್ರ್ಯವೀರರು ದಿಲ್ಲಿಯನ್ನು ಹೊಕ್ಕರು ಅಲ್ಲಿಯ ಮದ್ದಿನ ಮನೆಗೂ ಕೊಳ್ಳಿ ಇಕ್ಕಿದರು ಬಳಿಕ ಅವರು ದಿಲ್ಲಿಯ ಅರಮನೆಯಲ್ಲಿದ್ದ ಎಂಬತ್ತು ವರುಷದ ಮುದುಕ ಮೊಗಲಬಾದಶಹ ಬಹಾದ್ದೂರಶಹನನ್ನು ಪಟ್ಟಕ್ಕೆ ಕುಳ್ಳಿರಿಸಿ, ಸಂಪೂರ್ಣ ಸ್ವಾತಂತ್ರ್ಯದ ಸಮಾರಂಭವನ್ನು ನಡೆಸಿದರು ಮುಂದೆ ನಾನಾಸಾಹೇಬನನ್ನು ಪೇಶವೆಯ ಪಟ್ಟಕ್ಕೆ ತರಬೇಕೆಂದು ಹವಣಿಸಿದರು ಅಷ್ಟರಲ್ಲಿ ಜನರಲ್ ನಿಕಲ್ಸ್ ಎಂಬ ಸೇನಾಪತಿಯು ಪಂಜಾಬದಿಂದ ಸೈನ್ಯಸಹಿತವಾಗಿ ಬಂದು, ಬಂಡುಗಾರರನ್ನು ಸಿಕ್ಕಂತೆ ಕೊಂದುಹಾಕಿದನು ದಿಲ್ಲಿಯು ಅವನ ಕೈವಶವಾಯಿತು ಲೆಫ್ಟನೆಂಟ್ ಹಡ್‌ಸನ್ನನು ನೇರವಾಗಿ ಬಹದ್ದೂರಶಹನ ಅರಮನೆಗೆ ಹೋಗಿ ಅವನನ್ನು ಹಿಡಿದನು ಹುಮಾಯೂನನ ಗೋರಿಯ ಹತ್ತಿರ ಅವಿತುಕೊಂಡಿದ್ದ ಬಹದೂರ್ ಶಹನ ಮೂರು ಮಕ್ಕಳನ್ನೂ ಹಿಡಿತರಿಸಿ, ಗುಂಡುಹಾಕಿ ಹೆಣಗಳನ್ನು ಬೀದಿಯಲ್ಲಿ ಕಟ್ಟಿಸಿದನು ಬಾದಶಹನನ್ನು ರಂಗೂನಕ್ಕೆ ಕಳುಹಿದನು

**ಕಾನಪುರದ ಕಾಳಗ** – ಈ ಬಂಡಾಯದ ಬೇಗೆ ತಿಂಗಳೊಪ್ಪತ್ತಿನಲ್ಲಿಯೇ ಬ್ರಿಟಿಶರ ಸೈನ್ಯ-ವಸತಿಗಳಾದ ಕಾನಪುರ, ಅಂಬಾಲಾ, ಲಖನೌ, ಝಾಂಸಿ, ಬರೇಲಿ, ಅಲಹಾಬಾದ, ಗ್ವಾಲ್ಹೇರ, ಕಾಶಿಮುಂತಾದ ಇಪ್ಪತ್ತೆರಡು ಕಡೆಗಳಲ್ಲಿ ಹಬ್ಬಿತು - ಕಾನಪುರದ ನೆರೆಯ ಬಹ್ಮಾವರ್ತದಲ್ಲಿಯೇ ಪೇಶವೆ ನಾನಾ ಸಾಹೇಬನು ಇದ್ದನು ಬ್ರಿಟಿಶರ ಸೇಡು ತೀರಿಸಿಕೊಳ್ಳಲಿಕ್ಕೆ ಆತನೂ ಸಮಯವನ್ನು ಕಾಯುತ್ತಿದ್ದನು ಅಷ್ಟರಲ್ಲಿ ಬಂಡುಗಾರರೇ ಬಂದು ನಾನಾಸಾಹೇಬನನ್ನು ಕೂಡಿಕೊಂಡರು

ಜೂನ ೬ನೆಯ ದಿನಾಂಕಕ್ಕೆ ನಾನಾಸಾಹೇಬನ ಮುಂದಾಳ್ತನದಲ್ಲಿ ಹಿಂದೀ ಸೈನಿಕರು ಕಾನಪುರವನ್ನು ಮುತ್ತಿದರು ಅಲ್ಲಿದ್ದ "ಸರ್ ಹ್ಯೂಜ್ ವ್ಹೀಟರ್ ಸೇನಾಪತಿಯು ಕಲಿತನದಿಂದ ಇದಿರಾಗಿ, ಎರಡು ಮೂರು ವಾರಗಳ ವರೆಗೆ ಸಂರಕ್ಷಣೆಯನ್ನು ಮಾಡಿಕೊಂಡನು ಆದರೆ ಅಷ್ಟರಲ್ಲಿ ಅನ್ನಸಂಗ್ರಹವೆಲ್ಲ ತೀರಿತು ಆದ್ದರಿಂದ ಅವನು ನಾನಾಸಾಹೇಬನನ್ನು ಮೊರೆಹೊಕ್ಕು ಹೆಂಡರುಮಕ್ಕಳು ಸಹಿತವಾಗಿ ಬ್ರಿಟಿಶರನ್ನು ಅಲಹಾಬಾದಕ್ಕೆ ಮುಟ್ಟಿಸಬೇಕೆಂದು ಬೇಡಿಕೊಂಡನು ಅದರಂತೆ ನಾನಾಸಾಹೇಬನು ಅವರನ್ನು

ದೋಣಿಯಲ್ಲಿ ಕುಳ್ಳಿರಿಸಿ ಕಳುಹುತ್ತಿರುವಾಗ, ಬಂಡುಗಾರರಲ್ಲಿಯ ಕೆಲವರು ಗುಂಡುಹಾರಿಸಿ, ಅವರಲ್ಲಿಯ ಎಷ್ಟೋ ಜನರನ್ನು ಕೊಂದರು

**ನಾನಾಸಾಹೇಬನ ಕೊನೆ** — ಈ ಹೊತ್ತಿಗೆ ಜನರಲ್ ನೀಲ್ ಮತ್ತು ಜನರಲ್ ಹ್ಯಾವಲಾಕ್ ಇಬ್ಬರು ಬಲವಾದ ದಂಡಿನೊಡನೆ ಬಂದು, ಬಂಡುಗಾರರನ್ನು ಮುತ್ತಿ ಕಾನಪುರವನ್ನು ಕೈವಶಮಾಡಿಕೊಂಡರು ಬಂಡುಗಾರರೆಲ್ಲ ದಿಕ್ಕುಪಾಲಾದರು ನಾನಾಸಾಹೇಬನು ಸೋತು ಓಡಿಹೋದನು ಮುಂದೆ ಅವನ ಗತಿ ಏನಾಯಿತೋ ತಿಳಿಯಲಿಲ್ಲ

**ಲಖನೌದ ಹಾವಳಿ** — ಜೂನದಲ್ಲಿ ಲಖನೌದೊಳಗ ದಂಗೆ ಎದ್ದಿತು ಆಗ ಅಲ್ಲಿ ಸರ್ ಹೆನ್ರಿ ಲಾರೆನ್ಸನು ರೆಸಿಡೆಂಟನಿದ್ದನು ಆತನ ಕೈಕೆಳಗೆ ಒಂದು ಸಾವಿರ ಬ್ರಿಟಿಶ ಸೈನ್ಯವಿತ್ತು ಬಂಡುಹೂಡಿದ ಹಿಂದೀ ಸೈನಿಕರು ನಾಲ್ಕು ಸಾವಿರಕ್ಕೆ ಮಿಕ್ಕಿದ್ದರು ಕಾದಾಟದಲ್ಲಿ ಲಾರೆನ್ಸನು ಮಡಿದನು ಬ್ರಿಟಿಶ ಸೈನಿಕರು ಜೀವದ ಹಂಗುದೂರೆದು ಇದಿರಿಸುತ್ತಲೇ ಇದ್ದರು ಕೊನೆಗೆ ಸರ್ ಕ್ಯಾಂಬೆಲ್ ಮತ್ತು ಜನರಲ್ ಹ್ಯಾವಲಾಕ್ ಇವರಿಂದ ಸಹಾಯ ಬಂದಿತು ಇದರಿಂದ ಬಂಡುಗಾರರು ಸೋತು ಓಡಿದರು ಈ ಬಂಡಾಯವನ್ನು ಮುರಿಯಲು ಬ್ರಿಟಿಶರಿಗೆ ೪೦ ಕೋಟಿ ರೂಪಾಯಿಗಳ ವೆಚ್ಚವಾಯಿತು


ರಾಣಿ ಲಕ್ಷ್ಮೀಬಾಯಿ

**ಝಾಂಸಿಯ ವೀರರಾಣಿ** — ಝಾಂಸಿಯ ರಾಣಿಯಾದ ಲಕ್ಷ್ಮೀಬಾಯಿಯು ಪತಿ-ಪುತ್ರರ ಮರಣದ ನಂತರ ರೆಸಿಡೆಂಟನ ಒಪ್ಪಿಗಯಿಂದಲೇ ದತ್ತಕ ತೆಗದುಕೊಂಡಿದ್ದಳು ಆದರೂ ಡಾಲಹೌಸಿಯು ದತ್ತಕವನ್ನು ಕಿತ್ತೂಗದು ಸಂಸ್ಥಾನವನ್ನು ನಿರ್ಮೂಲಮಾಡಿದ್ದನು ಇಷ್ಟಾದರೂ ಲಕ್ಷ್ಮೀಬಾಯಿಯು ಶಾಂತಳಾಗಿಯೇ ಇದ್ದಳು, ಇಷ್ಟಲ್ಲದ ದಂಗೆಯ ಕಾಲದಲ್ಲಿ ಆಪತ್ತಿಗೆ ಈಡಾದ ಯುರೋಪಿಯನರನ್ನು ಕಾಪಾಡಿದ್ದಳು ಆದರೂ ಬ್ರಿಟಿಶರು ರಾಣಿಯನ್ನು ಶಂಕಿಸಿ, ಆಕೆಯನ್ನು ಸೆರೆಹಿಡಿಯುವ ಸಿದ್ಧತೆಯನ್ನು

ನಡೆಸಿದರು ಝಾಂಸಿಯ ಪ್ರಜೆಗಳು ರೊಚ್ಚಿಗೆದ್ದರು, ತಮ್ಮ ಸ್ವಾತಂತ್ರ್ಯಕ್ಕಾಗಿ ಸಮರವನ್ನು ಆರಂಭಿಸಿಯೇ ಬಿಟ್ಟರು ಲಕ್ಷ್ಮೀರಾಣಿಯು ಅವರ ಮುಂದಾಳ್ತನವನ್ನು ವಹಿಸಿದಳು ರಣಚಂಡಿಯಂತೆ ಶತ್ರುಸಂಹಾರವನ್ನು ನಡೆಸಿದ್ದಳು ಅಷ್ಟರಲ್ಲಿ ಎಲ್ಲಿಂದಲೋ ಮಿಂಚಿನ ವೇಗದಿಂದ ಗುಂಡು ಬಂದು ರಾಣಿಗೆ ಬಡಿಯಿತು, ಆ ವೀರಸ್ತ್ರೀ ನೆಲಕ್ಕುರುಳಿದಳು ಸೈನ್ಯದಲ್ಲಿ ಹಾಹಾಕಾರ ವೆದ್ದಿತು ಎಲ್ಲರೂ ದಿಕ್ಕುಗೆಟ್ಟು ಓಡಿದರು ಝಾಂಸಿಯು ಇಂಗ್ಲಿಷರ ಕೈಸೇರಿತು ಈ ಯುದ್ಧದಲ್ಲಿ ರಾಣಿಯ ಬೆಂಬಲಕ್ಕಿದ್ದ ತಾತ್ಯಾ ಟೋಪಿ ಎಂಬ ವೀರನು ಇಂಗ್ಲಿಷರ ಕೈಗೆ ಸಿಕ್ಕನು ಅವರು ಅವನನ್ನು ಗಲ್ಲಿಗೇರಿಸಿದರು

**ಕರ್ನಾಟಕದಲ್ಲಿ ಬಂಡಾಯ** — ಇದೇ ಕಾಲದಲ್ಲಿ ನರಗುಂದದಲ್ಲಿ ಬಾಬಾ-ಸಾಹೇಬನು ದೊರೆಯಾಗಿದ್ದನು ಆತನಿಗೆ ಮಕ್ಕಳಿರಲಿಲ್ಲ ದತ್ತಕ ತೆಗೆದುಕೊಳ್ಳಲು ಇಂಗ್ಲಿಷರು ಒಪ್ಪಿಗೆ ಕೊಡಲಿಲ್ಲ, ಆದುದರಿಂದ ಬಾಬಾಸಾಹೇಬನು ಹಲ್ಲು ಮಸೆಯುತ್ತಿದ್ದ ಆಗ ಪೊಲಿಟಿಕಲ್ ಏಜಂಟನಾಗಿದ್ದ ಮ್ಯಾನ್‌ಸನ್ನನು ಬಾಬಾಸಾಹೇಬನ ಸಹಾಯವನ್ನು ಕೇಳಿದನು, ಆದರೆ, ಬಾಬಾಸಾಹೇಬನು ಅರ್ಧಮರ್ಧ ಮದ್ದು-ಗುಂಡುಗಳನ್ನು ಕಳುಹಿದನು ಅದೇ ವೇಳೆಗ ಮುಂಡರಗಿಯ ಭೀಮರಾಯ, ಡಂಬಳದ ದೇಸಾಯಿ ಇವರು, ಬಂಡಾಯವನ್ನೆಬ್ಬಿಸುವ ಬಗೆಗ ವಿಚಾರಮಾಡಲು ನರಗುಂದಕ್ಕೆ ಬಂದರು ದರಬಾರದಲ್ಲಿರುವ ದ್ರೋಹಿಗಳು ಈ ಸುದ್ದಿಯನ್ನು ಮ್ಯಾನ್‌ಸನ್‌ನಿಗ ತಿಳಿಸಿದರು ಕೂಡಲೆ ಅವನು ಸೈನ್ಯಸಹಿತ ಬಂದು ಸುರೇಬಾನದಲ್ಲಿ ತಳವೂರಿದನು ನರಗುಂದದ ಒಲೆಕಾರನೊಬ್ಬನು ಕೌಶಲ್ಯದಿಂದ ಇಂಗ್ಲಿಷ ಛಾವಣಿಯನ್ನು ಹೊಕ್ಕು—ಮ್ಯಾನನನ್ನನ ತಲೆ ಹಾರಿಸಿದನು ಈ ಸುದ್ದಿ ಬೆಳಗಾಂವಿಗೆ ತಿಳಿಯಿತು ಅಲ್ಲಿರುತ್ತಿದ್ದ ಸರ್ ಜಾನ್ ಮಾಲಕಮ್ ಎಂಬ ಅಧಿಕಾರಿ ದೊಡ್ಡ ದಂಡಿನೊಡನೆ ಬಂದು ನರಗುಂದವನ್ನು ಮುತ್ತಿದನು ಬಾಬಾಸಾಹೇಬ, ಭೀಮರಾಯ, ದೇಸಾಯಿಯರು ಧೈರ್ಯದಿಂದ ಕಾದುತ್ತಿದ್ದರು ಇಂಗ್ಲಿಷ ಸೈನ್ಯವು ಹಣ್ಣಾಗುತ್ತ ಬಂದಿತು ಅಷ್ಟರಲ್ಲಿ ದರಬಾರದ ದ್ರೋಹಿಗಳು ಇಂಗ್ಲಿಷರ ಹೇಳಿಕೆಯಂತೆ, ಮದ್ದಿನಲ್ಲಿ ನಗಣಿ-ನೀರನ್ನು ಬೆರಸಿದರು ನರಗುಂದದ ತೋಫುಗಳ ಸದ್ದು ಅಡಗಿತು ಇಂಗ್ಲಿಷರ ಕೈ ಮೇಲಾಯಿತು. ಭೀಮರಾಯ ಮೊದಲಾದವರು ಮಡಿದರು ಬಾಬಾ-ಸಾಹೇಬನ ಹೆಂಡತಿ ಸಾವಿತ್ರಿಬಾಯಿಯು ನದಿಯ ಪಾಲಾದಳು ಇಂಗ್ಲಿಷರು ಬಾಬಾಸಾಹೇಬನನ್ನು ಗಲ್ಲಿಗೇರಿಸಿದರು ನರಗುಂದವು ಬ್ರಿಟಿಶರ ಕೈವಶವಾಯಿತು

ಈ ಸ್ವಾತಂತ್ರ್ಯಸಂಗ್ರಾಮವನ್ನು ಕುರಿತು ನೆನಪಿಡತಕ್ಕ ಮಾತೆಂದರೆ, ಇಂಗ್ಲಿಷರ ಸೈನ್ಯದಲ್ಲಿ ಸಂಬಳಕ್ಕಾಗಿ ಇದ್ದ ಗುರ್ಖಾ, ಶೀಖ, ಮರಾಠಾ

ಮುಂತಾದ ಭಾರತೀಯ ಸಿಪಾಯಿಗಳೇ ಕರ್ತವ್ಯಬುದ್ಧಿಯಿಂದ ಕಾದಾಡಿ ಗೆಲವನ್ನು ತಂದುಕೊಟ್ಟರು, ಅಲ್ಲದೆ, ನಿಜಾಮನೂ ಮೈಸೂರ ಅರಸರೂ ಬ್ರಿಟಿಶರಿಗೆ ಬೆಂಬಲಿಗರಾಗಿ ನಿಂತರು

**ಬಂಡಾಯದಿಂದಾದ ಬದಲಾವಣೆ** — ಬಂಡಾಯದ ನಿಜವಾದ ಮೂಲವು ಭಾರತೀಯರ ಸ್ವಾಭಿಮಾನವೇ ಎಂದು ತಿಳಿದು, ಬ್ರಿಟಿಶರು ಪಾರ್ಲಮೆಂಟಿನ ಅವಸರದ ಸಭೆಯನ್ನು ಕರೆದು ಹೊಸ ಶಾಸನವನ್ನು ಮಾಡಿದರು, ತಡವಿಲ್ಲದೆ ಅದನ್ನು ಬಳಕೆಯಲ್ಲಿ ತಂದರು

**ಕಂಪನಿಸರಕಾರದ ಕೊನೆ** — ಈ ಹೊಸ ಶಾಸನದ ವಿವರಗಳು ಹೀಗಿದ್ದವು (೧) ಭಾರತದಲ್ಲಿ ಕಂಪನಿಸರಕಾರವು ಕೊನೆಗೊಳ್ಳಬೇಕು, ಬ್ರಿಟಿಶ್ ಪಾರ್ಲಮೆಂಟಿನವರು ಆಡಳಿತವನ್ನು ವಶಪಡಿಸಿಕೊಂಡು ವಿಕ್ಟೋರಿಯಾ ಮಹಾರಾಣಿಯು ಹೆಸರಿನಿಂದ ಸರಕಾರವನ್ನು ನಡೆಸಬೇಕು (೨) ಬೋರ್ಡ್ ಆಫ್ ಕಂಟ್ರೋಲದ ಬದಲು ಬ್ರಿಟಿಶ್ ಭಾರತಮಂತ್ರಿಯು ಅಧಿಕಾರವನ್ನು ವಹಿಸಬೇಕು ಆತ ಬ್ರಿಟಿಶ್ ಮಂತ್ರಿಮಂಡಲದ ಸದಸ್ಯನಾಗಿದ್ದು ಪಾರ್ಲ-ಮೆಂಟಿನ ಅಂಕಿತದಲ್ಲಿರತಕ್ಕದ್ದು (೩) ಭಾರತಮಂತ್ರಿಯ ಸಹಾಯಕ್ಕೆ ೧೫ ಜನರದೊಂದು 'ಇಂಡಿಯಾ ಕೌನ್ಸಿಲ್' ಇರಬೇಕು (೪) ಗವ್ಹರ್ನರ್ ಜನರಲ್ಲನಿಗೆ 'ವ್ಹಾಯಿಸರಾಯ್' (ರಾಜಪ್ರತಿನಿಧಿ) ಎಂಬ ಪದವಿ ಇರಬೇಕು, ಮತ್ತು ಲಾರ್ಡ್ ಕ್ಯಾನಿಂಗನೇ ಮೊದಲನೆಯ ವ್ಹಾಯಿಸ್‌ರಾಯನಾಗಬೇಕು

**ರಾಣಿಯ ಜಾಹೀರನಾಮೆ** — ಮುಂದೆ ತಮ್ಮ ಆಳಿಕೆಯು ಸುಗಮವಾಗಿ, ಸಾಗಬೇಕೆಂದು ವ್ಹಿಕ್ಟೋರಿಯಾ ಮಹಾರಾಣಿಯು ಭಾರತೀಯರಿಗಾಗಿ, ಆಶ್ವಾಸನಪೂರ್ವಕವಾದ ಪ್ರಕಟನೆಯೊಂದನ್ನು ಹೊರಡಿಸಿದಳು ಅದನ್ನು 'ರಾಣಿಯ ಜಾಹೀರನಾಮೆ' ಎನ್ನುವರು ಅದನ್ನು ಸಾರಾಂಶವಾಗಿ ಹೇಳಬಹುದಾದರೆ

(೧) ಭಾರತದ ಸಂಸ್ಥಾನಿಕರೊಡನೆ ಕಂಪನಿಯವರು ಮಾಡಿಕೊಂಡ ಒಡಂಬಡಿಕೆಗಳೆಲ್ಲ ಮೊದಲಿನಂತೆಯೆ ನಡೆಯುವುವು (೨) ಮಕ್ಕಳಿಲ್ಲದ ಸಂಸ್ಥಾನಿಕರು ದತ್ತಕ ತೆಗೆದುಕೊಂಡು ಸರಕಾರಕ್ಕೆ ತಿಳಿಸಿದರಾಯಿತು, ಆ ದತ್ತಕಮಕ್ಕಳಿಗೆ ರಾಜರ ಸರ್ವ ಅಧಿಕಾರವನ್ನೂ ಕೊಡಲಾಗುವುದು ಎಲ್ಲರ ಉಂಬಳಿಗಳೂ ವಂಶಪರಂಪರೆಯಾಗಿ ನಡೆಯುವುವು (೩) ಆಯಾ ಅರಸುಗಳಿಗಿದ್ದ ರಾಜಮನ್ನಣೆಗಳು ಎಂದಿನಂತೆ ಮುಂದೆಯೂ ಸಾಗುವುವು (೪) ಹಿಂದೀ ಪ್ರಜೆಗಳ ಧರ್ಮ-ಆಚಾರ-ವಿಚಾರಗಳಲ್ಲಿ ಸರಕಾರವು ಕೈಯನ್ನು ಹಾಕುವುದಿಲ್ಲ (೫) ಜಾತಿ-ಧರ್ಮಗಳನ್ನೆಣಿಸದೆ ಯೋಗ್ಯರಾದ ಹಿಂದೀಯರಿಗೆಲ್ಲ ಸರಕಾರಿ ನೌಕರಿಗಳು ಸಿಕ್ಕುವುವು. (೬) ಬಂಡಾಯದಲ್ಲಿ ವಿರೋಧಿಸಿದವ

ರಿದ್ದರೂ ಮುಂದೆ ಶಾಂತರೀತಿಯಿಂದಿರುವ ಹೊಣೆಯನ್ನು ಕೊಟ್ಟರೆ ಅವರೆಲ್ಲರೂ ಕ್ಷಮೆಗೆ ಪಾತ್ರರಾಗುವರು

ಈ ಜಾಹೀರನಾಮೆಯನ್ನು ವ್ಹಾಯಿಸರಾಯ ಲಾರ್ಡ್ ಕ್ಯಾನಿಂಗನು ಅಲಹಾಬಾದದಲ್ಲಿ ದೊಡ್ಡ ಸಭೆ ಕೂಡಿಸಿ ಸಾರಿದನು ಈ ಪ್ರಕಟನೆಯು ಹೊರಟ ಮೇಲೆ ಭಾರತೀಯ ವಾತಾವರಣವು ಶಾಂತವಾಗತೊಡಗಿತು

**ಪ್ರಜಾಕ್ಷೇಮದ ಆಡಳಿತ** —ಅಂತು ಭಾರತದ ಮೊತ್ತಮೊದಲನೆಯ ಸ್ವಾತಂತ್ರ್ಯಸಂಗ್ರಾಮದ ಬಿರುಗಾಳಿಯು ಶಾಂತವಾಯಿತು ವ್ಹಾಯಿಸ್-ರಾಯ್ ಕ್ಯಾನಿಂಗನು ಜನಹಿತಕಾರಕ ಸುಧಾರಣೆಗಳನ್ನು ಮಾಡಿದನು (೧) ಸೈನ್ಯ—ಕಂಪನಿಯ ಮತ್ತು ರಾಣಿಯ ಸೈನ್ಯಗಳು ಎಂಬ ಇಬ್ಭಾಗಗಳು ಅಡಗಿ ಎರಡೂ ಒಂದಾದುವು (೨) ಕಂದಾಯ—(ಕಸ್ಟಂ) ಸುಂಕ ಖಾತೆ, ಇನ್‌ಕಮ್‌ಟ್ಯಾಕ್ಸ್ (ಉತ್ಪನ್ನದ ಕರ) ಖಾತೆಗಳು ಆರಂಭವಾಗಿ ಉತ್ಪನ್ನ ಬೆಳೆಯಿತು ಆಡಳಿತದ ಖರ್ಚಿನಲ್ಲಿ ಕಡಿತವಾಯಿತು ರೂಪಾಯಿಗಳಂತೆಯೇ ನೋಟುಗಳು ಬಳಕೆಯಲ್ಲಿ ಬಂದುವು (೩) ಶಿಕ್ಷಣ—ಕಲಕತ್ತಾ, ಮುಂಬಯಿ, ಮದ್ರಾಸುಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿತವಾದುವು (೪) ನ್ಯಾಯಶಾಸನ—ಕಲಕತ್ತಾ, ಮುಂಬಯಿ, ಮದ್ರಾಸುಗಳಲ್ಲಿ ಹೈಕೋರ್ಟುಗಳು ಸ್ಥಾಪಿತವಾದುವು ಲಾರ್ಡ್ ಮೆಕಾಲೆಯು ಬರೆದ 'ಸಿವಿಲ್ ಮತ್ತು ಕ್ರಿಮಿನಲ್ ಪ್ರೊಸೀಜರ್ ಕೋಡು' ಬಳಕೆಯಲ್ಲಿ ಬಂದಿತು

**ಪ್ರಾಂತಿಕ ಶಾಸನಮಂಡಲಗಳು** —ಕೌನ್ಸಿಲ್ ಆ್ಯಕ್ಟ್ ಎಂಬ ಕಾಯದೆಯಿಂದ ಮುಂಬಯಿ-ಮದ್ರಾಸ ಪ್ರಾಂತಗಳ ಗವ್ಹರ್ನರರ ಸಹಾಯಕ್ಕೆ ಪ್ರಾಂತಿಕ ಶಾಸನ ಮಂಡಲಗಳೂ, ವ್ಹಾಯಿಸರಾಯನ ಸಹಾಯಕ್ಕೆ ವರಿಷ್ಠ ಶಾಸನ ಮಂಡಲವೂ ನಿರ್ಮಿತವಾದುವು ಅವುಗಳಲ್ಲಿ ಪ್ರಜೆಗಳ ಪರವಾಗಿ ಕೆಲವರು, ಸರಕಾರದ ಪರವಾಗಿ ಕೆಲವರು, ಇರಬೇಕೆಂದು ಗೊತ್ತಾಯಿತು ಅಂದಿನಿಂದಲೇ **ಪ್ರಾತಿನಿಧಿಕ ಸ್ವರಾಜ್ಯದ** ಬೀಜವನ್ನು ಬಿತ್ತಿದಂತಾಯಿತೆಂದು ಹೇಳಬಹುದು

**ರೈತರ ಹಿತ** —ಬಂಗಾಲ, ಬಿಹಾರ, ಉತ್ತರ ಪ್ರದೇಶಗಳಲ್ಲಿಯ ಜಮೀನುದಾರರು, ನಿರ್ದಿಷ್ಟ ಪದ್ಧತಿಯಿಂದ ರೈತರ ಲಾವಣಿಯನ್ನು ತೆಗೆದುಕೊಳ್ಳಬೇಕೆಂದು ನಿಶ್ಚಿತವಾಯಿತು

**ಶಸ್ತ್ರಾಸ್ತ್ರಶಾಸನ** —೧೮೬೦ರ ವರೆಗೆ ಜನರು ದಿನಬಳಕೆಯಲ್ಲಿ ಬೇಕಾದಂತಹ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುತ್ತಿದ್ದರು ಈ ಹೊಸ ಕಾಯದೆಯಿಂದ ಸರಕಾರವು ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡಿತು, ಯೋಗ್ಯರಾದವರು ಸರಕಾರದ ಅಪ್ಪಣೆಯಿಂದಲೇ ಅವುಗಳನ್ನು ಪಡೆಯಬೇಕು, ಮತ್ತು ಆವಶ್ಯಕ ಪ್ರಸಂಗಗಳಲ್ಲಿಯೇ ಉಪಯೋಗಿಸಬೇಕು—ಎಂದು ಗೊತ್ತಾಯಿತು

ಈ ಮೇರೆಗೆ ಲಾರ್ಡ್ ಕ್ಯಾನಿಂಗನು ಸಾಮ್ರಾಜ್ಯಸ್ಫೋಟದಲ್ಲಿ ಸಿಕ್ಕರೂ ಶಕ್ತಿಯುಕ್ತಿಗಳಿಂದ ಪಾರಾದನು, ಶಾಂತವಾತಾವರಣವನ್ನು ಉಂಟು ಮಾಡಿದನು ಈತನ ತರುವಾಯ ಲಾರ್ಡ್ ಎಲ್ಗಿನ್ ೧ನೆಯ ವಾಯಿಸ್ ರಾಯನಾಗಿ ಬಂದನು

## ಅಭ್ಯಸನಗಳು

೧ ೧೮೫೭ರ ಸ್ವಾತಂತ್ರ್ಯಸಮರದಲ್ಲಿ ಧುಮುಕಿದ ಭಾರತೀಯ ಅರಸರುಗಳು ಯಾರು ಯಾರು? ಅವರು ಧುಮುಕಲು ಯಾವ ಯಾವ ಕಾರಣಗಳು ಇದ್ದುವು? ಅವರಿಗೆ ಏಕೆ ಜಯ ಸಿಗಲಿಲ್ಲ?

೨ ಯಾವ ಘಟನೆಯಿಂದ ಸಿಪಾಯರು ಅದರಲ್ಲಿ ಕೂಡಿಕೊಂಡರು?

೩ ಲೆಫ್ಟನಂಟ್ ಹಡ್ಸನ್, ಸರ್ ಹ್ಯೂಜ್ ವ್ಹೀಟರ, ಜನರಲ್ ನೀಲ್, ಜನರಲ್ ಹ್ಯಾವಲಾಕ್, ಸರ್ ಜಾನ್ ಮಾಲಕಮ್ ಇವರ ಹೆಸರುಗಳು ಯಾವ ಯಾವ ಸಂದರ್ಭಗಳಲ್ಲಿ ಬಂದಿವೆ? ಒಂದೊಂದು ವಾಕ್ಯದಲ್ಲಿ ಹೇಳಿರಿ

೪ ರಾಣಿಯ ಜಾಹೀರನಾಮೆಯಲ್ಲಿ ಅಡಕವಾದ ಮುಖ್ಯಮಾತುಗಳನ್ನು ಹೇಳಿರಿ

೫ ಈ ಸ್ವಾತಂತ್ರ್ಯಸಮರದಲ್ಲಿ ಬ್ರಿಟಿಶರಿಗೆ ಜಯವನ್ನು ತಂದುಕೊಟ್ಟವರು ಯಾರು? ಅದು ಹೇಗ?

೬ ಈ ಸ್ವಾತಂತ್ರ್ಯಸಮರದಲ್ಲಿ ಭಾಗವಹಿಸಿದವರಲ್ಲಿ ನೀವು ಒಬ್ಬರೆಂದು ತಿಳಿದು, ಆ ಸಮರದ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ

## ಇಂಗ್ಲಿಷ ರಾಜ್ಯವಿಸ್ತಾರ ಮತ್ತು ಗವ್ಹರ್ನರ ಜನರಲ್ಲರು

ಪ್ರಮಾಣ ▭ = ೧ ವರ್ಷ

ಕ್ರಿಸ್ತಶಕ

೧೭೭೦

೧೭೭೨ ವಾರೆನ ಹೇಸ್ಟಿಂಗ್ಸನು ಭಾರತಕ್ಕೆ ಬಂದದ್ದು

ರೆಗ್ಯುಲೇಟಿಂಗ ಆ್ಯಕ್ಟ ೧೭೭೩

೧೭೭೫ ಚೇತಸಿಂಗನ ಪದಚ್ಯುತಿ

ಮೊದಲನೆಯ ಇಂಗ್ಲಿಷ ಮರಾಠಾ ಯುದ್ಧ ೧೭೭೫ – ೧೭೮೨

ಎರಡನೆಯ ಇಂಗ್ಲಿಷ - ಮೈಸೂರು ಯುದ್ಧ ೧೭೮೦ – ೧೭೮೪

೧೭೮೨ ಸಾಲ್ಬಾಯಿ ಒಪ್ಪಂದ

೧೭೮೪ ಮಂಗಳೂರು ಒಪ್ಪಂದ – ಪಿಟ್ಟನ ಇಂಡಿಯಾ ಬಿಲ್

೧೭೯೨ ಶ್ರೀರಂಗಪಟ್ಟಣದ ಒಪ್ಪಂದ

ಬಂಗಾಲದಲ್ಲಿ ಖಾಯಂ ಕಂದಾಯ ಪದ್ಧತಿ ೧೭೯೩

೧೭೯೯ ನಾಲ್ಕನೆಯ ಮೈಸೂರು ಯುದ್ಧ – ಟೀಪುವಿನ ಮರಣ – ಇಂಗ್ಲಿಷ ಸಾಮ್ರಾಜ್ಯದ ಮುನ್ನಡೆ

ವೆಲ್ಲೆಸ್ಲಿಯ "ಸಹಾಯಕ ಸೈನ್ಯ ಪದ್ಧತಿ" ಯೋಜನೆ ೧೮೦೦

ಎರಡನೆಯ ಇಂಗ್ಲಿಷ ಮರಾಠಾ ಯುದ್ಧ ೧೮೦೨ – ೧೮೦೫

೧೮೦೯ ರಣಜಿತಸಿಂಗನೊಡನೆ ಲಾಹೋರದ ಒಪ್ಪಂದ

೧೮೧೪ – ೧೮೧೬ ಇಂಗ್ಲಿಷ - ನೇಪಾಲಿ ಯುದ್ಧ

ಪಿಂಡಾರಿಯವರನ್ನು ಅಡಗಿಸಿದ್ದು ೧೮೧೭

೧೮೧೭ – ೧೮೧೮ ಮೂರನೆಯ ಇಂಗ್ಲಿಷ - ಮರಾಠಾ ಯುದ್ಧ ಮರಾಠರ ಅವನತಿ

೧೮೨೪ – ೧೮೨೬ ಮೊದಲನೆಯ ಇಂಗ್ಲಿಷ - ಬ್ರಹ್ಮೀ ಯುದ್ಧ

೧೮೨೯ ಬೆಂಟಿಂಕನ ಸಾಮಾಜಿಕ ಸುಧಾರಣೆಗಳು

೧೮೩೧ ರಣಜಿತಸಿಂಗನೊಂದಿಗೆ ಒಪ್ಪಂದ

ಇಂಗ್ಲಿಷ ಶಿಕ್ಷಣಕ್ಕೆ ಮನ್ನಣೆ ೧೮೩೫

೧೮೩೫ ಠಕ್ಕರನ್ನು ನಿರ್ನಾಮ ಮಾಡಿದ್ದು

೧೮೩೮ – ೧೮೪೨ ಮೊದಲನೆಯ ಇಂಗ್ಲಿಷ - ಅಫಗನ ಯುದ್ಧ

ರಣಜಿತಸಿಂಗನ ಮರಣ ೧೮೩೯

ಸಿಂಧದ ಆಕ್ರಮಣ ೧೮೪೩

೧೮೪೫ – ೧೮೪೬ ಮೊದಲನೆಯ ಇಂಗ್ಲಿಷ - ಶೀಖ ಯುದ್ಧ

ಲಾಹೋರದ ಒಪ್ಪಂದ ೧೮೪೬

೧೮೪೮ – ೧೮೪೯ ಎರಡನೆಯ ಇಂಗ್ಲಿಷ - ಶೀಖ ಯುದ್ಧ

೧೮೪೮ – ೧೮೫೬ ಡಾಲಹೌಸಿಯಿಂದ ದೇಶೀ ಸಂಸ್ಥಾನಗಳ ವಿಲೀನೀಕರಣ

ಬ್ರಹ್ಮದೇಶದ ಎರಡನೆಯ ಯುದ್ಧ ೧೮೫೨

೧೮೫೭ ಭಾರತ ಸ್ವಾತಂತ್ರ್ಯ ಯುದ್ಧ

ವ್ಹಿಕ್ಟೋರಿಯಾರಾಣಿಯ ಜಾಹೀರನಾಮೆ ೧೮೫೮

೧೮೬೦

# ೧೩ ಭಾರತದಲ್ಲಿ ನವಚೈತನ್ಯ

**ನವಚೈತನ್ಯದ ನೆಲೆ** —ಭಾರತದಲ್ಲಿ ಬ್ರಿಟಿಶರು ತಮ್ಮ ರಾಜ್ಯಸತ್ತೆಯನ್ನು ಸ್ಥಿರಗೊಳಿಸುತ್ತಿದ್ದಾಗ, ಇಲ್ಲಿಯ ಕೆಲವು ಶ್ರೇಷ್ಠವ್ಯಕ್ತಿಗಳು ಹೊಸ ಹೊಸ ತತ್ತ್ವಗಳ ಬೀಜಗಳನ್ನು ಜನರಲ್ಲಿ ಬಿತ್ತತೊಡಗಿದ್ದರು ಮುಖ್ಯವಾಗಿ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಈ ಕ್ರಾಂತಿಯು ರೂಪುಗೊಳ್ಳಹತ್ತಿತು ಹೀನದೆಸೆಗೆ ಇಳಿಯುತ್ತಿದ್ದ ಅಜ್ಞಾನಿ ಜನಸಮುದಾಯವನ್ನು, ಕ್ರಾಂತಿಕಾರಕ ವಿಚಾರಧಾರೆಯಿಂದ ಹೊಡೆದೆಬ್ಬಿಸಿ, ಸಮಾಜವನ್ನು ಸುಧಾರಣೆಯ ದಾರಿಯಲ್ಲಿ ಒಯ್ಯಲು ಕೆಲವು ಮುಂದಾಳುಗಳು ಪ್ರಯತ್ನಿಸುತ್ತಿದ್ದುದು ಅಚ್ಚರಿಯಲ್ಲ ಈ ಪ್ರಯತ್ನವು ಧಾರ್ಮಿಕ-ಕ್ಷೇತ್ರದಲ್ಲಿ ವಿಶೇಷವಾಗಿ ನಡೆಯಿತು ಸಾಮಾಜಿಕ, ರಾಜಕೀಯ ಕ್ಷೇತ್ರಕ್ಕೂ ಅದು ವ್ಯಾಪಿಸಿಕೊಂಡಿತು ಇಂತಹ ನವಚೈತನ್ಯವನ್ನು ನಿರ್ಮಾಣ ಮಾಡಿದವರಲ್ಲಿ ಮುಖ್ಯರಾದ ರಾಜಾ ರಾಮಮೋಹನರಾಯ, ದಾದಾಭಾಯಿ ನವರೋಜಿ, ರಾನಡೆ, ಸ್ವಾಮಿ ದಯಾನಂದ ಹಾಗೂ ವಿವೇಕಾನಂದ ಇವರ ಚರಿತ್ರಗಳನ್ನು ಅರಿತುಕೊಳ್ಳುವಾ



ರಾಜಾ ರಾಮಮೋಹನರಾಯ

**ರಾಜಾ ರಾಮಮೋಹನರಾಯ** — (೧೭೭೪-೧೮೩೩) ಬೆಂಟಿಂಕನ ಸುಧಾರಣೆಗಳಿಗೆ ಪ್ರೋತ್ಸಾಹನ ನೀಡಿ ಅವುಗಳನ್ನು ಜನಪ್ರಿಯವಾಗುವಂತೆ ಪೋಷಿಸಿದ ರಾಜಾ ರಾಮಮೋಹನರಾಯರು ಬಂಗಾಲದಲ್ಲಿ ಕ್ರಿ ಶ ೧೭೭೪ನೆಯ ವರುಷ ಹುಟ್ಟಿದರು ಅವರ ಬುದ್ಧಿ ಬಲು ಚುರುಕು ತಡವಿಲ್ಲದೆಯೆ ಪಾರಸೀ ಅರಬೀ ಭಾಷೆಗಳಲ್ಲಿ ನೈಪುಣ್ಯವನ್ನು ಪಡೆದರು ಆಮೇಲೆ ಸಂಸ್ಕೃತವನ್ನು ಮನನಮಾಡಿಕೊಂಡರು ಮುಂದೆ ಇಂಗ್ಲಿಷ್ ಭಾಷೆಯಲ್ಲಿಯೂ ಕುಶಲರಾದರು

ಇವರಿಗೆ ಮೊದಲಿನಿಂದಲೂ ಸಮಾಜಸುಧಾರಣೆಯ ವಿಚಾರ ಆ ಕಾಲದಲ್ಲಿ ದೇವ-ಧರ್ಮಗಳ ಹೆಸರಿನಿಂದಾಗುವ ಜಾತೀಯ ಕೀಳು-ಮೇಲುಗಳ ಕಲಹಗಳು ಅವರ ಕರುಳನ್ನು ಕಲಕಿದುವು. ಅದಕ್ಕಾಗಿ ವೇದ, ಉಪನಿಷತ್ತು ಮೊದ

ಲಾದ ಪವಿತ್ರಗ್ರಂಥಗಳನ್ನು ತಳಸೋಸಿ ನೋಡಿದರು ಎಲ್ಲಿಲ್ಲಿಯೂ ಅಂತಹ ಹುಚ್ಚಾಟಕ್ಕೆ ಆಧಾರಗಳು ದೊರೆಯಲಿಲ್ಲ ಅದರಿಂದ, ನಿಜತ್ವವನ್ನು ತಿಳಿಸಲು ಇವರು ಸಣ್ಣ ಸಣ್ಣ ಹೊತ್ತಗೆಗಳನ್ನು ಬೆಳಕಿಗೆ ತಂದರು, ನೌಕರಿಯನ್ನು ಬಿಟ್ಟು ಸಮಾಜಸುಧಾರಣೆಯನ್ನೇ ಹೆಗ್ಗುರಿಯಾಗಿಟ್ಟುಕೊಂಡು ಕಾರ್ಯರಂಗಕ್ಕಿಳಿದರು ಇವರಿಗೆ ವಿಶ್ವಕವಿ ರವೀಂದ್ರರ ತಂದೆಯವರಾದ **ದೇವೇಂದ್ರನಾಥ ಠಾಕೂರರೂ, ಅಲೆಕ್ಝಾಂಡರ ಡಫ್** ಎಂಬವರೂ ಸಹಾಯಕರಾಗಿ ದೊರೆತರು

**ಮಾಡಿದ ಮಹತ್ಕಾರ್ಯಗಳು** – ರಾಯರು ಮೊದಲು ಸಮಾಜಸುಧಾರಣೆಯ ಕಾರ್ಯವನ್ನೇ ಕೈಕೊಂಡರು ಜನರ ದಾರಿದ್ರ್ಯ, ಅಜ್ಞಾನ, ಅಸಂಸ್ಕೃತಿ, ಸ್ತ್ರೀಯರ ದುರ್ದಶೆ, ಬಹುಪತ್ನಿತ್ವ, ಜಾತೀಯ ವೈಷಮ್ಯ, ಮೂರ್ತಿಪೂಜೆ ಮುಂತಾದ ತಪ್ಪು-ತಡೆಗಳನ್ನು ತೆಗೆದೂಗೆಯುವುದೇ ಅವರ ಮೊದಲನೆಯ ಕೆಲಸವಾಯಿತು ಏಕೇಶ್ವರಪೂಜೆ, ಮಾನವಸಮಾನತೆಗಳನ್ನು ಮನಗಾಣಿಸುವುದಕ್ಕಾಗಿ ವೇದಗಳ ಆಧಾರಸಹಿತವಾಗಿ ಬಂಗಾಲಿಯಲ್ಲಿ ಕೆಲವು ಪುಸ್ತಕಗಳನ್ನು ಬರದು ಪ್ರಸಿದ್ಧಿಸಿದರು, ಅವುಗಳನ್ನು ಕಾರ್ಯರೂಪದಲ್ಲಿ ತರುವುದಕ್ಕೆ ೧೮೨೮ರಲ್ಲಿ **'ಬ್ರಹ್ಮಸಮಾಜ'** ಎಂಬ ಹೊಸ ಸಂಸ್ಥೆಯನ್ನು ತೆರೆದರು

ಅವರ ಗ್ರಂಥ ಮತ್ತು ಉಪನ್ಯಾಸಗಳಿಂದ, ಸಮಾಜದಲ್ಲಿ ವಿಚಾರಗಳ ತಾಕಲಾಟವಿದ್ದಿತು ಈ ಉದಾರಮತವಾದವು ಲಾರ್ಡ್ ವಿಲಿಯಂ ಬೆಂಟಿಂಕನಿಗೆ ಪೂರ್ಣ ಮೆಚ್ಚಿಕೆಯೂಯಿತು ಅದರಿಂದಲೇ ಆತನು ಬ್ರಿಟಿಶ ಆಳಿಕೆಯಲ್ಲಿ ನವಯುಗವನ್ನು ನಿರ್ಮಾಣಮಾಡಿದುದು, ಸಹಗಮನನಿಷೇಧ ಮತ್ತು ಶಿಕ್ಷಣ-ಸುಧಾರಣೆಯ ಶಾಸನಗಳನ್ನು ಬಳಕೆಯಲ್ಲಿ ತಂದನು

**ಮುದ್ರಣಸ್ವಾತಂತ್ರ್ಯ** —ಮುದ್ರಣಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯ ಮೊದಲಾದುವು ಇಲ್ಲದಿದ್ದರೆ ಮನುಷ್ಯತ್ವವೇ ಮಣ್ಣುಗೂಡುವುದು ಈ ವೈಯಕ್ತಿಕ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದಕ್ಕೆ ಯಾವ ಸರಕಾರಕ್ಕೂ ಅಧಿಕಾರವಿಲ್ಲ ಇದೇ ವಿಷಯವನ್ನು ಕುರಿತು ರಾಮಮೋಹನರಾಯರು ಇಂಗ್ಲಂಡಿನ ಅರಸನ ಕಡೆಗೆ ಒಂದು ಅರಿಕೆ(ಅರ್ಜಿ)ಯನ್ನು ಕಳಿಸಿದರು ಅದರ ಭಾಷಾಸರಣಿ-ವಿಚಾರಸರಣಿಗಳನ್ನು ಕಂಡು ಬ್ರಿಟಿಶರು ಮೆಚ್ಚಿದರು ೧೮೩೫ರಲ್ಲಿ ಭಾರತೀಯರಿಗೆ ಮುದ್ರಣಸ್ವಾತಂತ್ರ್ಯವು ದೊರೆಯಿತು

**ನ್ಯಾಯದಾನ** – ನ್ಯಾಯವಿಚಾರಣೆಯಲ್ಲಿಯೂ ಹಿಂದೀಯರಿಗೆ ಅನ್ಯಾಯ-ಅಪಮಾನಗಳಾಗುತ್ತಿದ್ದುವು ಆ ಕಾಲದಲ್ಲಿ ಕ್ರಿಸ್ತಧರ್ಮೀಯರ ಅಪರಾಧಗಳ ವಿಚಾರಣೆ ಮಾಡುವುದಕ್ಕೆ ಹಿಂದು ಮತ್ತು ಮುಸಲ್ಮಾನರಿಗೆ ಅಧಿಕಾರವಿರಲಿಲ್ಲ, ಇಷ್ಟೇ ಅಲ್ಲ, ಪಂಚ (ಜ್ಯೂರಿ)ರೆಂದು ಕೂಡ ಇವರನ್ನು ಕರೆಯುತ್ತಿರಲಿಲ್ಲ ಈ ಅನ್ಯಾಯ-ಅಪಮಾನಗಳ ವಿರುದ್ಧವಾಗಿ ರಾಮಮೋಹನರಾಯರು

ಇಂಗ್ಲಂಡಿನ ಅರಸನ ಕಡೆಗೆ ಅರಿಕೆಯನ್ನು ಕಳಿಸಿದ್ದರು ಮತ್ತು ನ್ಯಾಯ-ವನ್ನು ಕೊಡುವುದರಲ್ಲಿ ಆಗುವ ಪಕ್ಷಪಾತ, ದಿವಾಣಿ-ಫೌಜದಾರಿ ಕಾಯದೆಗಳಲ್ಲಿ ಆಗಬೇಕಾದ ಮಾರ್ಪಾಡುಗಳು, ಪರ್ಶಿಯನ್ ಭಾಷೆಯ ಬದಲು ಇಂಗ್ಲಿಷೇ ಸರಕಾರೀ ಭಾಷೆಯಾಗುವದರ ಆವಶ್ಯಕತೆ, ಸೈನ್ಯದ ಹಿಂದೀಕರಣ ಈ ಮುಂತಾದ ಮಹತ್ತ್ವದ ಮಾತುಗಳನ್ನೂ ಅದರಲ್ಲಿ ಮಂಡಿಸಿದ್ದರು ಇದರ ಪರಿಣಾಮವಾಗಿಯೇ ಬೆಂಟಿಂಕನ ಕಾಲಕ್ಕೆ ಆಡಳಿತದಲ್ಲಿ ಅನೇಕ ಬದಲಾವಣೆಗಳಾದುವು

**ಆರ್ಥಿಕ ಅಭಿವೃದ್ಧಿ** — ಭಾರತವು ಪ್ರಾಧಾನ್ಯವಾಗಿ ಒಕ್ಕಲುತನದ ದೇಶ ಹಿಂದಿನ ಗವ್ಹರ್ನರ್ ಜನರಲ್ಲರು ಮಾಡಿದ ಕಂದಾಯಪದ್ಧತಿಯಿಂದ ರೈತರು ವಿಲಿವಿಲಿ ಒದ್ದಾಡುವಂತಾಗಿತ್ತು ಜಮೀನುದಾರಿ ಪದ್ಧತಿಯಿಂದಂತೂ ರೈತರು ಪ್ರತ್ಯಕ್ಷ ಗುಲಾಮರೇ ಆಗಿದ್ದರು ರೈತರ ಸ್ಥಿತಿ ಸುಧಾರಿಸದೆ ರಾಜ-ಪ್ರಜೆಗಳಿಬ್ಬರ ಸ್ಥಿತಿಯೂ ಸುಧಾರಿಸಲಾರದೆಂದು ರಾಯರ ಮತವಾಗಿತ್ತು. ಅದಕ್ಕಾಗಿ, ರೈತರ ಕಂದಾಯವನ್ನು ಕಡಮೆಮಾಡಬೇಕು, ಮತ್ತು ಪರಮಾವಧಿ ಲಾವಣಿಯ ಹಣವನ್ನು ಗೊತ್ತುಮಾಡಬೇಕು—ಎಂದು ಇಂಗ್ಲಂಡ್ ಸರಕಾರಕ್ಕೆ ತಿಳಿಸಿದರು

ಹೀಗೆಯೇ ಭಾರತೀಯರ ಏಳ್ಗೆಯ ಇನ್ನೂ ಕೆಲವು ವಿಚಾರಗಳಿಗಾಗಿಯೂ ಮೊಗಲ ಬಾದಶಹರ ಹಕ್ಕುಗಳ ರಕ್ಷಣೆಯ ಮಹತ್ತ್ವದ ಕಾರ್ಯಕ್ಕಾಗಿಯೂ ಈ ಮಹಾಪುರುಷರು ಇಂಗ್ಲಂಡಿಗೆ ಹೋದರು ಅಲ್ಲಿ ಖಂಡಿತವಾದ ರೀತಿಯಲ್ಲಿ ಈ ಎಲ್ಲ ವಿಚಾರಗಳನ್ನೂ ಮಂಡಿಸಿದರು ಈ ಪ್ರಯತ್ನದಲ್ಲಿರು-ವಾಗಲೇ ಅಲ್ಲಿಯೇ ತೀರಿಕೊಂಡರು

**ರಾಮಮೋಹನರ ಯೋಗ್ಯತೆ** — ವಿದ್ಯೆ, ಬುದ್ಧಿ, ಕರ್ತೃತ್ವಶಕ್ತಿ, ವಾಗ್-ವೈಖರಿ, ಧೋರಣೆ ಇವುಗಳ ಬಗೆಗೆ ಇವರನ್ನು ಸರಿಗಟ್ಟುವ ಭಾರತೀಯರು ಆಗ ಬಹು ವಿರಳವಾಗಿದ್ದರು ಇಂದಿನ ಸ್ವಾತಂತ್ರ್ಯವೃಕ್ಷದ ಬೀಜವನ್ನು ಬಿತ್ತಿದ ಮಹಾಪುರುಷರೆಂದು ರಾಜಾ ರಾಮಮೋಹನರಾಯರ ಹೆಸರನ್ನೇ ನಾವು ಹೇಳಬೇಕಾದೀತು ಅವರ ಪ್ರಯತ್ನದಿಂದಲೇ ಭಾರತೀಯ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಹಾಗೂ ಆರ್ಥಿಕ ಸುಧಾರಣೆಗ ಆರಂಭ-ವಾಯಿತು

**ದಾದಾಭಾಯಿ ನವರೋಜಿ** – ಕ್ರಿ ಶ ೧೯೦೬ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ-ಸಾಧನೆಯ ಧ್ಯೇಯಮಂತ್ರವನ್ನು ಕೊಟ್ಟು 'ಭಾರತಪಿತಾಮಹ' ಎಂಬ ಬಿರುದನ್ನು ಪಡೆದ ಮಹನೀಯರೇ ದಾದಾಭಾಯಿ ನವರೋಜಿ ಇವರು ಗುಜರಾಥದಲ್ಲಿಯ ನವಸಾರಿಯ ಒಂದು ಪಾರ್ಸಿ ಕುಟುಂಬದಲ್ಲಿ, ಕ್ರಿ ಶ.

೧೮೨೫ರಲ್ಲಿ ಹುಟ್ಟಿದರು ಮುಂಬಯಿಯಲ್ಲಿ ಪ್ರಾಥಮಿಕ ಹಾಗೂ ಉಚ್ಚ ಶಿಕ್ಷಣವನ್ನು ಮುಗಿಸಿ, ತಾವು ಕಲಿತ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿಯೇ ಕ್ರಿ ಶ ೧೮೫೪ರಲ್ಲಿ ಗಣಿತವಿಷಯದ ಪ್ರಾಧ್ಯಾಪಕರಾದರು ಶಿಕ್ಷಕವೃತ್ತಿಯಲ್ಲಿ ಇರುವಾಗಲೇ, ಇವರು ಸಿರಿವಂತರ ಸಹಾಯದಿಂದ ಮುಂಬಯಿ ವಿದ್ಯಾಪ್ರಸಾರಕ ಮಂಡಲ, ಮುಂಬಯಿಸಮಾಜ, ವಿಧವಾವಿವಾಹಸಂಸ್ಥೆ— ಮೊದಲಾದ ಸಂಸ್ಥೆಗಳನ್ನು ಸ್ಥಾಪಿಸಿದರು, ಅಲ್ಲದೆ, "ರಾಸ್ತಗೋಫ್ತಾರ್" ಎಂದರೆ ಸತ್ಯವಾದಿ ಎಂಬ ಗುಜರಾಥೀ ಪತ್ರಿಕೆಯನ್ನು ಹೊರಡಿಸಿದರು ಮುಂದೆ ಕ್ರಿ ಶ ೧೮೫೬ರಲ್ಲಿ ಶಿಕ್ಷಕ-ವೃತ್ತಿಗೆ ರಾಜೀನಾಮೆ ಕೊಟ್ಟು, ಇವರು ಕಂಪನಿಯ ಕೆಲಸಕ್ಕಾಗಿ ಇಂಗ್ಲಂಡಿಗೆ ತೆರಳಿದರು


ದಾದಾಭಾಯಿ ನೌರೋಜಿ

ಇಂಗ್ಲಂಡಿನಲ್ಲಿದ್ದಾಗ ಹಲವು ಬ್ರಿಟಿಶ ಜನರೊಡನೆ ಇವರ ಸಂಪರ್ಕಬೆಳೆಯಿತು ಆಗ ಬ್ರಿಟಿಶರಲ್ಲಿ ಹಿಂದೀ ಜನತೆಯ ಬಗ್ಗೆ ಇದ್ದ ಅಜ್ಞಾನ, ಅನಾದರ, ಇವುಗಳನ್ನು ತಿಳಿದು ಇವರ ಮನಸ್ಸಿಗೆ ಬಹಳ ಕಳವಳವಾಯಿತು ಈ ಸ್ಥಿತಿಯನ್ನು ಹೋಗಲಾಡಿಸಲು 'ಲಂಡನ್ ಇಂಡಿಯನ್ ಸೊಸಾಯಿಟಿ' 'ಈಸ್ಟ್ ಇಂಡಿಯನ್ ಅಸೋಸಿಯೇಶನ್' ಎಂಬ ಸಂಸ್ಥೆಗಳನ್ನು ಸ್ಥಾಪಿಸಿದರು ತಾವೇ ಅವುಗಳ ಮುಖ್ಯ ಕಾರ್ಯದರ್ಶಿಯಾಗಿ, ಅಲ್ಲಲ್ಲಿ ಭಾಷಣಗಳನ್ನು ಕೊಟ್ಟು, ಲೇಖನಗಳನ್ನು ಪ್ರಕಟಿಸಿ, ಬ್ರಿಟಿಷರಿಗೆ ಭಾರತದ ನಿಜಸ್ಥಿತಿಯ ಜ್ಞಾನಮಾಡಿಕೊಟ್ಟರು ಕ್ರಿ ಶ ೧೮೭೯ರಲ್ಲಿ ಭಾರತಕ್ಕೆ ಇವರು ಮರಳಿ ಬಂದಕೂಡಲೆ, ಮುಂಬಯಿಯ ಜನರಿಂದ ಅವರಿಗೆ ಮಿತಿಮೀರಿದ ಸನ್ಮಾನ ಸಿಕ್ಕಿತು

ತರುವಾಯ ನಾಲ್ಕೇ ವರ್ಷಗಳಲ್ಲಿ ಇಂಗ್ಲಂಡಿನ ಪಾರ್ಲಮೆಂಟ್ ಸಮಿತಿಯ ಮುಂದೆ ಭಾರತದ ಆರ್ಥಿಕಪರಿಸ್ಥಿತಿಯ ಬಗೆಗೆ ಹೇಳಿಕೆ ಕೊಡಲು ಇವರಿಗೆ ಕರೆ ಬಂದಿತು ಭಾರತೀಯನೊಬ್ಬನ ಸರಾಸರಿ ವಾರ್ಷಿಕ ಉತ್ಪನ್ನವು ೨೦ ರೂಪಾಯಿಗಳಿಗೆ ಮಿಕ್ಕುವದಿಲ್ಲವೆಂದೂ, ಆಡಳಿತದ ವೆಚ್ಚವು ಮಿತಿಮೀರಿರುವದೆಂದೂ, ಜನರು ಕರ-ತೆರಿಗೆಗಳ ಭಾರದಿಂದ ಬಡವರಾಗಿರುವರೆಂದೂ ಅವರು ಸಿದ್ಧಮಾಡಿ ತೋರಿಸಿದರು ಕ್ರಿ ಶ ೧೮೭೪ರಲ್ಲಿ ಕೆಲಕಾಲ ಇವರು ಬಡೋದೆಯ ಮುಖ್ಯಮಂತ್ರಿಗಳಾಗಿದ್ದರು, ಆದರೆ ಅಲ್ಲಿಯ

ರೆಸಿಡೆಂಟರಿಗೂ ಇವರಿಗೂ ಭಿನ್ನಾಭಿಪ್ರಾಯವಾದುದರಿಂದ, ಆ ನೌಕರಿಗೆ ಶರಣುಹೊಡೆದರು ವ್ಹಾಯಿಸ್‌ರಾಯರಾದ ಲಾರ್ಡ್ ಲಿಟನ್ನನ ದಬ್ಬಾಳಿಕೆಯ ನೀತಿಗೆ ಬೇಸತ್ತು, ಅವನಿರುವವರೆಗೆ ಸಾರ್ವಜನಿಕ ಕೆಲಸಗಳಲ್ಲಿ ಕೈಹಾಕ ಬಾರದೆಂದು ಪ್ರತಿಜ್ಞೆಗೈದು, ಅವನು ಭಾರತದಿಂದ ಹೋದನಂತರವೇ ಇವರು ಕಾರ್ಯವನ್ನು ಕೈಕೊಂಡರು ಕ್ರಿ ಶ ೧೮೮೫ರ ಭಾರತದ ಪ್ರಥಮ ಕಾಂಗ್ರೆಸ್ ಅಧಿವೇಶನವನ್ನು ಮುಗಿಸಿಕೊಂಡು, ಇಂಗ್ಲಂಡಿಗೆ ತೆರಳಿದರು ಭಾರತೀಯರ ಆಶೆ-ಆಕಾಂಕ್ಷೆಗಳನ್ನು ಈಡೇರಿಸಲು ಇಂಗ್ಲಂಡಿನಲ್ಲಿ ಪಾರ್ಲ-ಮೆಂಟಿನ ಚುನಾವಣೆಗೆ ನಿಂತರು, ಆದರೆ ಇವರ ಪ್ರತಿಸ್ಪರ್ಧಿಗೆ ಇವರಿಗಿಂತ ಒಂದು ಮತ ಹೆಚ್ಚು ಬಿದ್ದುದರಿಂದ ಇವರು ಆರಿಸಿಬರಲಿಲ್ಲ ಇವರ ಸಾಹಸವನ್ನು ನೋಡಿ ಭಾರತೀಯರು ಇವರನ್ನೇ ಕಾಂಗ್ರೆಸ್ಸಿನ ಎರಡನೆಯ ಅಧಿವೇಶನಕ್ಕೆ ಅಧ್ಯಕ್ಷರನ್ನಾಗಿ ಆರಿಸಿದರು ಆಗ, ನೌರೋಜಿಯವರು ಭಾರತಕ್ಕೆ ಮರಳಿ ಬಂದರು ಮುಂದೆ, ಮರಳಿ ವಿಲಾಯತಿಗೆ ಹೋದರು

ಬಳಿಕ ಕ್ರಿ ಶ ೧೮೯೨ರಲ್ಲಿ, ಮತ್ತೆ ಇವರು ಬ್ರಿಟಿಶ ಪಾರ್ಲಮೆಂಟಿನ ಚುನಾವಣೆಗೆ ನಿಂತು ಆರಿಸಿಬಂದರು ಭಾರತೀಯರು ೧೮೯೩ರಲ್ಲಿ ಎರಡನೆಯ ಸಲ ಇವರಿಗೆ ಕಾಂಗ್ರೆಸ್ಸಿನ ಅಧ್ಯಕ್ಷಪಟ್ಟವನ್ನು ಕಟ್ಟಿದರು ಇವರು ಬ್ರಿಟಿಶ್ ಪಾರ್ಲಮೆಂಟಿನ ಸದಸ್ಯರಾಗಿ ಅತ್ಯುತ್ತಮ ಕಾರ್ಯಮಾಡಿದರು

ಮುಂದೆ, ಲಾರ್ಡ್ ಕರ್ಝನ್ನನ ಕಾಲದಲ್ಲಿ ಬಂಗಾಲದ ವಿಭಜನೆಯಾಯಿತು ಆಗ ಇಡಿಯ ಬಂಗಾಲವೇ ಚಳವಳಿ ಹೂಡಿತು ದಾದಾ ಭಾಯಿಯವರು ಹುರುಪುಗೊಂಡರು ಕ್ರಿ ಶ ೧೯೦೬ರಲ್ಲಿ ಅವರು ಮೂರನೆಯ ಸಲ ಕಾಂಗ್ರೆಸ್ಸಿನ ಅಧ್ಯಕ್ಷಪೀಠವನ್ನು ಏರಿದರು ಇವರು ತಮ್ಮ ಭಾಷಣದಲ್ಲಿ ಸ್ವರಾಜ್ಯವೆ ಕಾಂಗ್ರೆಸ್ಸಿನ ಧ್ಯೇಯವೆಂದೂ, ಅದನ್ನು ಸಾಧಿಸಲು ಸ್ವದೇಶಿಯ ಪುರಸ್ಕಾರ, ಪರದೇಶೀಯ ಬಹಿಷ್ಕಾರಗಳನ್ನು ಆಚರಣೆಯಲ್ಲಿ ತರಬೇಕೆಂದೂ ರಾಷ್ಟ್ರೀಯ ಶಿಕ್ಷಣವು ಪ್ರಾರಂಭವಾಗಬೇಕೆಂದೂ ಸಾರಿಹೇಳಿದರು ಅಂದಿನಿಂದಲೇ ಕಾಂಗ್ರೆಸ್ಸಿಗೆ ಒಂದು ನಿಶ್ಚಿತ ಧೋರಣೆಯು ಉಂಟಾಯಿತು ಜನತೆಯು 'ಭಾರತ ಪಿತಾಮಹ'ನೆಂದು ಇವರನ್ನು ಗೌರವಿಸಿತು

ಇದಾದಮೇಲೆ, ವೃದ್ಧಾಪ್ಯದ ಮೂಲಕ ರಾಜಕಾರಣದಿಂದ ಇವರು ಹೊರಗುಳಿದು, ತಮ್ಮ ೯೧ನೆಯ ವಯಸ್ಸಿನಲ್ಲಿ ಎಂದರೆ ಕ್ರಿ ಶ ೧೯೧೭ರಲ್ಲಿ ಇಹಲೋಕಯಾತ್ರೆಯನ್ನು ಮುಗಿಸಿದರು

**ಪ್ರಾರ್ಥನಾ ಸಮಾಜ** — ಬ್ರಹ್ಮಸಮಾಜದ ತತ್ತ್ವಗಳನ್ನು ವ್ಯಾವಹಾರಿಕ ಸ್ವರೂಪದಲ್ಲಿ ಬಳಕೆಯಲ್ಲಿ ತರಬೇಕೆಂದು ಕೆಲವು ಜನರ ಇಚ್ಛೆಯಾಯಿತು ಸದ್ವರ್ತನ, ಬಂಧುಭಾವ, ವರ್ಗದ ಸಮಾನತೆ, ವಿಶುದ್ಧಭಕ್ತಿಭಾವಗಳು

ಾಲ್ಲರಲ್ಲಿಯೂ ನಲಸಲೇಬೇಕೆಂಬುದು ಅತ್ಯವಶ್ಯ ಇವೇ ತತ್ತ್ವಗಳನ್ನಿರಿಸಿ ಕೊಂಡು ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆ, ಡಾ ರಾಮ ಕೃಷ್ಣ ಭಾಂಡಾರಕರ ಮೊದಲಾದವರು, ೧೮೬೭ರಲ್ಲಿ ಪ್ರಾರ್ಥನಾಸಮಾಜ ವನ್ನು ಸ್ಥಾಪಿಸಿದರು ಇದು ಈಗಲೂ ಮುಂಬಯಿ-ಮಹಾರಾಷ್ಟ್ರಗಳಲ್ಲಿ ಬಳಕೆಯಲ್ಲಿದೆ

**ನ್ಯಾಯಮೂರ್ತಿ ರಾನಡೆಯವರು** — ಇವರು ೧೮೪೨ರಲ್ಲಿ ಹುಟ್ಟಿದರು. ಮುಂದೆ ಮುಂಬೈ ವಿಶ್ವವಿದ್ಯಾಲಯುದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ, ೧೮೫೯ ರಲ್ಲಿ ಉತ್ತಮರೀತಿಯಿಂದ ಉತ್ತೀರ್ಣ ರಾದರು ಆ ಮೇಲೆ ಎಮ್ ಎ, ಎಲ್ ಎಲ್ ಬಿ ಪರೀಕ್ಷೆ ಪಾಸಾಗಿ ಸುಪ್ರಸಿದ್ಧ ವಕೀಲ ರಾದರು ಇವರ ಬುದ್ಧಿವಂತಿಕೆಯ ಬೆಳಕು ಸರಕಾರದಲ್ಲಿಯೂ ಹರಡಿತು ಆಗ ಇವ ರನ್ನು ನ್ಯಾಯಾಧೀಶರನ್ನಾಗಿ ನಿಯಮಿಸಿ ದರು ಸರಕಾರದ ಕಟ್ಟಿನಲ್ಲಿದ್ದರೂ, ಮಿಕ್ಕ ವೇಳೆಯಲ್ಲಿ ಸಾಧ್ಯವಿದ್ದಷ್ಟು ಸಮಾಜಸೇವೆ ಯನ್ನು ಸಲ್ಲಿಸಿದ ನ್ಯಾ ಮೂ ರಾನಡೆ ಯವರ ಬುದ್ಧಿವಂತಿಕೆ-ಕರ್ತೃವ್ಯದಕ್ಷತೆ- ಗಳನ್ನು ಯಾರೂ ಹೊಗಳಬಹುದು



ಮಹಾದೇವ ಗೋವಿಂದ ರಾನಡೆ

ಸಮಾಜ-ಧರ್ಮಗಳ ಸುಧಾರಣೆಯ ಬಗೆಗೆ ಹೊಸದನ್ನು ಹೊಂದಿಸಬೇಕೆನ್ನುವದಕ್ಕಿಂತ ಇದ್ದುದನ್ನು ಇರಬೇಕಾದ ರೀತಿ ಯಲ್ಲಿ ತಿದ್ದಿಕೊಳ್ಳುವದೇ ವ್ಯಾವಹಾರಿಕ ಮಾರ್ಗ ಎಂದು ಇವರು ಪದೇ ಪದೇ ಹೇಳುತ್ತಿದ್ದರು ೧೯೦೧ರಲ್ಲಿ ಇವರು ಮೃತರಾದರು

**ಬ್ರಹ್ಮ-ಪ್ರಾರ್ಥನಾ ಸಮಾಜಗಳ ಪರಿಣಾಮ** — ಈ ಎರಡೂ ಸಂಸ್ಥೆಗಳು ಬಹುಶಃ ಒಂದೇ ತತ್ತ್ವದ ಮೇಲೆಯೆ ಹುಟ್ಟಿದವೆಂದು ಹೇಳಬಹುದು. ಎರಡರಲ್ಲಿಯೂ ಬುದ್ಧಿಪ್ರಾಮಾಣ್ಯ, ಪರದೇಶೀಯ ಸಂಸ್ಕೃತಿಗಳ ಪ್ರಭಾವ ಕಂಡುಬರುತ್ತವೆ ಇವರ ಸ್ಫೂರ್ತಿಯ ಸೆಲೆ ಪರದೇಶೀಯ ವಾಙ್ಮಯದಿಂದಲೇ ಹುಟ್ಟಿದುದು ಇವೆರಡರಿಂದ ಭಿನ್ನವಾಗಿ ಕೇವಲ ಹಿಂದೂಸಂಸ್ಕೃತಿ ಯಲ್ಲಿಯೇ ತಿದ್ದುಪಡಿಗಳನ್ನು ಮಾಡಹೊರಟ ಮತ್ತೊಂದು ಸಂಸ್ಥೆಯೆಂದರೆ ಆರ್ಯಸಮಾಜ

**ಸ್ವಾಮಿ ದಯಾನಂದ** — ಆರ್ಯಸಮಾಜದ ಸಂಸ್ಥಾಪಕರು ಸ್ವಾಮಿ ದಯಾ ನಂದ ಸರಸ್ವತಿಗಳು ಅವರ ಮೂಲಹೆಸರು ಅಂಬಾಶಂಕರ ಹುಟ್ಟಿದುದು

೧೮೨೪ರಲ್ಲಿ ಎಳೆಯತನದಿಂದಲೂ ಅವರಲ್ಲಿ ಚಿಕಿತ್ಸಕಬುದ್ಧಿ ಇದ್ದಿತು ದೃಷ್ಟಿ ಬಹು ಸೂಕ್ಷ್ಮವಾದುದಾಗಿತ್ತು ಒಮ್ಮೆ ಇವರು ಶಂಕರನ ದೇವಾಲಯಕ್ಕೆ ಹೋದಾಗ, ಒಂದು ಇಲಿಯು ಆ ಮೂರ್ತಿಯ ಮೇಲೆ ಆಡುತ್ತಿದ್ದಿತಂತೆ ಆಗ ಅವರಿಗೇನೆನಿಸಿತೊ, ಅಂದಿನಿಂದಲೇ ಮೂರ್ತಿಪೂಜೆಯನ್ನು ತಿರಸ್ಕರಿಸಹತ್ತಿದರು ೨೧ನೆಯ ವಯಸ್ಸಿಗೆ ಸಂನ್ಯಾಸಿಯಾಗಿ ಮನೆಬಿಟ್ಟು ಹೊರಟರು ಅವರು, ೧೮ ವರುಷ ಪ್ರವಾಸಮಾಡಿ, ಮಥುರೆಯಲ್ಲಿ ಸ್ವಾಮಿವಿರಜಾನಂದ ಸರಸ್ವತಿಯವರ ಶಿಷ್ಯರಾಗಿ 'ದಯಾನಂದ ಸರಸ್ವತಿ' ಎಂಬ ಹೊಸ ಹೆಸರನ್ನಿಟ್ಟುಕೊಂಡರು



ದಯಾನಂದ ಸರಸ್ವತಿ

**ಯೋಗ್ಯತೆ**—ದಯಾನಂದ ಸರಸ್ವತಿಗಳು ಸಂಸ್ಕೃತದಲ್ಲಿ ಅದ್ವಿತೀಯ ಪಂಡಿತರು ಅವರಿಗೆ ಇಂಗ್ಲಿಷಿನ ಸಂಸ್ಕಾರವಿರಲಿಲ್ಲ ವೇದಗಳೇ ಇವರಿಗೆ ಪ್ರಮಾಣಗ್ರಂಥಗಳು ಆ ಕಾಲದ ಸಮಾಜರಚನೆಯಲ್ಲಿ ಮಂತ್ರಪೂರ್ವಕವಾದ ಪೂಜಾ ಹಾಗೂ ಅದರ ವಿಧಾನವನ್ನು ಬಳಕೆಯಲ್ಲಿ ತರುವುದೇ ಅವರ ಹೆಗ್ಗುರಿ ಅದಕ್ಕಾಗಿ ಮುಂಬಯಿಯಲ್ಲಿಯೂ ಲಾಹೋರದಲ್ಲಿಯೂ ಅವರು ಆರ್ಯಸಮಾಜ ಸಂಸ್ಥೆಗಳನ್ನು ಆರಂಭಮಾಡಿದರು

**ಮುಖ್ಯತತ್ತ್ವಗಳು**—ದೇವರು ಒಬ್ಬನೇ ಮೂರ್ತಿಗಳ ಪೂಜೆಯನ್ನು ಮಾಡಬಾರದು ವೇದಗಳು ಕೇವಲ ದೇವರ ವಾಣಿ ಅವುಗಳನ್ನು ಎಲ್ಲರೂ ಮನ್ನಿಸಲೇಬೇಕು ವೇದಗಳ ಅಭ್ಯಾಸಕ್ಕೆ ಜಾತಿಯ ನಿರ್ಬಂಧವಿಲ್ಲ, ಏಕೆಂದರೆ ಜಾತಿ ಕೃತ್ರಿಮವಾದುದು ಅದಕ್ಕೆ ಜನ್ಮವು ಕಾರಣವಾಗಿರದೆ ಗುಣ-ಕರ್ಮಗಳು ಕಾರಣವಾಗಿವೆ

**ಆರ್ಯಸಮಾಜದ ಆವಶ್ಯಕತೆ**—ಈ ತತ್ತ್ವಗಳನ್ನೆಲ್ಲ ದಯಾನಂದ ಸರಸ್ವತಿಗಳು 'ಸತ್ಯಾರ್ಥಪ್ರಕಾಶ' ಎಂಬ ಗ್ರಂಥದಲ್ಲಿ ಬರೆದಿದ್ದಾರೆ ಇವರು ಒಳ್ಳೆಯ ಮೃದು-ಮಧುರ ಸ್ವಭಾವದವರು ಹಿಂದೂಧರ್ಮ, ಹಿಂದೂ ಜನರೆಂದರೆ ಪ್ರಾಣಕ್ಕಿಂತಲೂ ಪ್ರಿಯವೆಂದು ಬಗೆದು, ಅವರು ಅವುಗಳ ಸೇವೆ ಮಾಡಿದರು ಈ ಪ್ರೀತಿಯೇ ಅವರಿಗೆ ಆರ್ಯಸಮಾಜವನ್ನು ಸ್ಥಾಪಿಸಹಚ್ಚಿತು ಆ ಕಾಲಕ್ಕೆ ತಿಳಿದೋ ತಿಳಿಯದೆಯೋ, ಅನೇಕ ಹಿಂದುಗಳು ಮುಸಲ್ಮಾನ, ಕ್ರಿಸ್ತ ಮೊದಲಾದ ಧರ್ಮದಲ್ಲಿ ಸೇರುತ್ತಿದ್ದರು ಒಮ್ಮೆ ಪರಧರ್ಮವನ್ನು

ಸೇರಿದ ಮೇಲೆ ಮತ್ತೆ ಹಿಂದುಗಳಾಗುವದಕ್ಕೆ ಹಿಂದೂ ಧರ್ಮದ ಒಪ್ಪಿಗೆ ಇರಲಿಲ್ಲ ಇಂಥ ಧರ್ಮಾಂತರಿತರನ್ನು ಮತ್ತೆ ವೈದಿಕಮಂತ್ರಗಳಿಂದ ಶುದ್ಧ ಮಾಡುವದೂ, ಅವರನ್ನು ಹಿಂದೂಧರ್ಮದಲ್ಲಿ ತೆಗೆದುಕೊಳ್ಳುವದೂ, ಪರ ಧರ್ಮೀಯರು ಯಾರಾದರೂ ಹಿಂದೂಧರ್ಮಕ್ಕೆ ಬರಬೇಕೆನ್ನುತ್ತಿದ್ದರೆ ಅವರನ್ನು ವೈದಿಕ ಕ್ರಮಗಳಿಂದ ಸಂಸ್ಕರಿಸಿಕೊಳ್ಳುವದೂ ಹಿಂದೂ ಸಮಾಜವನ್ನು ಸಂಘ ಟಿಸುವುದೂ ಆರ್ಯಸಮಾಜದ ಮುಖ್ಯ ಕಾರ್ಯಗಳು ಇದರಿಂದ ಧರ್ಮಾಂತರಿತ ರಾದ ಹಿಂದುಗಳು ಬಹುಸಂಖ್ಯೆಯಲ್ಲಿ ಮತ್ತೆ ವೈದಿಕಧರ್ಮದಲ್ಲಿ ಸೇರಿದರು

**ಆರ್ಯಸಮಾಜದ ಅಧ್ವರ್ಯುಗಳು** —ದಯಾನಂದ ಸರಸ್ವತಿಗಳ ತರುವಾಯ ಲಾಲಾ ಹಂಸರಾಜ, ಪಂಡಿತ ಗುರುದತ್ತ, ಲಾಲಾ ಲಜಪತರಾಯ, ಸ್ವಾಮಿ ಶ್ರದ್ಧಾನಂದ ಮೊದಲಾದವರು ಈ ಸಮಾಜಕಾರ್ಯವನ್ನು ಸುವ್ಯವಸ್ಥಿತವಾಗಿ ಸಾಗಿಸಿದರು ಪಂಜಾಬ, ಉತ್ತರಪ್ರದೇಶಗಳಲ್ಲಿ ಈ ಸಮಾಜವು ಸರ್ವತ್ರ ಪಸರಿಸಿದೆ ಪಾಕಿಸ್ತಾನ ಸ್ಥಾಪನೆಯ ಪೂರ್ವದಲ್ಲಿ, ಲಾಹೋರವು ಇವರ ಕೇಂದ್ರಸಂಸ್ಥೆಯಾಗಿತ್ತು ಹರಿದ್ವಾರದಲ್ಲಿ ಗುರುಕುಲ, ಅನೇಕ ನಗರಗಳಲ್ಲಿ ಆಂಗ್ಲೊ-ವೈದಿಕ ಕಾಲೇಜು ಮುಂತಾದ ವೇದವಾಙ್ಮಯಪ್ರಸಾರದ ಶಿಕ್ಷಣ ಸಂಸ್ಥೆಗಳು, ಈ ಸಮಾಜದ ಆಶ್ರಯದಲ್ಲಿ ಸಾಗಿವೆ ಶುದ್ಧಿ, ಸಂಘಟನೆ, ಜಾತಿನಿರ್ಮೂಲನ, ಅಸ್ಪೃಶ್ಯೋದ್ಧಾರ ಮುಂತಾದ ಕಾರ್ಯಗಳಲ್ಲಿ ಆರ್ಯ- ಸಮಾಜೀಯರು, ಬ್ರಹ್ಮಸಮಾಜ-ಪ್ರಾರ್ಥನಾಸಮಾಜಗಳಿಗಿಂತ ಎಷ್ಟೋ ಹೆಚ್ಚು ಕೆಲಸ ಮಾಡಿದ್ದಾರೆಂದು ಹೇಳಬಹುದು

**ರಾಮಕೃಷ್ಣ ಹಾಗು ವಿವೇಕಾನಂದರು** —ಇದೇ ಕಾಲದಲ್ಲಿ ಬಂಗಾಲ ದಲ್ಲಿ ಮತ್ತೊಬ್ಬ ಮಹಾತ್ಮರು ಕಾಣಿಸಿಕೊಂಡರು ಶ್ರೀರಾಮಕೃಷ್ಣ ಪರಮಹಂಸರು ಕಲಕತ್ತೆಯ ಹತ್ತಿರದ ದಕ್ಷಿಣೇಶ್ವರದ ಕಾಳೀ ದೇವಾಲಯದಲ್ಲಿ, ತಮ್ಮ ತಪೋಬಲದಿಂದ ಅನೇಕ ಸಾಧನೆಗಳನ್ನು ನಡೆಯಿಸಿ, ಹಿಂದೂ- ಮತದಲ್ಲಿ ಪ್ರತಿಪಾದಿಸಲಾಗಿರುವ ಮೂರ್ತಿ ಪೂಜೆ, ದ್ವೈತ-ವಿಶಿಷ್ಟಾದ್ವೈತ-ಅದ್ವೈತ ಸಂಪ್ರದಾಯಗಳು, ತಾಂತ್ರಿಕಾರಾಧನೆ, ಇವೆಲ್ಲವೂ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅತ್ಯಂತ ಫಲಕಾರಿ ಎಂಬುದನ್ನು ಅನುಭವದಿಂದ ಕಂಡುಹಿಡಿದು, ಜಗತ್ತಿಗೆ ಸಾರಿದರು ಅಲ್ಲದ, ಕ್ರೈಸ್ತ ಹಾಗೂ ಇಸ್ಲಾಂ ಧರ್ಮಗಳೂ ಪರಮಾತ್ಮನ ಸಾಕ್ಷಾತ್ಕಾರಕ್ಕೇ


ರಾಮಕೃಷ್ಣರು

ತಮ್ಮ ಮಾರ್ಗಗಳನ್ನು ಬೋಧಿಸುತ್ತಿವೆ ಎಂದು ಮನಗಂಡರು ಯಾವ ರೂಪದಲ್ಲಿಯಾಗಲಿ, ಯಾವ ಹೆಸರಿಂದಾಗಲಿ, ಭಗವಂತನನ್ನು ನಿಷ್ಠೆಯಿಂದ ಧ್ಯಾನ ಮಾಡಿದರೆ, ಆತನ ದರ್ಶನವು ದೊರೆಯುವುದು' ಎಂಬ ಅನುಭವಪೂರ್ಣವಾದ ಅಭಯವನ್ನಿತ್ತರು ಇದರಿಂದ ಧರ್ಮದೂಷಣೆಗೂ ಧರ್ಮಾಂತರಕ್ಕೂ ಅವಕಾಶವಿಲ್ಲವೆಂದ ಹಾಗಾಯಿತು, ಅಲ್ಲದೆ ಹಿಂದುಗಳ ಸನಾತನಧರ್ಮದ ಶ್ರೇಷ್ಠತತ್ತ್ವಗಳಲ್ಲಿ ಜನಗಳಿಗೆ ನಂಬಿಕೆ ಹೆಚ್ಚಿತು ಅದರ ವ್ಯಾಸಂಗಕ್ಕೂ ಅನುಷ್ಠಾನಕ್ಕೂ ಹೊಸ ಉತ್ಸಾಹವು ಮೂಡಿತು ಶ್ರೀರಾಮಕೃಷ್ಣರ ಮುಖ್ಯಶಿಷ್ಯರಾದ ಸ್ವಾಮಿ ವಿವೇಕಾನಂದರು, ಆಧುನಿಕ ಶಾಸ್ತ್ರವಿದ್ಯೆಗಳಲ್ಲಿಯೂ ಇಂಗ್ಲಿಷ ಭಾಷೆಯಲ್ಲಿಯೂ ಅಪ್ರತಿಮಪಾಂಡಿತ್ಯವನ್ನು ಗಳಿಸಿದ್ದರು ಅವರು ಅಮೇರಿಕಾ, ಇಂಗ್ಲಂಡ್ ಮುಂತಾದ ದೇಶಗಳಲ್ಲಿ ಪ್ರವಾಸ ಮಾಡಿ, ಭಾರತಸಂಸ್ಕೃತಿಯ ಮಹತ್ತ್ವವನ್ನು ಸಾರಿ, ಅನೇಕ ಶಿಷ್ಯರನ್ನು ಸಂಪಾದಿಸಿದರು ಭಾರತದಲ್ಲಿಯೂ, 'ಜನಸೇವೆಯೇ ಜನಾರ್ದನಸೇವೆ, ಆತ್ಮಶಕ್ತಿಯ ಬೆಳವಣಿಗೆಯೇ ದೇಶೋದ್ಧಾರಕ್ಕೂ ದಾಸ್ಯಶೃಂಖಲೆಯನ್ನು ಕಿತ್ತೊಗೆಯುವದಕ್ಕೂ ಸಾಧನ' ಎಂಬ ಸಂದೇಶವನ್ನಿತ್ತರು ಅದಕ್ಕಾಗಿ ರಾಮಕೃಷ್ಣಾಶ್ರಮವನ್ನು ಸ್ಥಾಪಿಸಿ ಅಲ್ಲಿಯ ಸಂನ್ಯಾಸಿಗಳು ಭಾರತದ ಬೇರೆಬೇರೆ ಊರುಗಳಲ್ಲಿಯೂ, ಹೊರದೇಶಗಳಾದ ಅಮೇರಿಕಾ, ಇಂಗ್ಲಂಡ್, ಆಫ್ರಿಕಾ, ದ ಅಮೇರಿಕಾ ಮೊದಲಾದ ಕಡೆಗಳಲ್ಲಿಯೂ ಬೋಧಮಾಡುವಂತೆ ವ್ಯವಸ್ಥೆ ಮಾಡಿದರು ಶ್ರೀವಿವೇಕಾನಂದರೇ ಭಾರತದಲ್ಲಿ 'ದರಿದ್ರನಾರಾಯಣ'ನ ಸೇವಾವ್ರತವನ್ನು ಮೊದಲು ಪ್ರಾರಂಭಿಸಿದರು—ಎಂದರೆ ತಪ್ಪಾಗಲಾರದು



ವಿವೇಕಾನಂದರು

## ಅಭ್ಯಾಸನಗಳು

೧ ಮುಂದೆ ಕೊಟ್ಟವರ ಬಗೆಗೆ ಸಂಕ್ಷಿಪ್ತ ಟಿಪ್ಪಣಿಗಳನ್ನು ಬರೆಯಿರಿ
(ಅ) ಸ್ವಾಮಿ ವಿವೇಕಾನಂದ (ಆ) ದಾದಾಭಾಯಿ ನವರೋಜಿ.

೨ ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಶಬ್ದಗಳನ್ನು ತುಂಬಿ ಬರೆಯಿರಿ —

(ಅ) ರಾಜಾ ರಾಯರು ಸಮಾಜವನ್ನು ಕ್ರಿ ಶ ರಲ್ಲಿ ಸ್ಥಾಪಿಸಿದರು

(ಆ) ಟಾಗೋರ ಟಾಗೋರ ಮೊದಲಾದ ಮೇಧಾವಿಗಳು ಅದನ್ನು ಮುನ್ನಡೆಸಿದರು

(ಇ) ವೇದಕಾಲದಂತೆ ಉಪಾಸನೆ ಪೂಜೆಯ ನಿರೋಧ ರ ಸಮಾನತೆ ಪತ್ನೀವ್ರತ ನಿಷೇಧ– ಇವೇ ಮೊದಲಾದುವನ್ನು ಯಲ್ಲಿ ತರುವದೇ ಸಮಾಜದ ಹೆಗ್ಗುರಿ.

(ಈ) ನ್ಯಾಯಮೂರ್ತಿ ರಾನಡೆ, ಡಾಕ್ಟರ್ ಭಾಂಡಾರಕರ ಮೊದಲಾದವರು ಕ್ರಿ ಶ ರಲ್ಲಿ ಸಮಾಜವನ್ನು ಸ್ಥಾಪಿಸಿದರು

(ಉ) ಸರಸ್ವತಿಯವರು ಸಮಾಜವನ್ನು ಕ್ರಿ ಶ ೧೮೭೫ರಲ್ಲಿ ಯಲ್ಲಿಯೂ ಕ್ರಿ ಶ ೧೮೭೭ರಲ್ಲಿ ದಲ್ಲಿಯೂ ಸ್ಥಾಪಿಸಿದರು

(ಊ) ಸಮಾಜದ ಮುಖ್ಯತತ್ತ್ವಗಳು — ರು ಒಬ್ಬನೇ, . ಪೂಜೆಯನ್ನು ಮಾಡಬಾರದು, ಜಾತೀಯ ವಾದುದು, ಅದಕ್ಕೆ ವು ಕಾರಣವಾಗಿರದೆ ಗಳು ಕಾರಣವಾಗಿವೆ

# ಭಾರತದ ನವೋದಯ


ಪ್ರಮಾಣ ▭ = ೧ ವರ್ಷ
ಕ್ರಿಸ್ತಶಕ ೧೭೭೦
ರಾಜಾ ರಾಮಮೋಹನ ರಾಯರ ಜನನ ೧೭೭೪
೧೮೦೦
೧೮೨೪ ಸ್ವಾಮಿ ದಯಾನಂದ ಸರಸ್ವತಿಯವರ ಜನನ
ದಾದಾಭಾಯಿ ನವರೋಜಿಯವರ ಜನನ ೧೮೨೫
೧೮೨೮ 'ಬ್ರಹ್ಮಸಭೆ'ಯ ಸ್ಥಾಪನೆ
ರಾಜಾ ರಾಮಮೋಹನ ರಾಯರ ಮರಣ ೧೮೩೩
೧೮೩೪ ಸ್ವಾಮಿ ರಾಮಕೃಷ್ಣ ಪರಮಹಂಸರ ಜನನ
ರಾನಡೆಯವರ ಜನನ ೧೮೪೨
೧೮೬೨ ಸ್ವಾಮಿ ವಿವೇಕಾನಂದರ ಜನನ
ಪ್ರಾರ್ಥನಾ ಸಮಾಜದ ಸ್ಥಾಪನೆ ೧೮೬೭
೧೮೭೫ ಮಹಾರಾಷ್ಟ್ರದಲ್ಲಿ ವಿಧವಾ ವಿವಾಹೋತ್ತೇಜಕ ಮಂಡಳದ ಸ್ಥಾಪನೆ
ಸ್ವಾಮಿ ದಯಾನಂದ ಸರಸ್ವತಿಯವರ ಮರಣ ೧೮೮೩
೧೮೮೫ { ರಾಷ್ಟ್ರೀಯ ಸಭೆಯ ಜನನ / ನವರೋಜಿಯವರ ಪಾತ್ರ
ಸ್ವಾಮಿ ರಾಮಕೃಷ್ಣ ಪರಮಹಂಸರ ಮರಣ / ನವರೋಜಿಯವರಿಗೆ ಕಾಂಗ್ರೆಸ ಅಧ್ಯಕ್ಷಪಟ್ಟ } ೧೮೮೬
೧೮೯೨ ಇಂಗ್ಲೆಂಡ ಪಾರ್ಲಿಮೆಂಟಕ್ಕೆ ನವರೋಜಿಯವರ ಚುನಾವಣೆ
ಚಿಕಾಗೋದಲ್ಲಿ ಸರ್ವಧರ್ಮ ಪರಿಷತ್ತು ೧೮೯೩
೧೯೦೧ ರಾನಡೆಯವರ ಮರಣ
ಸ್ವಾಮಿ ವಿವೇಕಾನಂದರ ಮರಣ ೧೯೦೨
೧೯೦೬ ನವರೋಜಿಯವರಿಗೆ ಪುನ ಕಾಂಗ್ರೆಸ್ ಅಧ್ಯಕ್ಷ ಪಟ್ಟ
ದಾದಾಭಾಯಿ ನವರೋಜಿಯವರ ಮರಣ ೧೯೧೭
೧೯೨೦

# ೧೪. ಭಾರತದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ

**ಪರಕೀಯರ ಅರಸೊತ್ತಿಗೆ** — ಭಾರತದಲ್ಲಿ ಅನೇಕ ಭಾಷೆಗಳು, ಅನೇಕ ನಡೆಗಳು, ಅನೇಕ ವೇಷಭೂಷಣಗಳು, ಅನೇಕ ಮತಪಂಥಗಳು ಕಂಡು ಬಂದರೂ, ಭಾರತದ ಧಾರ್ಮಿಕ ದೃಷ್ಟಿ, ತತ್ತ್ವಚಿಂತನ, ಜನಜೀವನದ ಒಳ ಗುಟ್ಟು ಇವೆಲ್ಲ ಒಂದೇ ಆಗಿವೆ ಹೀಗೆ ಇಲ್ಲಿಯ ಸಂಸ್ಕೃತಿ ಒಂದೇ ಆದರೂ, ಭಾರತವು ಒಂದೇ ರಾಷ್ಟ್ರವೆಂದು ಬಗೆದು, ಪರಕೀಯರ ದಾಳಿಗಳನ್ನು ಹಿಮ್ಮೆಟ್ಟಿಸುವ ಒಮ್ಮುಖದ ಪ್ರಯತ್ನವು ನಡೆಯಲಿಲ್ಲ, ಆದರೆ ಹೊರಗಿನಿಂದ ಬಂದು ಇಲ್ಲಿ ಅರಸೊತ್ತಿಗೆ ನಡೆಸಿದ ಮುಸಲ್ಮಾನರು ಭಾರತದಲ್ಲಿ ಕಾಲೂರಿ, ಪರಸ್ಪರ ಸಂಪರ್ಕ ಹಾಗೂ ಬಳಕೆಗಳಿಂದ ಭಾರತದ ಸಂಸ್ಕೃತಿ ಯಲ್ಲಿ ಬೆರೆತುಕೊಳ್ಳಹತ್ತಿದರು ಮುಸಲ್ಮಾನರ ಸಂಸ್ಕೃತಿಯಿಂದ ಭಾರತದ ಸಂಸ್ಕೃತಿಯಲ್ಲಿ ಕೆಲವು ಮಾರ್ಪಾಡುಗಳೂ ಆದುವು

**ಬ್ರಿಟಿಶರ ರಾಜನೀತಿ** — ಮುಸಲ್ಮಾನರ ತರುವಾಯ ಬಂದ ಯುರೋಪಿ ಯನರು ಮಾತ್ರ ಮೊದಲು ವ್ಯಾಪಾರಕ್ಕಾಗಿಯೇ ಇಲ್ಲಿಗೆ ಬಂದರೂ, ಬರ- ಬರುತ್ತ ಧಾರ್ಮಿಕ ಮತಾಂತರಕ್ಕೆ ಕೈಹಾಕಿದರು, ಮುಂದೆ ರಾಜ್ಯವನ್ನೂ ಸ್ಥಾಪಿಸಿದರು ಬ್ರಿಟಿಶರಂತೂ ಇಡಿಯ ಭಾರತದ ರಾಜ್ಯಸೂತ್ರವನ್ನೇ ತಮ್ಮ ಕೈಯಲ್ಲಿ ತೆಗದುಕೊಂಡರು "ಕುಂಪಣಿ ಸರಕಾರ'ದ ವ್ಯಾಪಾರೀ ಮನೋವೃತ್ತಿಯಿಂದ, ಬೇರ ತರದ ತೆರಿಗೆ-ಸುಂಕಗಳು ಜನರ ಮೇಲೆ ಹೇರಲ್ಪ ಟ್ಟವು ಇದರಿಂದ ಭಾರತದ ವ್ಯಾಪಾರೋದ್ಯಮಗಳಿಗೆ ಧಕ್ಕೆ ತಗಲಿತು, ಬಡತನ ಬೆಳೆಯಿತು ಸರಕಾರದ ಆದಾಯದ ಬಹುಭಾಗವು ಇಲ್ಲಿಯ ಜನತೆಯ ಏಳಿಗಾಗಿ ವೆಚ್ಚವಾಗದೆ, ಸೈನ್ಯದ ಖರ್ಚಿಗಾಗಿಯೂ, ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದ ಬ್ರಿಟಿಶ್ ಅಧಿಕಾರಿಗಳ ಸಂಬಳಕ್ಕಾಗಿಯೂ ಹೋಗು ತ್ತಿತ್ತು ಇಂಗ್ಲಿಷ ಭಾಷೆಯ ಮುಖಾಂತರ ಶಿಕ್ಷಣ ಕೊಡುವದಕ್ಕೆ ಪ್ರಾರಂಭವಾಗಿ, ಇಂಗ್ಲಿಷ ಕಲಿತವರೇ ಸುಸಂಸ್ಕೃತರು, ದೊಡ್ಡವರು – ಎಂಬ ತಪ್ಪುಭಾವನೆ ತಲೆದೋರಹತ್ತಿತು. ಕೆಲವರಲ್ಲಿಯಂತೂ ಭಾರತೀಯ ಸಂಸ್ಕೃತಿಯ ಬಗೆಗ ತಿರಸ್ಕಾರ ಹಾಗೂ ಇಂಗ್ಲಿಷ ಸಂಸ್ಕೃತಿಯ ಬಗೆಗೆ ಪುರಸ್ಕಾರ ಹೆಚ್ಚಾಗತೊಡಗಿತು

**ಸ್ವಾಭಿಮಾನದ ಮೊಳಕೆ** — ಒಂದುಕಡೆಗೆ ಇಂಗ್ಲಿಷ ಭಾಷೆ ಸಂಸ್ಕೃತಿ ಗಳ ಮೋಹ ಹೆಚ್ಚಾಗುತ್ತಿದ್ದಂತ, ಇನ್ನೊಂದಡೆಗೆ ಅದೇ ಇಂಗ್ಲಿಷ ಭಾಷೆ ಯನ್ನು ಕಲಿತವರಲ್ಲಿ ಸ್ವಾಭಿಮಾನವು ಜಾಗೃತವಾಗತೊಡಗಿತು. ಭಾರತ ದಲ್ಲಿ ಬ್ರಿಟಿಶರು ಶಿಕ್ಷಣದ ಸಲುವಾಗಿ ಪ್ರತಿವರ್ಷಕ್ಕೆ ಒಂದು ಲಕ್ಷ

ರೂಪಾಯಿ ವೆಚ್ಚ ಮಾಡಬೇಕೆಂದು ೧೮೧೩ರಲ್ಲಿ ಕಾಯದೆ ಪಾಸುಮಾಡಿದರು, ಆದರೆ ೧೮೨೩ರ ವರೆಗೆ ಅದು ಕಾರ್ಯಕಾರಿಯಾಗಲಿಲ್ಲ ಇದೇ ಸಮಯ ದಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ನಡೆದ ಪ್ರಗತಿಯುಗದ ಪರಿಣಾಮವಾಗಿ, ಭಾರತದಲ್ಲಿಯೂ ಹೊಸ ಶಿಕ್ಷಣಕ್ಕೆ ಮಹತ್ತ್ವವು ಪ್ರಾಪ್ತವಾಯಿತು ರಾಜಾರಾಮಮೋಹನರಾಯರಂತಹ ಮೇಧಾವಿಗಳೂ ಇಂಗ್ಲಿಷಶಿಕ್ಷಣ ಬೇಕೆಂಬ ಬೇಡಿಕೆಯನ್ನು ಮುಂದೆ ಮಾಡಿದರು ಆ ಸಮಯಕ್ಕೆ ಇಲ್ಲಿ ಲಾರ್ಡ ವಿಲಿಯಂ ಬೆಂಟಿಂಕನು ಗವ್ಹರ್ನರ್ ಜನರಲನಾಗಿದ್ದನು ಭಾರತದ ಶಿಕ್ಷಣದ ಭವಿತವ್ಯದ ಬಗಗೆ ಸಮಿತಿಯ ಸದಸ್ಯರಲ್ಲಿಯೆ ವಾದ-ವಿವಾದ ನಡೆಯಿತು ಹೋರೇಸ್ ವಿಲ್ಸನ್ನನ ಪಕ್ಷದವರು ಪೌರ್ವಾತ್ಯಶಿಕ್ಷಣವನ್ನು ಕೊಡಬೇಕೆನ್ನುವವರು, ಮೆಕಾಲೆಯ ಪಕ್ಷದವರು ಪಾಶ್ಚಿಮಾತ್ಯ ಶಿಕ್ಷಣವನ್ನು ಇಂಗ್ಲಿಷ ಭಾಷೆಯ ಮುಖಾಂತರ ಕೊಡಬೇಕೆನ್ನುವವರು ಬೆಂಟಿಂಕನು ಮೆಕಾಲೆಯ ಪಕ್ಷವನ್ನು ಎತ್ತಿಹಿಡಿದನು ಆದುದರಿಂದ ಮೆಕಾಲೆಯ ಪಕ್ಷಕ್ಕೆ ಗೆಲವಾಗಿ ಕ್ರಿ ಶ ೧೮೩೫ರಲ್ಲಿ ಇಂಗ್ಲಿಷ ಭಾಷೆಯ ಶಿಕ್ಷಣ ಪ್ರಾರಂಭವಾಯಿತು ಅದರ ಮುಖಾಂತರ ಯುರೋಪದಲ್ಲಿ ನಡೆದ ನವ ಯುಗದ ಕ್ರಾಂತಿಯ ಪರಿಣಾಮವು ಭಾರತೀಯರ ಮೇಲೆಯೂ ಆಯಿತು ಸ್ವಾತಂತ್ರ್ಯ, ಸ್ವಾಭಿಮಾನ, ರಾಷ್ಟ್ರಾಭಿಮಾನ ಎಂಬ ಹೊಸವಿಚಾರಗಳು ಕೆಲವು ಮುಖಂಡರಲ್ಲಿ ಒಡಮೂಡಹತ್ತಿದವು ಇದೇ ರಾಜಕೀಯ ಜಾಗೃತಿಗೆ ತಳಹದಿಯಾಯಿತು

**ಪಾಶ್ಚಿಮಾತ್ಯ ವಿದ್ಯೆಯಲ್ಲಿ ಪ್ರಗತಿ** —(೧೮೩೫) ಲಾರ್ಡ ಬೆಂಟಿಂಕನು ಪ್ರಾರಂಭಿಸಿದ ಪಾಶ್ಚಿಮಾತ್ಯ ಶಿಕ್ಷಣದ ಬಗೆಗ ವರದಿಯನ್ನು ಒಪ್ಪಿಸಲು **ವುಡ್‌ಸಾಹೇಬರ ಅಧ್ಯಕ್ಷತೆ**ಯಲ್ಲಿ ಒಂದು **ಮಂಡಲ**ವನ್ನು ನಿಯಮಿಸಲಾಯಿತು ಈ ಸಮಿತಿಯು ೧೮೫೪ರಲ್ಲಿ ತನ್ನ ವರದಿಯನ್ನು ಹೊರಡಿಸಿತು ಅದರಲ್ಲಿ ಕೆಳಗಿನ ಮುಖ್ಯ ಸೂಚನೆಗಳಿದ್ದವು (೧) ಶಿಕ್ಷಣದಲ್ಲಿ ಪ್ರಾಥಮಿಕ, ಮಾಧ್ಯಮಿಕ, ಮತ್ತು ಉಚ್ಚ ಎಂಬ ಮೂರು ಸುಸಂಬದ್ಧವಾದ ಕ್ರಮಗಳಿರಬೇಕು (೨) ಖಾಸಗಿ ಶಿಕ್ಷಣಸಂಸ್ಥೆಗಳಿಗೆ ಸರಕಾರವು ಧನಸಹಾಯವನ್ನು ನೀಡಬೇಕು (೩) ಸರಕಾರವೂ ಶಿಕ್ಷಣಸಂಸ್ಥೆಗಳನ್ನೂ ಅವುಗಳ ಮೇಲ್ವಿಚಾರಕರನ್ನೂ ಏರ್ಪಡಿಸಬೇಕು (೪) ಪ್ರತಿಯೊಂದು ಪ್ರಾಂತಕ್ಕೂ ಒಂದೊಂದು ವಿಶ್ವವಿದ್ಯಾಲಯವಿರಬೇಕು (೫) ಪ್ರಾಥಮಿಕ-ಮಾಧ್ಯಮಿಕ ಶಾಲೆಗಳಲ್ಲಿ ಮಾತೃಭಾಷೆಯ ಮುಖಾಂತರ ಶಿಕ್ಷಣವು ಸಾಗಬೇಕು (೬) ಸ್ತ್ರೀಶಿಕ್ಷಣ, ಟ್ರೇನಿಂಗ್ ಕಾಲೇಜು ಇವುಗಳತ್ತ ಲಕ್ಷ್ಯಕೂಡಬೇಕು ಈ ಎಲ್ಲ ಸೂಚನೆಗಳು ಸರಕಾರದಿಂದ ಮಾನ್ಯವಾದುವು ಅದರ ಪ್ರಕಾರ ಮುಂಬಯಿ,

ಮದ್ರಾಸ್, ಕಲಕತ್ತಾ, ಲಾಹೋರ, ಅಲ್ಲಾಬಾದಗಳಲ್ಲಿ ವಿಶ್ವವಿದ್ಯಾಲಯಗಳು ಆರಂಭವಾದವು ಶಿಕ್ಷಣಖಾತೆಯು ಪ್ರತ್ಯೇಕವಾಗಿ ಏರ್ಪಟ್ಟಿತು ಶಿಕ್ಷಣದಲ್ಲಿ ಪ್ರಗತಿಯಾದಂತೆ ಭಾರತದಲ್ಲಿ ರಾಷ್ಟ್ರೀಯವಿಚಾರಗಳೂ ಬೆಳೆಯತೊಡಗಿದವು ೧೮೫೭ರ ಪ್ರಥಮ ಸ್ವಾತಂತ್ರ್ಯಯುದ್ಧದಿಂದ ರಾಷ್ಟ್ರೀಯತೆಯ ಕಿಡಿಯು ಜ್ವಾಲೆಯ ರೂಪದಲ್ಲಿ ದೇಶದಾದ್ಯಂತ ಒಳಗಿಂದೊಳಗೇ ಬೆಳೆಯತೊಡಗಿತ್ತು

೧೮೮೨ರಲ್ಲಿ ನಿಯಮಿತವಾದ ಹಂಟರ್ ಕಮಿಶನಿನಲ್ಲಿ ಮುಂಬಯಿಯ ಪರವಾಗಿ ತೇಲಂಗ ಕಾಶೀನಾಥಪಂತರಿದ್ದರು ಈ ಕಮಿಶನಿನ ಪರಿಣಾಮವಾಗಿ ಸರಕಾರೇತರ ಶಾಲೆಗಳಿಗೆ ಹೆಚ್ಚುಹೆಚ್ಚಾಗಿ ಪ್ರೋತ್ಸಾಹನ ಸಿಗಹತ್ತಿತು, ಮತ್ತು ಪ್ರಾಥಮಿಕಶಿಕ್ಷಣದ ಕಡೆಗೆ ಸರಕಾರವು ಹೆಚ್ಚು ಲಕ್ಷ್ಯಕೊಡಬೇಕಾಯಿತು ೧೯೦೪ರಲ್ಲಿ ವಿಶ್ವವಿದ್ಯಾಲಯಗಳ ಬೆಳವಣಿಗೆಗೆ ವಿಶೇಷ ಲಕ್ಷ್ಯವನ್ನು ಪೂರಯಿಸಲಾಯಿತು ಕಾಲೇಜುಶಿಕ್ಷಣ ಬೆಳೆಯತೊಡಗಿತು ದೇಶದ ಮೂಲೆ-ಮೂಲೆಗಳಲ್ಲಿಯೂ ಸ್ಥಾಪಿತವಾದ ಶಾಲೆ-ಕಾಲೇಜುಗಳ ಮುಖಾಂತರ ಕಲಿತು ಹೊರಬಿದ್ದ ಯುವಕರಲ್ಲಿ ಇಂಗ್ಲಿಷ ಸಾಹಿತ್ಯ, ಇತಿಹಾಸ, ವಿಜ್ಞಾನ ಇವುಗಳ ಅಭ್ಯಾಸದ ಬಲದಿಂದ, ಸ್ವಾತಂತ್ರ್ಯಪ್ರಾಪ್ತಿಯ ದಾಹವು ಹೆಚ್ಚಾಯಿತು ದೇಶದ ನಾನಾಭಾಗಗಳ ಮುಖಂಡರು ಒಂದೆಡೆ ಸೇರಿ ಪರಸ್ಪರ ವಿಚಾರವಿನಿಮಯ ಹಾಗೂ ತಿಳಿವಳಿಕೆ ಮಾಡಿಕೊಳ್ಳಲಿಕ್ಕೆ ಇಂಗ್ಲಿಷ ಭಾಷೆಯು ಅತ್ಯಂತ ಸಹಾಯಕವಾಯಿತೆಂಬುದನ್ನು ನಾವು ಮರೆಯುವಂತಿಲ್ಲ ಇಂಗ್ಲಿಷರ ಅಭ್ಯಾಸದಿಂದ ದೇಶಕ್ಕೆ ಯಾವದೇ ಹಾನಿ ತಟ್ಟಿದ್ದರೂ, ಭಾರತೀಯರಲ್ಲಿ ಐಕ್ಯಭಾವನೆ ಬೆಳೆದು ರಾಷ್ಟ್ರೀಯತೆಯು ಮೂರ್ತಸ್ವರೂಪಕ್ಕೆ ಬರಲು ಅದು ಮುಖ್ಯ ಸಾಧನವಾಯಿತೆಂಬುದನ್ನು ನಾವು ಒಪ್ಪಲೇಬೇಕು

**ರಾಜಕೀಯ ಶಿಕ್ಷಣ.**—ಇಂಗ್ಲಿಷ ಕಲಿತವರ ಸಂಖ್ಯೆ ಹೆಚ್ಚಾದಹಾಗೆಲ್ಲ ಸಣ್ಣ ಪುಟ್ಟ ಅಧಿಕಾರದ ಸ್ಥಳಗಳಲ್ಲಿ ಹಿಂದುಗಳನ್ನು ನಿಯಮಿಸಿಕೊಳ್ಳಲಾಯಿತು ಆಗ ರಾಜ್ಯಸೂತ್ರದ ಕೆಲವು ಅಂಶಗಳಾದರೂ ಅವರಿಗೆ ತಿಳಿಯಲೇ ಬೇಕಲ್ಲವೇ? ಸ್ನೇಹದಿಂದಲೇ ಸಾಮ್ರಾಜ್ಯವನ್ನು ಸ್ಥಿರಗೊಳಿಸಬೇಕೆಂಬ ಉದಾರಮತವಾದವು ಇಂಗ್ಲಂಡಿನಲ್ಲಿ ಪ್ರಾರಂಭವಾಯಿತು, ಆದುದರಿಂದ ಸ್ಥಾನಿಕಸಂಸ್ಥೆಗಳು ಪ್ರಚಾರದಲ್ಲಿ ಬಂದವು ಹಿಂದೀಯರಿಗೆ ಆಡಳಿತದ ಪ್ರತ್ಯಕ್ಷ ಅನುಭವವು ಕೆಲಮಟ್ಟಿಗಾದರೂ ಅಲ್ಲಿ ದೊರೆಯಹತ್ತಿತು ಇದಲ್ಲದೆ ಬೇರೆ ಬೇರೆ ಸಾರ್ವಜನಿಕಸಂಸ್ಥೆಗಳು ಸ್ಥಾಪಿತವಾಗಿ, ಅವುಗಳಲ್ಲಿ ಕೆಲಸಮಾಡುವವರು ರಾಜಕಾರಣವನ್ನು ಅಭ್ಯಾಸಮಾಡತೊಡಗಿದರು

**ರಿಪನ್ನನ ಸುಧಾರಣೆಗಳು**—ಕ್ರಿ ಶ ೧೮೮೦ರಲ್ಲಿ ಲಾರ್ಡ್ ರಿಪನ್ನನು ವ್ಹಾಯಿಸ್‌ರಾಯನಾಗಿ ಭಾರತಕ್ಕೆ ಬಂದನು ಈತನು ಉದಾರಮತವಾದಿ ಹಾಗೂ ಶಾಂತಿಪ್ರಿಯ ಈತನು (೧) ಹಿಂದಿನ ವ್ಹಾಯಿಸರಾಯರು ದೇಶೀಯ ವೃತ್ತಪತ್ರಗಳ ಮೇಲೆ ಹೇರಿದ ನಿರ್ಬಂಧಗಳನ್ನು ಕಿತ್ತಿಹಾಕಿ, ಮುದ್ರಣ-ಸ್ವಾತಂತ್ರ್ಯವನ್ನು ಕೊಟ್ಟನು, (೨) ಒಂದು ಸಮಿತಿಯನ್ನು ನಿಯಮಿಸಿ, ಅದರ ಸಲಹೆಯಂತ ಶಿಕ್ಷಣವಿಭಾಗಗಳಲ್ಲಿ ಸುಧಾರಣೆಗಳನ್ನು ಮಾಡಿದನು, (೩) ಯುರೋಪಿಯನ್ ಅಪರಾಧಿಗಳ ನ್ಯಾಯವಿಚಾರಣೆ ಮಾಡಲು ಹಿಂದೀ ನ್ಯಾಯಾಧೀಶರಿಗೂ ಅಧಿಕಾರವನ್ನು ಕೊಟ್ಟನು, ಮತ್ತು (೪) ಮುನಸಿಪಾಲಿಟಿ, ಲೋಕಲ್‌ಬೋರ್ಡ್ ಮೊದಲಾದ ಸ್ಥಾನಿಕ-ಸ್ವರಾಜ್ಯಸಂಸ್ಥೆಗಳನ್ನು ಕಾಯದೆಯಿಂದ ಪ್ರಾರಂಭಿಸಿ, ಭಾರತೀಯರೇ ಅವುಗಳಲ್ಲಿ ಆಡಳಿತ ನಡಿಸಿಕೊಳ್ಳಲು ವ್ಯವಸ್ಥೆಮಾಡಿಕೊಟ್ಟನು ಇದೇ ಸ್ವರಾಜ್ಯ ಸಾಧನೆಯ ಮೊದಲ ಹೆಜ್ಜೆಯೆಂದು ಹೇಳಬಹುದು


ಲಾರ್ಡ್ ರಿಪನ್

**ಬ್ರಿಟಿಶರ ಬಗ್ಗೆ ತ್ವೇಷ**—ತಮ್ಮ ರಾಜ್ಯಸತ್ತೆಯು ಸ್ಥಾಪಿತವಾದ ಕೂಡಲ ಹಿಂದೀಯರು ಅದನ್ನು ಒಳ್ಳೆ ಆನಂದದಿಂದ ಸ್ವೀಕರಿಸಿ, ತಲೆಬಾಗಿ ನಡೆಯ ಹತ್ತಿದರೆಂದು ಬ್ರಿಟಿಶರೇನೋ ಪ್ರಚಾರಮಾಡಿದರು, ಆದರೆ ಒಳಗಿಂದೊಳಗಯ ರಾಷ್ಟ್ರೀಯತೆಯ ಜ್ವಾಲೆ ಹಬ್ಬತೊಡಗಿತ್ತು ಬ್ರಿಟಿಶ ಅಧಿಕಾರಿಗಳಿಗೆ ಅಂಕಿತರಾಗಿ ನಡೆಯುವ ಅವರ ನೌಕರವರ್ಗವು ಮತ್ತು ಬ್ರಿಟಿಶರ ಹೊರಬೆಳಕಿಗ ಮನಸೋತ ಕೆಲವು ಸುಧಾರಕ(?)ರು ಮಾತ್ರ ವಿಧೇಯಭಾವ ಹಾಗು ಅಭಿಮಾನಶೂನ್ಯತೆಯಿಂದ ನಡೆದುಕೊಂಡಿರಬಹುದು, ಆದರೆ, ಜನಸಾಮಾನ್ಯರಲ್ಲಿ ಬ್ರಿಟಿಶರ ಬಗೆಗೆ ಪ್ರೀತಿ ನೆಲೆಗೊಂಡಿರಲಿಲ್ಲ ಬ್ರಿಟಿಶರ ಸಂಸ್ಕೃತಿ ಹಾಗು ವೇಷ-ಭೂಷಣಗಳಿಗೆ ಹಳ್ಳಿಪಳ್ಳಿಯ ಜನರು ಮೆಚ್ಚಲಿಲ್ಲ ನಮ್ಮ ದೇಶವನ್ನು ಸುಲಿಯಲು ಬಂದ "ಫಿರಂಗಿ"ಯರು ಇವರು—ಎಂಬ ಭಾವನಯೇ ಭಾರತೀಯ ಜನಸಾಮಾನ್ಯರಲ್ಲಿ ಮೂಡಿತ್ತು ಆದುದರಿಂದ, ಬ್ರಿಟಿಶರ ಬಗೆಗ ತ್ವೇಷವು ಅವರ ಮನಸ್ಸಿನಲ್ಲಿ ಉಂಟಾದುದರಲ್ಲಿ ಆಶ್ಚರ್ಯವೇನು?

**ಸ್ವಾತಂತ್ರ್ಯಪ್ರಾಪ್ತಿಯ ಸಣ್ಣಪುಟ್ಟ ಯತ್ನಗಳು**—ಈ ತ್ವೇಷದ ಪರಿಣಾಮದಿಂದಾಗಿ, ಬ್ರಿಟಿಶರನ್ನು ಇಲ್ಲಿಂದ ತಳ್ಳಬೇಕೆಂಬ ಪ್ರಯತ್ನಗಳು ಅಲ್ಲಲ್ಲಿ

ನಡೆದದ್ದು ತಿಳಿಯುತ್ತದೆ ಕ್ರಿ ಶ ೧೭೫೭ರಲ್ಲಾದ ಪ್ಲಾಸಿಯ ಯುದ್ಧದಲ್ಲಿ ಬ್ರಿಟಿಶರಿಗೆ ಜಯವಾಯಿತು, ರಾಜ್ಯಶಾಸನವೂ ಅವರ ಕೈಗೆ ಬಂದಿತು, ಆದರೆ ಅಂದಿನಿಂದ ಮೊದಲ್ಗೊಂಡು ಬ್ರಿಟಿಶರ ವಿರುದ್ಧವಾಗಿ ಜನರು ಬಂಡುಹೂಡಿ ಹೋರಾಡಿದ್ದಾರೆ ಕ್ರಿ ಶ ೧೭೭೦ರಲ್ಲಿ ೫೦ ಸಾವಿರ ಜನರು, ಬಂಗಾಲ ದಲ್ಲಿ ಭತ್ತದ ಪೈರುಗಳ ಮೇಲೆ ದಾಳಿಯಿಟ್ಟರು ಬ್ರಿಟಿಶರು ಇದನ್ನಡಗಿಸಲು ನಾಲ್ಕು ಬೆಟ್ಯಾಲಿಯನ್ ಸೈನ್ಯವನ್ನು ಉಪಯೋಗಿಸಬೇಕಾಯಿತು ೧೭೮೩ ರಲ್ಲಿ ಮೂರುಸಾವಿರ ಜನರು, ಜಿನ್ಪೂರಿನಲ್ಲಿ ಸರಕಾರದ ಬೊಕ್ಕಸವನ್ನು ಲೂಟಿ-ಮಾಡಿದರು ಅದೇ ಜಿಲ್ಹೆಯ ಇನ್ನೊಬ್ಬ 'ದರೋಡೆಖೋರ'ನು ಹದಿನೈದು ನೂರು ಸಿಪಾಯರನ್ನು ಸೋಲಿಸಿದನಂತ ಕರ್ನಾಟಕದಲ್ಲಿ ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದ ಬಾಬಾಸಾಹೇಬ ಇವರ ಪ್ರಯತ್ನಗಳ ಕಥೆ ಗಳು ಇನ್ನೂ ಜನರಿಗೆ ಸ್ಫೂರ್ತಿದಾಯಕವಾಗಿವೆ ಬೀರಭೂಮ ಹಾಗು ಬಾಂಕೂರಾ ಜಿಲ್ಹೆಗಳಲ್ಲಿ, ಸರಕಾರದ ವಿರುದ್ಧ ಒಂದೇ ಸವನ ಪುಂಡಾಟಿಕೆ ನಡೆಯಿತು ಈ ಪುಂಡರ ನಾಯಕರಾದ 'ಸರದಾರರು' 'ಹಕೀಮ'ರು ಭಯಪೂರ್ಣ ವಾತಾವರಣವನ್ನು ನಿರ್ಮಾಣಮಾಡಿದ್ದರು ಪೆಂಡಾರಿಗಳನ್ನು ಹತ್ತಿಕ್ಕಲು ಲಾರ್ಡ್ ಹೇಸ್ಟಿಂಗ್ಸನು ಒಂದು ಲಕ್ಷ ಇಪ್ಪತ್ತುಸಾವಿರ ಸೈನ್ಯವನ್ನು ಉಪಯೋಗಿಸಬೇಕಾಯಿತು ಸಂನ್ಯಾಸಿಗಳ ಬಂಡಾಯವೂ ಪ್ರಸಿದ್ಧವಾಗಿದೆ ಅವರು ೧೭೬೩ರಲ್ಲಿ ಬಂಗಾಲದಲ್ಲಿ ಉದಯಹೊಂದಿ, ಬ್ರಿಟಿಶರಿಂದ ಢಾಕಾದ ಕಾರಖಾನೆಯನ್ನು ವಶಪಡಿಸಿಕೊಂಡರು ೧೭೬೬ರಲ್ಲಿ ೮೦೦ ಜನ ಸಂನ್ಯಾಸಿಗಳು ಒಂದು ಬಂಡಾಯದಲ್ಲಿ ಮೇಜರ್ ರೇನಲ್ ಎಂಬವನನ್ನು ಗಾಯಗೊಳಿಸಿ ಹಣ್ಣುಮಾಡಿದರು ಇವರ ಕಥೆಗಳನ್ನು ಕೇಳಿಯೇ ಸುಪ್ರಸಿದ್ಧ ಬಂಗಾಲಿ ಕಾದಂಬರಿಕಾರನಾದ ಬಂಕಿಮಚಂದ್ರನು ಸ್ಫೂರ್ತಿಗೊಂಡು "ಆನಂದಮಠ" ಎಂಬ ಕಾದಂಬರಿಯನ್ನು ಬರೆದನು ಅದರಲ್ಲಿಯೇ ನಮ್ಮ ಪ್ರಥಮ ರಾಷ್ಟ್ರ ಗೀತವಾದ "ವಂದೇ ಮಾತರಂ" ಎಂಬ ದಿವ್ಯ ಪದವಿರುವದು

ಮುಸಲ್ಮಾನರು ಕೂಡ ಬ್ರಿಟಿಶರನ್ನು ಹೊರದೂಡಲು ಹಲವು ಪ್ರಯತ್ನ ಗಳನ್ನು ಕೈಕೊಂಡರು ರಾಯಬರೇಲಿಯ ಸೈಯದ ಅಹಮ್ಮದ ಶಹಾ ಎಂಬವನು ೧೮೩೦ರಲ್ಲಿ ಶೀಖರನ್ನು ಸೋಲಿಸಿ, ಪೇಶಾವರವನ್ನು ಕೈವಶ ಮಾಡಿಕೊಂಡನು ಬ್ರಿಟಿಶರ ವಿರುದ್ಧ ಕೈಯೆತ್ತಲು ಅವನು ಸಿದ್ಧನಾಗಿದ್ದನು ೧೮೪೩ರಲ್ಲಿ ಮುಸಲ್ಮಾನರು ತಮಗೆ ವಿರುದ್ಧ ಇರುವರು ಎಂದು ತಿಳಿದೊಡನೆ ಆಗಿನ ಗವ್ಹರ್ನರ್ ಲಾರ್ಡ್ ಎಲಿನ್‌ಬರೋನು ಇಂಗ್ಲಂಡಿಗ ಪತ್ರಬರೆದು "ಒಡಕು ಹುಟ್ಟಿಸಿ ಒಡೆತನ ಮಾಡಲು ಕಲಿಯಿರಿ" ಎಂದು ತಿಳಿಸಿದನು

ಬ್ರಿಟಿಶರ ವಿರುದ್ಧವಾಗಿ ಭಾರತದಲ್ಲಿ ತೀವ್ರ ಅಸಂತೋಷವಿತ್ತೆಂಬುದನ್ನು

೧೮೨೪ರಲ್ಲಿ ಮೆಟ್‌ಕಾಫ಼್ ಎಂಬವನು ಹೀಗೆ ಹೇಳಿರುವನು "ನಮ್ಮ ಅಳಿಗಾಲಕ್ಕಾಗಿ ಹಿಂದುಸ್ತಾನವು ಕಾದುಕೊಂಡು ಕುಳಿತಿದೆ ನಮ್ಮ ನಾಶವಾದರೆ, ಅವರಿಗೆ ಬಹಳ ಆನಂದವಾಗುವುದು" ೧೮೫೬ರಲ್ಲಿ ಹಿಂದುಸ್ತಾನಕ್ಕೆ ವ್ಹಾಯಿಸ್‌ರಾಯನಾಗಿ ಬರುವಾಗ ಕ್ಯಾನಿಂಗ್ ಸಾಹೇಬನು ಅಂದದ್ದು "ಹಿಂದುಸ್ತಾನದ ಆಕಾಶವು ಸದ್ಯಕ್ಕೆ ಸ್ವಚ್ಛ ಕಂಡರೂ, ಒಂದು ಚಿಕ್ಕ ಮೋಡವು ತಲೆದೋರಿ ದೊಡ್ಡ ಬಿರುಗಾಳಿ ಬಿಟ್ಟು, ಪ್ರಚಂಡ ಮಿಂಚು-ಸಿಡಿಲುಗಳೆದ್ದು ಮಳೆ ಸುರಿಯಲು ತಡವಿಲ್ಲ" ೧೮೫೭ರ ಪ್ರಥಮಸ್ವಾತಂತ್ರ್ಯಯುದ್ಧವು ಈ ಮಾತನ್ನು ಸತ್ಯವಾಗಿ ಮಾಡಿತೋರಿಸಿತು ಬ್ರಿಟಿಶರು ಅದನ್ನು ಅತ್ಯಂತ ಕ್ರೂರತನದಿಂದ ಹತ್ತಿಕ್ಕಿದರು, ಆದರೆ ಬ್ರಿಟಿಶರ ವಿರೋಧವೆಲ್ಲ ಅಳಿಯಿತೆಂದು ತಿಳಿಯುವ ಕಾರಣವಿಲ್ಲ

೧೮೬೩ರಲ್ಲಿ ವಾಹಬಿ ಜನರ ಬಂಡಾಯವೆದ್ದಿತು ಅದೇ ರೀತಿ ೧೮೬೧ರಲ್ಲಿ ನೀಲಿ ಬೆಳೆಯುವ ಒಕ್ಕಲಿಗರ ಚಳವಳಿ, ೧೮೭೪-೭೫ರಲ್ಲಿ ಮುಂಬಯಿ ಪ್ರಾಂತದ ಒಕ್ಕಲಿಗರ ಚಳವಳಿ, ಮುಂದೆ ಶ್ಯಾಮಜಿ ಕೃಷ್ಣವರ್ಮ ಸಾವರಕರ ಮುಂತಾದವರು ಸ್ಥಾಪಿಸಿದ ಕ್ರಾಂತಿಪಕ್ಷ ಪುಣೆ, ನಾಸಿಕ ಮೊದಲಾದ ಕಡೆಗಳಲ್ಲಿ ಆದ ರಾಜಕೀಯ ಕೊಲೆಗಳು—ಇವೆಲ್ಲ ರಾಷ್ಟ್ರೀಯತೆಯ ಬೆಳವಣಿಗೆಯ ಸಶಸ್ತ್ರ ರೂಪಗಳೇ ಸರಿ

## ಅಭ್ಯಾಸಗಳು

೧ ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತ ಉತ್ತರ ಬರೆಯಿರಿ
- (ಅ) ಭಾರತದ ಸಂಸ್ಕೃತಿಯ ದೃಷ್ಟಿಯಿಂದ ಮುಸಲ್ಮಾನರಿಗೂ ಬ್ರಿಟಿಶರಿಗೂ ಭೇದವೇನು?
- (ಆ) ‹ಕುಂಪಣಿ' ಸರಕಾರದ ವ್ಯಾಪಾರೀ ಮನೋವೃತ್ತಿಯಿಂದ ಭಾರತದ ಮೇಲೆ ಯಾವ ಪರಿಣಾಮಗಳಾದುವು?
- (ಇ) ಇಂಗ್ಲಿಷ ಶಿಕ್ಷಣದಿಂದ ಭಾರತಕ್ಕಾದ ಹಾನಿ ಯಾವುದು?
- (ಈ) ಅದರಿಂದ ಆದ ಮಹತ್ತ್ವದ ಲಾಭ ಯಾವುದು?
- (ಉ) ಬ್ರಿಟಿಶರ ಬಗ್ಗೆ ಜನಸಾಮಾನ್ಯರಲ್ಲಿ ಉಂಟಾದ ಭಾವನೆ ಯಾವುದು?
- (ಊ) ಸ್ವಾತಂತ್ರ್ಯಪ್ರಾಪ್ತಿಗಾಗಿ ನಡೆದ ನಾಲ್ಕು ಸಣ್ಣ ಯತ್ನಗಳನ್ನು ಹೇಳಿರಿ

೨ ಕೆಳಗಿನವುಗಳ ಬಗ್ಗೆ ಟಿಪ್ಪಣಿಗಳನ್ನು ಬರೆಯಿರಿ
- (ಅ) ಪಾಶ್ಚಾತ್ಯ-ಪೌರ್ವಾತ್ಯ ಶಿಕ್ಷಣಗಳ ಬಗ್ಗ ವಾದ
- (ಆ) ವುಡ್ ಸಾಹೇಬನ ವರದಿ
- (ಇ) ಲಾರ್ಡ್ ರಿಪನ್ನನ ಸುಧಾರಣೆಗಳು
- (ಈ) ಲಾರ್ಡ್ ಕ್ಯಾನಿಂಗನು ವ್ಹಾಯಿಸ್‌ರಾಯನಾಗಿ ಬರುವಾಗ ತೆಗೆದ ಉದ್ಗಾರ

# ೧೫ ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆ ಮತ್ತು ಬೆಳೆವಣಿಗೆ

**ಇಂಡಿಯನ್ ನ್ಯಾಶನಲ್ ಕಾಂಗ್ರೆಸ್**—ಲಾರ್ಡ್ ರಿವನ ಇಂಡಿಯಾ ದೇಶದಿಂದ ಇಂಗ್ಲಂಡಿಗೆ ಹಿಂತಿರುಗಿದ ಕೂಡಲೇ, ಅವನು ಹಾಕಿದ ಬೀಜವು ಮೊಳಕೆಯೊಡೆಯಿತು ೧೮೮೫ರಲ್ಲಿ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಎಂಬ ರಾಜಕೀಯಸಂಸ್ಥೆಯು ಸ್ಥಾಪಿತವಾಯಿತು, ಇದು ೧೯೪೭ರ ವರೆಗೆ ಅಖಂಡವಾಗಿ ಅರ್ಧಶತಮಾನದ ವರೆಗೆ ಹೋರಾಡಿ, ಭಾರತಕ್ಕೆ ಸಂಪೂರ್ಣ ಸ್ವರಾಜ್ಯವನ್ನು ಗಳಿಸಿಕೊಂಡಿತು ಈ ಆಂದೋಲನದ ಆಗು-ಹೋಗುಗಳೇ ಇಪ್ಪತ್ತನೆಯ ಶತಮಾನದ ಭರತಖಂಡದ ಇತಿಹಾಸವೆಂದು ಹೇಳ ಬಹುದು

**ಕಾಂಗ್ರೆಸು ಹುಟ್ಟಿದ್ದೇಕೆ?**—ಭಾರತದಲ್ಲಿ ಬ್ರಿಟಿಶರ ಆಳಿಕೆಯು ಆರಂಭ-ವಾಗಿ ಸುಮಾರು ಒಂದು ನೂರು ವರುಷಗಳು ಗತಿಸಿದ್ದುವು ಆ ಅವಧಿಯಲ್ಲಿ ಅವರು ತಮ್ಮ ಸಾಮ್ರಾಜ್ಯವನ್ನು ಭದ್ರಪಡಿಸುವ ಧೋರಣೆಯಲ್ಲೇ ಮುಂದುವರಿದರು ಬಹುಶಃ ಲಾರ್ಡ್ ವಿಲಿಯಮ್ ಬೆಂಟಿಂಕನ ವರೆಗ ಎಲ್ಲ ಗವ್ಹರ್ನರ್ ಜನರಲರ ಧೋರಣೆಯೂ ಇದೇ ಆಗಿತ್ತು ವಿಲಿಯಮ್ ಬೆಂಟಿಂಕನು ಧರ್ಮಸುಧಾರಣೆಯಲ್ಲಿ ಕೈಹಾಕಿದನು, ಹಿಂದೀಯರಿಗೆ ಅಲ್ಪಸ್ವಲ್ಪ ಇಂಗ್ಲಿಷಿನ ಪರಿಚಯವನ್ನು ಮಾಡಿಕೊಟ್ಟನು ಅದರಂತೆ ಸಾರಿಗೆಯ ಸೌಕರ್ಯಗಳನ್ನು ಒದಗಿಸಿದನು, ಆದರೆ ಇದನ್ನೆಲ್ಲ ಭಾರತೀಯರು ಬ್ರಿಟಿಶರ ಕುಹಕವೆಂದೇ ತಿಳಿದರು ಕಡೆಗೆ ಧರ್ಮದ ಹೆಸರಿನಿಂದ ಸ್ವಾತಂತ್ರ್ಯ ಯುದ್ಧ ಅಥವಾ ಸಿಪಾಯಿಗಳ ಬಂಡಾಯವಾದುದು ಈ ಮೊದಲು ಬಂದಿದೆ ಆ ಮೇಲೆ ರಾಣಿಯ ಜಾಹೀರನಾಮೆಯಿಂದ ಭಾರತೀಯರಿಗೆ ಅಲ್ಪಸ್ವಲ್ಪ ರಾಜಕೀಯ ಸ್ವಾಯತ್ತತೆಯು ದೊರೆತಂತಾಯಿತು ಕೆಲವು ಬುದ್ಧಿವಂತರಿಗೆ ಸ್ವತಂತ್ರ ವಿಚಾರಕ್ಕೆ ಪ್ರೋತ್ಸಾಹ ಸಿಕ್ಕಿತು ಅಂತಹರಲ್ಲಿ ಸ್ವಾತಂತ್ರ್ಯಪ್ರಿಯರಾದ ಸುರೇಂದ್ರನಾಥ ಬ್ಯಾನರ್ಜಿ ಒಬ್ಬರು ಇವರೂ ಇನ್ನು ಕೆಲವರೂ ಸೇರಿ, ಇಂಡಿಯನ್ ಅಸೋಸಿಯೇಶನ್ ಸ್ಥಾಪಿಸಿದರು, ಅದರ ಮುಖಾಂತರವಾಗಿ 'ಸಿವಿಲ್ ಸರ್ವಿಸ ಪರೀಕ್ಷೆಯಲ್ಲಿ ಹಿಂದೀಯರಿಗೆ ಪ್ರವೇಶ ಬೇಕು' ಎಂದು ಆಂದೋಲನವನ್ನು ನಡೆಸಿದರು ಅದಕ್ಕೆ ಬ್ರಿಟಿಶ್ ಸರಕಾರದ ಒಪ್ಪಿಗೆ ಸಿಕ್ಕಿತು ಅದರಿಂದ ಅವರು ಉತ್ತೇಜಿತರಾಗಿ ಭಾರತೀಯರ ಆಶೆ-ಆಕಾಂಕ್ಷೆಗಳೆಲ್ಲವುಗಳನ್ನೂ ಮುಂದೆ ತರುವ ಎತ್ತುಗಡೆ ನಡೆಸಿದರು

ಮುಂದೆ ಮುದ್ರಣಸ್ವಾತಂತ್ರ್ಯ, ಶಸ್ತ್ರಾಸ್ತ್ರ ಸ್ವಾತಂತ್ರ್ಯಗಳನ್ನು ಕಸಿದು ಕೊಳ್ಳುವ ಕಾಯಿದೆಗಳ ವಿರುದ್ಧ ಭಾರತೀಯರು ಚಳವಳಿ ನಡೆಸಿದರು ಲಾರ್ಡ್ ರಿಪನ್ನನ ಉದಾರಧೋರಣೆಯಿಂದ ಮುದ್ರಣ ಸ್ವಾತಂತ್ರ್ಯವು ದೊರೆಯಿತು ಇಲ್‌ಬರ್ಟ್ ಬಿಲ್ಲಿಗೆ ಭಾರತೀಯರು ಬೆಂಬಲ ಕೊಟ್ಟಾಗಲೂ ಜಯದೊರೆಯಿತು ಇವೆಲ್ಲವುಗಳ ಪರಿಣಾಮವಾಗಿ ಭಾರತೀಯರಿಗೆ ಹುರುಪು-ಹುಮ್ಮಸು ಹುಟ್ಟಿದುವು ಸುಸಂಘಟಿತ ಪ್ರಯತ್ನದಿಂದ ನ್ಯಾಯ ಮತ್ತು ಹೆಚ್ಚು ಸ್ವಾತಂತ್ರ್ಯಗಳನ್ನು ಪಡೆಯಬಹುದೆಂಬ ಆಶೆಯ ಬೀಜವೂ ಉತ್ಪನ್ನವಾಯಿತು ಇದಕ್ಕಾಗಿ ಭಾರತೀಯರ ಧ್ಯೇಯ-ಧೋರಣೆಗಳನ್ನೂ ಗೊತ್ತು-ಗುರಿಗಳನ್ನೂ ನ್ಯಾಯಬದ್ಧ ರೀತಿಯಲ್ಲಿ ಸರಕಾರಕ್ಕೆ ತಿಳಿಸುವದು, ಅದಕ್ಕೆ ತಕ್ಕಂತೆ ಜನರಲ್ಲಿ ಜಾಗ್ರತಿಯನ್ನು ಮೂಡುವದು—ಈ ಕೆಲಸಗಳಿಗಾಗಿ ಒಂದು ಸುಸಂಘಟಿತ ಸಂಸ್ಥೆಯನ್ನು ದೊಡ್ಡ ಪ್ರಮಾಣದಲ್ಲಿ ಆರಂಭಿಸುವದು ಅವಶ್ಯವಾಯಿತು, ಎಂತಲೇ ೧೮೮೫ರಲ್ಲಿ 'ಇಂಡಿಯನ್ ನ್ಯಾಶನಲ್ ಕಾಂಗ್ರೆಸ್' ಅಥವಾ 'ಭಾರತೀಯ ರಾಷ್ಟ್ರೀಯ ಮಹಾಸಭೆ' ಜನ್ಮವೆತ್ತಿತು

**ಬ್ರಿಟಿಷ್ ಮೇಧಾವಿಗಳ ಸಹಾಯ** – ಹಿಂದೀಯರ ಈ ಭವ್ಯಮಂದಿರಕ್ಕೆ ಆಂಗ್ಲ ಸದ್ಗೃಹಸ್ಥರೇ ಅಡಿಗಲ್ಲನ್ನು ಇಟ್ಟರೆಂಬುದು ಅತ್ಯಾನಂದದ ವಿಷಯ


ಸರ್ ಆ್ಯಲನ್ ಹ್ಯೂಮ್

ಇವರಲ್ಲಿ ಸರ್ ಆ್ಯಲನ್ ಹ್ಯೂಮ್, ಸರ್ ವೆಡರ್ಬರ್ನ್, ಮಿಸೆಸ್ ಆ್ಯನಿ ಬೆಝಂಟ್ ಮುಂತಾದವರ ಹೆಸರನ್ನು ಮುಖ್ಯವಾಗಿ ಹೇಳಬಹುದು ಇವರಲ್ಲಿ ಸರ್ ಹ್ಯೂಮ್ ಅವರು ಈ ಬಗೆಗೆ ವ್ಹಾಯಿಸ್‌ರಾಯ್ ಲಾರ್ಡ್ ಡಫರಿನ್ ಅವರೊಡನೆ ವಿಚಾರವಿನಿಮಯ ನಡೆಸಿದರು ಏಕೆಂದರೆ ಹೊಸದಾಗಿ ಹುಟ್ಟಲಿರುವ ರಾಷ್ಟ್ರೀಯ ಸಭೆಗೆ ವ್ಹಾಯಿಸ್‌ರಾಯರನ್ನೇ ಕಾರ್ಯಕಾರಿ ಅಧ್ಯಕ್ಷರನ್ನು ಮಾಡಬೇಕೆಂದು ಅವರ ಉದ್ದೇಶವಿತ್ತು, ಆದರೆ ಲಾರ್ಡ್ ಡಫರಿನ್ನರ ಉದ್ದೇಶವು ಸ್ತುತ್ಯವೆಂದೂ ಸಂಘಟನೆಯು ಅಗತ್ಯವೆಂದೂ ಒಪ್ಪಿ ಉಪಯುಕ್ತ ಸಲಹೆಗಳನ್ನು ಮಾತ್ರ ಕೊಟ್ಟರು, ಮತ್ತು ವ್ಹಾಯಿಸ್‌ರಾಯನು ಅಧಿಕೃತವಾಗಿ ಆ ಸಂಸ್ಥೆಯಲ್ಲಿರುವದು ಹಿತವಾಗಲಿಕ್ಕಿಲ್ಲವೆಂದರು ಇದರಿಂದ ಉತ್ತೇಜಿತರಾಗಿ ಸರ್ ಹ್ಯೂಮ್ ಮೊದಲಾದ ವಿದೇಶೀಯ ಸಹೃದಯರೂ

ಸರ್ ದಾದಾಭಾಯಿ ನೌರೋಜಿ, ಸರ್ ಫಿರೋಜಶಹ ಮೆಹತಾ, ನ್ಯಾಯ ಮೂರ್ತಿ ರಾನಡೆ, ಪಂಡಿತ ಮಾಲವೀಯ, ಸುರೇಂದ್ರನಾಥ ಬ್ಯಾನರ್ಜಿ, ಉಮೇಶಚಂದ್ರ ಬ್ಯಾನರ್ಜಿ, ಕಾಶೀನಾಥಪಂತ ತೇಲಂಗ, ಸೀತಾರಾಮ ಪಂತ ಚಿಪಳೂಣಕರ, ಸರ್ ವೆಡರ್ಬರ್ನ್ ಮುಂತಾದ ಮುಂದಾಳುಗಳೆಲ್ಲ ೧೮೮೫ ರಲ್ಲಿ ಇಂಡಿಯನ್ ನ್ಯಾಶನಲ್ ಕಾಂಗ್ರೆಸನ್ನು ಸ್ಥಾಪಿಸಿದರು ಪುಣೆಯಲ್ಲಿಯೇ ಅದರ ಮೊದಲನೆಯ ಅಧಿವೇಶನವು ನಡೆಯಬೇಕೆಂದು ಗೊತ್ತಾಯಿತು, ಆದರೆ ಅಲ್ಲಿ ಅದೇ ಕಾಲಕ್ಕೆ ಕಾಲರಾ ಬೇನೆ ಹಬ್ಬಿದುದರಿಂದ, ಮುಂಬಯಿ ಯಲ್ಲಿ ಮೊದಲನೆಯ ಸಭೆ ಕೂಡಿತು

**ಮುಂಬಯಿಯಲ್ಲಿ ಮೊದಲನೆಯ ಭಾರತ ರಾಷ್ಟ್ರೀಯಮಹಾಸಭೆ** — (೧೮೮೫ನೆಯ ಡಿಶಂಬರ್-೨೮) ಈ ಸಭೆಗೆ ಕಲಕತ್ತೆಯ ಬ್ಯಾರಿಸ್ಟರ್ ಉಮೇಶ-ಚಂದ್ರ ಬ್ಯಾನರ್ಜಿಯವರು ಅಧ್ಯಕ್ಷರಾಗಿದ್ದರು ಪ್ರಾರಂಭದಲ್ಲಿ ಭಾರತ ರಾಷ್ಟ್ರೀಯ ಮಹಾಸಭೆಯ ಉದ್ದೇಶಗಳನ್ನು ಸ್ಪಷ್ಟವಡಿಸಲಾಯಿತು

**ಉದ್ದೇಶಗಳು** —(೧) ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿದ್ದು ರಾಷ್ಟ್ರೋನ್ನತಿಗಾಗಿ, ಮನಃಪೂರ್ವಕವಾಗಿ ಪ್ರಯತ್ನಿಸುವವರ ಪರಸ್ಪರ ಪರಿ-ಚಯವನ್ನು ಬೆಳೆಯಿಸುವದು (೨) ಜಾತಿ, ಧರ್ಮ, ಪ್ರಾಂತಭೇದಗಳನ್ನು ದೂಡಿ ಎಲ್ಲರಲ್ಲಿಯೂ ರಾಷ್ಟ್ರೀಯ ಐಕ್ಯವನ್ನು ಬೆಳೆಯಿಸುವದು ಲಾರ್ಡ್ ರಿಪನ್ನರ ಆಳಿಕೆಯಲ್ಲಿ ಉಂಟಾದ ಸುಶಿಕ್ಷಿತರ ಐಕ್ಯವನ್ನು ಅಭಿವರ್ಧಿಸುವದು (೩) ಆವಶ್ಯಕವಾದ ಸಾಮಾಜಿಕ, ಧಾರ್ಮಿಕ ಸುಧಾರಣೆಗಳಲ್ಲಿ ಸುಶಿಕ್ಷಿತರ ಮತ್ತು ಸಾಮಾನ್ಯ ನಾಗರಿಕರ ಮನಃಪರಿವರ್ತನಮಾಡುವದು (೪) ಆಯಾ ಪ್ರಾಂತೀಯ ಮುಂದಾಳುಗಳು ಮುಂದಿನ ಹನ್ನೆರಡು ತಿಂಗಳುಗಳಲ್ಲಿ ಮಾಡ ತಕ್ಕ ಕಾರ್ಯಗಳನ್ನು ನಿರ್ದಿಷ್ಟಗೊಳಿಸುವದು, ಅದಕ್ಕಾಗಿ ಜನರನ್ನು ನಿಯ ಮಿಸುವದು, ಅವರ ಕಾರ್ಯಗೌರವದ ರೂಪರೇಷೆಯನ್ನು ನಿರ್ದಿಷ್ಟಪಡಿಸು ವದು— ಮುಂತಾಗಿ

**ಮೊದಲ ಅಧಿವೇಶನದಲ್ಲಿ ಗೊತ್ತಾದ ನಿರ್ಣಯಗಳು.**—(೧) ಭಾರತದ ರಾಜ್ಯಪದ್ಧತಿಯ ವಿಚಾರಣೆಗಾಗಿ ಒಂದು ಸಮಿತಿ ಏರ್ಪಡಬೇಕು ಇದರ ಸದಸ್ಯರನ್ನು ರಾಜನೇ ನಿಯಮಿಸಬೇಕು, ಆದರ ಅವರು ಅನುಭವಶಾಲಿಗಳೂ ಸಹೃದಯರೂ ಇರಬೇಕು ಇವರಲ್ಲಿ ಭಾರತೀಯರಿಗೂ ಯೋಗ್ಯ ಪ್ರಮಾಣ ದಲ್ಲಿ ಸ್ಥಳಗಳು ಸಿಕ್ಕಬೇಕು ಈ ಸಮಿತಿಯವರು ವಿಲಾಯತಿಯಲ್ಲಿಯೂ ಭಾರತದಲ್ಲಿಯೂ ಕೂಡಿಯೆ ಯೋಗ್ಯರಿಂದ ಸಾಕ್ಷಿಗಳನ್ನು ತೆಗೆದುಕೊಳ್ಳ ಬೇಕು (೨) ಭಾರತಮಂತ್ರಿಯ ಆಲೋಚನಾಸಭೆಯನ್ನು ತೆಗೆದುಬಿಡ-ಬೇಕು (೩) ಪ್ರಾಂತೀಯ ಮತ್ತು ವರಿಷ್ಠಶಾಸನಮಂಡಲಗಳಲ್ಲಿ ಲೋಕ-

ನಿಯುಕ್ತ ಪ್ರತಿನಿಧಿಗಳೇ ಹೆಚ್ಚಾಗಿರಬೇಕು ಪಂಜಾಬ, ವಾಯವ್ಯಪ್ರಾ ಅಯೋಧ್ಯಾಪ್ರಾಂತಗಳಲ್ಲಿ ಶಾಸನಮಂಡಲಗಳನ್ನು ಏರ್ಪಡಿಸಬೇಕು. ವಾರ್ಷಿಕ ಆಯ-ವ್ಯಯದ ಮುಂಗಡಪತ್ರಿಕೆಯನ್ನು ಚರ್ಚೆಗಾಗಿ ಶಾಸನ-ಮಂಡಲದ ಮುಂದೆ ಇಡಬೇಕು ಸಭಾಸದರು ಬಹುಮತದಿಂದ ನಿರ್ಣಯಿಸಿದುದನ್ನು ಅಧಿಕಾರಿಗಳು ಅಲ್ಲಗಳೆದರೆ ಅವುಗಳನ್ನು ಪುನರ್ವಿಮರ್ಶಿಸುವದಕ್ಕೆ ಕಾಮನ್ಸ್‌ಸಭೆಯಲ್ಲಿ ಒಂದು ಸ್ಟ್ಯಾಂಡಿಂಗ್ ಕಮಿಟಿ ಇರಬೇಕು (೪) ಸಿವಿಲ್ ಸರ್ವೀಸ್ ಪರೀಕ್ಷೆ ವಿಲಾಯತಿಯಲ್ಲಿದ್ದಂತೆಯೆ ಭಾರತದಲ್ಲಿಯೂ ಇರಬೇಕು, ಅದರ ವಯೋಮರ್ಯಾದೆಯನ್ನು ೨೩ ವರ್ಷ ವಯಸ್ಸಿನ ವರೆಗೆ ಬೆಳೆಯಿಸಬೇಕು (೫) ಸೈನ್ಯಖಾತಗಾಗಿ ಆಗುತ್ತಿರುವ ವೆಚ್ಚವು ಈ ದೇಶದ ಉತ್ಪನ್ನದ ಮಾನದಿಂದ ಹೆಚ್ಚಾಗಿದೆ, ಅದನ್ನು ಕಡಿಮೆ ಮಾಡಬೇಕು (೬) ಕಡಿಮೆ ಮಾಡುವದು ಶಕ್ಯವಿರದಿದ್ದರ, ಬೇರೆ ಖಾತೆಗಳಲ್ಲಿಯ ಖರ್ಚನ್ನು ಉಳಿಸಿ ಇದಕ್ಕೆ ಭರತಿಮಾಡಿಕೊಳ್ಳಬೇಕು ಇದು ಶಕ್ಯವಿರದಿದ್ದರೆ ವಿದೇಶವಸ್ತುಗಳ ಮೇಲಿನ ಸುಂಕ ಹಾಗೂ ಲಾಯಸನ್ಸ್-ಫೀಗಳಿಂದ ಅದನ್ನು ತುಂಬಿಕೊಳ್ಳಬೇಕು ಭಾರತದ ಸಾಲದ ಹೊಣೆಯನ್ನು ಭಾರತ ಸರಕಾರದಂತೆ ಸಾಮ್ರಾಜ್ಯಸರಕಾರವೂ ಹೊರಬೇಕು (೭) ಬ್ರಿಟಿಶರು ಬ್ರಹ್ಮದೇಶವನ್ನು ವಶಪಡಿಸಿಕೊಳ್ಳುವದು ಅನಾವಶ್ಯಕ ಒಂದು ವೇಳೆ ಅವಶ್ಯವೇ ಎನಿಸಿದ್ದರೆ, ಸಿಂಹಳದ್ವೀಪದಂತೆ ಅದನ್ನು ಸ್ವತಂತ್ರಪ್ರಾಂತವನ್ನಾಗಿ ಮಾಡಬೇಕು (೮) ಉಪ್ಪಿನ ಮೇಲಿನ ಕರಗಳನ್ನು ಕಿತ್ತೊಗಯಬೇಕು (೯) ದೇಶದಲ್ಲಿಯ ಭೀಕರ ಬರಗಾಲದಿಂದ ಬಳಲುವ ಬಡವರ ಬೆಂಬಲಕ್ಕಾಗಿ ಸ್ಥಿರವಾದ ನಿಧಿ ಮತ್ತು ಪರಿಹಾರಕಕಾರ್ಯಗಳನ್ನು ದೊಡ್ಡ ಪ್ರಮಾಣದಲ್ಲಿ ಸರಕಾರವು ಬಳಕೆಯಲ್ಲಿ ತರಬೇಕು—ಮುಂತಾಗಿ ಇವುಗಳಿಂದ ಕಾಂಗ್ರೆಸ್ ಸಂಸ್ಥೆಯು ಹುಟ್ಟಿದ ಉದ್ದೇಶದ ಕಲ್ಪನೆ ಸ್ಪಷ್ಟವಾಗಿ ಬರುವದು

**ಕಾಂಗ್ರೆಸಿನ ಬೆಳೆವಣಿಗೆ** —ವರುಷ-ವರುಷಕ್ಕೆ ಕಾಂಗ್ರೆಸಿನ ವರ್ಚಸ್ಸು ಹೆಚ್ಚಾಗತೊಡಗಿತು ಮೊದ-ಮೊದಲು ಕೆಲವು ರಾಜಕೀಯ ಬೇಡಿಕೆಗಳನ್ನು ಮುಂದೆ ಮಾಡುತ್ತ, ಸರಕಾರದ ಸವಲತ್ತಿನಿಂದಲೇ ಬೆಳೆವಣಿಗೆಯನ್ನು ಸಾಧಿಸಿತು ೧೯೦೬ರಿಂದ ಕಾಂಗ್ರೆಸ್ ಚಳವಳಿಯು ಉಗ್ರಸ್ವರೂಪ ಕೈಕೊಂಡಿತು ಜನತೆಯ ಬೆಂಬಲ ಕಾಂಗ್ರೆಸಿಗೆ ಹೆಚ್ಚಾದಂತೆ, ಮೊದಲು ಹೋಮರೂಲಿಗಾಗಿಯೂ ತದನಂತರ ಸ್ವರಾಜ್ಯಪ್ರಾಪ್ತಿಗಾಗಿಯೂ ಅಹಿಂಸಾತ್ಮಕವಾಗಿ ಹೋರಾಡಲು ಅಣಿಯಾಯಿತು ಈ ಅಧ್ಯಾಯದಲ್ಲಿ ೧೮೮೫ರಿಂದ ೧೯೧೯ರ ವರೆಗೆ ಕಾಂಗ್ರೆಸು ಯಾವ ಯಾವ ಯತ್ನಗಳನ್ನು ಮಾಡಿ ಬೆಳೆಯಿತು ಎಂಬುದನ್ನು ತಿಳಿದುಕೊಳ್ಳುವ

**ಬೇಡಿಕೆಗಳು** – ನಾಡಿನ ಮುಂದಾಳುಗಳು ಕಾಂಗ್ರೆಸಿನಲ್ಲಿ ಸೇರಿ ಸರಕಾರವನ್ನು ಸುಧಾರಿಸಲು ಅನೇಕ ಬೇಡಿಕೆಗಳನ್ನು ಮುಂದೆ ಮಾಡಿದರು ಆಯ್ ಸಿ ಎಸ್ ಮತ್ತು ಇತರ ಉಚ್ಚ ಅಧಿಕಾರದ ಸ್ಥಳಗಳನ್ನು ಹಿಂದೀಯರಿಗೆ ಕೊಡಬೇಕು, ನ್ಯಾಯಖಾತೆಯಲ್ಲಿ ಜ್ಯೂರಿಪದ್ಧತಿಯನ್ನು ಬಳಕೆಯಲ್ಲಿ ತರಬೇಕು, ನ್ಯಾಯ ಮತ್ತು ಕಾರ್ಯನಿರ್ವಾಹಕ ಖಾತೆಗಳನ್ನು ಪ್ರತ್ಯೇಕಿಸಬೇಕು, ಸೈನ್ಯಖಾತೆಯ ವೆಚ್ಚವನ್ನು ಇಳಿಸಬೇಕು, ಸೈನ್ಯದಲ್ಲಿ ಹೆಚ್ಚು-ಹೆಚ್ಚಾಗಿ ಹಿಂದೀಯರನ್ನು ಸೇರಿಸಿಕೊಳ್ಳಬೇಕು, ರಾಜದ್ರೋಹಕಾಯದೆ, ಆಯುಧಗಳ ಕಾಯದೆಗಳಲ್ಲಿ ತಿದ್ದುಪಡಿ ಮಾಡಬೇಕು, ಉಪ್ಪಿನ ಕರವನ್ನು ಇಳಿಸಬೇಕು, ಕುಡುಕತನವನ್ನು ಕಡಿಮೆ ಮಾಡಬೇಕು—ಇವೇ ಮೊದಲಾದ ಬೇಡಿಕೆಗಳ ಬಗೆಗೆ ಕಾಂಗ್ರೆಸು ಮನವಿಗಳನ್ನು ಸಲ್ಲಿಸಿತು, ಆದರೆ ಬ್ರಿಟಿಶ ಸರಕಾರವು ಕೆಲವೊಂದು ರಾಜಕೀಯ ಸುಧಾರಣೆಗಳ ಬಗೆಗೆ ಘೋಷಣೆಗಳನ್ನು ಹೊರಡಿಸುತ್ತ ನಡೆಯಿತೇ ಹೊರತು, ಹಿಂದೀಯರ ಕೈಯಲ್ಲಿ ರಾಜ್ಯಸೂತ್ರಗಳು ಹೋಗುವುದಕ್ಕೆ ಅನುಕೂಲವಾದ ಬದಲಾವಣೆಗಳನ್ನು ಮಾಡಲು ಒಪ್ಪಲಿಲ್ಲ, ಇಷ್ಟೇ ಅಲ್ಲ, ಪ್ರಾರಂಭದಲ್ಲಿ ಕಾಂಗ್ರೆಸಿಗೆ ಅನುಕೂಲವಾದ ಸರ-ಕಾರವೇ, ನಾಲ್ಕೇ ವರುಷಗಳಲ್ಲಿ ಎಂದರೆ ಕ್ರಿ ಶ ೧೮೮೮ರಲ್ಲಿ ಅದನ್ನು ರಾಜ-ದ್ರೋಹಾತ್ಮಕ ಸಂಸ್ಥೆ ಎಂದು ಕರೆಯಿತು ಆ ವರ್ಷ ಕಾಂಗ್ರೆಸಿನ ಅಧಿವೇಶನವು ಅಲಹಾಬಾದಿನಲ್ಲಿ ಸೇರುವದಿತ್ತು, ಆದರೆ ಅಲ್ಲಿಯ ಗವ್ಹರ್ನರನು ವ್ಹೈಸ್‌ರಾಯನ ಬೆಂಬಲದಿಂದ, ಆ ಅಧಿವೇಶನವು ಅಲ್ಲಿ ಸೇರದಂತೆ ಅನೇಕ ತೊಂದರೆಗಳನ್ನು ತಂದೊಡ್ಡಿದನು ಅಧಿವೇಶನಕ್ಕಾಗಿ ಆರಿಸಿದ ಖುಸ್ರುಬಾಗದ ಉಪಯೋಗಕ್ಕೆ ಅಪ್ಪಣೆ ಸಿಗಲಿಲ್ಲ ಆನಂತರ ಆರಿಸಲಾದ ಒಂದು ಬೀಳುಜಾಗೆಗೆ ಆರೋಗ್ಯರಕ್ಷಣೆಯ ನೆವದಿಂದ ಒಪ್ಪಿಗೆ ಕೊಡಲಿಲ್ಲ ಕಡೆಗೆ ಗವ್ಹರ್ನರ್ ಸಾಹೇಬರ ಬಂಗ್ಲೆಯ ಹತ್ತಿರಿದ್ದ ಒರ್ವ ನವಾಬನ ಭವ್ಯವಾದ ಅರಮನೆಯನ್ನು—ಅಧಿಕಾರಿಗಳ ಕಣ್ಣು ತಪ್ಪಿಸಿ—ಬಾಡಿಗೆಗೆ ತೆಗೆದುಕೊಂಡು ಅಲ್ಲಿ ತಳಹಾಕಿದರು ಗವ್ಹರ್ನರನು ಕಿಡಿಕಿಡಿಯಾದನು ಹೀಗೆ ಈ ಮೊದಲು ಅಧಿವೇಶನಗಳಿಗೆ ತಮ್ಮ ತಂಬುಗಳನ್ನು ಕೊಟ್ಟು ಪ್ರತಿನಿಧಿಗಳನ್ನು ಚಹಾ-ಪಾನಕ್ಕೆ ಆಮಂತ್ರಿಸುತ್ತಿದ್ದ ಗವ್ಹರ್ನರರು ಅಂದಿನಿಂದ ಕಾಂಗ್ರೆಸಿನ ವೈರಿಗಳಾದರು

**೧೮೯೨ರ ರಾಜಕೀಯ ಸುಧಾರಣೆಗಳು** — ಕ್ರಿ ಶ ೧೮೯೨ರಲ್ಲಿ ಸರ-ಕಾರವು ಕೆಲವು ಸುಧಾರಣೆಗಳನ್ನು ಮಾಡಿತು ಇದರಿಂದ ಕೇಂದ್ರ ಮತ್ತು ಮುಂಬಯಿ-ಮದ್ರಾಸ, ಬಂಗಾಲ ಮತ್ತು ವಾಯುವ್ಯಪ್ರಾಂತಗಳ ಶಾಸನಸಭೆಗಳಲ್ಲಿ, ಕೆಲವು ಲೋಕನಿಯುಕ್ತ ಪ್ರತಿನಿಧಿಗಳಿಗೆ ಸ್ಥಾನವನ್ನು ಕೊಡ

ಲಾಯಿತು, ಆದರೆ ಅಧಿಕಾರಿಗಳ ಮತ್ತು ಸರಕಾರನಿಯುಕ್ತ ಸಭಾಸದರ ಬಹುಮತವು ಹಾಗೆಯೆ ಉಳಿಯಿತು ಸರಕಾರಿ ನೌಕರಿಯಲ್ಲಿ ವರ್ಣಭೇದ ವಿರತಕ್ಕದ್ದಲ್ಲವೆಂದು ೧೮೩೩ರ ಸುಧಾರಣಾ ಕಾಯದೆಯಲ್ಲಿ ಸ್ಪಷ್ಟವಿದ್ದರೂ, ಅದು ಬರಿಯ ಕಾಗದದಲ್ಲಿತ್ತು ೧೮೫೩ರಲ್ಲಿ ಆಯ್ ಸಿ ಎಸ್ ಸ್ಪರ್ಧಾ ಪರೀಕ್ಷೆ ಪ್ರಾರಂಭವಾಗಿತ್ತು, ಆದರೆ ಅದು ಇಂಗ್ಲಂಡಿನಲ್ಲಿಯೇ ನಡೆಯುತ್ತಿದ್ದುದರಿಂದ, ಇಲ್ಲಿಯ ತರುಣರಿಗೆ ದೂರವಾಗಿತ್ತು ಆದರೂ ಕೆಲವು ಸಾಹಸಿಗರು ಇಂಗ್ಲಿಷರೊಡನೆ ಇಂಗ್ಲಿಷ್ ಭಾಷೆಯಲ್ಲಿಯೇ ಸ್ಪರ್ಧೆಮಾಡಿ ಜಯವನ್ನು ಸಂಪಾದಿಸಿದರು ಇದನ್ನು ಕಂಡು ಬ್ರಿಟಿಶರು ಆಯ್ ಸಿ ಎಸ್ ಉಮೇದುವಾರರ ವಯೋಮಾನವನ್ನು ೨೪ರಿಂದ ೧೯ಕ್ಕೆ ಇಳಿಸಿ, ಭಾರತೀಯರಿಗೆ ಅದನ್ನು ಅಸಾಧ್ಯವಾಗಿ ಮಾಡಿದರು ಹತ್ತು ವರುಷ ಹಿಂದೀಯರು ಈ ಅನ್ಯಾಯದ ವಿರುದ್ಧ ಪ್ರತಿಭಟಿಸಿದ ಬಳಿಕ, ಅದನ್ನು ೨೩ಕ್ಕೆ ಏರಿಸಲಾಯಿತು ಹಿಂದುಸ್ತಾನದಲ್ಲಿಯೂ ಆಯ್ ಸಿ ಎಸ್ ಪರೀಕ್ಷೆ ನಡೆಯಬೇಕು—ಎಂಬುದಕ್ಕೆ ಮಾತ್ರ ಮನ್ನಣೆ ಸಿಗಲಿಲ್ಲ

ಸೈನ್ಯದಲ್ಲಿಯೂ ಅನ್ಯಾಯ ನಡೆದಿತ್ತು ಉಚ್ಚ ಅಧಿಕಾರಿಗಳೆಲ್ಲ ಬಿಳಿಯರು ಹಿಂದೀಯನು ಮೇಜರ್ ಹುದ್ದೆಗ ಕೂಡ ಏರುವದು ದುಸ್ತರವಾಗಿತ್ತು ಬಿಳಿಯರಿಗ ಕೈತುಂಬ ಪಗಾರ ಒಬ್ಬ ಬಿಳಿಯ ಸೈನಿಕನಿಗ ಸರಾಸರಿ ವರ್ಷಕ್ಕೆ ೭೭೫ ರೂ ವೆಚ್ಚವಾಗುತ್ತಿತ್ತು ಅದೇ ಇಂಗ್ಲಂಡಿನಲ್ಲಿ ಅಂತಹ ಸೈನಿಕನಿಗ ಕೇವಲ ೨೮೫ ರೂ, ಜರ್ಮನಿಯಲ್ಲಿ ೧೯೫ ರೂ ಫ್ರಾನ್ಸದಲ್ಲಿ ೧೮೫ ರೂ ಸಾಲುತ್ತಿದ್ದವು ‘ಈ ಭಾರವಾದ ವೆಚ್ಚದಿಂದ ಭಾರತದ ಬೊಕ್ಕಸ ಬರಿದಾಗುವದನ್ನು ನಿಲ್ಲಿಸಬೇಕು, ಭಾರತದಲ್ಲಿಯೇ ಸೈನಿಕಶಿಕ್ಷಣ ಕೊಡುವ ವಿದ್ಯಾಲಯಗಳನ್ನು ತೆರೆಯಬೇಕು, ಹಿಂದೀಯರಿಗ ಅನಿರ್ಬಂಧವಾಗಿ ಸೈನ್ಯಶಿಕ್ಷಣ ಕೊಡಬೇಕು’ ಎಂದು ಮುಂತಾಗಿ ಕಾಂಗ್ರೆಸು ೧೮೮೭ರಿಂದ ಕೇಳುತ್ತ ಬಂದಿದ್ದರೂ, ಆ ಮುಂದಾಳುಗಳ ಕೇಳಿಕಗಳೆಲ್ಲ ಕಸದ ಬುಟ್ಟಿಯನ್ನು ಕಾಣುತ್ತಿದ್ದವು

**ಚಳವಳಿಯ ಪ್ರಾರಂಭ**—ಇಷ್ಟಾದರೂ ಕಾಂಗ್ರೆಸಿಗರು ಆಶೆಯನ್ನು ಬಿಡಲಿಲ್ಲ ಬ್ರಿಟಿಶ ಆಡಳಿತದ ಬಗಗ ಪ್ರತಿ ಅಧಿವೇಶನದಲ್ಲಿ ನಿಷ್ಠುರವಾದ ಟೀಕಗಳನ್ನು ಮಾಡಿದರು ಕಾಂಗ್ರೆಸಿನ ಪರವಾಗಿ ಇಂಗ್ಲಂಡಿನಲ್ಲಿ ಪ್ರಕಟವಾಗುತ್ತಿದ್ದ “ಇಂಡಿಯ” ಪತ್ರಿಕೆಯಲ್ಲಿಯ ಲೇಖಗಳನ್ನು ಓದಿ, ಬ್ರಿಟಿಶರು ಸಿಡಿಮಿಡಿಗೊಂಡರು ಲಾರ್ಡ್ ಕರ್ಝನ್ನನ ಕಾಲದಲ್ಲಿ ಈ ಪರಿಸ್ಥಿತಿಯು ವಿಕೋಪಕ್ಕೆ ಹೋಯಿತು ಕರ್ಝನ್ನನು ಕೆಲವು ಲೋಕೋಪಯೋಗಿ ಸುಧಾರಣೆಗಳನ್ನು ಮಾಡಿದ್ದು ನಿಜ ಒಕ್ಕಲಿಗರ ಹಿತಕ್ಕಾಗಿ ಬರಗಾಲದಲ್ಲಿ

ಕಂದಾಯವನ್ನು ಅರ್ಧ ಇಲ್ಲವೆ ಪೂರ್ಣ ಸೂಟುಬಿಡುವದು, ರೈತರಿಗೆ ಅಲ್ಪ-ಬಡ್ಡಿಯಿಂದ ಸಹಾಯ ಸಿಗಲು ಸಹಕಾರಿ ಸಂಘಗಳ ಏರ್ಪಾಡು, ಬಿಹಾರದಲ್ಲಿ ಒಕ್ಕಲುತನದ ಸಂಶೋಧನ ಕೇಂದ್ರವನ್ನು ತೆರೆದುದು, ಉಪ್ಪು ಹಾಗೂ ಒಕ್ಕಲುತನದ ಹುಟ್ಟುವಳಿಗಳ ಮೇಲಿನ ತೆರಿಗೆಯನ್ನು ಕಡಿಮೆ ಮಾಡುವದು, ಶಿಲ್ಪಕಲಾ-ಪೂರ್ಣವಾದ ಪ್ರಾಚೀನ ಗುಡಿ-ಗೋಪುರಗಳ ರಕ್ಷಣೆ, ಶಿಲಾಶಾಸನ ಹಾಗೂ ತಾಡವಾಲೆಯ ಗ್ರಂಥಗಳ ಶೋಧಕ್ಕಾಗಿ ಉತ್ತೇಜನ, ವಿಶ್ವವಿದ್ಯಾಲಯಗಳಲ್ಲಿ ಸುಧಾರಣೆ—ಇವೇ ಮೊದಲಾದುವನ್ನು ಕೈಕೊಂಡನು. ಆದರೆ ಕರ್ಝನ್ನನು ಕಟುವಾದ ಸಾಮ್ರಾಜ್ಯವಾದಿ, ಬ್ರಿಟಿಶ ಸಾಮ್ರಾಜ್ಯವನ್ನು ಇನ್ನಿಷ್ಟು ಭದ್ರಪಡಿಸುವದೇ ಈತನ ಹೆಗ್ಗುರಿ. ಕಾಂಗ್ರೆಸಿನ ಮುನ್ನಡೆಯಲ್ಲಿ ಹೆಚ್ಚಾಗಿ ಬಂಗಾಲಿಗಳೇ ಪ್ರಮುಖಪಾತ್ರ ವಹಿಸುತ್ತಿದ್ದುದನ್ನು ಕಂಡಿದ್ದನು. ಅದಕ್ಕಾಗಿ ಬಂಗಾಲವನ್ನು ವಿಭಾಗಿಸಿ, ಮುಸಲ್ಮಾನರನ್ನು ತನ್ನ ಕಡೆಗೆ ಒಲಿಸಿಕೊಳ್ಳಲು ಹಂಚಿಕೆ ಹಾಕಿದನು. 'ಇನ್ನು ಪೂರ್ವ ಬಂಗಾಲವು ಒಂದು ಸ್ವತಂತ್ರ ಪ್ರಾಂತವಾದರೆ, ಅಲ್ಲಿಯ ಮುಸಲ್ಮಾನರು ಬಹುಸಂಖ್ಯಾಕರಾಗಿ ಅವರ ಪ್ರಗತಿಯಾಗುವದು' ಎಂದು ಮುಸಲ್ಮಾನರನ್ನು ಹುರಿದುಂಬಿಸಿ, ಬಂಗಾಲವನ್ನು ವಿಭಾಗಿಸಿದನು. ಇದನ್ನು ತಿಳಿದು ಬಂಗಾಲಿಗಳು ಸಿಟ್ಟಾದರು, ಆದರೆ ಕರ್ಝನ್ನನು ಇದನ್ನು ಲೆಕ್ಕಿಸದೆ, ೧೯೦೫ನೆಯ ಅಕ್ಟೋಬರ ೧೬ಕ್ಕೆ 'ವಂಗಭಂಗ'ದ (ಬಂಗಾಲದ ವಿಭಜನೆಯ) ಶಾಸನವನ್ನು ಬಳಕೆಯಲ್ಲಿ ತಂದನು.



ಲಾರ್ಡ್ ಕರ್ಝನ

ಇದಕ್ಕೆ ತೀವ್ರ ವಿರೋಧವಾಯಿತು. ಆ ದಿನ ಬಂಗಾಲಿಗಳು ಉಪವಾಸವನ್ನು ಆಚರಿಸಿದರು, ಅಂಗಡಿಗಳು ಮುಚ್ಚಿದುವು, ವಿದ್ಯಾರ್ಥಿಗಳು ಶಾಲೆ-ಕಾಲೇಜುಗಳಿಗೆ ಹೋಗಲಿಲ್ಲ. ಅಲ್ಲಲ್ಲಿ ದಂಗೆಗಳ ಲಕ್ಷಣಗಳು ತೋರಿದುವು. ಸರಕಾರವು ದಬ್ಬಾಳಿಕೆಯನ್ನು ಪ್ರಾರಂಭಿಸಿ ಮುಖಂಡರನ್ನು ಸೆರೆಹಿಡಿಯಿತು, ಆದರೂ ಬಂಗಾಲಿಗಳು ಹೆದರಲಿಲ್ಲ. ಸುರೇಂದ್ರನಾಥ ಬ್ಯಾನರ್ಜಿಯವರು ನವ್ಹಂಬರ್ ೧ನೆಯ ದಿನಾಂಕ ಕಲಕತ್ತೆಯಲ್ಲಿ ಪ್ರಚಂಡ ಸಭೆಯನ್ನು ಕೂಡಿಸಿ ಬಂಗಾಲದ ಐಕ್ಯವನ್ನು ಸಾಧಿಸಲು ಜನರಿಂದ ಪ್ರತಿಜ್ಞೆ ಮಾಡಿಸಿದರು. ಇವರ ಪರಿಣಾಮವಾಗಿ 'ಸ್ವದೇಶೀ ವ್ರತ' 'ವಿದೇಶೀ ವಸ್ತುಗಳ ಬಹಿಷ್ಕಾರ'ಗಳು

ಪ್ರಚುರಗೊಂಡುವು "ವಂದೇ ಮಾತರಂ" ಗೀತಯು ರಾಷ್ಟ್ರಗೀತೆಯಾಯಿತು ನಾಮದಾರ ಗೋಖಲೆಯವರಂತಹ ಶಾಂತಮೂರ್ತಿಗಳು ಕೂಡ "ಈ ತರದ ರಾಜ್ಯದಾಡಳಿತವನ್ನು ನಮ್ಮ ದೇಶದಲ್ಲಿಯೇ ಕಾಣಬೇಕೆಂದರೆ ನಾವು ಔರಂಗಜೇಬನ ಕಾಲಕ್ಕೇ ಹೋಗಬೇಕು ಅದೇ ಅಹಂಭಾವ, ಅದೇ ದುರುದ್ದೇಶ, ಅದೇ ನಿರಂಕುಶಪ್ರಭುತ್ವ, ಅದೇ ಅವಿಶ್ವಾಸ, ಅದೇ ಅತ್ಯಾಚಾರ " ಎಂದು ಬಲವಾಗಿ ಟೀಕಿಸಿದರು ೧೯೦೬ರ ಕಾಂಗ್ರೆಸಿನ ಅಧಿವೇಶನದ ಅಧ್ಯಕ್ಷಸ್ಥಾನದಿಂದ ದಾದಾಭಾಯಿ ನವರೋಜಿಯವರು ಸ್ವರಾಜ್ಯಸಾಧನೆಯ ಕಹಳೆಯನ್ನು ಊದಿದರು ಆದರೆ ಕರ್ಝನ್‌ಶಾಹಿಯ ದಬ್ಬಾಳಿಕೆ ಇನ್ನೂ ಹೆಚ್ಚಾಯಿತು ಅದರಿಂದ ಈ ಚಳವಳಿಯು ಭುಗಿಲೆಂದು ಇಡಿಯ ಭರತಖಂಡವನ್ನೇ ವ್ಯಾಪಿಸಿತು ಬಂಗಾಲ, ಪಂಜಾಬ, ಮದ್ರಾಸ, ಮುಂಬಯಿ ಪ್ರಾಂತಗಳಲ್ಲಿ, ರಾಜದ್ರೋಹಾತ್ಮಕ ಚಟುವಟಿಕೆಗಳು ನಡೆದುವು ಕೊನೆಗೆ ೧೯೧೧ರಲ್ಲಿ ಐದನೆಯ ಜಾರ್ಜ್ ಅರಸನ ಪಟ್ಟಾಭಿಷೇಕದ ಸಮಯದಲ್ಲಿ ಬಂಗಾಲವು ಮತ್ತೆ ಒಂದಾಯಿತು ಹೀಗೆ ರಾಷ್ಟ್ರೀಯ ಚಳವಳಿಯು ಮೊತ್ತಮೊದಲನೆಯ ಸಲ ಭಾರತೀಯರಿಗ ವಿಜಯವನ್ನು ಸಂಪಾದಿಸಿ ಕೊಟ್ಟಿತು

## ಅಭ್ಯಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತ ಉತ್ತರ ಹೇಳಿರಿ

(ಅ) ರಾಷ್ಟ್ರೀಯ ಕಾಂಗ್ರೆಸು ಯಾಕ ಹುಟ್ಟಿತು?

(ಆ) ಅದು ಯಾವ ಇಸವಿಯಲ್ಲಿ ಸ್ಥಾಪಿತವಾಯಿತು?

(ಇ) ಅದನ್ನು ಸ್ಥಾಪಿಸಲು ಕಾರಣರಾದ ಮೂವರು ಮುಖ್ಯ ವ್ಯಕ್ತಿಗಳ ಹೆಸರುಗಳನ್ನು ಹೇಳಿರಿ

(ಈ) ಕಾಂಗ್ರೆಸು ಮೊದ-ಮೊದಲು ಯಾವ ಬೇಡಿಕಗಳನ್ನು ಸರಕಾರದ ಮುಂದ ಇಟ್ಟಿತು?

(ಉ) ೧೮೯೨ರ ಸುಧಾರಣೆಗಳಿಂದ ಯಾವ ಬದಲಾವಣೆಯಾಯಿತು?

೨ ಕಳಗೆ ಕೂಟ್ಟವುಗಳ ಒಗೆಗ ಟಿಪ್ಪಣಿಗಳನ್ನು ಬರೆಯಿರಿ

(ಅ) ಕಾಂಗ್ರಸಿನ ಮೊದಲನಯ ಅಧಿವೇಶನದಲ್ಲಿ ಗೊತ್ತಾದ ನಿರ್ಣಯಗಳು

(ಆ) ನೌಕರಿಗಳಲ್ಲಿ ಹಿಂದೀಯರಿಗಾದ ಅನ್ಯಾಯ

(ಇ) ವಂಗಭಂಗ

(ಈ) ಕರ್ಝನ್ನನ ಸುಧಾರಣೆಗಳು

---

# ೧೬ ಕಾಂಗ್ರೆಸಿನ ಮುನ್ನಡೆ

**ಉಗ್ರವಾದಿ ಪಕ್ಷ** — ಸಂಗಭಂಗ ಚಳವಳಿಯಿಂದ ಭಾರತದ ರಾಜಕೀಯ ರಂಗದ ಮೇಲೆ ವಿಶೇಷ ಪರಿಣಾಮವಾಯಿತು. ಮಹಾರಾಷ್ಟ್ರದ ಧುರೀಣರೂ ಲೋಕಮಾನ್ಯ ತಿಲಕರ ನೇತೃತ್ವದಲ್ಲಿ ಉಗ್ರವಾದಿ ತರುಣರ ಪಕ್ಷವೊಂದು ನಿರ್ಮಾಣವಾಯಿತು. ತಿಲಕರ ಪ್ರಭಾವಶಾಲಿಯಾದ ವ್ಯಕ್ತಿತ್ವವೂ ಅವರ




“ಕೇಸರಿ” ವೃತ್ತಪತ್ರದಲ್ಲಿಯ ಲೇಖನಗಳೂ ಯುವಕರ ಮನಸ್ಸನ್ನು ಸೆಳೆದಿದ್ದವು. ೧೯೦೭ರಲ್ಲಿ ಸುರತದಲ್ಲಿ ಸೇರಿದ ಕಾಂಗ್ರೆಸಿನ ಅಧಿವೇಶನದಲ್ಲಿ ಉಗ್ರವಾದಿಗಳಿಗೂ ಸೌಮ್ಯವಾದಿಗಳಿಗೂ ತೀವ್ರ ತಿಕ್ಕಾಟ ನಡೆಯಿತು. ಸೌಮ್ಯವಾದಿಗಳು ಅಧಿಕಾರಿಗಳ ಕೃಪಾಛತ್ರವನ್ನು ಬಯಸಿ, ೧೯೦೮ರಲ್ಲಿ ಅಲಹಾಬಾದಿನಲ್ಲಿ ವಿಶೇಷ ಅಧಿವೇಶನವನ್ನು ನಡೆಸಿ, ಕಾಂಗ್ರೆಸಿನ ಘಟನೆಯನ್ನು ಸಡಿಲಿಸಿದರು, ಅದೇ ವರ್ಷ ಡಿಸೆಂಬರಿನಲ್ಲಿ ಮದ್ರಾಸದಲ್ಲಿ ಸೇರಿದ್ದ ಅಧಿವೇಶನದಲ್ಲಿ

ಸರಕಾರದ ಆಡಳಿತವನ್ನು ಕೊಂಡಾಡಿದರು ಇದರ ಪರಿಣಾಮವಾಗಿ ಭಾರತಮಂತ್ರಿ ಮೋರ್ಲೆ ಸಾಹೇಬರು, ಸತ್ಯೇಂದ್ರಸಿಂಹರನ್ನು ಗವ್ನರ್ನರ ಜನರಲರ ಕಾರ್ಯಕಾರಿ ಮಂಡಲದಲ್ಲಿ ನಿಯಮಿಸಿದರು ಮುಂಬಯಿ ಮತ್ತು ಮದ್ರಾಸ ಪ್ರಾಂತಗಳ ಗವ್ಹರ್ನರರ ಕಾರ್ಯಕಾರಿ ಮಂಡಲದಲ್ಲಿ ಹಿಂದೀಯರಿಗೆ ಒಂದೊಂದು ಸ್ಥಾನ ಸಿಕ್ಕಿತು ಇತ್ತ ಉಗ್ರವಾದಿಗಳ ಮೇಲೆ ಸರಕಾರವು ಉಗ್ರಕ್ರಮವನ್ನು ಕೈಕೊಂಡು, ೧೯೦೮ರಲ್ಲಿ ಲೋಕಮಾನ್ಯ ತಿಲಕರನ್ನು ರಾಜದ್ರೋಹದ ಆರೋಪದ ಮೇಲೆ ಆರು ವರುಷದ ಕಠಿಣಶಿಕ್ಷೆ ವಿಧಿಸಿ ಗಡಿಪಾರುಮಾಡಿದರು ಮುಂದೆ, ೧೯೧೪ರಲ್ಲಿ ತಿಲಕರ ಬಿಡುಗಡೆ ಆಯಿತು ೧೯೧೫ರಲ್ಲಿ, ಸೌಮ್ಯವಾದಿಗಳ ಮುಖಂಡರಾದ ಗೋಪಾಲ ಕೃಷ್ಣ ಗೋಖಲೆ ಯವರು ಹಾಗು ಸರ್ ಫಿರೋಜಶಹಾ ಮೆಹತಾ ಅವರು ದಿವಂಗತರಾದರು ತಿಲಕರು ರಾಜಕೀಯ ರಂಗವನ್ನು ಪುನಃ ಪ್ರವೇಶಿಸಿ, "ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು, ಅದನ್ನು ಪಡೆದೇ ತೀರುವೆ" ಎಂದು ಪಣತೊಟ್ಟರು

**ಹೋಮರೂಲ್ ಲೀಗ್** — ಇತ್ತ, ಮದ್ರಾಸದಲ್ಲಿ ಆಂಗ್ಲ ಮಹಿಳ ಆ್ಯನಿ ಬೆಝುಂಟಳು ಹೋಮರೂಲ್ ಲೀಗಿನ ಪರವಾಗಿ ಪ್ರಚಂಡಚಳವಳಿಯನ್ನು ಹೂಡಿದಳು ಅವಳ ವಾಗ್ವೈಖರಿ, ಬರೆಹ ಹಾಗೂ ಸಂಘಟನಾಶಕ್ತಿಯ ಬಲದಿಂದ (೧೯೧೫-೧೯೧೭ರಲ್ಲಿ) ಹೋಮರೂಲು ಹಿಂದೀಯ ಕಾಂಗ್ರೆಸಿಗರ ಧ್ಯೇಯವಾಯಿತು ೧೯೧೬ರಲ್ಲಿ ಲಖನೌದಲ್ಲಿ ಕಾಂಗ್ರೆಸಿನ ಅಧಿವೇಶನವು ಸೇರಿತು ಆಗ ಲೋಕಮಾನ್ಯ ತಿಲಕರೂ ಪುನಃ ಕಾಂಗ್ರೆಸನ್ನು ಕೂಡಿಕೊಂಡರು ಉಗ್ರವಾದಿಗಳ ಮತ್ತು ಸೌಮ್ಯವಾದಿಗಳಲ್ಲಿ ಒಪ್ಪಂದವಾಯಿತು ಎಲ್ಲರೂ ಹೋಮರೂಲ್ ಚಳವಳಿಯನ್ನು ಆಸ್ಥೆಯಿಂದ ಮುಂದ ಸಾಗಿಸಿದರು ಈ ಆಂದೋಲನವು ಭರತ ಖಂಡದಲ್ಲೆಲ್ಲ ವ್ಯಾಪಿಸಿತು ಬ್ರಿಟಿ



ಆ್ಯನಿ ಬಝುಂಟಳು

ಸರಕಾರವು ೧೯೧೭ರಲ್ಲಿ ಆ್ಯನಿ ಬೆಝುಂಟರನ್ನು ಉದಕಮಂಡಲದಲ್ಲಿ ಸ್ಥಾ ಬದ್ಧತೆಯಲ್ಲಿ ಇಟ್ಟಿತು, ಆದರೆ ಈ ಚಳವಳಿಯ ಪರಿಣಾಮವಾಗಿ ಭಾರ ಮಂತ್ರಿಗಳ ಮೇಲೆ, ಇಲ್ಲಿಯ ಆಡಳಿತದ ಬಗೆಗ ಬ್ರಿಟಿಶ ಪಾರ್ಲಮೆಂಟಿನ ಕಠೋರವಾದ ಟೀಕೆಯಾಯಿತು ಮಾಂಟೆಗ್ಯೂ ಅವರು ತದನಂತರ ಭಾರ

ಮಂತ್ರಿಗಳಾದರು. ೧೯೧೭ರಲ್ಲಿ ಅವರು ಅಧಿಕಾರವನ್ನು ಸ್ವೀಕರಿಸಿದ ಕೂಡಲೆ, 'ಹಿಂದುಸ್ಥಾನದಲ್ಲಿ ಕ್ರಮಶಃ ಹೊಣೆಗಾರ ಸರಕಾರ ಸ್ಥಾಪಿಸುವದೇ ತಮ್ಮ ಗುರಿ' ಎಂದು ಘೋಷಣೆ ಹೊರಡಿಸಿದರು. ಬಳಿಕ ಭಾರತದಲ್ಲಿ ಸಂಚರಿಸಿ, ಮುಂಬರುವ ಸುಧಾರಣೆಗಳ ಸುಂದರ ಕಲ್ಪನಾಚಿತ್ರವನ್ನು ಜನರ ಮುಂದೆ ಇಟ್ಟರು.

**ಮುಸ್ಲಿಂ ಲೀಗ್** – ಇತ್ತ ಕಾಂಗ್ರೆಸಿನ ಪ್ರಭಾವವು ದಿನೇ ದಿನೇ ಬೆಳೆಯುತ್ತಿರುವಾಗ, ಮುಸಲ್ಮಾನರು ಅದರಲ್ಲಿ ಸಾಕಷ್ಟು ಆಸ್ಥೆಯಿಂದ ಭಾಗವಹಿಸಲಿಲ್ಲ. ೧೮೯೦ರ ಕಾಂಗ್ರೆಸಿನ ಅಧಿವೇಶನದಲ್ಲಿ ೧೫೬ ಮುಸಲ್ಮಾನರು ಹಾಜರಿದ್ದರೂ, ಬನಾರಸದಲ್ಲಿ ಸೇರಿದ ೧೯೦೫ರ ಕಾಂಗ್ರೆಸಿನ ಅಧಿವೇಶನದಲ್ಲಿ ಕೇವಲ ೧೭ ಜನ ಮುಸಲ್ಮಾನರು ಬಂದಿದ್ದರು. ಶಿಕ್ಷಣದಲ್ಲಿ ಅವರು ಹಿಂದುಳಿದಿದ್ದುದರಿಂದಲೂ, ಜನಸಂಖ್ಯೆಯಲ್ಲಿ ಅವರು ಅಲ್ಪಸಂಖ್ಯಾಕರಾದ್ದರಿಂದಲೂ ಈ ರಾಷ್ಟ್ರೀಯ ಚಳವಳಿಯಲ್ಲಿ ಅಷ್ಟು ಹೆಚ್ಚಾಗಿ ಆಸ್ಥೆಯಿಂದ ಭಾಗವಹಿಸಲಿಲ್ಲ. ಸರ ಸಯ್ಯದ ಅಹಮ್ಮದಖಾನರಂತಹರೂ ಅನಾಸ್ಥೆ ಹಾಗೂ ಪ್ರತ್ಯೇಕತೆಯ ಧೋರಣೆಯನ್ನು ಅನುಸರಿಸಿದರು. ಇದರ ಲಾಭವನ್ನೇ ಬ್ರಿಟಿಶ ಸರಕಾರದವರು ಪಡೆದು 'ಒಡೆದು ಒಡೆತನ ನಡೆಸು" ಎಂಬ ತತ್ತ್ವವನ್ನು ಪ್ರಾರಂಭಿಸಿದರು. ಆಗಾಖಾನರ ನೇತೃತ್ವದಲ್ಲಿ ಮುಸಲ್ಮಾನ ಮುಂದಾಳುಗಳು, ಲಾರ್ಡ ಮಿಂಟೋನ ಕಡೆಗೆ ಮನವಿಯನ್ನು ಅರ್ಪಿಸಿದಾಗ, ಅವನು ಅವರಿಗೆ "ಪ್ರತ್ಯೇಕ ಮತದಾರ ಸಂಘ"ವನ್ನು ದಯಪಾಲಿಸಲು ವಚನವಿತ್ತನು. ಲಾರ್ಡ ಮೋರ್ಲೆಯು ಹಿಂದು-ಮುಸಲ್ಮಾನರ ನಡುವಿನ ಅಂತರವನ್ನು ಬದರುಗೊಂಬೆ ಮಾಡಿದನು, ಮುಸಲ್ಮಾನರ ಸಂಸ್ಕೃತಿ, ಪರಂಪರೆ, ಸಾಮಾಜಿಕ ರೀತಿ-ನೀತಿಗಳು ಹಿಂದುಗಳಿಂದ ಬೇರೆಯೇ ಆಗಿವೆಯೆಂದು ಭೇದದ ವಿಷಬೀಜವನ್ನು ಬಿತ್ತಿದನು. ೧೯೦೬ರಲ್ಲಿ ಮುಸ್ಲಿಂಲೀಗಿನ ಸ್ಥಾಪನೆಯಾಯಿತು. ಮುಸಲ್ಮಾನರ ಹಕ್ಕು-ಬಾಧ್ಯತೆಗಳ ರಕ್ಷಣೆ ಹಾಗೂ ಸರಕಾರಕ್ಕೆ ವಿಧೇಯರಾಗಿ ಉಳಿದು ಅವರಿಂದ ಕೆಲವು ವಿಶೇಷ ಸವಲತ್ತುಗಳನ್ನು ಪಡೆಯುವದು—ಇದು ಮುಸ್ಲಿಂ ಲೀಗಿನ ಕೆಲಸವಾಯಿತು. ಹೀಗಾಗಿ ೧೯೦೬ರಿಂದ ಭಾರತದ ರಾಜಕೀಯರಂಗದಲ್ಲಿ ಮುಸ್ಲಿಂಲೀಗ, ಉಗ್ರವಾದಿಪಕ್ಷ, ಸೌಮ್ಯವಾದಿಪಕ್ಷ ಹೀಗೆ ಮೂರು ಪಕ್ಷಗಳು ತಲದೋರಿದವು. ಆದರೆ ಸುದೈವದಿಂದ ೧೯೧೬ರ ಲಖನೌ ಕಾಂಗ್ರೆಸಿನ ಅಧಿವೇಶನದಲ್ಲಿ ಮೂರೂ ಪಕ್ಷಗಳಲ್ಲಿ ಒಪ್ಪಂದವಾಗಿ ಏಕಸೂತ್ರವಾದ ರಾಷ್ಟ್ರೀಯ ಚಳವಳಿ ಹಬ್ಬಿತು.

**ಪ್ರೆಸ್ ಆ್ಯಕ್ಟ**— ವಂಗಭಂಗ ಚಳವಳಿಯಿಂದ ಜನ್ಮವೆತ್ತಿದ ತಿಲಕರ ಉಗ್ರಪಕ್ಷಕ್ಕೆ ೧೯೦೭ರ ಕಾಂಗ್ರೆಸಿನಲ್ಲಿ ಬಹುಮತ ದೊರೆಯಿತು. ಇದ

ರಿಂದ ವ್ಹಾಯಿಸ್‌ರಾಯನಾದ ಲಾರ್ಡ್ ಮಿಂಟೋ ಮತ್ತಿಷ್ಟು ಹಟಕ್ಕೆ ಬಿದ್ದನು ೧೯೧೦ರಲ್ಲಿ ಪ್ರೆಸ್ ಆ್ಯಕ್ಟ್ ಮಾಡಿ, ಮುದ್ರಣ ಮತ್ತು ಭಾಷಣಗಳಲ್ಲಿ ರಾಜದ್ರೋಹಾತ್ಮಕ ವಿಷಯಗಳಿರದಂತೆ ಕಟ್ಟಳೆಯನ್ನು ಮಾಡಿದನು

**ಮೋರ್ಲೆ-ಮಿಂಟೋ ಸುಧಾರಣೆ** — ಆಗ, ಎಚ್ಚೆತ್ತ ಭಾರತೀಯರು ಈ ಬೆದರಿಕೆಗೆ ಬೊಗ್ಗುವಂತಿರಲಿಲ್ಲ ಆದ್ದರಿಂದ ಕಡೆಗೆ ಬ್ರಿಟಿಶರೇ ತಲೆಯನ್ನು ತಗ್ಗಿಸಬೇಕಾಗಿ ಬಂತು ಮೋರ್ಲೆ-ಮಿಂಟೋ ಸುಧಾರಣೆಗಳು ಬಯಲಿಗೆ ಬಂದವು (೧೯೦೯) ಇದರಿಂದ ಶಾಸನ-ಸಭಾಸದಸ್ಯರ ಸಂಖ್ಯೆಯನ್ನು ವಿಸ್ತರಿಸುವ ಮತ್ತು ಸದಸ್ಯರು ಸೂಚನಗಳನ್ನು ಮಂಡಿಸುವ, ಪ್ರಶ್ನೋತ್ತರಗಳನ್ನು ಮಾಡುವ ಕೆಲವು ಅನುಕೂಲತೆಗಳುಂಟಾದವು, ಮತ್ತು ವ್ಹಾಯಿಸ್‌ರಾಯನ ಹಾಗೂ ಗವರ್ನರರ ಕಾರ್ಯಕಾರಿಮಂಡಲಗಳಲ್ಲಿ ಒಬ್ಬೊಬ್ಬ ಹಿಂದೀ ಸದಸ್ಯನಿರಬೇಕೆಂದು ಮತ್ತು ಭಾರತಮಂತ್ರಿಯ ಸಲಹೆಗಾರರೆಂದು ಇಬ್ಬರು ಹಿಂದೀ ಸದಸ್ಯರಿರಬೇಕೆಂದು ಗೊತ್ತಾಯಿತು



ಲಾರ್ಡ್ ಮಿಂಟೋ

**ಪ್ರತ್ಯೇಕ ಮತದಾರಸಂಘ** — ಈ ಹೊಸ ಕಾಯದೆಯಿಂದ ಮುಸಲ್ಮಾನರು, ಶೀಖರು, ಜಮೀನುದಾರರು ಮುಂತಾದವರನ್ನು ವಿಂಗಡಿಸಿ, ಅಲ್ಪಸಂಖ್ಯಾಕರೆಂದೆಣಿಸಿ, ಅವರಿಗಾಗಿ ಪ್ರತ್ಯೇಕ ಮತದಾರಸಂಘಗಳನ್ನು ನಿರ್ಮಿಯಿಸಲಾಯಿತು ಜಾತಿವಾರ ಪ್ರಾತಿನಿಧ್ಯದ ವಿಷಬೀಜವನ್ನು ಈ ರೀತಿ ಬಿತ್ತಿದರು ಇಲ್ಲಿಂದಲೇ ಜಾತೀಯ ದಂಗ-ಕೊಲಗಳಿಗೆ ಆರಂಭವಾಯಿತು! ನೌಕರಿಯ ಮೇಲಾಟಗಳು ನಡೆಯತೊಡಗಿದವು! ಬ್ರಿಟಿಶ ರಾಜ್ಯದ ಬುಡವು ಮತ್ತಿಷ್ಟು ಭದ್ರವಾಯಿತು "ಒಡೆ ಮತ್ತು ಒಡೆತನಮಾಡು" ಎಂಬ ತತ್ತ್ವ ಎಲ್ಲ ಕಡೆಗೂ ಯಶಸ್ವಿಯಾಯಿತು ಆದುದರಿಂದ, ಈ ಸುಧಾರಣೆಯಲ್ಲಿ ಭಾರತೀಯರ ಬೇಡಿಕೆಗೆ ನಿಚ್ಚಳವಾದ ಪೂರಯಿಕೆಯಿರಲಿಲ್ಲ ಕಾಂಗ್ರಸಿನ ಕಾರ್ಯಕಲಾಪಗಳು ಹಾಗೆಯೇ ಮುಂದುವರಿದವು ಇಷ್ಟರಲ್ಲಿ ಏಳನೆಯ ಎಡ್ವರ್ಡರ ಮರಣವಾಯಿತು, ಮಿಂಟೋನ ಆಳಿಕೆಯೂ ಮುಗಿಯಿತು ಮುಂದೆ ಲಾರ್ಡ್ ಹಾರ್ಡಿಂಜನು ವ್ಹಾಯಿಸ್‌ರಾಯನಾಗಿ ಬಂದನು.

**ಲಾರ್ಡ್ ಹಾರ್ಡಿಂಜ್** —(೧೯೧೦—೧೯೧೬) ಭಾರತದ ಪ್ರಕ್ಷುಬ್ಧ

ಸ್ಥಳವೇ ಇರಲಿಲ್ಲ ಇದನ್ನು ಪುನರುಜ್ಜೀವನಗೊಳಿಸದೆ ಭಾರತೀಯರ ಉದ್ಧಾರವಾಗಲಾರದೆಂಬುದು ಮಾಲವೀಯರ ಮತ ಈ ತತ್ತ್ವವನ್ನನು ಸರಿಸಿ ಪೌರ್ವಾತ್ಯ ಪಾಶ್ಚಿಮಾತ್ಯ ಶಿಕ್ಷಣ-ಸಂಸ್ಕೃತಿಗಳ ಸಂಗಮವಾಗುವಂತೆ ಬನಾರಸ ವಿದ್ಯಾಪೀಠವನ್ನು ಸ್ಥಾಪಿಸಿದರು, ಇದಕ್ಕಾಗಿ ಮಾಲವೀಯರು ಸ್ವಂತದ ಸಂಪತ್ತನ್ನು ಸೂರೆಮಾಡಿದುದಲ್ಲದೆ, ಸಂಸ್ಥಾನಿಕರಿಂದಲೂ ಸರ ಕಾರದಿಂದಲೂ ಹೇರಳ ಹಣವನ್ನು ಕೂಡಿಸಿದರು ಸಂಸ್ಥೆಗೆ ಸುಂದರರೂಪ ವನ್ನು ಕೊಟ್ಟರು ಆ ಶ್ರೇಷ್ಠಸಂಸ್ಥೆಯು ಇದು ವರೆಗೂ ಯಶಸ್ವಿಯಾಗಿ ನಾಗುತ್ತಿದೆ

ಕಾಂಗ್ರೆಸಿನ ಮುನ್ನಡೆಯಲ್ಲಿ ಉಗ್ರವಾದಿಪಕ್ಷದ ಮುಖಂಡರಾದ ಟಿಳಕರ ಹಾಗೂ ಸೌಮ್ಯವಾದಿಪಕ್ಷದ ಮುಖಂಡರಾದ ಗೋಖಲೆ ಇವರ ಚರಿತ್ರೆಗಳನ್ನು ತಿಳಿದುಕೊಳ್ಳುವದೂ ಅವಶ್ಯ

## ಲೋ ಟಿಳಕರು

**ಜನನ** — ಲೋಕಮಾನ್ಯ ಟಿಳಕರ ಹೆಸರು ಬಳವಂತರಾಯರೆಂದು ಇವರು ೧೮೫೬ರಲ್ಲಿ ರತ್ನಾಗಿರಿಯೊಳಗಿನ ಚಿತ್‌ಪಾವನ ಬ್ರಾಹ್ಮಣರ ಮನೆತನದಲ್ಲಿ ಹುಟ್ಟಿದರು



ಲೋಕಮಾನ್ಯ ಟಿಳಕರು

**ಶಿಕ್ಷಣ** — ಇವರ ತಂದ ಗಂಗಾಧರಪಂತರು ದೊಡ್ಡ ವಿದ್ವಾಂಸರು ಅವರು ಮಗನಿಗೆ ಸಂಸ್ಕೃತ-ಗಣಿತ ವಿಷಯಗಳನ್ನು ಮನೆ-ಯಲ್ಲಿಯೆ ಚೆನ್ನಾಗಿ ಕಲಿಸಿದರು ಮುಂದೆ ಸಾಲೆಗೆ ಕಳುಹಿದರು ಇವರು ೧೮೭೨ರಲ್ಲಿ ಮ್ಯಾಟ್ರಿಕ್ ಪಾಸಾಗಿ, ಡೆಕ್ಕನ್ ಕಾಲೇಜನ್ನು ಸೇರಿದರು ೧೮೭೬ರಲ್ಲಿ ಬಿ ಎ ಪದವಿಯನ್ನೂ ೧೮೭೯ರಲ್ಲಿ ಎಲ್‌ಎಲ್ ಬಿ ಪದವಿಯನ್ನೂ ಪಡೆದರು

**ಕೈಕೊಂಡ ಕಾರ್ಯಗಳು** — ಬಳವಂತರಾಯರಲ್ಲಿ ರಾಷ್ಟ್ರೀಯವೃತ್ತಿ ಸ್ವಾರ್ಥತ್ಯಾಗ, ಸ್ವಾಭಿ-ಮಾನ, ನಿರ್ಭಯವೃತ್ತಿ ಮುಂತಾದ ಸದ್ಗುಣಗಳೆಲ್ಲ ಒಂದುಗೂಡಿ ಮೂರ್ತಿ-ವತ್ತಂತಾಗಿತ್ತು. ಅವರಿಗೆ ತಕ್ಕ ಬುದ್ಧಿವಂತ ಗೆಳೆಯರೂ ಜೊತೆಗೂಡಿದ್ದರು ಅದರಿಂದ ಸಮಾಜಸೇವೆಯನ್ನೇ ಹೆಗ್ಗುರಿಯಾಗಿಟ್ಟುಕೊಂಡು, ಶ್ರೀ ಆಗರಕರ ಮತ್ತು ಟಿಳಕರು ಕೂಡಿ 'ಕೇಸರೀ' 'ಮರಾಠಾ' ಪತ್ರಿಕಗಳನ್ನು ಹೊರಡಿಸಿ

ದರು. ಒಮ್ಮೆ ಅವರಿಲ್ಲಿಯ ಉಗ್ರವಿಮರ್ಶೆಗಾಗಿ ಇಬ್ಬರೂ ಸೆರೆಮನೆಯನ್ನು ಸೇರಿದರು. ಬಿಡುಗಡೆಯಾದ ದಿನ ಸಾರ್ವಜನಿಕರ ಪ್ರಚಂಡ ಸಮೂಹವು ಅವರನ್ನು ಸಂತೋಷದಿಂದ ಸ್ವಾಗತಿಸಿತು.

**ಶಿಕ್ಷಣಸಂಸ್ಥೆ** — ಆ ಕಾಲದಲ್ಲಿದ್ದ ಪಾಠಶಾಲೆಗಳಲ್ಲಿ ಭಾರತೀಯರಿಗೆ ಸರಿಯಾದ ಶಿಕ್ಷಣ ಸಿಕ್ಕುತ್ತಿರಲಿಲ್ಲ. ಆದುದರಿಂದ ಟಿಳಕ, ಆಗರಕರ ಮೊದಲಾದವರು ಕೂಡಿ 'ನ್ಯೂ ಇಂಗ್ಲಿಷ ಸ್ಕೂಲ್' ಎಂಬ ಸಂಸ್ಥೆಯನ್ನು ಆರಂಭಿಸಿದರು (೧೮೮೦). ಅದರ ವ್ಯವಸ್ಥೆಗಾಗಿ 'ಡೆಕ್ಕನ ಎಜ್ಯುಕೇಶನ ಸೊಸಾಯಟಿ' ಆರಂಭವಾಯಿತು. ಅಲ್ಲಿ ಟಿಳಕರು ಸ್ವತಃ ಶಿಕ್ಷಣಕಾರ್ಯವನ್ನು ಕೈಕೊಂಡಿದ್ದರು. ಮುಂದೆ ಇದೇ ಸೊಸಾಯಟಿಯವರು 'ಫರ್ಗ್ಯುಸನ ಕಾಲೇಜ'ನ್ನು ಪ್ರಾರಂಭಿಸಿದರು.

**ಉಗ್ರವಾದಿಗಳು** — ಲೋ. ಟಿಳಕರಿಗೆ ಸಮಾಜವನ್ನು ಸುಧಾರಿಸಬೇಕೆಂಬ ವಿಚಾರವಿದ್ದಿತು. ಆದರೆ ಅದಕ್ಕಿಂತ ಮುಖ್ಯವಾದುದು ರಾಜಕೀಯ ಸ್ವಾತಂತ್ರ್ಯ ಎಂದು ಅವರ ಮತ. ಹೀಗಾಗಿ ಅವರು ಸಮಾಜಹಿತಕ್ಕಾಗಿ ಮತ್ತು ಸ್ವಾತಂತ್ರ್ಯಕ್ಕಾಗಿ ಆತುರರಿದ್ದರು. 'ಸ್ವಾತಂತ್ರ್ಯವು ಜನ್ಮಸಿದ್ಧ ಹಕ್ಕು. ಅದನ್ನು ಭಿಕ್ಷೆಬೇಡಬಾರದು' ಎಂದು ಸಾರುತ್ತ, ಇವರು ಕಾಂಗ್ರೆಸಿನಲ್ಲಿ ಉಗ್ರವಾದಿಗಳಾದರು. ೧೮೯೭ರಲ್ಲಿ ಇವರು ಜನರಿಂದ ಪ್ರತಿನಿಧಿಯಾಗಿ ಆರಿಸಲ್ಪಟ್ಟಾಗ, ಅಲ್ಲಿಯೂ ಹಾಗೆಯೆ ಉಗ್ರವಾದಿಗಳಿದ್ದರು. ಧೈರ್ಯ ಮತ್ತು ವಿಚಾರದ ಪ್ರಾಮಾಣಿಕತೆಗಾಗಿ ಸರಕಾರಕ್ಕೆ ಸಿಗದ ವಿರೋಧಿಗಳಾಗಿದ್ದರು. ೧೯೦೫ರ ವಂಗಭಂಗದಿಂದ ಇವರ ಉಗ್ರವಾದ ಪಕ್ಷ ಹುಟ್ಟಿಕೊಂಡು ತೀವ್ರವಾಯಿತು.

**ಮಂಡಾಲೆಯ ತುರಂಗದಲ್ಲಿ** — ಕೇಸರಿಯಲ್ಲಿ ರಾಜದ್ರೋಹಾತ್ಮಕ ಲೇಖವನ್ನು ಪ್ರಸಿದ್ಧಿಸಿದರೆಂದು, ಲೋ. ಮಾ. ಟಿಳಕರ ಮೇಲೆ ಸರಕಾರವು ಆಪಾದನೆಯನ್ನು ಹೊರಿಸಿತು. ಆಗ ಲೋ. ಮಾ. ಟಿಳಕರು ಕೋರ್ಟಿನಲ್ಲಿ ಎಂಟು ತಾಸು ಆತ್ಮಸಮರ್ಥನ ಮಾಡಿಕೊಂಡರು. ಆದರೂ ಸರಕಾರವು ಅವರನ್ನು ಆರು ವರುಷ ಗಡಿಪಾರುಮಾಡಿ, ಮಂಡಾಲೆಯ ತುರಂಗದಲ್ಲಿಟ್ಟಿತು. ಈ ತುರಂಗದಲ್ಲಿದ್ದಾಗಲೇ, ಅವರು 'ಗೀತಾರಹಸ್ಯ' ಎಂಬ ಮಹಾಗ್ರಂಥವನ್ನು ಬರೆದರು.

**ಹೋಮರೂಲ್ ಲೀಗ್** (ಸ್ವರಾಜ್ಯಸಂಘ) — ತುರಂಗದಿಂದ ತಿರುಗಿ ಬಂದ ಮೇಲೆ, ಮತ್ತೆಯೂ ಸ್ವರಾಜ್ಯ ಚಳವಳಿಯನ್ನು ನಡೆಸಿದರು. ಶ್ರೀಮತಿ ಆ್ಯನಿ ಬೆಝಂಟರನ್ನು ಕೂಡಿಕೊಂಡು, ಹೋಮರೂಲ್ ಲೀಗನ್ನು ಸ್ಥಾಪಿಸಿದರು. ಇದರ ಧ್ಯೇಯ-ಧೋರಣೆಗಳನ್ನು ಸರಕಾರಕ್ಕೆ ಮನಗಾಣಿಸಿ ಕೊಡುವದಕ್ಕೆ ಸ್ವತಃ ಶಿಷ್ಟಮಂಡಲಸಹಿತವಾಗಿ ಇಂಗ್ಲಂಡಿಗೆ ಹೋಗಿಬಂದರು (೧೯೧೯).

ಅಮೃತಸರ ಕಾಂಗ್ರೆಸಿನಲ್ಲಿ ಆ ಬಗೆಗ ಎಷ್ಟೋ ಗೊತ್ತುವಳಿಗಳನ್ನು ಮುಂಡಿಸಿದರು

**ಲೋಕಮಾನ್ಯರ ಮರಣ** —ಲೋಕಮಾನ್ಯರ ಇಳಿವಯಸ್ಸಿನ ಪ್ರಕೃತಿಯ ಮೇಲೆ ಅಮೃತಸರ ಕಾಂಗ್ರೆಸಿನ ಪರಿಣಾಮ ಬಹಳವಾಯಿತು ಅಲ್ಲದೆ ಜೀವನದಾದ್ಯಂತವೂ ಅವಿಶ್ರಾಂತ ಪರಿಶ್ರಮದಿಂದ ದೇಹ ಹಣ್ಣಾಗಿಯೆ ಇತ್ತು ಸ್ವರಾಜ್ಯವನ್ನು ಪಡೆದೇ ತೆರಳುವೆನೆಂದು ಮನಸ್ಸು ಹೇಳುತ್ತಿದ್ದರೂ, ದೇಹವು ಅದಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲ ೧೯೨೦ನೆಯ ಅಗಷ್ಟ್ ೧ರಂದು ಲೋಕಮಾನ್ಯರು ಪರಲೋಕಪ್ರಯಾಣ ಬೆಳೆಸಿದರು

## ನಾಮದಾರ್ ಗೋಖಲ

**ಜನ್ಮ ಮತ್ತು ಪರಂಪರೆ** —ನಾಮದಾರ್ ಗೋಖಲೆಯವರ ಪೂರ್ಣ ಹೆಸರು ಗೋಪಾಲಕೃಷ್ಣ ಗೋಖಲೆ ಎಂದು ಇವರು ೧೮೬೬ನೆಯ ವರುಷ, ಕೊಲ್ಹಾಪುರ ಜಿಲ್ಹೆಯ ಕಟ್ಲೂತ ಎಂಬಲ್ಲಿ ಹುಟ್ಟಿದರು ಇವರು ಚಿತ್‌ಪಾವನ ಬ್ರಾಹ್ಮಣ ಪಂಗಡಕ್ಕೆ ಸೇರಿದವರು



ನಾಮದಾರ್ ಗೋಖಲೆ

**ಶಿಕ್ಷಣ** — ಗೋಪಾಲರಾಯರ ತಂದೆ ಕಾಗಲ ಜಹಾಗೀರಿನಲ್ಲಿ ಸಣ್ಣ ನೌಕರರು ಅದೇ ಊರಲ್ಲಿಯೇ ಗೋಪಾಲರಾಯರ ಪ್ರಾಥಮಿಕ ಶಿಕ್ಷಣ ಮುಗಿಯಿತು ಮುಂದೆ ಕೊಲ್ಹಾಪುರದ ರಾಜಾರಾಮ ಕಾಲೇಜಿನಲ್ಲಿಯೂ ತದನಂತರ ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿಯೂ ಕಲಿತು, ೧೮೮೪ರಲ್ಲಿ ಬಿ ಎ ಪದವಿಯನ್ನು ಪಡೆದರು ಈ ಕಾಲದಲ್ಲಿ ಅವರಿಗ ೧೮ ವರುಷದ ವಯಸ್ಸು!

**ಶಿಕ್ಷಣದ ಸದುಪಯೋಗ** —ತಮ್ಮ ಶಿಕ್ಷಣದ ಸದುಪಯೋಗವು ದೇಶ-ಬಾಂಧವರಿಗೇ ಆಗಲಿ, ಎಂಬ ಹಂಬಲದಿಂದ ಗೋಪಾಲರಾಯರು—ಅದೇ ಸ್ಥಾಪಿತವಾದ 'ನ್ಯೂ ಇಂಗ್ಲಿಷ್ ಸ್ಕೂಲ್' ಎಂಬ ಆಂಗ್ಲ ಶಾಲೆಯಲ್ಲಿ ತಿಂಗಳಿಗೆ ೩೫ ರೂಪಾಯಿ ಸಂಬಳದ ಮೇಲೆ ಶಿಕ್ಷಕರಾಗಿ ಸೇರಿದರು ಅದೇ ವರುಷವೇ ಫರ್ಗ್ಯೂಸನ್ ಕಾಲೇಜು ಪ್ರಾರಂಭವಾಯಿತು ಆಗ ಇವರು ಅಲ್ಲಿ ಪ್ರಾಧ್ಯಾಪಕರಾದರು

**ಶ್ರೇಷ್ಠ ಶಿಕ್ಷಕರು** — ಗೋಪಾಲರಾಯರು ಅಲ್ಪಾವಧಿಯಲ್ಲಿಯೇ ಶ್ರೇಷ್ಠ ಶಿಕ್ಷಕರೆಂದು ಹೆಸರುಗೊಂಡರು. ಗಣಿತವು ಇವರ ಪ್ರೀತಿಯ ವಿಷಯ. ಬರುಬರುತ್ತ ಇವರು ವ್ಯಾಸಂಗಬಲದಿಂದ ಎಲ್ಲ ವಿಷಯಗಳನ್ನೂ ಹೇಳಬಲ್ಲವರಾದರು. ಇದೇ ಅವಧಿಯಲ್ಲಿ ಕಾಯದೆಯ ಅಭ್ಯಾಸಮಾಡಿ, ವಕೀಲ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇವರ ನಡೆನುಡಿ, ಬುದ್ಧಿ ಮತ್ತೆ, ಕರ್ತವ್ಯದಕ್ಷತೆಗಳು ಎಲ್ಲರ ಮೆಚ್ಚುಗೆಯನ್ನು ಪಡೆದವು. ಫರ್ಗ್ಯೂಸನ್ ಕಾಲೇಜಿನಲ್ಲಿ ಆಗರಕರರ ತರುವಾಯ ಇವರೇ ತತ್ತ್ವಶಾಸ್ತ್ರದ ಅಧ್ಯಾಪಕರಾದರು. ಮುಂದ ಆ ಸಂಸ್ಥೆಯ ಎಲ್ಲ ಆಗು-ಹೋಗುಗಳ ಹೊಣೆಗಾರಿಕೆಯು ಇವರನ್ನೇ ಅವಲಂಬಿಸಿತು.

**ಸಮಾಜಸೇವೆಯ ಕ್ಷೇತ್ರದಲ್ಲಿ** — ಗೋಖಲೆಯವರು ಸಮಾಜಸೇವೆಗಾಗಿ ಆಗರಕರರೊಡನೆ 'ಸುಧಾರಕ' ಎಂಬ ಆಂಗ್ಲಮರಾಠಿ ವಾರಪತ್ರಿಕೆಯನ್ನೂ 'ಸಾರ್ವಜನಿಕಸಭಾ' ಎಂಬ ರಾಜಕೀಯಸಂಸ್ಥೆಯನ್ನೂ ನಡೆಯಿಸಿದರು. ಇವರ ವಿಲಕ್ಷಣ ಬುದ್ಧಿವಂತಿಕೆ-ಕರ್ತವ್ಯದಕ್ಷತೆಗಳು ಮಹಾಜನಗಳ ಮನ್ನಣೆಯನ್ನು ಪಡೆದುವು.

**ಕಾಂಗ್ರೆಸಿನ ಕ್ಷೇತ್ರದಲ್ಲಿ** — ೧೮೮೯ರಲ್ಲಿ ಮುಂಬಯಿಯಲ್ಲಿ ನಡೆದ ಕಾಂಗ್ರೆಸಿನ ಅಧಿವೇಶನಕ್ಕೆ, ಗೋಖಲೆಯವರು ನ್ಯಾ. ಮೂ. ರಾನಡೆಯವರೊಡನೆ ಹೋಗಿದ್ದರು. ಆಗ ಉಪ್ಪಿನ ಕರವನ್ನು ನಿಷೇಧಿಸುವ ಗೊತ್ತುವಳಿಯನ್ನು ಗೋಖಲೆಯವರೇ ತಂದರು. ಅದನ್ನು ಸಮರ್ಥಿಸುವಾಗ ಇವರು ಮಾಡಿದ ಭಾಷಣವು ಎಲ್ಲರನ್ನೂ ಮಂತ್ರಮುಗ್ಧರನ್ನಾಗಿ ಮಾಡಿತು. ಆಗ ಇವರಿಗೆ ೨೩ ವರ್ಷದ ವಯಸ್ಸು. ಮುಂದೆ ೧೯೦೫ರಲ್ಲಿ ಕಾಶಿಯ ಕಾಂಗ್ರೆಸಿನ ಅಧಿವೇಶನಕ್ಕೆ ಗೋಖಲೆಯವರೇ ಅಧ್ಯಕ್ಷರಾದರು. ಇಷ್ಟೊಂದು ಎಳೆಯತನದಲ್ಲಿ ಈ ಮಹತ್ಪದವಿಯನ್ನು ಪಡೆದವರೆಂದರೆ ಗೋಖಲೆಯವರೊಬ್ಬರೇ.

**ಶಾಸನಸಭಾಕ್ಷೇತ್ರಗಳಲ್ಲಿ** — ಇಷ್ಟು ಹೊತ್ತಿಗೆ ಗೋಖಲೆಯವರ ಕೀರ್ತಿ ರಾಜ-ಪ್ರಜರಿಬ್ಬರಿಗೂ ಪರಿಚಿತವಾಗಿತ್ತು. ಮುಂದೆ ಜನತೆಯು, ಅವರನ್ನು ಮುಂಬಯಿ ಮತ್ತು ದಿಲ್ಲಿಯ ಶಾಸನಸಭೆಗಳಿಗೆ ಸಭಾಸದರನ್ನಾಗಿ ಆರಿಸಿತು. ಈ ಎರಡೂ ವಿಧಿಮಂಡಲಗಳಲ್ಲಿಯೂ ನಾಮದಾರ ಗೋಖಲೆಯವರು ಜನತೆಯ ಹಕ್ಕು-ಬಾಧ್ಯತೆಗಳ ಪ್ರಸ್ತಾವನೆ ಹಾಗೂ ಸಾರ್ವತ್ರಿಕ ಶಿಕ್ಷಣ-ಪ್ರಸಾರಗಳ ಬಗೆಗೆ ಕೊನೆಯ ವರೆಗೂ ಹೋರಾಡಿದರು.

**ಭಾರತಸೇವಕಸಂಘ** — ನಾ. ಗೋಖಲೆಯವರ ಹೆಸರನ್ನು ಅಚ್ಚಳಿಯದ ಉಳಿಸಿದುದು ಅವರ ಭಾರತಸೇವಕಸಂಘ. 'ದೇಶಸೇವೆಯೇ ಈಶಸೇವೆ'

ಎನ್ನುವದೇ ಈ ಸಂಘದ ಮೊದಲನೆಯ ನಿಯಮ ಅದಕ್ಕಾಗಿಯೇ ಪ್ರಥಮ ಪ್ರತಿಜ್ಞೆ! ಈ ಸಂಸ್ಥೆ ನಾ ಗೋಖಲೆಯವರ ನೇತೃತ್ವದಲ್ಲಿ ಹೊರಟು, ಇಡಿಯ ಭಾರತಕ್ಕೆ ಮೆಚ್ಚಿಗೆಯದಾಯಿತು

**ದಿವಂಗತರಾದದ್ದು** —ಇವರ ಬುದ್ಧಿಮತ್ತೆ ಮತ್ತು ನಿಸ್ವಾರ್ಥ ದೇಶ-ಸೇವೆಗಳ ಸಲುವಾಗಿ, ಗೋಖಲೆಯವರನ್ನು ಮಹಾತ್ಮಾ ಗಾಂಧಿಯವರು ತಮ್ಮ 'ರಾಜಕೀಯ ಗುರು' ಎಂದು ಕೊಂಡಾಡಿದರು ಗಾಂಧೀಜಿಯವರು ಆಗ ತಾನೇ ದ ಆಫ್ರಿಕೆಯಲ್ಲಿ ತಮ್ಮ ಸತ್ಯಾಗ್ರಹಾಸ್ತ್ರವನ್ನು ಅಣಿಮಾಡಿಕೊಳ್ಳುತ್ತಿದ್ದರು ಸತ್ಯ-ಅಹಿಂಸೆಗಳಿಂದಲೇ ಅಸತ್ಯ ಹಾಗೂ ಹಿಂಸೆಗಳನ್ನು ಅಡಗಿಸಬಹುದು, 'ಪ್ರೇಮಪಾಶದಿಂದಲೇ ಶತ್ರುಗಳನ್ನು ಕಟ್ಟಿಹಾಕಬಹುದು' ಎಂಬ ಶುದ್ಧತಂತ್ರವನ್ನು ಅವರು ಆಫ್ರಿಕೆಯಲ್ಲಿ ಆಗ ತಾನ ಪ್ರಯೋಗದಲ್ಲಿ ತಂದಿದ್ದರು ಗಾಂಧಿಯವರ ಸ್ಥೈರ್ಯ-ಧೈರ್ಯಗಳಿಗಾಗಿ ಗೋಖಲೆಯವರು ಅವರನ್ನು ಸಂಪೂರ್ಣವಾಗಿ ಮೆಚ್ಚಿದ್ದರು ಗೋಖಲೆಯವರು "ದೇಶಸೇವಕರ ರಾಜ" ಎಂದು ಬಿರುದನ್ನು ಪಡೆದು, ೧೯೧೫ರಲ್ಲಿ ಕಾಲವಾದರು.

## ಅಭ್ಯಾಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ಮಾತಿನಲ್ಲಿ ಉತ್ತರ ಹೇಳಿರಿ
- (ಅ) ಉಗ್ರವಾದಿ ಪಕ್ಷವನ್ನು ಯಾರು ಸ್ಥಾಪಿಸಿದರು?
- (ಆ) ಹೋಮರೂಲ್ ಲೀಗನ್ನು ಯಾರು ಸ್ಥಾಪಿಸಿದರು?
- (ಇ) ಕಾಂಗ್ರೆಸಿನ ಲಖನೌ ಅಧಿವೇಶನದ ಮಹತ್ತ್ವವೇನು?

೨ ಕೆಳಗಿನವುಗಳ ಬಗೆಗೆ ಟಿಪ್ಪಣಿ ಬರೆಯಿರಿ
- (ಅ) ಹೋಮರೂಲ್ ಲೀಗ (ಆ) ಮೋರ್ಲೆ-ಮಿಂಟೋ ಸುಧಾರಣೆ
- (ಇ) ಬನಾರಸ ಹಿಂದೂ ವಿಶ್ವವಿದ್ಯಾಲಯ

೩, (ಅ) ಲೋಕಮಾನ್ಯ ಟಿಳಕ ಹಾಗೂ ನಾಮದಾರ ಗೋಖಲೆ ಇವರಲ್ಲಿ ಕಂಡುಬರುವ ಭಿನ್ನ ಗುಣಗಳು ಯಾವವು?
- (ಆ) ಲೋಕಮಾನ್ಯರ ಜೀವನದಿಂದ ದೇಶಕ್ಕಾದ ಲಾಭ ಯಾವದು?
- (ಇ) ಗೋಖಲೆಯವರ ಜೀವನದಿಂದ ವಿದ್ಯಾರ್ಥಿಗಳು ಕಲಿತುಕೊಳ್ಳಬೇಕಾದ ಮಾತುಗಳು ಯಾವವು?

೪ ಸ್ವರಾಜ್ಯ ಸಾಧನೆಯ ಬಗೆಗೆ ಟಿಳಕ ಹಾಗೂ ಗೋಖಲೆಯವರಲ್ಲಿ ನಡೆದಿರಬಹುದಾದ ವಾಗ್ವಾದವನ್ನು ನಿರೂಪಿಸಿರಿ

(ಶಿಕ್ಷಕರು ಆ ಎರಡೂ ವ್ಯಕ್ತಿಗಳ ರೀತಿ-ನೀತಿಗಳಿಗೆ ಒಪ್ಪುವಂತೆ ಸಂಭಾಷಣೆಗಳನ್ನು ರಚಿಸಿ ಕೊಟ್ಟು, ಬಾಲಕರಿಂದ ಅಭಿನಯ ಮಾಡಿಸಬೇಕು.)

# ಭಾರತ ರಾಷ್ಟ್ರೀಯ ಸಭೆಯ ಜನನ ಮತ್ತು ಬೆಳವಣಿಗೆ



# ೧೭ ದಕ್ಷಿಣಆಫ್ರಿಕೆಯಲ್ಲಿ ಸತ್ಯಾಗ್ರಹ

**ಭಾರತದಿಂದ ಕೂಲಿಗಳು**—ಬ್ರಿಟಿಶರು ದಕ್ಷಿಣಆಫ್ರಿಕೆಯಲ್ಲಿ ಕೇಪ-ಕಾಲನಿ ಆರೆಂಜ ಫ್ರೀ ಸ್ಟೇಟ್, ನಾತಾಳ ಮತ್ತು ಟ್ರಾನ್ಸವಾಲುಗಳಲ್ಲಿ ತಮ್ಮ ವಸತಿಗಳನ್ನು ಮಾಡಿಕೊಂಡಾಗ, ಅಲ್ಲಿ ಒಕ್ಕಲುತನ, ಕೈಗಾರಿಕೆ, ಕಾರಖಾನೆಗಳನ್ನು ಆರಂಭಿಸಬೇಕಾಯಿತು ಈ ಕೆಲಸಕ್ಕೆ ಆಫ್ರಿಕೆಯ ಮೂಲ-ನಿವಾಸಿಗಳು ಉಪಯೋಗಬೀಳುವಂತಿರಲಿಲ್ಲ ಅದರಿಂದ ಭಾರತದ ಕೂಲಿಕಾರರನ್ನೇ ಅಲ್ಲಿಗೆ ಒಯ್ಯಬೇಕೆಂದು ಅಲ್ಲಿಯ ಸರಕಾರವು ಯೋಚಿಸಿತು ಭಾರತಸರಕಾರವೂ ಇದಕ್ಕೆ ಒಪ್ಪಿಗೆಯನ್ನು ಕೊಟ್ಟಿತು ವಿಶೇಷತಃ ಮದ್ರಾಸ್ ಪ್ರಾಂತದಿಂದಲೇ ಈ ಕೆಲಸದ ಕೂಲಿಯಾಳುಗಳನ್ನು ಹುಡುಕಿಕೊಂಡರು ೧೮೬೦ರಲ್ಲಿ ಇವರ ಮೊದಲನೆಯ ಗುಂಪು ಆಫ್ರಿಕೆಗೆ ಹೊರಟಿತು ಈ ಕೆಲಸಗಾರರಿಗೆ 'ಕೂಲಿ' ಇಲ್ಲವೆ 'ಸ್ವಾಮಿ' ಎನ್ನುವುದು ವಾಡಿಕೆ ಹೀಗೆ, ದಕ್ಷಿಣಆಫ್ರಿಕೆಯಲ್ಲಿ ಬಿಳಿಯರು ಒಡೆಯರಾಗಿಯೂ ಭಾರತದ ಹಾಗೂ ಆಫ್ರಿಕದ ಕರಿಯರು ಆಳುಗಳಾಗಿಯೂ ನೆಲಸಿದರು

**ಕೂಲಿತನದ ತರುವಾಯ**—ಅಲ್ಲಿರುವಷ್ಟು ಕಾಲವೂ ಕೂಲಿಗಳು ಕಷ್ಟದಿಂದ—ಹಿಡಿತದಿಂದ—ಜೀವಿಸುತ್ತಿದ್ದರು ಪಡೆದ ಕೂಲಿಯಲ್ಲಿಯೇ ಕೆಲವು ಹಣವನ್ನು ಉಳಿಸಿ ಬಂಡವಲು ಮಾಡಿಕೊಂಡಿದ್ದರು ಅದರಿಂದಲೇ ಅವರು ಅಲ್ಲಿ ಸಣ್ಣ ಪುಟ್ಟ ಉದ್ಯೋಗ ವ್ಯಾಪಾರಗಳನ್ನು ಆರಂಭಿಸಿದರು ಕರಿಯರು ಕಾಲೂರಿ ನಿಂತುದು ಬಿಳಿಯರಿಗೆ ತಲೆನೋವನ್ನಿಬ್ಬಿಸಿತು ಬಂಡವಲುಗಾರರ ಹೇಳಿಕೆಯಂತೆ ಅಲ್ಲಿಯ ಸರಕಾರ, ಕೂಲಿಗಳಿಗೆ ಚಿತ್ರಹಿಂಸೆ ಕೊಡುವ ಕಾಯದೆಗಳನ್ನು ಒಳಕೆಯಲ್ಲಿ ತರತೊಡಗಿದರು ಅಂದಿನಿಂದಲೇ ವರ್ಣದ್ವೇಷದ ಬೀಜಾರೋಪಣವಾಯಿತು

**ವರ್ಣದ್ವೇಷದ ಅತಿರೇಕ**—ಈ ವರ್ಣದ್ವೇಷದ ಬೀಜಗಳು ತೀವ್ರದಲ್ಲಿಯೇ ಮೊಳಕೆಯೊಡೆದುವು ಕೂಲಿಗಳು ಸಾರ್ವಜನಿಕ ಸ್ಥಳಗಳಲ್ಲಿ ಸೇರಕೂಡದು ರೇಲ್ವೆಗಳಲ್ಲಿ ಪ್ರವಾಸ ಮಾಡಬಾರದು ಒಂದು ವೇಳೆ ಮಾಡಿದರೂ ಮೂರನೆಯ ತರಗತಿಯಲ್ಲಿ ಮಾಡಬೇಕು ಅಲ್ಲಿ ಕೂಡ ಬಿಳಿಯ ಜನರಿಗೆ ಮೀಸಲಾಗಿದ್ದ ಡಬ್ಬಿಗಳಲ್ಲಿ ಕೂಡಬಾರದು ಹಿಂದು ಇಲ್ಲವೆ ಮುಸಲ್ಮಾನ ಪದ್ಧತಿಯಂತೆ ಮದುವೆಯಾಗಿದ್ದರೂ, ದಂಪತಿಗಳು ವಸಾಹತು ಸರಕಾರದಲ್ಲಿ ರಜಿಸ್ಟರ್ ಮಾಡಿಸಬೇಕು ಬಿಳಿಯಜನರ ವಸತಿಯಿರುವಲ್ಲಿ ಕೂಲಿಯಾಳುಗಳು ಮನೆಮಾಡಬಾರದು, ಮನೆಕಟ್ಟಿಕೊಳ್ಳುವದಾದರೂ ಸರಕಾರ ಒಪ್ಪಿಗೆ ಕೊಟ್ಟ ಸ್ಥಳದಲ್ಲಿಯೇ ಕಟ್ಟಬೇಕು ವಾರ್ಷಿಕ ಉತ್ಪನ್ನವು ಸರಾಸರಿ ಆರು

ಪೌಂಡುಗಳಷ್ಟೇ ಇದ್ದರೂ, ಕೂಲಿಗಳೆಲ್ಲ ಮೂರು ಪೌಂಡಿನ ತಲೆವಟ್ಟಿಯನ್ನು ಕೊಡಬೇಕು

ಇದರಿಂದ ಕೂಲಿಗಳ ಕಷ್ಟಪರಂಪರೆ ಹೆಚ್ಚಿತು ಹೊಟ್ಟೆ-ಒಟ್ಟೆಗಳ ಪ್ರಶ್ನೆಯು ಕಠಿಣವಾಗತೊಡಗಿತು ದೇಶವನ್ನು ಬಿಟ್ಟು ಹೊರಬೀಳುವುದಕ್ಕೆ ಆ ಕೂಲಿಗಳಿಗೆ ಹಣದ ಬೆಂಬಲವಿರಲಿಲ್ಲ ಇದಕ್ಕೇನಾದರೂ ಪ್ರತಿಕಾರ ಮಾಡಬೇಕೆಂದರೆ, ಅವರೆಲ್ಲರೂ ಒತ್ತಟ್ಟಿಗೆ ಕೂಡುವಂತಿರಲಿಲ್ಲ —ಎಂದ ಮೇಲೆ ಅಲ್ಪ ಸಂಖ್ಯಾಕರು, ಅಂತಹ ಅಸಂಘಟಿತ ಸ್ಥಿತಿಯಲ್ಲಿ ಹೇಗ ಬಾಳ ಬೇಕು? ಆದರೆ ಅವರೆಲ್ಲರ ಸುದೈವವೋ ಎನ್ನುವಂತೆ, ಆ ಕಾಲಕ್ಕೆ ಮಹಾತ್ಮಾ ಗಾಂಧಿಯವರು (ಇನ್ನೂ ಮಹಾತ್ಮರೆಂದು ಪ್ರಸಿದ್ಧರಾಗುವುದಕ್ಕಿಂತ ಒಹುದಿನ ಮೊದಲು) ಅಲ್ಲಿ ವಕೀಲಿಯನ್ನು ನಡೆಸುವದಕ್ಕೆಂದು ದಕ್ಷಿಣಆಫ್ರಿಕೆಗೆ ಹೋದರು

**ಗಾಂಧೀಜಿಯವರ ಮೊದಲ ಅನುಭವ**—ಗಾಂಧಿಯವರು ಸ್ವತಃ ಬ್ಯಾರಿಸ್ಟರರು, ಪ್ರತಿಷ್ಠಿತ ಮನೆತನದವರು, ಮೇಲಾಗಿ ವಕೀಲಿಗಾಗಿ ದಕ್ಷಿಣ-ಆಫ್ರಿಕೆಗ ಹೋದವರು, ಆದರೂ ಬಿಳಿಯರು ಗಾಂಧಿಯವರಿಗೂ ಕರಿಯರ ಕಾಯದೆಗಳನ್ನು ಅನ್ವಯಿಸಿದರು! ರೇಲ್ವೆಯಲ್ಲಿ ೧ನಯ ೨ಸಯ ತರಗತಿಯ 'ಬಂಡಿ'ಗಳಲ್ಲಿ ಗಾಂಧಿಯವರಿಗೆ ಪ್ರವೇಶವೆ ದೊರಯಲಿಲ್ಲ ಮೂರನೆಯ ತರಗತಿಯಲ್ಲಿ ಕೂಡ ಬಿಳಿಯರು ಕಾಲು ಕೆದರಿ ಅವರೊಡನೆ ಜಗಳ ತಗೆಯುತ್ತಿದ್ದರು

**ಸತ್ಯಾಗ್ರಹದ ಮೊದಲ ಪ್ರಯೋಗ** – ಗಾಂಧಿಯವರ ಈ ಕಟು ಅನುಭವವು ಇವರ ಆಯುಷ್ಯದ ದಿಕ್ಕನ್ನೇ ಒದಲಿಸಿತು ಅವರು ಅಲ್ಲಿದ್ದ ಬಾಂಧವರ ಹೀನ-ದೀನಪರಿಸ್ಥಿತಿಯನ್ನು ಚೆನ್ನಾಗಿ ಮನಗಂಡರು ಈ ಸ್ಥಿತಿಯನ್ನು ಸುಧಾರಿಸುವದಕ್ಕೆ ೧೯೦೬ರಲ್ಲಿ ಸರಕಾರದ ವಿರುದ್ಧವಾಗಿ ನಿಃಶಸ್ತ್ರ ಪ್ರತಿಕಾರದ ಸತ್ಯಾಗ್ರಹವನ್ನು ಆರಂಭ ಮಾಡಿದರು, ಅಲ್ಲಿದ್ದ ಭಾರತೀಯ ಸ್ತ್ರೀ-ಪುರುಷರಲ್ಲರನ್ನೂ ಅದಕ್ಕಾಗಿ ಹುರಿಗೊಳಿಸಿದರು ಬರಲಿರುವ ಸಂಕಟಗಳನ್ನಲ್ಲ ಶಾಂತರೀತಿಯಿಂದಲೇ ಎದುರಿಸಬೇಕೆಂದು ಅವರಿಗ ತಿಳಿಸಿದರು ಇದೇ ಸತ್ಯಾಗ್ರಹದ ಮೊದಲಪ್ರಯೋಗ

**ದಬ್ಬಾಳಿಕೆ**—ಕರಿಯರ ಈ ಚಳವಳಿಯಿಂದ ಬಿಳಿಯರ ಕೋಪವು ಕೆರಳಿತು ಆದರೂ ಗಾಂಧಿಯವರು ಶಾಂತಿಯಿಂದಲೇ ಸತ್ಯಾಗ್ರಹವನ್ನು ಸಾಗಿಸಿದರು ಸಂಧಾನಪ್ರಯತ್ನವನ್ನು ನಡೆಸಿದರು, ಅದಕ್ಕೆ ಸರಕಾರವು ಬಗ್ಗಲಿಲ್ಲ. ಅದು ಮುಂದಾಳುಗಳನ್ನು ಸೆರೆಮನೆಯಲ್ಲಿ ಸೇರಿಸಹತ್ತಿತು

ಸ್ವತಃ ಗಾಂಧಿಯವರಿಗೆ ಸಹ ಕಾರಾಗೃಹವಾಸವಾಯಿತು ಅಲ್ಲಿ ಅವರಿಗಾದ ಅಪಮಾನಗಳು ಅಷ್ಟಿಷ್ಟಲ್ಲ

**ಸಂಧಾನದ ಸೋಗು**—ಗಾಂಧಿಯವರು ಮಾತ್ರ ಉದ್ದೇಶ ಈಡೇರುವ ವರೆಗೂ ಸತ್ಯಾಗ್ರಹವನ್ನು ಸಾಗಿಸಿಯೆ ಇದ್ದರು ಆಗ, ವಸಾಹತುಸರಕಾರದ ಮುಖ್ಯ ಮಂತ್ರಿ ಜನರಲ್ ಸ್ಮಟ್ಸನು, ಗಾಂಧಿಯವರೊಡನೆ ಸಂಧಾನದ ಸೋಗು ಮಾಡಿದನು ಆದರೂ ೯೦೬ರ ರಜಿಸ್ಟರ್ ಶಾಸನವು ಹಾಗೆಯೇ ಉಳಿಯಿತು

**ಮತ್ತೆ ಸತ್ಯಾಗ್ರಹ**—ಈ ಸಲ ಗಾಂಧಿಯವರು ಸತ್ಯಾಗ್ರಹಕ್ಕೆ ನಂಪಿನ ಸ್ವರೂಪವನ್ನು ಕೊಟ್ಟರು ಹಿಂದೀಯರೆಲ್ಲ ಹಿಂದು-ಮುಸಲ್ಮಾನ ಭೇದವಿಲ್ಲದೆ ಇದರಲ್ಲಿ ಸೇರಿದರು ಸರಕಾರವು ಇದರ ವಿರುದ್ಧ ಉಗ್ರ ಉಪಾಯಗಳನ್ನು ಕೈಕೊಂಡಿತು ಎಷ್ಟೋ ಜನ ಕೂಲಿಗಳು ಪೋಲೀಸರ ಗುಂಡುಗಳಿಗೆ ಆಹುತಿಯಾದರು, ಆದರೂ ಸಂಪು ಉತ್ಸಾಹದಿಂದಲೇ ಮುಂದುವರಿಯಿತು ಇದರ ಪರಿಣಾಮವು ಭಾರತಜನತೆಯ ಕಣ್ಣನ್ನು ನಿಚ್ಚಳ ಮಾಡಿತು ತಾವು ಪರತಂತ್ರ ಸ್ಥಿತಿಯಲ್ಲಿ ಇರುವದರಿಂದಲೇ ಎಲ್ಲೆಲ್ಲಿಯೂ ತಮ್ಮ ಜನಕ್ಕೆ ಅಪಮಾನ-ಅತ್ಯಾಚಾರಗಳನ್ನು ಸಹಿಸಬೇಕಾಗುತ್ತದೆ—ಎಂದು ಹಿಂದೀಯರಿಗೆ ಮನವರಿಕೆಯಾಯಿತು ಅದರಿಂದ ಭಾರತದಲ್ಲಿಯೂ ಸ್ವರಾಜ್ಯಸಂಪಾದನೆಗ ಬಲವತ್ತರ ಪ್ರಯತ್ನ ಮಾಡಬೇಕು ಮತ್ತು ದಕ್ಷಿಣಆಫ್ರಿಕೆಯ ಬಂಧುಗಳಿಗೂ ಸಹಾಯವನ್ನು ನೀಡಬೇಕು—ಎಂಬ ವಿಚಾರವು ಆರಂಭವಾಯಿತು

**ನಾ ಗೋಖಲೆಯವರ ಮಧ್ಯಸ್ಥಿಕೆ**—ಗಾಂಧಿಯವರ ಸತ್ಯಾಗ್ರಹದ ಹೋರಾಟದ ಸುದ್ದಿ ಭಾರತಕ್ಕೂ ಬಂದಿತು ಆಗ ಶಾಸನಸಭಾಸದಸ್ಯರಾಗಿದ್ದ ನಾ ಗೋಖಲೆಯವರು, ವರಿಷ್ಠ ಶಾಸನಸಭೆಯಲ್ಲಿ ಈ ಬಗಗೆ ಒಂದು ಸೂಚನೆಯನ್ನು ತಂದರು 'ಆಫ್ರಿಕೆಯಲ್ಲಿಯ ಕೂಲಿಕಾರರಿಗಾಗುತ್ತಿದ್ದ ಹಿಂಸೆಯನ್ನು ನಿಲ್ಲಿಸಬೇಕು' ಎಂದು ಗೊತ್ತುವಳಿಯನ್ನು ಮಂಡಿಸಿದರು ಸ್ವತಃ ಅಲ್ಲಿಗೆ ಹೋಗಿ ತೊಂದರೆಯನ್ನು ನಿಲ್ಲಿಸಲು ಪ್ರಯತ್ನಪಟ್ಟರು, ಆದರ ಬಿಳಿಯರ ಆಳಿಕೆಯಲ್ಲಿ ಅವರಿಗೆ ಯಶಸ್ಸು ಸಿಕ್ಕಲಿಲ್ಲ, ಆದರೂ ಇವರ ಪ್ರಯತ್ನದಿಂದಾಗಿ, ಭಾರತ ಸರಕಾರದ ಹಿಂದೀ ಪ್ರತಿನಿಧಿಯೊಬ್ಬನು ಆಫ್ರಿಕಾ ಸರಕಾರದಲ್ಲಿ ಇರುವಂತೆ ಆಯಿತು ಅಷ್ಟೇ

**ಬ್ರಿಟಿಶರ ಬೆಂಬಲ**—ಈ ಕಾಲಕ್ಕೆ ಲಾರ್ಡ್ ಹಾರ್ಡಿಂಜನು ಭಾರತದ ವ್ಹಾಯಿಸ್‌ರಾಯನಾಗಿದ್ದನು ದಕ್ಷಿಣ ಆಫ್ರಿಕೆಯಲ್ಲಿಯ ಹಿಂದುಗಳ ಛಲನೆಯಿಂದ ಭಾರತದಲ್ಲಿಯೂ ಗಡಿಬಿಡಿಯೆದ್ದುದು ಆತನಿಗೆ ತಿಳಿಯಿತು. ಆಗ ಭಾರತೀಯರ ಬಗೆಗೆ ಸಹಾನುಭೂತಿಯನ್ನು ತೋರಿಸುವದು ಅತ್ಯವಶ್ಯ

ವಾಯಿತು ಅದರಿಂದ ದಕ್ಷಿಣಆಫ್ರಿಕೆಯ ಬಿಳಿಯರ ವರ್ಣದ್ವೇಷವನ್ನು ಪ್ರಸಿದ್ಧರೀತಿಯಿಂದ ನಿಷೇಧಿಸಿದನು, ಮತ್ತು ಭಾರತೀಯರ ಬೇಡಿಕೆಗಳು ನ್ಯಾಯವಾಗಿವೆಯೆಂದು ಬೆಂಬಲಕೊಟ್ಟನು ಆಗಲೇ ‹ಕೂಲಿಗಳಿಗೆ ಅವಧಿಯ ಕಟ್ಟನ್ನು ಹಾಕಬಾರದು—ಎಂಬ ನಾಮದಾರ ಗೋಖಲೆಯವರ ಗೊತ್ತುವಳಿಗೆ ಒಪ್ಪಿಗೆಯನ್ನಿತ್ತನು

ಇದರಂತೆ ಗಾಂಧೀಜಿಯವರ ಗೆಳೆಯರಾದ ಬ್ಯಾರಿಸ್ಟರ್ ಪೋಲಕರು ಆಫ್ರಿಕನರ ವರ್ಣದ್ವೇಷವನ್ನು ಕಡುತರವಾಗಿ ಟೀಕಿಸಿದರು ಅದರ ಬಗೆಗೆ ಭಾರತೀಯರಲ್ಲಿ ಜಾಗೃತಿಯನ್ನು ಹುಟ್ಟಿಸಿದರು

ಇವೆಲ್ಲವುಗಳ ಪರಿಣಾಮವಾಗಿ ಭಾರತಸರಕಾರವು ಈ ಪ್ರಶ್ನೆಯಲ್ಲಿ ಕೈಹಾಕಲೇ ಬೇಕಾಯಿತು ಅದರಂತೆ ಬ್ರಿಟಿಶ್ ಸರಕಾರಕ್ಕೆ ತಿಳಿಸಿತು ಆಗ ಬ್ರಿಟಿಶ್ ಸರಕಾರವು, ‹ಭಾರತೀಯರಿಗೆ ಹಾನಿಕರವೆನಿಸುವ ಯಾವದೇ ನಿರ್ಣಯವನ್ನು ನಾವು ಒಪ್ಪುವದಿಲ್ಲ’ ಎಂದು ಆಫ್ರಿಕಾಸರಕಾರಕ್ಕೆ ತಿಳಿಸಿತು ಆ ಮೇಲೆ ಅಲ್ಲಿ ಸ್ವಲ್ಪ ಶಾಂತತೆಯುಂಟಾಯಿತಾದರೂ, ಈಗಲೂ ಅಲ್ಲಿ ಈ ಸಮಸ್ಯೆ ಕಠಿಣವಾಗಿಯೇ ಉಳಿದಿದೆ

## ಅಭ್ಯಸನಗಳು

೧ ವರ್ಣದ್ವೇಷವು ಹುಟ್ಟಲು ಕಾರಣವೇನಾಯಿತು?

೨ ಕೂಲಿಕಾರರ ಬಾಳು ಏಕೆ ತೀರ ಕಷ್ಟತರವಾಯಿತು?

೩ ಗಾಂಧೀಜಿಯವರನ್ನು ಸತ್ಯಾಗ್ರಹಕ್ಕೆ ಸೆಳೆದ ಪ್ರಸಂಗ ಯಾವದು?

೪. ಹಾರ್ಡಿಂಜನು ವರ್ಣದ್ವೇಷವನ್ನು ಯಾಕೆ ನಿಷೇಧಿಸಿದನು?

೫ ಬ್ಯಾರಿಸ್ಟರ್ ಪೋಲಕರು ಮಾಡಿದ ಕೆಲಸವೇನು?

# ೧೮. ಮೊದಲನೆಯ ಮಹಾಯುದ್ಧ ಹಾಗೂ ಭಾರತದ ಮೇಲೆ ಅದರ ಪರಿಣಾಮಗಳು

**ಮೊದಲನೆಯ ಮಹಾಯುದ್ಧ** — ಲಾರ್ಡ್ ಹಾರ್ಡಿಂಜನ ಕಾಲಕ್ಕೆ ೧೯೧೪ರಲ್ಲಿ ಯುರೋಪ ಖಂಡದಲ್ಲಿ ಮೊದಲನೆಯ ಮಹಾಯುದ್ಧ ಆರಂಭವಾಯಿತು. ಸಮುದ್ರವ್ಯಾಪಾರ, ಸಾಮ್ರಾಜ್ಯವಿಸ್ತಾರಗಳ ದುರಾಶೆಯಿಂದ ಯುರೋಪದ ಪ್ರಬಲ ರಾಷ್ಟ್ರಗಳು ತಂತಮ್ಮ ಯುದ್ಧದ ಸಿದ್ಧತೆಯನ್ನು ಇಟ್ಟುಕೊಂಡೇ ಇದ್ದವು. ಜರ್ಮನಿ, ಆಸ್ಟ್ರಿಯಾ, ಇಟಲಿ ಈ ಮೂರೂ ರಾಷ್ಟ್ರಗಳು ಒಂದು ಕಡೆ; ಫ್ರಾನ್ಸ್, ರಶಿಯಾ, ಇಂಗ್ಲಂಡ್ ಇನ್ನೊಂದು ಕಡೆ. ಹೀಗೆ ಯುರೋಪ ಖಂಡವು ಇಬ್ಭಾಗವಾಗಿ, ಕತ್ತಿ ಮಸೆಯುತ್ತಿದ್ದಿತು. ಸರ್ವಿಯಾದ ತಲೆತಿರುಕನೊಬ್ಬನು ಆಸ್ಟ್ರಿಯಾದ ಯುವರಾಜನನ್ನೂ ಆತನ ಹೆಂಡತಿಯನ್ನೂ ಕೊಂದನು. ಇದೇ ನೆವದಿಂದ ಯುದ್ಧ ಪ್ರಾರಂಭವಾಯಿತು. ಕೂಡಲೆ ಜರ್ಮನಿಯ ಬಾದಶಹ ಕೈಸರನು ಆಸ್ಟ್ರಿಯಾದ ಬೆಂಬಲಕ್ಕೆ ನಿಂತನು. ಇಂಗ್ಲಂಡ, ಫ್ರಾನ್ಸ, ರಶಿಯಾಗಳು ಸರ್ವಿಯಾದ ಪಕ್ಷ ಕಟ್ಟಿದುವು. ಜರ್ಮನಿಯು ಫ್ರಾನ್ಸಿನ ಮೇಲೆ ಏರಿಹೋಗಲು, ದಾರಿಯಲ್ಲಿ ಇದ್ದ ಬೆಲ್ಜಿಯಂ ರಾಷ್ಟ್ರವನ್ನು ಆಕ್ರಮಿಸಿತು. ಬೆಲ್ಜಿಯಮವನ್ನು ಆಕ್ರಮಣ ಮಾಡುವುದಿಲ್ಲವೆಂದು ತಾನೇ ಒಪ್ಪಿಕೊಂಡಿದ್ದ ಹಿಂದಿನ ಒಂದು ಒಪ್ಪಂದವನ್ನು, ಅದು "ಒಂದು ಚೂರು ಪತ್ರಮಾತ್ರ" ಎಂದು ಘೋಷಿಸಿತು.

**ಭಾರತೀಯರ ಬೆಂಬಲ** — ವಸ್ತುತಃ ಈ ಯುದ್ಧದಲ್ಲಿ ಭಾರತಕ್ಕೇನೂ ಬೇಕಾಗಿರಲಿಲ್ಲ. ಆದರೂ ಕೇವಲ ರಾಜನಿಷ್ಠೆಯಿಂದ ಬ್ರಿಟಿಶರಿಗೆ ಎಲ್ಲ ಬಗೆಯ ಬೆಂಬಲವನ್ನು ಕೊಡಲಾಯಿತು. ಆ ಕಾಲಕ್ಕೆ ಹಿಂದುಸ್ತಾನದ ೯ ಲಕ್ಷ ೮೫ ಸಾವಿರ ಹಿಂದೀ ವೀರರು ರಣಾಂಗಣಕ್ಕೆ ಸಾಗಿದರು. ಅಬ್ಜಗಟ್ಟಲೆ ರೂಪಾಯಿಗಳನ್ನೂ ಅನ್ನಸಾಮಗ್ರಿಗಳನ್ನೂ ಹಿಂದೀ ಜನರು ಒದಗಿಸಿದರು. ಗಾಂಧೀಜಿಯವರು ಕೂಡ, 'ಬ್ರಿಟಿಶರು ಧರ್ಮ ನ್ಯಾಯಗಳಿಗಾಗಿ ಹೋರಾಡುತ್ತಿರುವರೆಂದು' ನಂಬಿ ಸೈನಿಕರ ಶೇಖರಣೆಗೆ ಬೆಂಬಲವಿತ್ತರು. ಪ್ರತಿ ರಾಷ್ಟ್ರವೂ ತನ್ನ ಆಗುಹೋಗುಗಳನ್ನು ತಾನೇ ರೂಪಿಸಿಕೊಳ್ಳಬೇಕೆಂಬ ತತ್ತ್ವಕ್ಕಾಗಿಯೇ ಮಹಾಯುದ್ಧವು ಜರಗುತ್ತಲಿದೆ, ಎಂದು ಬ್ರಿಟಿಶರು ಘೋಷಿಸಿದ್ದರಿಂದ, ಯುದ್ಧಾನಂತರ ಭಾರತಕ್ಕೆ ಸ್ವರಾಜ್ಯ ದೊರೆತೇ ದೊರೆಯುವುದೆಂದು ಅನೇಕ ನಾಯಕರು ನಂಬಿದ್ದರು. ಈ ಯುದ್ಧ ನಡೆದಿರುವಾಗಲೇ ಹಾರ್ಡಿಂಜನ ಆಳಿಕೆಯು ಮುಗಿಯಿತು. ಆ ಮೇಲೆ ಲಾರ್ಡ್ ಚೆಮ್ಸಫರ್ಡ್ ವ್ಹಾಯಿಸರಾಯನಾಗಿ ಬಂದನು.

**ಲಾರ್ಡ್ ಚೆಮ್ಸ್‌ಫರ್ಡ್** —(೧೯೧೬-೧೯೨೧) ಲಾರ್ಡ್ ಚೆಮ್ಸ್‌ಫರ್ಡರು ಭಾರತಕ್ಕೆ ಬಂದಾಗ, ಭಾರತೀಯರ ಈ ನಂಬಿಕೆಗೆ ಬುಡವಿಲ್ಲವೆಂಬುದು ಸ್ಪಷ್ಟವಾಗುತ್ತ ಬಂತು. ದೇಶವೆಲ್ಲಾ ಪ್ರಕ್ಷುಬ್ಧವಾಗುತ್ತಲಿದ್ದ ಕಾಲದಲ್ಲಿ ಪ್ರಚಲಿತ ಯುದ್ಧದಿಂದುಂಟಾದ ಹೊಟ್ಟೆ-ಬಟ್ಟೆಗಳ ಬಿಕ್ಕಟ್ಟು ಪ್ರಜೆಗಳನ್ನು ಬಾಧಿಸುತ್ತಿದ್ದಿತು. ಅಂತಹದರಲ್ಲಿಯೂ ಬಡ ಭಾರತೀಯರಿಂದಲೂ ಅನ್ನ-ಧನಗಳನ್ನು ಸಂಗ್ರಹಿಸಿ ಯುದ್ಧಕ್ಕೆ ಕಳಿಸಬೇಕಾಗುತ್ತಿದ್ದಿತು. ಇದರ ಹೊರತಾಗಿ, ಕಾಂಗ್ರೆಸಿನಲ್ಲಿ ಉಗ್ರಪಕ್ಷದ ಪರವಾಗಿ ಲೋ॥ ಟಿಳಕರು ಮಂಡಾಲೆಯಲ್ಲಿ ತಮ್ಮ ಶಿಕ್ಷೆಯನ್ನು ಮುಗಿಸಿ ಬಂದಿದ್ದರು. ಇಷ್ಟರಲ್ಲಿ ಬ್ರಿಟಿಶರು ಮಾಡಿದ ಅನನ್ವಿತ ಕೃತ್ಯಗಳು ಭಾರತೀಯ ಕಣ್ಣೆದುರಿಗಿದ್ದುವು. ಇದರಿಂದ ಸ್ವರಾಜ್ಯವನ್ನು ಹಕ್ಕಿನಿಂದಲೇ ಪಡೆಬೇಕು ಎನ್ನುವ ಉಗ್ರಪಕ್ಷದ ಮಾತುಗಳಿಗೆ ಎಲ್ಲೆಲ್ಲಿಯೂ ಬೆಂಬಲ ದೊರೆಯುವಂತಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಲಾರ್ಡ್ ಚೆಮ್ಸ್‌ಫರ್ಡರು ಭಾರತೀಯರ ಬೇಡಿಕೆಗಳನ್ನು ತೋರಿಕೆಯ ಮಟ್ಟಿಗಾದರೂ ಮನ್ನಿಸುವ ಸೋಗನ್ನು ಹಾಕಲೇ ಬೇಕಾಯಿತು. ಆಗ ಇಂಗ್ಲೆಂಡದಲ್ಲಿ ಮಾಂಟೆಗ್ಯೂ ಎಂಬುವರು ಭಾರತಮಂತ್ರಿಗಳಿದ್ದರು. ವ್ಹಾಯಿಸರಾಯರು ಅವರೊಡನೆ ವಿಚಾರವಿನಿಮಯ ಮಾಡಿ "ಭಾರತದ ಆಡಳಿತವನ್ನು ಪ್ರಜಾಹಿತದಂತೆ ನಡೆಸುವ ಮತ್ತು ಕ್ರಮಕ್ರಮವಾಗಿ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಕೊಡುವ" ಬ್ರಿಟಿಶ ಸಾಮ್ರಾಜ್ಯದ ಸಂದೇಶವನ್ನು ಸಾರಿದರು. ಇದನ್ನು ನಂಬಿ ಮುಕ್ತಹಸ್ತದಿಂದ ಭಾರತೀಯರು ಬ್ರಿಟಿಶ ಸೈನ್ಯಕ್ಕೆ ಸಹಾಯ ಕೊಟ್ಟರು.


ಲಾರ್ಡ್ ಚೆಮ್ಸ್‌ಫರ್ಡ್

**ಮಹಾಯುದ್ಧದ ನಂತರ** — ೧೯೧೮ರಲ್ಲಿ ಮಹಾಯುದ್ಧದ ಮುಕ್ತಾಯವಾಯಿತು. ಮೊದಮೊದಲು ಜಯಶೀಲರಾಗಿದ್ದ ಜರ್ಮನಿಸಿಂಹ ಕೈಸರನು ಸೋತು ಹಾಲಂಡದ ಹಳ್ಳಿಗೆ ಓಡಿಹೋದನು. ಇಂಗ್ಲಂಡ, ಫ್ರಾನ್ಸ, ರಶಿಯಾ, ಮಿತ್ರ ರಾಷ್ಟ್ರಗಳು ಜಯಭೇರಿಯನ್ನು ಹೊಡೆದುವು. ಎಲ್ಲರೂ ವ್ಹರ್ಸೇಲ್ಸದಲ್ಲಿ ಒಂದೆಡೆ ಕೂಡಿ ಜರ್ಮನಿಯನ್ನು ಶಿಕ್ಷಿಸಿದರು. ಆಸ್ಟ್ರಿಯ ಸಾಮ್ರಾಜ್ಯವನ್ನು ತುಂಡರಿಸಿದರು. ಜರ್ಮನಿಯ ವಸಾಹತುಗಳನ್ನೆಲ್ಲ ಅವರಿಂದ

ಕಿತ್ತು ತಮ್ಮತಮ್ಮೊಳಗೆ ಹಂಚಿಕೊಂಡರು ಈ ಒಪ್ಪಂದಕ್ಕೆ ಭಾರತದ ಪರವಾಗಿ ಲಾರ್ಡ್ ಸಿಂಹರೂ ಬಿಕಾನೇರ ಮಹಾರಾಜರೂ ಅಂಕಿತವನ್ನಿಟ್ಟರು.

**ರಾಷ್ಟ್ರಸಂಘ** — ಮೊದಲನೇ ಮಹಾಯುದ್ಧದಲ್ಲಿ ಯುರೋಪಿಯನ್ ರಾಷ್ಟ್ರಗಳಷ್ಟೇ ಮೊದಲು ತೊಡಗಿದ್ದುವು ಅನಂತರ ಜಪಾನ್ ಅಮೇರಿಕೆಗಳು ಅವರ ನೆರವಿಗೆ ಧುಮುಕಿದುವು ಅಮೇರಿಕೆಯ ಹೊರತಾಗಿ ಉಳಿದೆಲ್ಲ ಖಂಡಗಳ ರಾಷ್ಟ್ರಗಳೂ ಪೂರ್ಣ ಆರ್ಥಿಕ ಸಂಕಟದಲ್ಲಿ ಸಿಕ್ಕವು, ಸೋತ ರಾಷ್ಟ್ರಗಳಂತೆಯೇ ಗೆದ್ದ ರಾಷ್ಟ್ರಗಳೂ ಬಡತನದ ಬೇಗೆಯಿಂದ ಬಳಲಿದುವು ಅಮೇರಿಕೆಯು ಮಾತ್ರ ಧನಿಕ ರಾಷ್ಟ್ರವಾಗಿಯೂ ಪ್ರಬಲ ರಾಷ್ಟ್ರವಾಗಿಯೂ ಉಳಿಯಿತು ಆಗ ವಿಲ್ಸನ್ನರು ಅಮೇರಿಕೆಯ ಅಧ್ಯಕ್ಷರು ಅವರು ಸ್ವಭಾವದಿಂದ ಶಾಂತಿಪ್ರಿಯರು ಅದರಿಂದ ಶಾಂತಿಸ್ಥಾಪನೆಗೋಸ್ಕರ ಎಲ್ಲ ಸ್ವತಂತ್ರ ರಾಷ್ಟ್ರಗಳ 'ಲೀಗ್ ಆಫ್ ನೇಶನ್ಸ್' ಎಂಬ ಒಂದು ರಾಷ್ಟ್ರಸಂಸ್ಥೆಯನ್ನು ಸ್ಥಾಪಿಸಿದರು ಇದಕ್ಕೆ ಇಂಗ್ಲಂಡ ಮೊದಲಾಗಿ ಎಲ್ಲ ಮಿತ್ರರಾಷ್ಟ್ರಗಳೂ ಶಾಂತಿಯನ್ನೇ ಬಯಸಿದ ಬೇರೆ ಸಣ್ಣ ಪುಟ್ಟ ರಾಷ್ಟ್ರಗಳೂ ಒಪ್ಪಿದುವು ರಾಷ್ಟ್ರಸಂಘದ ರಚನೆಯಾಯಿತು, ಅದರಲ್ಲಿ ಹಿಂದುಸ್ಥಾನಕ್ಕೆ ಒಂದು ಸ್ಥಾನ ಸಿಕ್ಕಿತು, ಆದರೆ ಕೇವಲ ಬ್ರಿಟಿಶರ ಪರವಾಗಿ ಮತ ಕೊಡುವ ಒಂದು ದಾಸರಾಷ್ಟ್ರವಾಯಿತು ಜಿನೀವಾದಲ್ಲಿ ಅದರ ಮುಖ್ಯ ಕಚೇರಿ ತೆರೆಯಲ್ಪಟ್ಟಿತು ಅನ್ಯಾಯದ ಆಕ್ರಮಣಶೀಲತೆಯನ್ನು ತಡೆಯುವ ಬಗ್ಗೆ ವಿಚಾರವಿನಿಮಯ ಮಾಡುವುದು, ಶಾಂತಿಸ್ಥಾಪನೆಯ ಮಾರ್ಗಗಳನ್ನು ಕಂಡುಹಿಡಿಯುವುದು, ದುರ್ಬಲ ರಾಷ್ಟ್ರಗಳ ಪ್ರಗತಿಗೆ ಪ್ರಬಲ ರಾಷ್ಟ್ರಗಳು ನೆರವನ್ನು ನೀಡುವುದು ಇವೇ ಈ ಸಂಘದ ಮುಖ್ಯ ಕರ್ತವ್ಯಗಳು ಈ ಕರ್ತವ್ಯಪಾಲನೆಗಾಗಿ ಹದಿನಾಲ್ಕು ಮುಖ್ಯ ನಿಯಮಗಳಾದುವು

**ತತ್ತ್ವ ನಿಷ್ಫಲವಾಯಿತು** — ಉದ್ದೇಶವೇನೋ ಸ್ತುತ್ಯವೇ, ಆದರೆ ಅದನ್ನು ಒಳಕೆಯಲ್ಲಿ ತರುವಾಗ ರಾಷ್ಟ್ರಸಂಘವು ತನ್ನ ಶಕ್ತಿಯಲ್ಲಿ ಸಮತೂಕ ಹಿಡಿಯಲಿಲ್ಲ, ಸಾಮ್ರಾಜ್ಯ ವಿಸ್ತಾರದಿಂದ ಮದವೇರಿದ ಪ್ರಬಲ ರಾಷ್ಟ್ರಗಳು ನೆರೆಯ ಸಣ್ಣ-ಪುಟ್ಟ ರಾಷ್ಟ್ರಗಳನ್ನು ನುಂಗುತ್ತಲೇ ನಡೆದುವು ಅಮೇರಿಕೆಗೆ ಫಿಲಿಪ್ಪೈನ, ಜಪಾನಕ್ಕೆ ಕೋರಿಯಾ, ಇಟಲಿಗೆ ಅಬಿಸೀನಿಯಾ ಆಹುತಿಯಾದುವು ಈ ಆಕ್ರಮಣಶೀಲ ಪ್ರಬಲ ರಾಷ್ಟ್ರಗಳ ಅನ್ಯಾಯದ ವಿರುದ್ಧವಾಗಿ ಯಾರು ನಿರ್ಣಯವನ್ನು ಕೊಡುವವರು? ಕರ್ತವ್ಯಚ್ಯುತವಾದ ರಾಷ್ಟ್ರಸಂಘವು ಹೇಳಹೆಸರಿಲ್ಲದೆ ಕ್ಷೀಣಿಸುತ್ತ ಬಂದಿತು

**ಮಾಂಟಫರ್ಡ್ ಸುಧಾರಣೆಗಳು** — ಯುದ್ಧಕಾಲದಲ್ಲಿ ಬ್ರಿಟಿಶರ ಸಂದೇಶವನ್ನು ನಂಬಿ, ಭಾರತೀಯರು ತಮ್ಮ ಶಕ್ತಿ ಮೀರಿ ಸಹಾಯವನ್ನು ನೀಡಿದ್ದರು.

ಯುದ್ಧ ಮುಗಿಯಿತು, ಬ್ರಿಟಿಶರಿಗ ಜಯವಾಯಿತು—ಎಂದಮೇಲೆ, ತಮ್ಮ ವಚನಕ್ಕೆ ಅಂಟಿಕೊಳ್ಳುವ ಸೋಗು ಹಾಕಿ ಭಾರತದ ರಾಜಕೀಯ ಯೋಗ್ಯತೆ ಯನ್ನು ಪರಿಶೀಲಿಸಲು ಸ್ವತಃ ಮಾಂಟೆಗ್ಯೂ ಸಾಹೇಬರೇ ಇಲ್ಲಿಗೆ ಬಂದರು ಅವರೂ ವ್ಹಾಯಿಸರಾಯರೂ ಕಡೆಗೆ ಒಂದು ಸುಧಾರಣೆಯ ಯೋಜನೆ ಯನ್ನು ಪ್ರಕಟಿಸಿದರು ಇದೇ 'ಮೊಂಟಗ್ಯೂ ಚೆಮ್ಸಫರ್ಡ' ಅಥವಾ 'ಮಾಂಟಫರ್ಡ ಸುಧಾರಣೆ' (೧೯೧೯)

ಈ ಹೊಸ ಸುಧಾರಣೆಯಲ್ಲಿಯೂ ಜಾತೀಯ ದುರ್ಬೀಜಕ್ಕೆ ಅಳಿಗಾಲ ವಿರಲಿಲ್ಲ, ಭೇದ ಬುದ್ಧಿಗೆ ಮತ್ತಿಷ್ಟು ಪುಟಕೊಟ್ಟಂತಾಯಿತೆಂದೇ ಹೇಳ ಬಹುದು ಹೇಗೆಂದರೆ ಮಧ್ಯವರ್ತಿ ಶಾಸನಮಂಡಲದಲ್ಲಿ ಲೋಕಸಭೆ, ರಾಜಸಭೆ ಎಂದು ಎರಡು ಮಂಡಲಗಳಾದುವು ಅವುಗಳಲ್ಲಿ ಅಧಿಕಾರೇತರರ ಸಂಖ್ಯೆ ಹೆಚ್ಚಾಯಿತು, ಆದರೆ ಕೊನೆಯ ನಿರ್ಣಯದ ಅಧಿಕಾರವು ಮಾತ್ರ ವ್ಹಾಯಿಸರಾಯನಿಗೇ ಇದ್ದಿತು ಇದರಂತೆ ಆಡಳಿತ ಕಾರ್ಯದಲ್ಲಿಯೂ ಎರಡು ಭಾಗಗಳಾದುವು ಸಂರಕ್ಷಣ, ಪರರಾಷ್ಟ್ರ ಸಂಬಂಧ, ಚಲನವಲನ, ಅಂಚೆ, ತಂತಿ, ನಾಣ್ಯ ಈ ವಿಭಾಗಗಳು ಕೇಂದ್ರ ಸರಕಾರದ ವಶದಲ್ಲಿ, ಮತ್ತು ಕಂದಾಯ, ಸ್ಥಾನಿಕ ಸ್ವರಾಜ್ಯ, ಪೋಲೀಸ ಮತ್ತು ತುರಂಗ, ಆರೋಗ್ಯ, ಒಕ್ಕಲುತನ, ಶಿಕ್ಷಣ, ಅರಣ್ಯ, ಸಾರ್ವಜನಿಕ ಕಟ್ಟಡ ಮತ್ತು ಅಬಕಾರಿ ವಿಭಾಗಗಳು ಪ್ರಾಂತಿಕ ಸರಕಾರಗಳ ವಶದಲ್ಲಿ ಭಾರತೀಯರಿಗೆ ರಾಜ್ಯಾಡಳಿತದ ಹೊಣೆಗಾರಿಕೆ ವಹಿಸುವ 'ಶಿಕ್ಷಣ' ಕೊಡುವುದಕ್ಕಾಗಿಯೇ ಈ ವ್ಯವಸ್ಥೆ ಎಂದು ಮಾಂಟಗ್ಯೂ ಅವರು ಸಾರಿದರು

**ದ್ವಿದಲರಾಜ್ಯ ಪದ್ಧತಿ** — ಈ ಪ್ರಾಂತಿಕ ಅಧಿಕಾರಗಳಾದರೂ ಎಲ್ಲವೂ ಹಿಂದೀಯರಿಗೆ ಅಥವಾ ಸಂಪೂರ್ಣವಾಗಿ ಪ್ರಾಂತಿಕ ಶಾಸನಸಭೆಗೆ ಒಪ್ಪಿಸ ಲ್ಪಡಲಿಲ್ಲ ಅದರಲ್ಲಿಯೂ ತ್ವದರ್ಥಂ ಮದರ್ಥಂ ಎಂದರೆ 'ನಿನಗರ್ಧ ನನಗರ್ಧ' ಎಂಬ ನೀತಿ ಹುಟ್ಟಿತು ಪೋಲೀಸ, ಕಾಯದ, ತುರಂಗ, ಕಂದಾಯ, ಪ್ರಾಂತಿಕ ಜಮಾಖರ್ಚು ಮುಂತಾದ ಮಹತ್ವದ ವಿಭಾಗಗಳು ಸರಕಾರದ ಅಧಿಕಾರಿಗಳ ಕಡಗ, ಇವೇ ಕಾಯ್ದಿಟ್ಟ ಖಾತೆಗಳು ಇಂಗ್ಲಂಡ ಸರಕಾರಕ್ಕೆ ಹೊಣೆಗಾರರಾಗಿದ್ದ ಗವ್ಹರ್ನರರೂ ಕಾರ್ಯಕಾರಿ ಮಂಡಲದವರೂ ಇವುಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು ಉಳಿದ ಸ್ಥಾನಿಕ ಸ್ವರಾಜ್ಯ, ಆರೋಗ್ಯ, ಒಕ್ಕಲುತನ, ಶಿಕ್ಷಣ, ಅರಣ್ಯ, ಸಾರ್ವಜನಿಕ ಕಟ್ಟಡಗಳು, ಅಬಕಾರಿ ಮೊದಲಾದುವು ಲೋಕನಿಯುಕ್ತ ಮಂತ್ರಿಗಳ ಕಡೆಗೆ. ಇವೇ ಒಪ್ಪಿಸಿಕೊಟ್ಟ ಖಾತೆಗಳು ಇದನ್ನೇ ದ್ವಿದಲ ರಾಜ್ಯಪದ್ಧತಿ (ಡಾಯಾರ್ಕಿ) ಎಂದು ಹೇಳುವರು ಕಂದಾಯ ಖಾತೆಯ ಹೊಣೆಗಾರಿಕೆ ಇಲ್ಲದೆ, ಶಿಕ್ಷಣ, ಆರೋಗ್ಯ

ಮುಂತಾದುವುಗಳನ್ನು 'ಅಭಿವೃದ್ಧಿಗೊಳಿಸುವುದು ಹೇಗೆ?' ಎಂಬ ಸಂದಿಗ್ಧ ಪರಿಸ್ಥಿತಿ ದಿನೇ ದಿನೇ ಬೆಳೆಯಿತು

**ಭೇದನೀತಿಗೆ ಯಶಸ್ಸು** — ಇದರಿಂದ ಲೋಕಸಭೆಯ ಕೈಯಲ್ಲಿ ಕೆಲವು ಅಧಿಕಾರಗಳೇನೋ ಬಂದಂತಾಯಿತು, ಆದರೆ ಇದೇ ಕಾಯದೆಯಿಂದ ಪ್ರಾಂತಿಕ ಸರಕಾರಕ್ಕೂ ಎರಡು ಕಾಯದೆ ಮಂಡಲಗಳಾದುವು, ಶೀಖ, ಮುಸಲ್ಮಾನ, ಯುರೋಪಿಯನ್, ಕ್ರಿಶ್ಚನ, ಪಾರಸಿ ಮುಂತಾದ ಎಲ್ಲರಿಗೂ ಕಾಯ್ದಿಟ್ಟ ಜಾಗಗಳು ಹುಟ್ಟಿದುವು ಅದರಿಂದ ಕಾಯದೆಮಂಡಲಗಳೆಲ್ಲ ಜಾತೀಯ ಹಾಗೂ ಅಧಿಕಾರಿ ಪ್ರತಿನಿಧಿ ಇವರುಗಳ ಕುಸ್ತಿಯ ಕಣಗಳಾದುವು ಜಾತೀಯ ವಿಷವೃಕ್ಷವು ಬೆಳೆಯಿತು ಈ ಸುಧಾರಣೆಗಳು ಕಾಂಗ್ರೆಸಿನಲ್ಲಿ ನಿರಾಶೆಯ ವಾತಾವರಣವನ್ನೇ ಹುಟ್ಟಿಸಿದುವು

**ಅಯೋಗ್ಯ, ಅಸಮಾಧಾನಕರ** — ಈ ಹೊಸ ಸುಧಾರಣೆಯಿಂದ ಶಾಸನ ಮಂಡಲಗಳಲ್ಲಿ ಲೋಕಪ್ರತಿನಿಧಿಗಳ ಸಂಖ್ಯೆ ಹೆಚ್ಚಿದುದಾಗಲಿ, ವ್ಹಾಯಿಸರಾಯರ ಸಭೆಯಲ್ಲಿ ಹಿಂದೀಯರ ಸಂಖ್ಯೆ ಹೆಚ್ಚಿದುದಾಗಲಿ, ಮೇಲ್ನೋಟಿಕೆಯ ಸಮಾಧಾನ, ಏಕೆಂದರೆ ಸಭಾಸದರೆಲ್ಲ ಸರ್ವಾನುಮತದಿಂದ ನಿರ್ಣಯಿಸಿದುದನ್ನು ಕಿತ್ತೊಗೆಯುವ ವಿಶೇಷಾಧಿಕಾರವು ಗವ್ಹರ್ನರರಿಗೂ ವ್ಹಾಯಿಸರಾಯರಿಗೂ ಕೊಡಲ್ಪಟ್ಟಿದ್ದಿತು ಇದರಿಂದ ಬ್ರಿಟಿಶರಿಗೆ **ಅಹಿತಕಾರಿಯಾದ** ಯಾವ ಗೊತ್ತುವಳಿಯನ್ನೂ ವ್ಹಾಯಿಸರಾಯರು ಕಿತ್ತೊಗೆಯಬಹುದಾಗಿತ್ತು ಅಂತೆಯೆ ಈ ಸುಧಾರಣೆಯನ್ನೂ ಹಿಂದೀ ಮುಂದಾಳುಗಳೆಲ್ಲರೂ ಹಳಿದುಬಿಟ್ಟರು, ಆದರೂ ಹಲವು ಭಾರತೀಯರು ಮುಂದೆ ಬಂದು, ಸುಧಾರಣೆಗಳನ್ನು ಪ್ರಯೋಗಕ್ಕೆ ತರಲು ಬ್ರಿಟಿಶರಿಗೆ ಸಹಾಯಮಾಡಿದರು ಇದರಿಂದ ಒಪ್ಪಿಸಲ್ಪಟ್ಟ ಖಾತೆಗಳಿಂದ ಹಿಂದೀಯರಿಗೆ ರಾಜ್ಯಾಡಳಿತದ ಅನುಭವ ದೊರೆಯುವಂತಾಯಿತು ಬಂಗಾಲದ ಸರ್ ಸಿಂಹರಿಗೆ ಲಾರ್ಡ್ ಪದವಿಯೊಡನೆ, ಬಿಹಾರದ ಗವ್ಹರ್ನರರ ಅಧಿಕಾರವೂ ದೊರೆಯಿತು

**ಆಂದೋಲನದ ಉಗ್ರರೂಪ ಲಖನೌ ಒಪ್ಪಂದ (೧೯೧೭)** — ರಾಷ್ಟ್ರೀಯ ಸಂಸ್ಥೆಯ ಆಂದೋಲನಕ್ಕೆ ಕಳೆ ಕೊಡುವ ಸಂಗತಿಯೊಂದು ಈ ಮೊದಲೇ ನಡೆದಿತ್ತು ಭಾರತದಲ್ಲಿ ಬ್ರಿಟಿಶರು ನೆಲೆಯಾಗಿ ನಿಲ್ಲಬೇಕಾದರೆ, ಹಿಂದು ಮುಸಲ್ಮಾನರನ್ನು ಒಂದುಗೂಡಗೊಡಬಾರದು ಎಂಬುದನ್ನು ಕರ್ಝನ್ ಪ್ರಭೃತಿಗಳು ಬಳಕೆಯಲ್ಲಿ ತರಲು ಪ್ರಯತ್ನಪಟ್ಟರು, ಮೊದಮೊದಲು ಮುಸಲ್ಮಾನರು ಇದಕ್ಕೆ ಬಲಿಯಾದರು ಆದರೆ ಸ್ವರಾಜ್ಯದ ಆಂದೋಲನದಲ್ಲಿ ಮುಸಲ್ಮಾನ ಬಂಧುಗಳೂ ಸೇರುವದಕ್ಕೆ ಅನಾಯಾಸವಾಗಿ ಒಂದು ಪ್ರಸಂಗವೊದಗಿತು ಮಹಾಯುದ್ಧದಲ್ಲಿ ತುರ್ಕಸ್ತಾನವು ಜರ್ಮನದ ಪಕ್ಷ

ಕಟ್ಟಿತ್ತು ಯುದ್ಧಾನಂತರದಲ್ಲಿ ಇದೇ ನೆವದಿಂದ ಬ್ರಿಟಿಶರು ತುರ್ಕಸ್ತಾನದ ಖಲೀಫನನ್ನು—ದೊರೆಯನ್ನು—ಯುರೋಪದ ಹೊರಗಟ್ಟಿದರು ಇದರಿಂದ ಧರ್ಮಪ್ರಾಣರಾದ ಭಾರತೀಯ ಮುಸಲ್ಮಾನರು "ಖಿಲಾಫತ" ಎಂಬ ಧಾರ್ಮಿಕ ಆಂದೋಲನವನ್ನು ಎಬ್ಬಿಸಿದರು ಮಹಾತ್ಮಾ ಗಾಂಧೀಜಿಯವರು ಒಪ್ಪಿದರು ಬ್ರಿಟಿಶರಾಳಿಕೆಯ ವಿರುದ್ಧದ ಸತ್ಯಾಗ್ರಹದಲ್ಲಿ ಇದೂ ಒಂದು ವಿಷಯವನ್ನು ಸೇರಿಸಿಕೊಂಡರು ಇದರಿಂದ ಆಗ ಮುಸಲ್ಮಾನ ಮುಂದಾಳುಗಳಾದ ಅಲಿ ಬಂಧುಗಳು—ಮೌಲಾನಾ ಮಹಮ್ಮದ ಅಲಿ ಮತ್ತು ಮೌ ಶೌಕತ್ ಅಲಿ ಯವರು—ಮಹಾತ್ಮರ ಶಿಷ್ಯರಾಗಿ ಸತ್ಯಾಗ್ರಹ ಆಂದೋಲನದಲ್ಲಿ ಸೇರಿದರು ಅವರ ಹಿಂದೆ ಮುಸಲ್ಮಾನ ಜನತೆಯೂ ಇದ್ದಿತು ಹೀಗೆ, ಮಹಾತ್ಮರ ಸತ್ಯಾಗ್ರಹವು ಬಿರುಗಾಳಿಯಂತೆ ದೇಶದಾದ್ಯಂತವೂ ಬೀಸಿತು ಅದರಿಂದ ೧೯೧೬ರಲ್ಲಿ ಲಖನೌದಲ್ಲಿಯಾದ ರಾಷ್ಟ್ರೀಯ ಮಹಾಸಭೆಯ ಕಾಲಕ್ಕೆ ಹಿಂದು ಮುಸಲ್ಮಾನರ ಐಕ್ಯದ ಮಹತ್ವದ ಪ್ರಸಂಗ ನಡೆಯಿತು ಅದರಂತೆ ಉಗ್ರ-ಮಂದ ಪಕ್ಷದವರೂ ಒಂದಾದರು. ಲೋಕಮಾನ್ಯ ಟಿಳಕರೇ ಇದಕ್ಕೆಲ್ಲ ಮುಂದಾಳುಗಳಾಗಿ ಎಲ್ಲರ ಮನವೊಲಿಸಿದರು ಇಷ್ಟೇ ಅಲ್ಲ, ದೊಡ್ಡ ದೊಡ್ಡ ಅಧಿಕಾರಗಳನ್ನು ಹಿಂದು ಇಲ್ಲವೆ ಮುಸಲ್ಮಾನ ಯಾರಿಗೇ ಕೊಟ್ಟರೂ ಭಾರತೀಯರಿಗೆ ಕೊಟ್ಟಂತೆಯೇ! ಎಂಬ ಸಮರಸ ಭಾವನೆಯನ್ನು ಹುಟ್ಟಿಸಿದರು ಇದರಿಂದ ಲೋಕಮಾನ್ಯರ ಮುಂದಾಳ್ತನದಲ್ಲಿಯ ರಾಷ್ಟ್ರೀಯ ಆಂದೋಲನಕ್ಕೆ ಒಮ್ಮುಖದ ಚಟಿಕೆಯ ಭವ್ಯಸ್ವರೂಪವೇ ಒಂದಿತು

## ಅಭ್ಯಾಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತ ಉತ್ತರ ಬರೆಯಿರಿ.

(ಅ) ಮೊದಲನೆಯ ಮಹಾಯುದ್ಧದಲ್ಲಿ ಯುರೋಪದಲ್ಲಿಯ ರಾಷ್ಟ್ರಗಳ ಎರಡು ವಿರುದ್ಧ ಗುಂಪುಗಳು ಯಾವುವು?

(ಆ) ಯಾವ ಆಸೆಯಿಂದ ಭಾರತವು ಬ್ರಿಟಿಶರಿಗೆ ಬೆಂಬಲ ಕೊಟ್ಟಿತು?

(ಇ) ಆ ಆಸೆಯು ಎಷ್ಟರ ಮಟ್ಟಿಗೆ ಪೂರೈಸಲ್ಪಟ್ಟಿತು?

(ಈ) ಲಖನೌ ಕಾಂಗ್ರೆಸ ಅಧಿವೇಶನವು ಸಾಧಿಸಿದ ಮಹತ್ವದ ಮಾತು ಯಾವದು?

೨. ಕೆಳಗಿನವುಗಳ ಬಗೆಗೆ ಟಿಪ್ಪಣಿ ಬರೆಯಿರಿ.

(ಅ) ರಾಷ್ಟ್ರಸಂಘ. (ಆ) ಮೊಂಟಫರ್ಡ ಸುಧಾರಣೆ. (ಇ) ಖಿಲಾಫತ.

೩ ದ್ವಿದಲ ರಾಜ್ಯಪದ್ಧತಿ ಎಂದರೇನು? ಇದರಿಂದ ಭಾರತದ ಮೇಲೆ ಆದ ಪರಿಣಾಮವೇನು?

# ೧೮. ಗಾಂಧೀಜಿಯವರ ಮುಂದಾಳುತನದಲ್ಲಿ ಅಸಹಕಾರ ಮತ್ತು ಸತ್ಯಾಗ್ರಹ ಚಳವಳಿ

**ರೌಲೆಟ್ ಆ್ಯಕ್ಟ** — ಬ್ರಿಟಿಶರು ಹತಾಶರಾಗಿ ‹ಮುಂದೇನು' ಎಂಬುದನ್ನು ವಿಚಾರಿಸಬೇಕಾಯಿತು ಮಾಂಟಫರ್ಡ್ ಸುಧಾರಣೆಯನ್ನು ಹಿಂದು-ಮುಸಲ್ಮಾನರೆಲ್ಲರೂ ಅಲ್ಲಗಳೆದರು ಖಲೀಫನ ಪರವಾಗಿ ಖಿಲಾಫತ ಚಳವಳಿಯನ್ನು ಗಾಂಧೀಜಿ ಹಾಗೂ ಮಹಮ್ಮದ್ ಅಲಿ-ಶೌಕತ್ ಅಲಿ ಸಹೋದರರು ಒಟ್ಟಾಗಿಯೇ ನಡೆಸಿದರು ಆಗ, ಪ್ರಾರಂಭವಾದ ಆಂದೋಲನವನ್ನಡಗಿಸುವ ಮಾರ್ಗವನ್ನು ಕಂಡು ಹಿಡಿಯಲು, ಜಸ್ಟಿಸ್ ರೌಲೆಟ್ ಅವರ ನೇತೃತ್ವದಲ್ಲಿ ಒಂದು ಮಂಡಲವನ್ನು ನಿಯಮಿಸಿದರು (೧೯೧೯) ಆ ಮಂಡಲದ ವರದಿಯೇ ‹ರೌಲಟ್ ಆ್ಯಕ್ಟ' ಎಂದು ಪ್ರಸಿದ್ಧವಾಯಿತು ಅರಾಜಕವಾದ ಆ ಆಂದೋಲನವನ್ನು ದಬ್ಬಾಳಿಕೆಯಿಂದಲಾದರೂ ಬಗ್ಗುಬಡಿಯಲೇ ಬೇಕೆಂಬುದು ವರದಿಯ ಸಾರವಾಗಿತ್ತು



ಮ ಗಾಂಧಿಯವರು

**ಜಾಲಿಯಾನವಾಲಾಬಾಗದಲ್ಲಿ ಬೆಂಕಿಯ ಮಳೆ** — ರೌಲೆಟ್ ಕಾಯದೆಯನ್ನು ದೇಶದಾದ್ಯಂತ ಎಲ್ಲರೂ ನಿಷೇಧಿಸಿದರು ಈ ಬಗೆಗ ಅಮೃತ-ಸರದ ಜಾಲಿಯಾನವಾಲಾಬಾಗದಲ್ಲಿ ಪ್ರಚಂಡ ಸಭೆ ಕೂಡಿತ್ತು ಅದನ್ನು ಚೆದರಿಸಲು, ಯಾವ ಮುನ್ನೆಚ್ಚರಿಕೆಯನ್ನೂ ಕೊಡದ, ಜನರಲ್ ಡಾಯರನು ಗುಂಡುಗಳ ಬೆಂಕಿಯ ಮಳೆಗರೆದನು ಅದಕ್ಕೆ ಐನೂರು ಜನರು ಆಹುತಿಯಾದರು. ಇದರಿಂದ ಅಮೃತಸರ-ಲಾಹೋರಗಳಲ್ಲಿ ಮತ್ತಿಷ್ಟು ಅಸಂತೋಷ ಹೆಚ್ಚಿತು ದಂಗೆಗಳೆದ್ದುವು ಬ್ರಿಟಿಶರು ಅಲ್ಲಲ್ಲಿ ದಂಡಿನ ಕಾಯಿದೆಯ (ಮಾರ್ಶಲ್ ಲಾ) ಪ್ರಯೋಗಮಾಡಿದರು ಇದರಿಂದ ದೇಶದಲ್ಲೆಲ್ಲ ಹಾ ಹಾ-ಕಾರವೆದ್ದಿತು ಜನರಲ್ ಡಾಯರ್‌ನು ದೋಷಿಯೆಂದು ಬ್ರಿಟಿಶರು ಅವನನ್ನು ಇಂಗ್ಲಂಡಿಗೆ ಕಳಿಸಿದರು, ಆದರೂ, ಪಾರ್ಲಿಮೆಂಟ್ ಸದಸ್ಯರು ಅವನನ್ನು

ಗೌರವಿಸಿ, ರತ್ನಾಲಂಕೃತವಾದ ಚೂರಿಯನ್ನು ಪಾರಿತೋಷಕವಾಗಿ ಕೊಟ್ಟರು

**ಅಸಹಕಾರದ ಆರಂಭ** – ಈ ಹೊತ್ತಿಗ ಮಹಾತ್ಮಾ ಗಾಂಧೀಜಿಯವರು ಆಫ್ರಿಕೆಯ ಸತ್ಯಾಗ್ರಹದಲ್ಲಿ ವಿಜಯಿಗಳಾಗಿ ಭಾರತಕ್ಕೆ ಬಂದಿದ್ದರು ಅವರಿಗೆ ಆಗಿನ ಭಾರತದ ದುರಂತಚಿತ್ರವು ದುಸ್ಸಹವೆನಿಸಿತು ಮೊದಲನೆಯ ಮಹಾಯುದ್ಧದ ತುಟ್ಟಿಯ ಕಾಲದಿಂದ, ಜನತೆ ಮೊದಲೇ ಹಣ್ಣಾಗಿತ್ತು, ಧನಹೀನವಾಗಿತ್ತು, ಇಂತಹ ಇಕ್ಕಟ್ಟಿನಲ್ಲಿ ಒದ್ದಾಡುತ್ತಿದ್ದ ಭಾರತೀಯರ ಮೇಲೆ ಬ್ರಿಟಿಶರ ಕರಾಳಶಾಸನಗಳು! ಆದ್ದರಿಂದಲ ಭಾರತದಲ್ಲಿ ಕಾಲಿಡುವುದೇ ತಡ, ಅವರು ಸತ್ಯಾಗ್ರಹ ಅಸ್ತ್ರವನ್ನು ಎತ್ತಿದರು! ಮೊದಲೇ ಸಂತಪ್ತವಾದ ಜನ ಒಮ್ಮೆಲ ಈ ಆಂದೋಲನವನ್ನು ಒಪ್ಪಿಕೊಂಡಿತು

ಸ್ವದೇಶಿ, ಬಹಿಷ್ಕಾರ ಮತ್ತು ಅಸಹಕಾರ ಚಳವಳಿಗಳಿಂದ ಇಡಿ ದೇಶವು ಪ್ರಕ್ಷುಬ್ಧವಾಗಿತ್ತು ಇದರಿಂದ ಭಾರತದಲ್ಲಿ ಸಮತೋಲವೃತ್ತಿಯಿಂದ ಸಾಗಬಲ್ಲ ಮೇಧಾವಿಯೆಂದು, ನ್ಯಾಯಾಧೀಶನಾದ ಲಾರ್ಡ್ ರೀಡಿಂಗನನ್ನು ಬ್ರಿಟಿಶರು ಭಾರತದ ವ್ಹಾಯಿಸರಾಯನನ್ನು ಮಾಡಿದರು ಈತನು ಅಧಿಕಾರವನ್ನು ಸ್ವೀಕರಿಸಿದ ಕೂಡಲ, ಡ್ಯೂಕ್ ಆಫ ಕ್ಯಾನಾಟರನ್ನು ಭಾರತಕ್ಕೆ ಕರಸಿ, ಮಾಂಟಫರ್ಡ ಸುಧಾರಣೆಯಂತೆ ರಚಿಸಲಾದ ಶಾಸನಸಭೆಗಳನ್ನು ಆರಂಭಮಾಡಿಸಿದನು ಆದರ "ಬ್ರಿಟಿಶರದು ಒಳಗೊಂದು ಹೊರಗೊಂದು ನೀತಿ" ಎಂದು ಸಂಶಯವುಳ್ಳ ಭಾರತೀಯರು ಇದರಿಂದ ಮೋಸ ಹೋಗಲಿಲ್ಲ ಸತ್ಯಾಗ್ರಹ, ಅಸಹಕಾರ, ಹರತಾಳ, ಬಹಿಷ್ಕಾರ ಈ ಆಂದೋಲನಗಳು ಯಥಾಪ್ರಕಾರವಾಗಿಯೇ ಸಾಗಿದುವು

**ರಾಷ್ಟ್ರೀಯ ಚಳವಳಿ** – ಗಾಂಧೀಜಿಯವರ ಸರಳತನ, ಧೈರ್ಯ ಮತ್ತು ಸತ್ಯದ ಸ್ವಭಾವದಿಂದ ದೇಶದ ಜನರ ಮೇಲೆ ತುಂಬ ಪರಿಣಾಮವಾಯಿತು, ಇಡಿಯ ದೇಶವನ್ನು ವ್ಯಾಪಿಸಿ, ಇದು ನಿಜವಾದ ರಾಷ್ಟ್ರೀಯ ಚಳವಳಿಯಾಯಿತು ಪ್ರಿನ್ಸ್ ಆಫ ವೇಲ್ಸ್ (ಇಂಗ್ಲಂಡಿನ ಯುವರಾಜ)ರ ಭೆಟ್ಟಿಯಿಂದ ಸಾಮಾನ್ಯಜನರ ಮೇಲೆ ಪರಿಣಾಮವಾಗಲಿಲ್ಲ ಆ ಭೆಟ್ಟಿಗ ಜನತೆಯಿಂದ ಸಂಪೂರ್ಣ ಬಹಿಷ್ಕಾರ ಬಿದ್ದಿತು. ಒಂದು ಕಡೆ ರಾಜಕೀಯ ಚಳವಳಿಯ ಮುಂದಾಳುಗಳಿಗೆ ಬಂಧನವಾದರೆ, ಇನ್ನೊಂದು ಕಡೆಗೆ ಖಾದೀ ಪ್ರಸಾರ, ಅಸ್ಪೃಶ್ಯತಾ ನಿವಾರಣ ಮೊದಲಾದ ವಿಧಾಯಕ ಕೆಲಸಗಳು ಸತತವಾಗಿ ನಡೆಯುವ ಚಳವಳಿಯೂ ನಡೆಯಿತು. ಸರಕಾರವಾದರೂ ತನ್ನ ದಬ್ಬಾಳಿಕೆಯನ್ನು ಬಲವಾಗಿಯೇ ಸಾಗಿಸಿತು. ಇದರಿಂದ ರೊಚ್ಚಿಗೆದ್ದ ಜನರು ಚೌರಿಚೌರಾ ಎಂಬಲ್ಲಿ ಕೆಲವು ಪೋಲೀಸರನ್ನು ಸುಟ್ಟರು ಈ ಹಿಂಸಾವೃತ್ತಿ

ಯಿಂದ ಗಾಂಧಿಯವರಿಗೆ ಅತೀವವೇದನೆಯಾಯಿತು ಕೂಡಲೆ ಚಳವಳಿಯನ್ನು ತಡೆದರು ಸಮಯವನ್ನು ಕಾಯುತ್ತಿದ್ದ ಸರಕಾರದವರು, ಗಾಂಧಿಯವರನ್ನು ಬಂಧಿಸಿ ಆರು ವರ್ಷದ ಶಿಕ್ಷೆಯನ್ನು ಕೊಟ್ಟರು

**ಸ್ವರಾಜ್ಯಪಕ್ಷದ ಉದಯ**—೧೯೨೦ರಲ್ಲಿ ಮಹಾತ್ಮಾಗಾಂಧಿಯವರು ಅಸಹಕಾರವನ್ನು ಹೂಡಿದಾಗ, ರಾಷ್ಟ್ರೀಯವೃತ್ತಿಯ ಮುಂದಾಳುಗಳೆಲ್ಲ ಸರಕಾರೀ ಶಾಸನಸಂಸ್ಥೆಗಳಿಗೆ ಬಹಿಷ್ಕಾರ ಹಾಕಿದ್ದರು ಬಹುಶಃ ಸರಕಾರದ ತಾಳಕ್ಕೆ ಹೆಜ್ಜೆ ಹಾಕುವವರೇ ಆಗ ಶಾಸನಸಭೆಗಳಲ್ಲಿ ಸೇರಿದ್ದರು ಅದರಿಂದ, ಸರಕಾರಕ್ಕೆ ಬೇಕಾದ ಕರಾಳಶಾಸನಗಳೆಲ್ಲ ಅಡೆತಡೆಯಿಲ್ಲದೆ ಪುರಸ್ಕೃತವಾಗಹತ್ತಿದವು ಅವುಗಳಿಂದಾಗಿ ಮಹಾತ್ಮರಂತಹರೂ ಸೆರೆಮನೆಯನ್ನು ಸೇರಬೇಕಾಯಿತು ಈ ಕಾರಣದಿಂದ, ಗಯಾಕಾಂಗ್ರೆಸಿನಲ್ಲಿ ಅಸಹಕಾರ ಪಕ್ಷದವರೊಳಗೇ 'ಸ್ವರಾಜ್ಯ ಪಕ್ಷ' ಹುಟ್ಟಿತು "ಶಾಸನಸಭೆಗಳಲ್ಲಿ ಸೇರಿಕೊಂಡು ರಾಷ್ಟ್ರೀಯಪಕ್ಷಕ್ಕೆ ಅನುಕೂಲವಾದ ಶಾಸನಗಳ ಸೃಷ್ಟಿಮಾಡಬೇಕು, ಮತ್ತು ಬ್ರಿಟಿಶರ ಕರಾಳ ಶಾಸನಗಳ ವಿರುದ್ಧ ಹೋರಾಡಬೇಕು' ಎಂದು ಇವರ ವಾದ ಈ ಪಕ್ಷೀಯರಲ್ಲಿ ಪಂಡಿತ ಮೋತೀಲಾಲ ನೆಹರು, ಲಾಲಾ ಲಜಪತರಾಯ, ದೇಶಬಂಧು ಚಿತ್ತರಂಜನ ದಾಸ, ವಿಟ್ಠಲಭಾಯಿ ಪಟೇಲ ಮೊದಲಾದವರು ಮುಖ್ಯರು ಇವರೆಲ್ಲರೂ ನಿಸ್ಸೀಮ ಸ್ವಾರ್ಥತ್ಯಾಗಿಗಳು ಮತ್ತು ಬುದ್ಧಿಯಲ್ಲಿ ಬೃಹಸ್ಪತಿಗಳು ಇವರ ಭಾಷಣಗಳ ಪರಿಣಾಮವಾಗಿ ಸ್ವರಾಜ್ಯಪಕ್ಷವು ತಲೆಯೆತ್ತಿಯೇ ಬಿಟ್ಟಿತು ಆ ನಲದ ಚುನಾವಣೆಯಲ್ಲಿ ಸ್ವರಾಜ್ಯ ಪಕ್ಷೀಯರು ಹೆಚ್ಚಾಗಿ ಆರಿಸಿ ಬಂದರು ವಿಟ್ಠಲಭಾಯಿ ಪಟೇಲರು ಅಸೆಂಬ್ಲಿಯ ಲೋಕ-ನಿಯುಕ್ತ ಪ್ರತಿನಿಧಿಗಳ ಪರವಾಗಿ ಮೊದಲನೆಯ ಅಧ್ಯಕ್ಷರಾದರು



ಪಟೇಲ ವಿಟ್ಠಲಭಾಯಿಯವರು

**ಮಹಾತ್ಮರ ಬಿಡುಗಡೆ**—ಆಗಲೇ ತುರಂಗದಲ್ಲಿರುವಾಗ, ಮಹಾತ್ಮರಿಗೆ ಕರುಳುಬೇನೆಯಾಯಿತು ಅದರಿಂದ, ಉಪಚಾರಕ್ಕಾಗಿ ಅವರನ್ನು ಬಂಧ-ಮುಕ್ತರನ್ನಾಗಿ ಮಾಡಿದರು ಶಸ್ತ್ರಕ್ರಿಯೆಯ ಉಪಚಾರ ನಡೆದು ಮಹಾತ್ಮರು ಬದುಕಿಕೊಂಡರು

**ಆಯರ್‍ವಿನ್ನನ ಆಗಮನ**—(೧೯೨೬-೧೯೩೧) ಲಾರ್ಡ್ ರೀಡಿಂಗನು ೧೯೨೬ರಲ್ಲಿ ಹೋದನು. ಲಾರ್ಡ್ ಆಯರ್‍ವಿನ್ (ಇರ್‍ವಿನ್) ಭಾರತದ ವ್ಹಾಯಿಸ್‌ರಾಯನಾದನು. ಇವನು ವಿಶೇಷತಃ ಒಕ್ಕಲುತನದ ಖಾತೆಯಲ್ಲಿ ಹೆಚ್ಚಾಗಿ ದುಡಿದವನು. ಮೊದಲು ಒಕ್ಕಲುತನದ ಪರಿಶೀಲನೆಗಾಗಿ ಒಕ್ಕಲುತನ ನಿರೀಕ್ಷಕ ಸಮಿತಿಯನ್ನು ಸಂಚಾರಕ್ಕೆ ಹೊರಡಿಸಿದನು.



ಲಾರ್ಡ್ ಆಯರ್‍ವಿನ್

**ಸೈಮನ್ ಕಮಿಶನ್**—ಮಾಂಟ-ಫರ್ಡ್ ಸುಧಾರಣೆಯ ಪರಿಣಾಮವನ್ನು ಪರೀಕ್ಷಿಸಿ, ಭಾರತೀಯರು ರಾಜ್ಯದಾಡಳಿತದ ಅನುಭವವನ್ನು ಎಷ್ಟು ಪಡೆದಿದ್ದಾರೆ ಎಂಬುದನ್ನು ಅರಿತುಕೊಂಡು ಇನ್ನೂ ಹಲವು ಖಾತೆಗಳನ್ನು ಅವರಿಗೆ ವಹಿಸಬಹುದೇ?—ಎಂದು ತೀರ್ಮಾನಿಸಲು, **ಸರ್ ಜಾನ್ ಸೈಮನ್** ಸಾಹೇಬರ ಹಿರಿಯತನದಲ್ಲಿ ಏಳು ಜನರ ಸಮಿತಿ ಭಾರತಸಂಚಾರಕ್ಕೆ ಹೊರಟಿತು. ಆದರೆ, ಇಂತಹ ಪರೀಕ್ಷೆ ಅನಗತ್ಯ, ಸಂಪೂರ್ಣಸ್ವರಾಜ್ಯವು ಭಾರತದ ನೈಸರ್ಗಿಕಹಕ್ಕು—ಎಂದು ಘೋಷಿಸುತ್ತಿದ್ದ ಕಾಂಗ್ರೆಸ್ ಸಂಸ್ಥೆಯು, ಆ ಸಮಿತಿಯನ್ನು ಬಹಿಷ್ಕರಿಸಿತು. ಈ ಸಮಿತಿಯವರು ಎಲ್ಲಿ ಹೋದಲ್ಲಿ ಅವರಿಗೆ ಕರಿಯನಿಶಾನೆಗಳ ಸ್ವಾಗತ! 'ಸೈಮನ್, ಹಿಂದಿರುಗು' ಎಂಬ ಘೋಷಣೆಗಳಲ್ಲಿಯೇ ಒಂದುವರೆ ವರುಷ ಸಮಿತಿಯವರು ಭಾರತವನ್ನು ತಿರುವಿಹಾಕಿದರು. 'ಬ್ರಿಟಿಶರ ಆಳ್ವಿಕೆಯಿಂದಲೇ ಭಾರತದ ಉದ್ಧಾರ' ಎಂದು ನಂಬಿದ್ದವರ ಹಾಗೂ ಸರಕಾರದ ಕೈಗೊಂಬೆಯಂತಿರುವ ಕೆಲವರ ಸಾಕ್ಷಿಗಳನ್ನು ತೆಗೆದುಕೊಂಡರು. ಈ ಸೈಮನ್ ಸಂಚಾರದಿಂದ ರಾಷ್ಟ್ರೀಯರಲ್ಲಿ ಮತ್ತಿಷ್ಟು ಅಸಂತೋಷವೂ ಒಗ್ಗಟ್ಟೂ ಬೆಳೆದುವು, ಏಕೆಂದರೆ ಈ ಸಮಿತಿಯಲ್ಲಿ ಒಬ್ಬನೂ ಭಾರತೀಯನಿರಲಿಲ್ಲ.

**ವಸಾಹತಿ-ಸ್ವರಾಜ್ಯದ ಘೋಷಣೆ**—ಆ ಮೇಲೆ 'ಕ್ರಮಕ್ರಮವಾಗಿ ಹೊಣೆಗಾರಿಕೆಯ ಸ್ವರಾಜ್ಯವನ್ನು ಕೊಡುವೆವು' ಎಂದು ವ್ಹಾಯಿಸ್‌ರಾಯ್ ಆಯರ್‍ವಿನ್ನರ ಘೋಷಣೆ ಹೊರಟಿತು. ಇದಕ್ಕೆ ಉತ್ತರವಾಗಿ ಮಹಾತ್ಮರು 'ಹೊಣೆಗಾರಿಕೆಯ ಸ್ವರಾಜ್ಯವು ಶೀಘ್ರ ಕೊಡಲ್ಪಡಲಿಲ್ಲವಾದರೆ 'ಸಂಪೂರ್ಣ

ಸ್ವಾತಂತ್ರ್ಯದ ಧ್ಯೇಯವನ್ನೇ ಕಾಂಗ್ರೆಸ್ ಸಾರುವುದು' ಎಂದು ಘೋಷಿಸಿದರು ಆ ಮೇರೆಗೆ ಲಾಹೋರ ಕಾಂಗ್ರೆಸಿನಲ್ಲಿ "ಪೂರ್ಣ ಸ್ವರಾಜ್ಯ"ದ ಘೋಷಣೆಯನ್ನು ಸಾರಲಾಯಿತು

**ಶಾಸನಭಂಗ ಆಂದೋಲನ** —ಈ ಘೋಷಣೆಗೆ ಸರಿಯಾಗಿ, ೧೯೩೦ರಲ್ಲಿ ಶಾಸನಭಂಗ (ಕಾಯಿದೆ ಭಂಗ) ಆಂದೋಲನವು ಹೊರಟಿತು ಮಹಾತ್ಮರ ದಾಂಡೀಯಾತ್ರೆ, ಉಪ್ಪಿನ ಸತ್ಯಾಗ್ರಹ, ಕಾಯಿದೆಭಂಗ ಇವಲ್ಲ ಹಳ್ಳಿಹಳ್ಳಿಗೂ ನಡೆದುವು ಆಗ ಮಹಾತ್ಮಾ ಗಾಂಧಿ, ಪಂಡಿತ ಜವಾಹರಲಾಲ ನೆಹರು ಮುಂತಾದ ಮುಂದಾಳುಗಳನ್ನೆಲ್ಲ ಬ್ರಿಟಿಶ ಸರಕಾರ ಸೆರೆಮನೆಯನ್ನು ಸೇರಿಸಿತು ಅದೇ ಹೊತ್ತಿಗೆ ಸೈಮನ್ ವರದಿ ಹೊರಬಿದ್ದಿತು "ಅನೇಕ-ಜಾತಿ, ಅನೇಕ-ಧರ್ಮ, ಅನೇಕ-ಪದ್ಧತಿ, ಬಹುಸಂಖ್ಯಾಕ ನಿರಕ್ಷರಿಗಳಿರುವ ದೇಶದಲ್ಲಿ ಹೊಣೆಗಾರ ಸರಕಾರವು ಸಾಧ್ಯವಿಲ್ಲ—ಎಂದು ಅದರಲ್ಲಿ ಬರದಿತ್ತು ಇದರಿಂದ ಜನತೆಯಲ್ಲಿ ಮತ್ತಿಷ್ಟು ಅಸಂತೋಷವುಂಟಾಯಿತು

**೧ನೆಯ ದುಂಡುಮೇಜಿನ ಪರಿಷತ್ತು** —(೧೯೩೦) ಈಗ ಬ್ರಿಟಿಶರ ಕೂಲಿ-ಕಾರಪಕ್ಷದ ನಾಯಕ ರ‍್ಯಾಮ್‌ಸೇ ಮ್ಯಾಕ್‌ಡೋನಾಲ್ಡನು ಇಂಗ್ಲಂಡಿನ ಮುಖ್ಯಮಂತ್ರಿ, ವೆಜ್‌ವುಡ ಬೆನ್ನರು ಭಾರತಮಂತ್ರಿಗಳು ಅವರಿಬ್ಬರೂ ಭಾರತಪ್ರೇಮಿಗಳು ಇಬ್ಬರೂ ಕೂಡಿ, ಭಾರತಕ್ಕೆ ಬೇಕಾದ ಸ್ವರಾಜ್ಯ ಘಟನೆಯ ಬಗೆಗೆ ವಿಚಾರ ವಿನಿಮಯ ಮಾಡಲು ಇಂಗ್ಲಂಡಿನಲ್ಲಿ ೧ನಯ ದುಂಡುಮೇಜಿನ ಪರಿಷತ್ತನ್ನು ಕರೆದರು ಇದಕ್ಕೆ ಅನೇಕ ಸಂಸ್ಥಾನಿಕರಿಗೂ ಸರಕಾರದ ಅನುಯಾಯಿಗಳಾದ ಇತರರಿಗೂ ಆಮಂತ್ರಣವಿದ್ದಿತು ಅದರಿಂದ ರಾಷ್ಟ್ರೀಯ ಸಭೆಯು ಈ ಪರಿಷತ್ತನ್ನು ಬಹಿಷ್ಕರಿಸಿತು ಅಲ್ಲಿಯ ವಿಚಾರವಿನಿಮಯದಲ್ಲಿ ಕಾಂಗ್ರೆಸಿನ ಸಹಕಾರವಿಲ್ಲದೆ ಭಾರತಕ್ಕೆ ಸರ್ವಸಮ್ಮತವಾದ ರಾಜ್ಯಪದ್ಧತಿ ಸಿದ್ಧವಾಗಲಾರದೆಂದು ಬ್ರಿಟಿಶರಿಗೆ ಹೊಳೆಯಿತು ಅದರಿಂದ ಕಾಂಗ್ರೆಸಿನೊಡನೆ ಸಹಕಾರ ಬೆಳೆಸಲು ಗಾಂಧಿ ಆಯರ್ವಿನ್ ಒಡಂಬಡಿಕೆಯಾಯಿತು (೧೯೩೧) ಈ ಕರಾರಿನಂತೆ ಮಹಾತ್ಮರು ಶಾಸನಭಂಗದ ಚಳವಳಿಯನ್ನು ನಿಲ್ಲಿಸಿದರು, ಎಲ್ಲ ರಾಜಕೀಯ ಸೆರೆಯಾಳುಗಳನ್ನೂ ಅನಿರ್ಬಂಧವಾಗಿ ಸರಕಾರವು ಬಿಟ್ಟಿತು ಉಪ್ಪಿನ ಮೇಲಿನ ತೆರಿಗೆಯನ್ನು



ಲಾರ್ಡ್ ವಿಲ್ಲಿಂಗ್ಡನ್

ಸಡಿಲುಮಾಡಲಾಯಿತು ಕಾಂಗ್ರೆಸ ಸಹಿತವಾಗಿ ೨ನೆಯ ದುಂಡುಮೇಜಿನ ಸಿದ್ಧತೆ ನಡೆಯಿತು ಇಷ್ಟರಲ್ಲಿ ಆಯರ್ವಿನ್ನನು ನಿವೃತ್ತನಾದನು, ಲಾರ್ಡ್ ವಿಲ್ಲಿಂಗ್ಡನ್ ವ್ಹಾಯಿಸ ರಾಯನಾಗಿ ಬಂದನು

**ಲಾರ್ಡ್ ವಿಲ್ಲಿಂಗಡನ್** —(೧೯೩೧-೧೯೩೬) ಲಾರ್ಡ್ ವಿಲ್ಲಿಂಗಡನ ಹಿಂದೆ ಮುಂಬೈ ಮದ್ರಾಸಗಳ ಗವರ್ನರನಾಗಿ ಭಾರತದ ಅನುಭವವನ್ನು ಪಡೆದವನು ಖಂಡಿತ ಸಾಮ್ರಾಜ್ಯವಾದಿಯು ದಬ್ಬಾಳಿಕೆಯಿಂದಲಾದರೂ ಕಾಂಗ್ರೆಸನ್ನು ಒಗ್ಗುಬಡಿಯಬೇಕೆಂಬುದೇ ಈತನ ಮುಖ್ಯಧ್ಯೇಯ ಆದರೂ ಎರಡನೆಯ ದುಂಡುಮೇಜಿನ ಫಲಶ್ರುತಿಯ ವರೆಗೆ ಸುಮ್ಮನಿದ್ದನು

**೨ನೆಯ ದುಂಡುಮೇಜಿನ ಪರಿಷತ್ತು** (೧೯೩೨)— ೨ನೆಯ ದುಂಡು-ಮೇಜಿನ ಪರಿಷತ್ತಿಗೆ ಮಹಾತ್ಮಾಗಾಂಧಿ, ಪಂ ಮಾಲವೀಯಾಜಿ ಮೌ ಮಹ-



ಎರಡನೆಯ ದುಂಡುಮೇಜಿನ ಪರಿಷತ್ತು

ಮ್ಮದ ಅಲಿ ಮೊದಲಾದವರು ಹೋಗಿದ್ದರು ಆ ಕಾಲದಲ್ಲಿ ೫ನೆಯ ಜಾರ್ಜ ಬಾದಶಹರು ಮಹಾತ್ಮರನ್ನು ತಮ್ಮ ಅರಮನೆಗೆ ಕರೆಸಿಕೊಂಡು ಸತ್ಕರಿಸಿದರು ಇವರ ಸರಳ-ಶುದ್ಧ ಜೀವನ, ಮತಿವಂತಿಕೆಯ ಮಾತುಗಾರಿಕೆ ಇವುಗಳ ಬಗೆಗೆ ಬ್ರಿಟಿಶರೆಲ್ಲರೂ, ಬಹಳವಾಗಿ ಮೆಚ್ಚಿದರು.

**ಪರಿಷತ್ತಿನ ಫಲಶ್ರುತಿ** — ಈ ಪರಿಷತ್ತಿಗೆ ಭಾರತಮಂತ್ರಿ ಸಾಮ್ಯುವೆಲ್ ಹೋರ್ ಮತ್ತು ಮುಖ್ಯಮಂತ್ರಿ ರ್‍ಯಾಮಸೇ ಮ್ಯಾಕ್‌ಡೋನಾಲ್ಡರೂ ಬಂದಿದ್ದರು. ವಿಚಾರವಿನಿಮಯದಲ್ಲಿ ಬ್ರಿಟಿಶರು ಶೀಖ, ಮುಸಲ್ಮಾನ, ಅಸ್ಪೃಶ್ಯ ಮುಂತಾದ ಜಾತೀಯತೆಯನ್ನು ರಾಜಕೀಯದಲ್ಲಿ ಸ್ಥಿರಪಡಿಸಲು ಪ್ರಯತ್ನಿಸಿ

ದರು ಅಸ್ಪೃಶ್ಯರು ಹಿಂದುಗಳಲ್ಲಿಯೇ ಒಂದು ಘಟಕವಾಗಿರುವುದರಿಂದ, ಅವರನ್ನು ಪ್ರತ್ಯೇಕಿಸುವದಕ್ಕೆ, ಅವರಿಗಾಗಿ ಸ್ವತಂತ್ರ ಮತದಾರ ಸಂಘವನ್ನು ಮಾಡುವದಕ್ಕೆ ಮಹಾತ್ಮರು ಒಪ್ಪಲಿಲ್ಲ, ಅಸ್ಪೃಶ್ಯರಿಗೆ ಸ್ಥಳಗಳನ್ನು ಕಾಯ್ದಿಡ ಬಹುದಾದರೂ ಆಯ್ಕೆಯು ಮಾತ್ರ ಸಂಯುಕ್ತಮತದಾರ ಸಂಘದಿಂದಲೇ ಆಗಬೇಕೆಂದು ಪ್ರತಿಪಾದಿಸಿದರು ಬ್ರಿಟಿಶರು ಇದಕ್ಕೊಪ್ಪಲಿಲ್ಲ ಮಹಾತ್ಮರು ಭಾರತಕ್ಕೆ ಮರಳಿದರು ಮೌ ಮಹಮ್ಮದ ಅಲಿಯವರು ಇಂಗ್ಲಂಡಿನಲ್ಲಿಯೇ ದೇಹವಿಟ್ಟರು

**ಮತ್ತೆ ಹೋರಾಟ** – ಮಹಾತ್ಮರು ಭಾರತವನ್ನು ಮುಟ್ಟುವದೊಂದೇ ತಡ, ವೈಸರಾಯನು ಅವರನ್ನು ಬಂಧಿಸಿದನು ಈ ಸಲ, ಜನರ ಚಳವಳಿಯನ್ನು ತಡೆಯಲು ಸರಕಾರವು ಮುಂಚಿತವಾಗಿಯೇ ಎಲ್ಲ ಸಿದ್ಧತೆಯನ್ನೂ ಮಾಡಿಕೊಂಡಿತ್ತು ಆದರೆ ಜನರು ಹೆದರಲಿಲ್ಲ ಈ ಚಳವಳಿಯು ಅಸಹಕಾರದ ಅನೇಕ ರೂಪಗಳನ್ನು ತಾಳಿತು ಕರನಿರಾಕರಣೆಯೂ ಅದರ ಒಂದು ಅಂಗವಾಗಿತ್ತು ಮಹಾತ್ಮರನ್ನು ಮೊದಲು ಮಾಡಿ ಎಲ್ಲ ಮುಂದಾಳುಗಳೂ ಸಾವಿರಾರು ಜನರೂ ಸೆರೆಮನೆಯನ್ನು ಸೇರಿದರು

**ಸಂಯುಕ್ತ ಮತದಾರ ಸಂಘ** – ಈ ಅವಧಿಯಲ್ಲಿ ಬ್ರಿಟಿಶರು ಜಾತೀಯ ಪ್ರತ್ಯೇಕತೆಯ ಚುನಾವಣೆಯನ್ನು ಸಾರಿದರು ಇದು ತಿಳಿಯುತ್ತಲೇ ಮಹಾತ್ಮರು ಜೇಲಿನಲ್ಲಿಯೇ ಪ್ರಾಣಾಂತಿಕ ಉಪವಾಸವನ್ನು ಪ್ರಾರಂಭಿಸಿದರು ಆಗ ಪುಣೆಯಲ್ಲಿ ಪ್ರಸಿದ್ಧ ಮುಂದಾಳುಗಳೆಲ್ಲ ವಿಚಾರವಿನಿಮಯಕ್ಕೆ ಕೂಡಿದರು ಕೊನೆಯ 'ಪುಣೆ ಕರಾರಿ'ನ ಪ್ರಕಾರ ಸಂಯುಕ್ತ ಮತದಾರ ಸಂಘದ ಮುಖಾಂತರವೇ ಹರಿಜನರಿಗಾಗಿ ಪ್ರತ್ಯೇಕ ಸ್ಥಳಗಳನ್ನು ಆರಿಸಬೇಕೆಂದು ನಿರ್ಣಯವಾಯಿತು

**೩ನೆಯ ದುಂಡುಮೇಜಿನ ಪರಿಷತ್ತು** – ೧೯೩೨ರಲ್ಲಿ ೩ನೆಯ ದುಂಡುಮೇಜಿನ ಪರಿಷತ್ತು ನಡೆಯಿತು ವೇಳೆ-ವೆಚ್ಚಗಳ ಅಪವ್ಯಯದ ಹೊರತು ಬೇರಾವ ನಿಷ್ಪತ್ತಿಯೂ ಅದರಿಂದ ಆಗಲಿಲ್ಲ ಆದರೆ ಈ ಮೂರೂ ಪರಿಷತ್ತುಗಳ ಪರಿಶ್ರಮದ ಸಾರವನ್ನು ತೆಗೆದು, ಹೊಸದೊಂದು ಸುಧಾರಣಾ ಯೋಜನೆಯನ್ನು ಸಿದ್ಧಪಡಿಸಲಾಯಿತು ಅದನ್ನು ಭಾರತ ಮತ್ತು ಬ್ರಿಟಿಶ್ ರಾಜಕಾರಣಪಟುಗಳ ಪರಿಶೀಲನೆಗೆ ಒಪ್ಪಿಸಲಾಯಿತು ಇದೇ ಜಾಯಿಂಟ್ ಪಾರ್ಲಿಮೆಂಟರಿಕಮಿಟಿ ಇವರೆಲ್ಲರ ಒಪ್ಪಿಗೆಯಿಂದ, ೧೯೩೫ರಲ್ಲಿ ಸಂಯುಕ್ತ ರಾಜ್ಯಪದ್ಧತಿಯ ಶಾಸನವು ಪಾರ್ಲಿಮೆಂಟಿನಲ್ಲಿ ಪಾಸಾಗಿ ಬೆಳಕಿಗೆ ಬಂದಿತು.

**ಸಂಯುಕ್ತ ರಾಜ್ಯಪದ್ಧತಿಯ ಶಾಸನ – (೧೯೩೫) ಈ ಹೊಸ ಕಾಯಿದೆಯಿಂದ, ರಾಜಕೀಯ ಸ್ವಾಯತ್ತತೆಯು ಭಾರತೀಯರಿಗೆ ಹೆಚ್ಚಾಗಿ ಸಿಕ್ಕಂತಾ**

ಯಿತು ಇಡಿಯ ಭಾರತವು (ಸಂಸ್ಥಾನಗಳನ್ನೊಳಗೊಂಡು) ಒಂದು ಒಕ್ಕೂಟ (ಫೆಡರೇಶನ್) ಆಗಬೇಕೆಂಬ ಯೋಜನೆಯೂ ಅದರಲ್ಲಿ ಇದ್ದಿತು ಪ್ರಾಂತಗಳ ಶಾಸನಸಭೆಗಳಲ್ಲಿ ಲೋಕನಿಯುಕ್ತ ಪ್ರತಿನಿಧಿಗಳ ಸಂಖ್ಯೆ ಹೆಚ್ಚಿತು ಶಾಸನಮಂಡಲಗಳು ಬೆಳೆದುವು, ಮಂತ್ರಿಗಳು ಆಡಳಿತದ ಬಗೆಗೆ ವಿಶೇಷ ಹೊಣೆಗಾರರಾದರು ಆದರೂ ಕೆಲವು ಮುಖ್ಯವಿಷಯಗಳು ಆ ಪ್ರಾಂತಗಳ ಗವರ್ನರರಿಗೇ ಸೇರಿದುವು ಸಿವಿಲ್ ಸರ್ವೆಂಟರ ಸಂರಕ್ಷಣ ವ್ಯಾಪಾರ-ಆರ್ಥಿಕಸ್ಥಿತಿಗಳ ಅಭಿವೃದ್ಧಿ, ಅಲ್ಪಸಂಖ್ಯಾಕರ ಸಂರಕ್ಷಣ ಇವುಗಳ ಬಗೆಗೆ ಗವರ್ನರ್ ಜನರಲರಿಗೂ ಗವರ್ನರರಿಗೂ ವಿಶೇಷಾಧಿಕಾರವು ಹಾಗೆಯೆ ಉಳಿಯಿತು ಇದರಿಂದ ಶಾಸನಸಭೆಯಲ್ಲಿ ಸರ್ವಾನುಮತದಿಂದ ಗೊತ್ತಾದ ನಿರ್ಣಯವನ್ನೂ ಕಿತ್ತೊಗೆಯಲು ಸರಕಾರಕ್ಕೆ ಸಾಮರ್ಥ್ಯವಿದ್ದಿತು ಇದನ್ನು ಭಾರತೀಯರು ಒಪ್ಪಲಿಲ್ಲ ಈ ಬಗೆಗೆ ವಾದ-ವಿವಾದಗಳು ನಡೆದುವು ಆದರೆ ಬಿಹಾರದ ಭೂಕಂಪ ಐದನೆಯ ಜಾರ್ಜರ ಮರಣ ಅವರ ತರುವಾಯ ಪಟ್ಟಕ್ಕೆ ಬಂದ ಎಂಟನೆಯ ಎಡ್ವರ್ಡರ ಸಿಂಹಾಸನ ತ್ಯಾಗ— ಮೊದಲಾದ ಘಟನೆಗಳಿಗಾಗಿ, ರಾಜಕೀಯ ಸುಧಾರಣೆಗಳ ಚರ್ಚೆ ಕೆಲಕಾಲ ಹಿಂದೆ ಬಿದ್ದಿತು ಅಷ್ಟರಲ್ಲಿಯೆ ಶಾಸನಮಂಡಲಗಳ ಹೊಸ ಆಯ್ಕೆ ಬಂದಿತು ಈ ಕಾಲದಲ್ಲಿ ವಿಲ್ಲಿಂಗಡನನ ಆಳಿಕೆ ಮುಗಿದು, ಲಾರ್ಡ್ ಲಿನಲಿಥಗೋ ವ್ಹಾಯಿಸರಾಯನಾದನು


ಲಾರ್ಡ್ ಲಿನ್‌ಲಿಥ್‌ಗೋ

**ಲಾರ್ಡ್ ಲಿನ್‌ಲಿಥ್‌ಗೋ** (೧೯೩೬-೧೯೪೩) – ಲಾರ್ಡ್ ಲಿನಲಿಥ್‌ಗೋ ಒಕ್ಕಲುತನದ ಸಮಿತಿಯ ಅಧ್ಯಕ್ಷನಾಗಿ ಭಾರತಕ್ಕೆ ಬಂದು, ಈ ಮೊದಲೇ ಇಲ್ಲಿಯ ಸ್ಥಿತಿ-ಗತಿಗಳನ್ನು ತಿಳಿದುಕೊಂಡಿದ್ದನು, ಆದರಿಂದ ಭಾರತದ ಅಂದಿನ ಪರಿಸ್ಥಿತಿಗೆ ತಕ್ಕ ಯೋಜನೆಗಳನ್ನು ನಿಯೋಜಿಸಬಲ್ಲವನಾಗಿದ್ದನು ಇವನ ಕಾಲದಲ್ಲಿ ಎಂದರೆ ೧೯೩೭ನೆಯ ಎಪ್ರೀಲ ೧ರಂದು, ಹೊಸ ಸುಧಾರಣಾಶಾಸನನಿಯಮದಂತೆ ಭಾರತದಲ್ಲಿ ಶಾಸನಮಂಡಲಗಳ ಆಯ್ಕೆ ನಡೆಯಿತು. ಕಾಂಗ್ರೆಸು ಆರಂಭದಲ್ಲಿ ವಿರುದ್ಧವಾಗಿದ್ದರೂ, ಚುನಾವಣೆಯಲ್ಲಿ ಕೊನೆಗೆ ಭಾಗತಕ್ಕೊಂಡಿತು.

## ಅಭ್ಯಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತ ಉತ್ತರಗಳನ್ನು ಕೊಡಿರಿ

(ಅ) ಸ್ವರಾಜ್ಯಪಕ್ಷದ ಸ್ಥಾಪನೆಗೆ ಏನು ಕಾರಣವಾಯಿತು?

(ಆ) ಸೈಮನ್ ಕಮಿಶನ್ನಿಗೆ ಭಾರತದ ಜನತೆಯು ಎಂತಹ ಪ್ರತಿಕ್ರಿಯೆಯನ್ನು ತೋರಿಸಿತು? ಯಾಕ?

(ಇ) ರಾಷ್ಟ್ರೀಯ ಕಾಂಗ್ರೆಸ್ಸು ಒಂದನೆಯ ದುಂಡುಮೇಜಿನ ಪರಿಷತ್ತನ್ನು ಯಾಕ ಬಹಿಷ್ಕರಿಸಿತು?

(ಈ) ಗಾಂಧಿ-ಆಯರ್ವಿನ್ನರ ಒಡಂಬಡಿಕಯಿಂದ ಯಾವ ಬದಲಾವಣೆ-ಗಳಾದವು?

(ಉ) ಮಹಾತ್ಮರು ಪ್ರಾಣಾಂತಿಕ ಉಪವಾಸವನ್ನು ಯಾವಾಗ ಪ್ರಾರಂಭಿ-ಸಿದರು?

೨ ಕಳಗಿನವುಗಳ ಬಗೆಗೆ ಟಿಪ್ಪಣಿ ಬರೆಯಿರಿ —

(ಅ) ರೌಲಟ್ ಆ್ಯಕ್ಟ್ (ಆ) ಜಾಲಿಯನವಾಲಾಬಾಗದ ದುರಂತ

(ಇ) ೨ನೆಯ ದುಂಡುಮೇಜಿನ ಪರಿಷತ್ತು (ಈ) ೧೯೩೫ರ ಸಂಯುಕ್ತ ರಾಜ್ಯಪದ್ಧತಿಯ ಶಾಸನ

೩ ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳಗಳನ್ನು ಯೋಗ್ಯಶಬ್ದಗಳಿಂದ ತುಂಬಿರಿ —

(ಅ) ಜನರಲ್ ನು ಜಾಲಿಯಾನವಾಲಾಬಾಗದಲ್ಲಿ, ಗುಂಡಿನ ಮಳೆ ಗರದನು

(ಆ) ರೊಚ್ಚಿಗೆದ್ದ ಜನರು ಎಂಬಲ್ಲಿ ಪೋಲೀಸರನ್ನು ಸುಟ್ಟರು

(ಇ) ರು ಅಸೆಂಬ್ಲಿಯ ಪ್ರತಿನಿಧಿಗಳ ಪರವಾಗಿ ಮೊದಲನೆಯ ಅಧ್ಯಕ್ಷರಾದರು

(ಈ) ಲಾಹೋರಕಾಂಗ್ರೆಸ್ಸಿನಲ್ಲಿ ದ ಘೋಷಣೆಯನ್ನು ಮಾಡಲಾಯಿತು.

(ಉ) ಕ್ರಿ ಶ ರಲ್ಲಿ ಶಾಸನಭಂಗವ ಆಂದೋಲನವು ಹೊರಟಿತು

# ೨೦ ಪ್ರಾಂತಗಳಲ್ಲಿ ಪ್ರಥಮ ಕಾಂಗ್ರೆಸ್ ಸರಕಾರಗಳು

**ಚುನಾವಣೆಗಳು** — ೧೯೩೫ನೆಯ ಇಸ್ವಿಯ ಘಟನಾಕಾಯ್ದೆಯನ್ನು ಹಿಂದೀಯರ ಒಪ್ಪಿಗೆಗೆ ವಿರುದ್ಧವಾಗಿ ಆಚರಣೆಯಲ್ಲಿ ತಂದುದರಿಂದ, ಅದನ್ನು ಮುರಿಯಲು ಕಾಂಗ್ರೆಸ್ಸು ನಿರ್ಧರಿಸಿತು, ಕೇಂದ್ರ ಶಾಸನಸಭೆಯ ಚುನಾವಣೆಗಳು ಈ ಮೊದಲೇ ನಡೆದು ಕಾಂಗ್ರೆಸ್ಸೇ ಬಹುಮತದ ಪಕ್ಷವಾಗಿತ್ತು, ಆದ್ದರಿಂದ ಕೇಂದ್ರಶಾಸನಸಭೆಯಲ್ಲಿ ೧೯೩೫ರ ಕಾಯ್ದೆಯು ಒಪ್ಪಿಗೆಗೆ




ಬಂದಾಗ, ಕಾಂಗ್ರೆಸ್ ಪಕ್ಷದ ಪ್ರಯತ್ನದಿಂದ ಅದು ಕಿತ್ತಿ ಒಗೆಯಲ್ಪಟ್ಟಿತು. ಇದರ ಅನಂತರ ಆ ಕಾಯ್ದೆಯಂತೆ ಪ್ರಾಂತಿಕ ಸ್ವಾಯತ್ತತೆಯನ್ನು ಅಲ್ಲಿ ಪ್ರಾರಂಭಿಸಿದರು ೧೯೩೭ರಲ್ಲಿ ನಡೆದ ಪ್ರಾಂತಿಕ **ಚುನಾವಣೆಗಳಲ್ಲಿಯೂ** ಕಾಂಗ್ರೆಸ್ಸು ಇದೇ ಉದ್ದೇಶದಿಂದ ಭಾಗವಹಿಸಿ, ಪ್ರಚಂಡ ವಿಜಯವನ್ನು

ಸಂಪಾದಿಸಿತು ಮುಂಬಯಿ, ಮದ್ರಾಸ, ಮಧ್ಯಪ್ರಾಂತ, ಬಿಹಾರ, ಒಡಿಸಾ ಹಾಗೂ ಸಂಯುಕ್ತಪ್ರಾಂತ ಈ ಆರು ರಾಜ್ಯಗಳಲ್ಲಿ ಕಾಂಗ್ರೆಸಿಗ ನಿಚ್ಚಳ ಬಹುಮತ ದೊರೆಯಿತು

**ಕಾಂಗ್ರೆಸ್ ಮಂತ್ರಿಮಂಡಲಗಳು** — ಮೇಲೆ ಹೇಳಿದ ಆರು ಪ್ರಾಂತಗಳಲ್ಲಿ ಕಾಂಗ್ರೆಸಿನ ಪಕ್ಷವೇ ಮಂತ್ರಿಮಂಡಲಗಳನ್ನು ರಚಿಸಬೇಕಾಗಿತ್ತು, ಆದರೆ ಮಂತ್ರಿಮಂಡಲಗಳ ದೈನಂದಿನ ಆಡಳಿತದಲ್ಲಿ ಗವ್ಹರ್ನರರು ತಮ್ಮ ವಿಶೇಷಾಧಿಕಾರದ ಬಲದಿಂದ ಕೈಹಾಕುವದಿಲ್ಲವೆಂದು ಆಶ್ವಾಸನ ಕೊಟ್ಟ ಹೊರತು ತಾನು ಮಂತ್ರಿಮಂಡಲ ರಚಿಸುವದಿಲ್ಲವೆಂದು ಕಾಂಗ್ರೆಸು ಸ್ಪಷ್ಟವಾಗಿ ತಿಳಿಸಿತು ಇದರಿಂದ ೧೯೩೫ನೆಯ ಇಸವಿಯ ಕಾಯ್ದೆಯನ್ನು ಯಶಸ್ವಿ ಮಾಡಬೇಕೆಂದಿದ್ದ ಬ್ರಿಟಿಶ ಸರಕಾರದವರ ಕುಟಿಲ ನೀತಿಗ ಪೆಟ್ಟು ಬಿತ್ತು. ೧೯೩೭ನೆಯ ಇಸವಿಯ ಎಪ್ರಿಲ್ ೧ನೆಯ ದಿನಾಂಕ, ಈ ಘಟನಯು ಕಾರ್ಯಕಾರಿ ಆಗುವದಿತ್ತು ಆ ದಿನ ಕಾಂಗ್ರೆಸಿನ ಆದೇಶದ ಮೇರಗ ರಾಷ್ಟ್ರದಲ್ಲೆಲ್ಲ ಹರತಾಳವನ್ನಾಚರಿಸಲಾಯಿತು, ಆದ್ದರಿಂದ ಆ ದಿನ ಲೋಕನಿಯುಕ್ತ ಮಂತ್ರಿಮಂಡಲದ ರಚನೆಯಾಗಲಿಲ್ಲ, ಆದ್ದರಿಂದ ಗವ್ಹರ್ನರರು ತಾತ್ಪೂರ್ತಿಕ ನಡುಗಾಲದಮಂತ್ರಿಮಂಡಲ (Interim Cabinet)ವನ್ನು ರಚಿಸಿಕೊಂಡು, ಹೊಸ ರಾಜ್ಯಘಟನೆಗ ಜನ್ಮಪಿತ್ರರು, ಆದರೆ ಶಾಸನಸಭೆಗಳ ಬೆಂಬಲವಿಲ್ಲದ ಮಂತ್ರಿಮಂಡಲಗಳು ಅದೆಷ್ಟು ದಿನ ಬಾಳುವವು? ಬ್ರಿಟಿಶ ಸರಕಾರವು ತಲೆಯನ್ನು ಬಗ್ಗಿಸಲೇ ಬೇಕಾಯಿತು ಅದರಂತ ಜೂನ್ ತಿಂಗಳಲ್ಲಿ ಕಾಂಗ್ರೆಸು ಕೇಳಿದ ಆಶ್ವಾಸನವನ್ನು ಕೊಟ್ಟಿತು ತತ್ಪರಿಣಾಮವಾಗಿ ಜುಲೈ ೧೯೩೭ರಲ್ಲಿ, ಮೊತ್ತಮೊದಲ ಬಾರಿ ಕಾಂಗ್ರೆಸಿನ ಮಂತ್ರಿಮಂಡಲಗಳು ಆರು ಪ್ರಾಂತಗಳಲ್ಲಿ ರಚಿತವಾದುವು ಬಳಿಕ ಗಡಿನಾಡು ಹಾಗೂ ಆಸಾಮ ಪ್ರಾಂತಗಳೂ ಕಾಂಗ್ರೆಸ್‌ಪಕ್ಷದ ಕೈಯಲ್ಲಿ ಬಂದವು ಸಿಂಧದಲ್ಲಿ ಕೂಡ ಕೆಲಕಾಲ ಕಾಂಗ್ರೆಸಿನ ಬೆಂಬಲವುಳ್ಳ ರಾಷ್ಟ್ರೀಯ ಸರಕಾರವು ಜಾರಿಯಲ್ಲಿ ಇತ್ತು

**ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯ** — ಕಾಂಗ್ರೆಸು ಮೊದಲಿನಿಂದಲೂ ಪ್ರತಿಪಾದಿಸುತ್ತ ಬಂದ ತತ್ತ್ವಗಳನ್ನೇ ಕಾರ್ಯರೂಪಕ್ಕಿಳಿಸಲು ಆರಂಭಿಸಿತು ಪಾನನಿರೋಧವನ್ನು ಕೃತಿಯಲ್ಲಿ ತಂದಿತು, ರೈತರಿಗೆ ಸಹಾಯನೀಡಲು ಋಣವಿಮೋಚನದ ಕಾಯದೆಯನ್ನು ಪಾಸುಮಾಡಿಕೊಂಡಿತು ಕರಾಚಿಯ ಕಾಂಗ್ರೆಸಿನಲ್ಲಿ ಸಾರಿದ ಮೂಲಭೂತ ಹಕ್ಕುಗಳ ಪ್ರಕಾರ, ಸುಧಾರಣೆಗಳನ್ನು ಕೈಕೊಳ್ಳಲಾಯಿತು

**ಕಾಂಗ್ರೆಸ ಮಂತ್ರಿಮಂಡಲಗಳ ರಾಜೀನಾಮೆ** — ೧೯೩೯ರಲ್ಲಿ ಎರಡನೆಯ

ಮಹಾಯುದ್ಧವು ಪ್ರಾರಂಭವಾಯಿತು ಅದರಲ್ಲಿ ಹಿಂದುಸ್ತಾನವನ್ನು ಹಿಂದೀಯರ ಮನಸ್ಸಿನ ವಿರುದ್ಧವಾಗಿ ಬ್ರಿಟಿಶ ಸರಕಾರವು ತೊಡಗಿಸಿದ್ದರಿಂದ, ಯುದ್ಧಪ್ರಯತ್ನದ ವಿಷಯದಲ್ಲಿ ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳ ನಡುವೆ ಘರ್ಷಣವುಂಟಾಗಹತ್ತಿತು ಕಾಂಗ್ರೆಸು ಕೇಳಿದ ಪ್ರಕಾರ ಯುದ್ಧದ ಧ್ಯೇಯವನ್ನು ಸ್ಪಷ್ಟವಾಗಿ ಸಾರಲು ಬ್ರಿಟಿಶ್ ಸರಕಾರವು ನಿರಾಕರಿಸಿದ್ದರಿಂದ, ಕಾಂಗ್ರೆಸ್ ಮಂತ್ರಿಮಂಡಲಗಳು ೧೯೩೯ರ ಅಕ್ಟೋಬರ್ ಮತ್ತು ನವ್ಹೆಂಬರ್ ತಿಂಗಳುಗಳಲ್ಲಿ ರಾಜೀನಾಮ ಕೊಟ್ಟು ಹೊರಬಿದ್ದುವು ಬ್ರಿಟಿಶ್ ಸರಕಾರವು ಇದರ ದಾರಿಯನ್ನೇ ನೋಡುತ್ತಿತ್ತು ಕೂಡಲೇ ೯೩ನೆಯ ಕಲಮನ್ನು ಬಳಕೆಯಲ್ಲಿ ತಂದು, ಗವ್ಹರ್ನರರ ನಿರಂಕುಶ ಆಡಳಿತವನ್ನು ಪ್ರಾರಂಭಿಸಿತು ಗವ್ಹರ್ನರರ ಆಳಿಕೆಯಲ್ಲಿ ಕಾಂಗ್ರೆಸು ಆಗ ತಾನೇ ಪ್ರಾರಂಭಿಸಿದ ಸುಧಾರಣೆಗಳೆಲ್ಲ ಮಣ್ಣುಗೂಡಿದುವು

## ಅಭ್ಯಸನಗಳು

೧ ೧೯೩೭ರ ಚುನಾವಣೆಗಳಿಂದ ಯಾವ ಮಾತು ಸಿದ್ಧವಾಯಿತು?

೨ ೧೯೩೭ರ ಎಪ್ರಿಲ್ ೧ರಂದು ಲೋಕನಿಯುಕ್ತ ಮಂತ್ರಿಮಂಡಲದ ರಚನೆ ಏಕ ಆಗಲಿಲ್ಲ?

೩ ಮುಂದೆ ಯಾವ ಯಾವ ಪ್ರಾಂತಗಳಲ್ಲಿ ಕಾಂಗ್ರೆಸಿನ ಮಂತ್ರಿಮಂಡಲಗಳ ರಚನೆಯಾಯಿತು?

೪ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆ ಕೊಡಲು ಕಾರಣಗಳೇನು?

# ೨೧ ೨ನೆಯ ಜಾಗತಿಕ ಯುದ್ಧ ಮತ್ತು ಭಾರತದಲ್ಲಿ ೧೯೪೨ರ ಸ್ವಾತಂತ್ರ್ಯಯುದ್ಧ

**೨ನೆಯ ಜಾಗತಿಕ ಯುದ್ಧ** —(೧೯೩೯) ಕಾಂಗ್ರೆಸ್ ಮಂತ್ರಿಮಂಡಲಗಳು ಏರ್ಪಟ್ಟ ವರುಷವೇ ಚೀನ-ಜಪಾನಗಳ ನಡುವೆ ಅಘೋಷಿತ ಯುದ್ಧವು ಪ್ರಾರಂಭವಾಯಿತು, ಆದರೆ ಇದಿನ್ನೂ ಜಾಗತಿಕಸ್ವರೂಪವನ್ನು ಹೊಂದಿರಲಿಲ್ಲ ಮೊದಲನೆಯ ಮಹಾಯುದ್ಧದ ಅನಂತರ ಆದ ವರ್ಸೆಲಿಸ್ ಒಪ್ಪಂದದಿಂದಾದ ಅವಮಾನ-ನಷ್ಟಗಳನ್ನು ತೊಡೆದುಹಾಕಲು ಹಿಟ್ಲರನು ಮಾಡಿದ ಧೂರ್ತಪ್ರಸಂಗದಿಂದಲೇ, ಎರಡನೆಯ ಜಾಗತಿಕಯುದ್ಧವು ಆರಂಭವಾಯಿತು ಜರ್ಮನಿಯ ಸರ್ವಾಧಿಕಾರಿಯಾದ ಹಿಟ್ಲರನು ಒಂದಿಲ್ಲೊಂದು ನವದಿಂದ ಜಗಳವನ್ನು ಹುಡುಕುತ್ತಿದ್ದನು ಕೊನೆಗೆ ಅವನು ಪೋಲಂಡಿನ ಮೇಲೆ ಕ್ರೂರ ದಾಳಿಯನ್ನು ಮಾಡಿದನು ಆಗ 'ಹಿಟ್ಲರನ ಆಕ್ರಮಣವೃತ್ತಿ'ಯು ತಡೆಯದಂತಾಗಿ, ಇಂಗ್ಲಂಡ್-ಫ್ರಾನ್ಸುಗಳೂ ಯುದ್ಧವನ್ನು ಸಾರಿದುವು ವ್ಹಾಯಿಸರಾಯನೇ ಭಾರತದ ಪರವಾಗಿ ಯುದ್ಧವನ್ನು ಸಾರಿದನು ಇಂತಹ ಮಹತ್ತ್ವದ ನಿರ್ಣಯವನ್ನೂ, ತಮ್ಮನ್ನು ವಿಚಾರಿಸದೆ ಕೈಕೊಂಡುದಕ್ಕಾಗಿ ಕಾಂಗ್ರೆಸ್ ಮಂತ್ರಿಮಂಡಲಗಳೆಲ್ಲ ರಾಜೀನಾಮೆಯನ್ನು ಕೊಟ್ಟುವು

**ಸರಕಾರಕ್ಕೆ ವಿರೋಧ** —ಕಾಂಗ್ರೆಸು ಹಿಟ್ಲರನ ಸರ್ವಾಧಿಕಾರದ ತತ್ತ್ವವನ್ನು ದ್ವೇಷಿಸುತ್ತಿತ್ತು, ಆದರೆ ಈಗ ಬ್ರಿಟಿಶರು ಕೂಡ ಸರ್ವಾಧಿಕಾರತನದಿಂದಲೇ ವರ್ತಿಸಿದರೆಂದು, ಕಾಂಗ್ರೆಸ್ಸು ಸರಕಾರವನ್ನು ವಿರೋಧಿಸತೊಡಗಿತು ಅಲ್ಲದೆ, ಯುದ್ಧದ ಉದ್ದೇಶಗಳು ಯಾವವು? ಪ್ರಜಾಪ್ರಭುತ್ವದ ವಿಸ್ತರಣವೆ, ಅಥವಾ ಜನರ ಅಭಿಮತದಂತೆ ರಾಜ್ಯಗಳನ್ನು ಸುಧಾರಿಸುವುದೆ?—ಎಂಬುದನ್ನು ಘೋಷಿಸಬೇಕೆಂದು ಒತ್ತಾಯಮಾಡಿತು

**ಒಪ್ಪಂದದ ಪ್ರಯತ್ನ** —ಆಗ ವ್ಹಾಯಿಸ್‌ರಾಯನು ಭಾರತ-ಬ್ರಿಟನುಗಳಲ್ಲಿ ಒಪ್ಪಂದಮಾಡುವ ಉದ್ದೇಶದಿಂದ ಸರ್ವಪಕ್ಷೀಯ ಮುಂದಾಳುಗಳ ಪರಿಷತ್ತನ್ನು ಕರೆದು ವಿಚಾರವಿನಿಮಯ ಮಾಡಿದನು ಆಗ ಮಹಾತ್ಮರು "ಭಾರತೀಯ ಶಾಸನಗಳನ್ನು ರಚಿಸುವ ಬಗೆಗೆ ಭಾರತೀಯರಿಗೆ ಅಧಿಕಾರ ಕೊಡುವ ವರೆಗೆ ಒಪ್ಪಂದವು ಸಾಧ್ಯವಿಲ್ಲ" ಎಂದು ಹೇಳಿದರು ವ್ಹಾಯಿಸ್‌ರಾಯನು—'ಸಾಮಂತಸ್ವರಾಜ್ಯ'ದ ಆಸೆಯನ್ನು ತೋರಿಸಿದನು ಮಹಾತ್ಮರು ಇದಕ್ಕೆ ಬಲಿಬೀಳಲಿಲ್ಲ

**ಸಾಮಂತ-ಸ್ವರಾಜ್ಯದ ಘೋಷಣೆ** — ಮಹಾತ್ಮರು ಹೊರಬಂದ ಮೇಲೆ ಪುನಃ ಶಾಸನಭಂಗದ ಆಂದೋಲನವನ್ನು ಆರಂಭಿಸಿದರು ಆಗ ವ್ಹಾಯಿಸ್-ರಾಯನು ಭಾರತೀಯರ ಮೋರೆಯ ಮೇಲ ಕೈಯಿಳಿಯುವದಕ್ಕಾಗಿ, ತನ್ನ ಕಾರ್ಯಕಾರಿ ಮಂಡಳವನ್ನು ವಿಸ್ತರಿಸಿ ಭಾರತೀಯರನ್ನು ಸೇರಿಸಿಕೊಂಡನು, ಆದರ ಇದು ಜಾತೀಯ ತತ್ತ್ವದ ಮೇಲೆ ರಚಿತವಾಗಿತ್ತು ಸರಕಾರದ ಆಶ್ರಿತರೇ ಅಲ್ಲ ಹಚ್ಚಾಗಿ ಇದ್ದರು ಕಾಂಗ್ರೆಸಿಗರು ಯಾರೂ ಇರಲಿಲ್ಲ ಅದರಿಂದ, ಈ ಹೊಸ ವ್ಯವಸ್ಥೆಯಿಂದ ಭಾರತೀಯರಿಗೇನೂ ಸಮಾಧಾನವಾಗಲಿಲ್ಲ

**ಅಟಲಾಂಟಿಕ್ ಘೋಷಣೆ** — (೧೯೪೧) ಆಗ, ಅಮೇರಿಕೆಯ ಅಧ್ಯಕ್ಷ ರುಜುವೆಲ್ಟನೂ, ಬ್ರಿಟಿಶ ಮುಖ್ಯಮಂತ್ರಿ ವಿನ್‌ಸ್ಟನ್ ಚರ್ಚಿಲನೂ ಅಟಲಾಂಟಿಕಿನಲ್ಲಿ ಕೂಡಿ, 'ಎಲ್ಲ ರಾಷ್ಟ್ರಗಳಿಗೂ ಯುದ್ಧೋತ್ತರದಲ್ಲಿ ಸ್ವಾತಂತ್ರ್ಯವನ್ನು ಕೊಡಲಾಗುವದು' ಎಂದು ಸಾರಿದರು 'ಯುದ್ಧಾನಂತರ ಎಲ್ಲ ರಾಷ್ಟ್ರಗಳನ್ನೂ ಭಯದಿಂದ ಬಿಡುಗಡೆ, ಹಸಿವಿನಿಂದ ಬಿಡುಗಡೆ ಮಾಡಿ, ವಿಚಾರ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯ ಇವುಗಳನ್ನು ಕೊಟ್ಟು ಕಾಪಾಡುವದೇ ಬ್ರಿಟನ್ ಅಮೇರಿಕೆಗಳ ಮಹೋದ್ದೇಶ' ಎಂದು ಸಾರಲಾಯಿತು ಇದೇ ಅಟಲಾಂಟಿಕ್ ಘೋಷಣೆ! ಇದರಿಂದ ಭಾರತೀಯರಿಗೇನೋ ತುಸು ಮಟ್ಟಿಗ ಸಮಾಧಾನವಾಯಿತು, ತುಸು ಆಸೆಯೂ ಹುಟ್ಟಿತು, ಆದರೆ ಶೀಘ್ರದಲ್ಲಿಯೇ 'ಅಟಲಾಂಟಿಕ ಘೋಷಣೆ ಯುರೋಪದ ರಾಷ್ಟ್ರಗಳಿಗಷ್ಟೇ ಸಂಬಂಧಪಟ್ಟಿದೆ, ಅವುಗಳ ಅಧೀನದಲ್ಲಿರುವ ಆಶ್ರಿತರಾಷ್ಟ್ರಗಳ ಬಗ್ಗೆ ಅವು ಅನ್ವಯಿಸುವದಿಲ್ಲ,' ಎಂದು ತಿದ್ದುಪಡಿ ಹೊರಟಿತು ಮಹಾತ್ಮರು ಮತ್ತೆ ಶಾಸನಭಂಗದ ಆಂದೋಲನವನ್ನು ಆರಂಭಿಸಿದರು ಕಾಂಗ್ರೆಸಿನ ಮುಂದಾಳುಗಳನ್ನು ಸರಕಾರವು ಸೆರೆಮನೆಯಲ್ಲಿ ಸೇರಿಸಿತು ಇದರಿಂದ ಜನಸಾಮಾನ್ಯರು ಕೂಡ ಮತ್ತಿಷ್ಟು ಕಂಗೆಟ್ಟರು, ಕೋಪಗೊಂಡರು.

**ಜಪಾನು ಯುದ್ಧ ಸಾರಿತು** — ಈ ಹೊತ್ತಿಗೆ ಜಪಾನು ಬ್ರಿಟಿಶ-ಅಮೇರಿಕನರ ವಿರುದ್ಧವಾಗಿ ಯುದ್ಧವನ್ನು ಸಾರಿತು, ಕೆಲವೇ ದಿನಗಳಲ್ಲಿ ಮಲಯಾ-ಸಿಂಗಾಪುರಗಳನ್ನು ವಶಪಡಿಸಿಕೊಂಡಿತು ಹಾಗೆಯೇ ಮುಂದೆ ಹೆಜ್ಜೆಯಿಡುತ್ತ ಬ್ರಿಟಿಶರ ಸಿಂಗಾಪುರವನ್ನು ಗೆದ್ದು ಬ್ರಹ್ಮದೇಶವನ್ನು ಹೊಕ್ಕಿತು ಇದರಿಂದ ಭಾರತೀಯರಿಗೆಲ್ಲ 'ಬ್ರಿಟಿಶರ ನೌಕಾಬಲ-ಸೈನ್ಯಬಲ-ವಿಮಾನಬಲ ಇವೆಲ್ಲವೂ ಅಜೇಯ, ಅವರ ಚಕ್ರಾಧಿಪತ್ಯ ಆಚಂದ್ರಾರ್ಕ' ಎಂದಿದ್ದ ನಂಬಿಕೆ ತೊಲಗಿತು. ಅತ್ತ ಹಿಟ್ಲರನು ಇಜಿಪ್ತದಲ್ಲಿ ಮುನ್ನಡೆಯಲು ಅವಕಾಶ ಸಿಕ್ಕಲಿಲ್ಲವೆಂದು ಕಾಕೇಸಸ್ ಮಾರ್ಗವಾಗಿ ನುಗ್ಗಿದಾಗ, ಬ್ರಿಟಿಶರಿಗೆ ಭೀತಿ ಹುಟ್ಟಿತು.

**ಮಹಾಯುದ್ಧದ ಕಾಳ್ಗಿಚ್ಚು** — ಮಹಾಯುದ್ಧದ ಪ್ರಖರಜ್ವಾಲೆಯು ಕಾಳ್ಗಿಚ್ಚಿನಂತೆ ಎಲ್ಲ ಕಡೆಗೂ ಪಸರಿಸಿತು ಈ ವರೆಗೆ ರಶಿಯಾ-ಜರ್ಮನಿಗಳು ಮಿತ್ರರಾಷ್ಟ್ರಗಳಾಗಿದ್ದುವು, ಆದರೆ ೧೯೪೧ನೆಯ ಜೂನದಲ್ಲಿ ಹಿಟ್ಲರನು ರಶಿಯಾದ ಮೇಲೆ ದಂಡೆತ್ತಿ ಹೋದನು, ಮಿಂಚಿನ ವೇಗದಿಂದ ಮುನ್ನಡೆದನು ಮಾಸ್ಕೋ ಪಟ್ಟಣವನ್ನು ಸಮೀಪಿಸಿದನು ಸ್ಟಾಲಿನ್‌ಗ್ರಾಡವನ್ನೂ ಮುತ್ತಿದನು ಆಗ ರಶಿಯಾದ ಸರ್ವಾಧಿಕಾರಿ ಸ್ಟಾಲಿನನು ಕಲಿತನದಿಂದ ಇದಿರಾದನು ಎಷ್ಟೋ ತಿಂಗಳು ಯುದ್ಧ ನಡೆಯಿತು

**ಕ್ರಿಪ್ಸನ ಸಂಧಾನ** — (೧೯೪೨) ಈಗ ಬ್ರಿಟಿಶರು ತಮ್ಮ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ, ಎಲ್ಲ ಜನಾಂಗಗಳೊಂದಿಗೂ ಆದಷ್ಟು ಸ್ನೇಹವನ್ನು ಬೆಳೆ ಬೇಕಾಗಿತ್ತು ಅದರಿಂದ ಭಾರತೀಯರೊಡನೆ ಸಂಧಾನ ನಡೆಸಲು, ಸರ್ ಸ್ಟ್ಯಾಫೋರ್ಡ್ ಕ್ರಿಪ್ಸನನ್ನು ಕಳಿಸಿದರು ಕ್ರಿಪ್ಸನು ದಿಲ್ಲಿಯಲ್ಲಿ ಮುಖಂಡರನ್ನು ಕಂಡು ಮಾತುಕತ ನಡೆಸಿದನು ಇಷ್ಟರಲ್ಲಿಯೆ ಜಪಾನಿಗಳು ಅಂದಮಾನ-ನಡುಗಡ್ಡೆಗಳನ್ನು ವಶಪಡಿಸಿಕೊಂಡು, ಕೋಲಂಬೋದ ಮೇಲ ಬಾಂಬನ್ನು ಮಳೆಗರೆದರು, ಬ್ರಹ್ಮದೇಶವೂ ಬ್ರಿಟಿಶರ ಕೈಬಿಟ್ಟಿತು ಯುದ್ಧವು ಭಾರತದ ಬಾಗಿಲಿಗೇ ಬಂತು ಬ್ರಿಟಿಶರ ಪರಾಜಯದ ಸುದ್ದಿಯು ಭಾರತದಲ್ಲಿ ಮನೆ-ಮನೆಯ ಮಾತಾಯಿತು ಈ ಸನ್ನಿವೇಶದಲ್ಲಿ ಕ್ರಿಪ್ಸನು ಪೂರ್ಣ ತೊಡಕಿನಲ್ಲಿ ಸಿಕ್ಕಿಕೊಂಡನು ಕೊನೆಗ ಮಹಾತ್ಮರು —"ಭಾರತದ ರಾಷ್ಟ್ರೀಯ ಸರಕಾರವೇ ಸಂಪೂರ್ಣ ಅಧಿಕಾರವುಳ್ಳ ಯುದ್ಧಮಂತ್ರಿಮಂಡಲವಾಗಬೇಕು, ನಿಮ್ಮ ಸ್ವರಾಜ್ಯದ ಕೊಡುಗಯು ಬೆಳಗಾದರೆ ದಿವಾಳಿಯಾಗಲಿರುವ ಬ್ಯಾಂಕಿನ ಮೇಲ ಮುಂದಿನ ದಿನಾಂಕವನ್ನು ಹಾಕಿಕೊಟ್ಟ ಚೆಕ್ಕಿನಂತಿದೆ ಈಗ ನಮ್ಮದೇ ಯುದ್ಧಮಂತ್ರಿಮಂಡಲವಾದರೆ ಮಾತ್ರ ಒಪ್ಪಂದಕ್ಕೆ ಕೈಯನ್ನು ಮುಂದೆ ಮಾಡುವೆವು" ಎಂದು ಸ್ಪಷ್ಟವಾಗಿ ಹೇಳಿದರು ಕ್ರಿಪ್ಸನಿಗ ಮರುಮಾತಾಡಲು ಸಾಧ್ಯವಿರಲಿಲ್ಲ

**ಚಲೇಜಾವ್ ಚಳವಳಿ** —(೧೯೪೨) ಈಗ ಬ್ರಿಟಿಶರು ಉಭಯಸಂಕಟದಲ್ಲಿ ಸಿಕ್ಕಿಕೊಂಡರು ಕ್ರಿಪ್ಸ್ ಸಂಧಾನವು ವಿಫಲವಾದುದರಿಂದ, ಬ್ರಿಟಿಶರ ವಚನಗಳೆಲ್ಲ ಕೇವಲ ಸ್ವಾರ್ಥಸಾಧಕ—ಎಂದು ಭಾರತೀಯರ ಮನವರಿಕೆಯಾಯಿತು ಅದಕ್ಕಾಗಿ ರಾಷ್ಟ್ರೀಯಪಕ್ಷದವರು ಯುದ್ಧಪ್ರಸಕ್ತಿಯೊಡನೆ ಪೂರ್ಣ ಅಸಹಕಾರ ಮಾಡಿದರು, ಇಷ್ಟರಲ್ಲಿ ೧೯೪೨ನೆಯ ಅಗಸ್ಟದಲ್ಲಿ ಮಹಾತ್ಮರು 'ಕ್ವಿಟ್ ಇಂಡಿಯಾ' 'ಬ್ರಿಟಿಶರೇ ಭಾರತವನ್ನು ಬಿಟ್ಟು ಹೊರಡಿರಿ' 'ಚಲೇಜಾವ್' ಎಂದು ಘೋಷಣೆಯನ್ನು ಮಾಡಿದರು. ಮತ್ತು 'ದೇಶದಲ್ಲೇನಾದರೂ ಅರಾಜಕತೆ ನಡೆದರೆ, ಅದಕ್ಕೆ ಬ್ರಿಟಿಶರ ಹೊಣೆಗೆಟ್ಟ ಆಡಳಿತವೇ

ಕಾರಣವಲ್ಲದೆ ರಾಷ್ಟ್ರೀಯ ಸಭೆಯೂ ದೋಷಿಯಾಗಲಾರದು' ಎಂದು ಸಾರಿದರು ಬ್ರಿಟಿಶರು ಈ ಗಂಡಾಂತರಕ್ಕೆ ಎದಗೊಡಬೇಕಾಯಿತು ಇದೇ ಹೊತ್ತಿಗೆ ಇನ್ನೊಂದು ಕಡೆಯ ಗಂಡಾಂತರವೂ ಏರಿಬಂದಿತು ಜಪಾನರು ಬ್ರಹ್ಮದೇಶದ ಮಾರ್ಗವಾಗಿ ಆಸಾಮು-ಬಂಗಾಲಗಳ ಮೇಲೆ ದಾಳಿಯಿಡಲು ಹೊಂಚುಹಾಕಿದರು ಈಗಂತೂ ಬ್ರಿಟಿಶ ಸರಕಾರವು ಜೀವದ ಹಂಗು ದೊರದು ನಿಂತಿತು ಜಪಾನರನ್ನು ತಡೆಯಲು ಸೈನ್ಯವನ್ನು ಅಟ್ಟಿತು, ಇತ್ತ 'ಚಲೇಜಾವ್' ಚಳವಳಿಯ ಮುಂದಾಳುಗಳಾದ ಮಹಾತ್ಮಾ ಗಾಂಧಿ, ಪಂಡಿತ ನೆಹರು, ಸರದಾರ ಪಟೇಲ ಮೌಲಾನಾ ಆಝಾದ ಮುಂತಾದ ಎಲ್ಲ ರಾಜಕೀಯ ಮುಂದಾಳುಗಳನ್ನೂ ಸ್ಥಾನಬದ್ಧತೆಯಲ್ಲಿಟ್ಟಿತು ಭಾರತದ ಎಲ್ಲ ರಾಜಕೀಯ ಸಂಸ್ಥೆಗಳನ್ನೂ ಅಕ್ರಮಸಂಸ್ಥೆಗಳೆಂದು ಸಾರಿತು ಮಹಾತ್ಮರು 'ಹೋರಾಡಿರಿ ಇಲ್ಲವೆ ಮಡಿಯಿರಿ' ಎಂಬ ಸಂದೇಶವನ್ನು ಕೊಟ್ಟು ಸೆರೆಮನೆಯನ್ನು ಸೇರಿದರು

**ದ್ವಿತೀಯ ಸ್ವಾತಂತ್ರ್ಯಸಮರ** – ೧೮೫೭ರಲ್ಲಿ ಆದುದು ಭಾರತೀಯರ ಮೊದಲನೆಯ ಸ್ವಾತಂತ್ರ್ಯ ಸಮರ, ಈಗ ಆರಂಭವಾದುದು ಎರಡನೆಯದು ಇದರಲ್ಲಿ ಆಗಿನಂತೆ ಸಕ್ರಮವಾದ ಸೈನ್ಯಸಿದ್ಧತೆ, ಶಸ್ತ್ರಾಸ್ತ್ರಗಳ ಸಂಗ್ರಹ ಇವು ಇರಲಿಲ್ಲ ಜನತೆಯ ಮುಂದಾಳುಗಳು "ಅದೃಶ್ಯ"ರಾಗಿ ಸರಕಾರ ವಿರೋಧ ಚಳವಳಿಯನ್ನು ನಡೆಯಿಸಿದರು ಜನತೆಯ ಸಂಪೂರ್ಣ ಬೆಂಬಲವು ಚಳವಳಿಗೆ ಇದ್ದಿತು ಆದುದರಿಂದ ಸರಕಾರದ ಅತಿಕಠೋರ ದಬ್ಬಾಳಿಕೆಯು ಕೂಡ ವ್ಯರ್ಥವಾಯಿತು

**ಜರ್ಮನಿಯ ಪರಾಭವ** — ಸ್ಟಾಲಿನಗ್ರಾಡ ಮುತ್ತಿಗೆಯಲ್ಲಿ ರಶಿಯನರು ಪ್ರಾಣಗಳ ಪರವೆಯಿಲ್ಲದೆ ಹೋರಾಡಿದರು ಕೊನೆಗೆ ೧೯೪೩ನೆಯ ಫೆಬ್ರುವರಿಯ ೨ನೆಯ ತಾರೀಖಿನಂದು ಜರ್ಮನಿಯು ಶರಣಾಯಿತು, ಹಿಂದೋಟಕ್ಕೆ ಹೆಜ್ಜೆಯಿಟ್ಟಿತು ಅಲ್ಲಿಂದಲೇ ಜರ್ಮನಿಯ ಅಳಿಗಾಲವೂ ಆರಂಭವಾಯಿತು ರಶಿಯಾ ಮುನ್ನಡೆಯುತ್ತ, ಕಳೆದುಕೊಂಡ ತನ್ನೆಲ್ಲ ಭಾಗವನ್ನೂ ವಶಮಾಡಿಕೊಂಡಿತು ಇದೇ ಹೊತ್ತಿಗೆ ಅಮೇರಿಕನರೂ ಬ್ರಿಟಿಶರೂ ಆಫ್ರಿಕೆಯಲ್ಲಿ ಟ್ಯುನಿಸ್ ಪ್ರಾಂತದಲ್ಲಿ ಜರ್ಮನರನ್ನು ಹಣ್ಣುಮಾಡಿದರು. ಆ ಮೇಲೆ ಅಮೇರಿಕಾ, ಬ್ರಿಟಿಶ ಸೈನ್ಯಗಳು ಇಟಲಿಯಲ್ಲಿ ಹೊಕ್ಕು ಜರ್ಮನರನ್ನೂ ಇಟಾಲಿಯನರನ್ನೂ ಮೆತ್ತಗೆ ಮಾಡಿದುವು ಇಟಲಿಯು ಮಿತ್ರರಿಗೆ ಶರಣುಹೋಯಿತು, ಮಿತ್ರರಾಷ್ಟ್ರಗಳಿಗೆ ವಿರುದ್ಧವಾಗಿ ಜರ್ಮನಿಯೊಂದೇ ಉಳಿಯಿತು

**ಲಾರ್ಡ್ ವೆವೆಲ್** (೧೯೪೩-೪೭) — ಈ ಕೋಲಾಹಲವು ನಡೆದಿರುವಾಗಲೇ ಲಿನ್‌ಲಿಥ್‌ಗೋ ಅವರ ಆಳಿಕೆ ಮುಗಿಯಿತು ಲಾರ್ಡ್ ವೆವೆಲ್‌ನು

ಭಾರತದ ವಾಯಿಸ್‌ರಾಯನಾಗಿ ಬಂದನು ಇವನು ೨ನೆಯ ಮಹಾಯುದ್ಧದ ಆರಂಭದಲ್ಲಿ ಇಟಲಿಯ ಮೇಲೆ ದಂಡೆತ್ತಿಹೋಗಿ ಅಬಿಸೀನಿಯವನ್ನು ತಿರುಗಿ ಗೆದ್ದುಕೊಂಡಿದ್ದನು ಜರ್ಮನಿಯ ಪ್ರಬಲ ಸೇನಾಪತಿ ರೋಮೆಲ್, ಆಫ್ರಿಕೆಯಲ್ಲಿಯ ಲಿಬಿಯಾ, ಸೊರೆನಿಕಾ ಪ್ರಾಂತಗಳನ್ನು ಗದ್ದು ಬ್ರಿಟಿಶರನ್ನು ಪರಾಭವಗೊಳಿಸಿದ್ದನು ಆಗ ಲಾರ್ಡ್ ವೆವೆಲ್ ಧೈರ್ಯದಿಂದ ಕಾದಾಡಿ ರೋಮೆಲ್‌ನನ್ನು ಸೋಲಿಸಿ, ಅವೆರಡೂ ಪ್ರಾಂತಗಳನ್ನು ತೆಗೆದುಕೊಂಡಿದ್ದನು ಇಂಥ ಮಹಾಸೇನಾನಿ ಇವನು ಈತನು ಬಂದಾಗ ಭಾರತದಲ್ಲಿ ಒಳಗೂ ಹೊರಗೂ ಯುದ್ಧಪ್ರಸಂಗಗಳು ನಡೆದಿದ್ದುವು ಭಾರತವು ದೊಡ್ಡ ರಣರಂಗವಾಗಿತ್ತು ಅದಕ್ಕಾಗಿಯೇ ಈ ಪ್ರಬಲ ಸೇನಾಪತಿಯನ್ನು ವ್ಹಾಯಿಸರಾಯನೆಂದು ಬ್ರಿಟಿಶರು ಭಾರತಕ್ಕೆ ಕಳಿಸಿದರು

ವೆವೆಲ್ಲರು ಭಾರತಕ್ಕೆ ಬಂದಾಗ, ಹೊರಗಡೆಯಿಂದ ಜಪಾನದ ದಾಳಿ ಭಾರತವನ್ನು ನುಗ್ಗುವುದರಲ್ಲಿತ್ತು ಒಳಗಡೆಯಲ್ಲಿ ಪ್ರಕ್ಷುಬ್ಧ ಭಾರತದ ಜನತೆಯು ಸ್ವಾತಂತ್ರ್ಯಸಮರವನ್ನು ಸಾಗಿಸಿತ್ತು ಮೂರನಯದಾಗಿ, ಬಂಗಾಲದಲ್ಲಿ ಭೀಕರ ಬರಗಾಲವು ತಾಂಡವವಾಡುತ್ತಿತ್ತು, ಅಲ್ಲದ ದೇಶದೊಳಗೆ ಆಹಾರಧಾನ್ಯದ ಅಭಾವದಿಂದ ಹಾಹಾಕಾರವು ಒದ್ದುಬಿಟ್ಟಿತ್ತು ಇಂತಹ ಸನ್ನಿವೇಶದಲ್ಲಿ ಎಂತಹ ಸಾಹಸಿಯೂ ಶುಂಭನಾಗಬಹುದಿತ್ತು ವೆವೆಲ್ಲನು ಮಾತ್ರ ಎದೆಗೆಡದೆ ಮುಂದುವರಿದನು

**ಬಂಗಾಲಕ್ಕೆ ಭೆಟ್ಟಿ** — ಅವನು ಮೊದಲು ಬಂಗಾಲಕ್ಕ ಹೋಗಿ, ಬರಗಾಲ ಪೀಡಿತರ ಕರುಣಾಜನಕ ದೃಶ್ಯಗಳನ್ನು ಕಣ್ಣಾರೆ ಕಂಡನು, ಆಮೇಲೆ ಅಲ್ಲಿಯ ಕಾಂಗ್ರೆಸಿಗರ ಮತ್ತು ಉದಾರಹೃದಯರ ನೆರವಿನಿಂದ, ಹಾಗೂ ಸೈನ್ಯದ ಸಹಾಯದಿಂದ ಬಡವರಿಗೆ ಅನ್ನಹಂಚುವ ವ್ಯವಸ್ಥೆಯನ್ನು ಮಾಡಿದನು ಇದರಂತೆಯೇ, ಆಸ್ಟ್ರೇಲಿಯಾ ಮೊದಲಾದ ದೇಶಗಳಿಂದ ಕಾಳನ್ನು ತರಿಸಿದನು ಹಳ್ಳಿಹಳ್ಳಿಗಳಿಗೂ ಸೀದಾ ಪದ್ಧತಿಯನ್ನು (ರೇಶನ್) ಪ್ರಾರಂಭಿಸಿದನು ಆ ಮೇಲೆ ದೇಶದಲ್ಲಿಯ ರೈತರ ಕಡೆಯಿಂದಲೇ ಕಾಳನ್ನು ಕೊಂಡು, ಧಾನ್ಯಸಂಗ್ರಹಮಾಡಿ ಹಂಚುವ ಏರ್ಪಾಡು ಮಾಡಿದನು. ಬಟ್ಟೆಯ ಸಲುವಾಗಿ ಕೆಲವು ಸರಕಾರಿ ಅಂಗಡಿಗಳನ್ನು ತರೆಯದಾಯಿತು ಈ ಪ್ರಯತ್ನಗಳಿಂದ ಹೊಟ್ಟೆ-ಬಟ್ಟೆಗಳ ಹಾಹಾಕಾರವು ಸ್ವಲ್ಪ ಮಟ್ಟಿಗೆ ಹಿಂಗಿದಂತಾಯಿತು

**ಮಹಾತ್ಮರ ಮುಕ್ತತೆ** — ಆ ಮೇಲೆ ವಾಯಿಸರಾಯನು ಎಲ್ಲ ಪ್ರಾಂತಗಳನ್ನೂ ಸುತ್ತಾಡಿ ಯುದ್ಧಪ್ರಸಕ್ತಿಗಳಿಗೆ ಪ್ರೋತ್ಸಾಹನ ಕೊಟ್ಟನು, ಆದರೆ ಅವನ ಮುಂದಿನ ಮುಖ್ಯ ಪ್ರಶ್ನೆಯೆಂದರೆ, ಭಾರತೀಯ ಸ್ವಾತಂತ್ರ್ಯ

ಸಮರವನ್ನು ಅಡಗಿಸುವದು ಈ ಕಾಲದಲ್ಲಿ ದೇಶದ ಸೂತ್ರವೆಲ್ಲ ಮಹಾತ್ಮಾ ಗಾಂಧಿಯವರ ಕೈಯಲ್ಲಿಯೇ ಇದ್ದಿತು ಅದರಿಂದ ೧೯೪೪ನೆಯ ಮೇ ತಿಂಗಳಲ್ಲಿ ಮಹಾತ್ಮರನ್ನು ಬಂಧಮುಕ್ತಮಾಡಲಾಯಿತು ಉಳಿದ ರಾಜಕೀಯ ಮುಂದಾಳುಗಳು ಮಾತ್ರ ಇನ್ನೂ ಸ್ಥಾನಬದ್ಧತೆಯಲ್ಲಿಯೇ ಉಳಿದರು ಮಹಾತ್ಮರು ಹೊರಗೆ ಬಂದ ಮೇಲೆ ಮುಂದಿನ ಹಾದಿಯನ್ನು ಹುಡುಕುವ ಯತ್ನ ನಡೆಸಿದರು

**ಮಹಾಯುದ್ಧದ ಮುಕ್ತಾಯ** — ಜರ್ಮನಿಯು ಒಮ್ಮೆ ಹಿಂದಡಿಯಿಟ್ಟುದು ಹೀನದೆಸೆಗೇ ಕಾರಣವಾಯಿತು ಅದು ಸರಿಯುತ್ತ ಸರಿಯುತ್ತ ಜರ್ಮನಿಯನ್ನೇ ಸೇರಿಕೊಂಡಿತು ರಶಿಯನರೂ ಮಿತ್ರಸೈನ್ಯದವರೂ ಅವರನ್ನು ಅಲ್ಲಿಯೂ ಬೆನ್ನಟ್ಟಿದರು ಕೂನ-ಕೋನಿಗಂತೂ ಪಶ್ಚಿಮದಲ್ಲಿ ಮಿತ್ರಸೈನ್ಯಗಳು, ಪೂರ್ವದಲ್ಲಿ ರಶಿಯನ್ ಸೈನ್ಯ— ಇವುಗಳ ನಡುವೆ ಜರ್ಮನರು, ಅಡಕೊತ್ತಿನಲ್ಲಿಯ ಅಡಕೆಯಂತೆ ಸಿಕ್ಕರು ಸಾವು ಇಲ್ಲವೆ ಶರಣಾಗತಿಯ ಹೊರತು ಬೇರೆ ಹಾದಿಯೇ ಅವರಿಗೆ ಉಳಿಯಲಿಲ್ಲ ಹಿಟ್ಲರನು ಕಾಣೆಯಾದನು ಗೋಬೆಲ್ಸನು ಆತ್ಮಹತ್ಯಮಾಡಿಕೊಂಡನು ಜರ್ಮನರು ಎದೆಯೊಡೆದುಕೊಂಡರು ರಶಿಯನರು ಮುನ್ನುಗ್ಗಿ ಬರ್ಲಿನನ್ನು ಪ್ರವೇಶಮಾಡಿದರು ನಿರುಪಾಯರಾಗಿ ಜರ್ಮನರು ಶರಣಾಗತರಾದರು (೧೯೪೫ ಮೇ ೭) ಮಹಾಯುದ್ಧವು ಮುಕ್ತಾಯವಾಯಿತು

**ವೆವೆಲ್ ಯೋಜನೆ** — ಮಹಾತ್ಮರು ಹೊರಗೆ ಬಂದಮೇಲೆ, ಭಾರತೀಯರ ಧೋರಣೆಗಳಿಗೆ ಹೊಸ ಬಣ್ಣವು ಬಂದಿತು ಶ್ರೀ ರಾಜಗೋಪಾಲಾಚಾರ್ಯರು ಕಾಂಗ್ರೆಸ್-ಮುಸ್ಲಿಂಲೀಗ ಐಕ್ಯಮಾಡುವ ಬಗೆಗೆ ಬ್ಯಾರಿಸ್ಟರ್ ಜಿನ್ನಾ ಸಾಹೇಬರೊಡನೆ ಮಾತುಕತೆ ನಡೆಸಿದರು, ಆದರೆ ಮುಸ್ಲಿಮರು ಬಹುಸಂಖ್ಯಾಕರಾಗಿರುವ ಪಂಜಾಬ, ಸಿಂಧ, ವಾಯವ್ಯಪ್ರಾಂತ, ಪೂರ್ವಬಂಗಾಲಗಳನ್ನು ಪ್ರತ್ಯೇಕಿಸಿ, 'ಪಾಕಿಸ್ತಾನ' ಎಂಬ ಸ್ವತಂತ್ರರಾಷ್ಟ್ರವನ್ನು ನಿರ್ಮಿಸಿ ತಮ್ಮ ಆಳಿಕೆಗೆ ಒಪ್ಪಿಸಲೇಬೇಕೆಂದು ಬ್ಯಾ ಜಿನ್ನಾ ಅವರು ಹಟಹಿಡಿದುದರಿಂದ, ಸಂಧಾನಪ್ರಯತ್ನವು ವಿಫಲವಾಯಿತು ಆ ಮೇಲೆ ಸರ್ ಸಪ್ರು ಅವರು ಸರ್ವಪಕ್ಷೀಯ ಪರಿಷತ್ತನ್ನು ಕರೆದು, ಎಲ್ಲರಿಗೂ ಮಾನ್ಯವಾಗುವ ಮಧ್ಯಮಾರ್ಗವನ್ನು ತೆಗೆಯಲು ಪ್ರಯತ್ನಿಸಿದರು, ಆದರೆ ಇದರಲ್ಲಿ ಮುಸ್ಲಿಂಲೀಗು ಸಹಕರಿಸಲಿಲ್ಲ ಅದರಿಂದ ಅದೂ ಅಯಶಸ್ವಿಯಾಯಿತು ಇದನ್ನೆಲ್ಲ ನೋಡುತ್ತಿದ್ದ ವೆವೆಲ್ ಸಾಹೇಬರಿಗೆ 'ಭಾರತಕ್ಕೊಂದು ಹೊಸಯೋಜನೆ ಬೇಕು, ಅದು ಭಾರತೀಯರ ಆಶೆ-ಆಕಾಂಕ್ಷೆಗಳಿಗೆ ಹೊಂದಿಕೊಳ್ಳುವಂತೆಯೇ ಇರಬೇಕು. ಇನ್ನು ಕಾಂಗ್ರೆಸನ್ನು ಹತ್ತಿಕ್ಕಿಡುವುದು ಸಾಧ್ಯವಿಲ್ಲ. ರಾಜಕೀಯ ಸೆರೆಯಾಳುಗಳನ್ನೆಲ್ಲ ಬಿಡಲೇ

ಬೇಕು' ಎಂದು ಮನವರಿಕೆಯಾಯಿತು ಅದಕ್ಕೊಂದು ಹೊಸ ಯೋಜನೆಯನ್ನು ಸಿದ್ಧಪಡಿಸಿದರು ಅದೇ ವೆವೆಲ್‌ಯೋಜನೆ

**ಯೋಜನೆಯ ವಿಷಯಗಳು** —(೧) ವ್ಹಾಯಿಸ್‌ರಾಯ್ ಮತ್ತು ಸೇನಾಪತಿ ಇವರ ಹೊರತು ಕಾರ್‍ಯಕಾರಿಮಂಡಲವೆಲ್ಲ ಹಿಂದೀಕರಣವಾಗಬೇಕು (೨) ನಡುಗಾಲ (ತಾತ್ಕಾಲಿಕ) ಸರಕಾರದಲ್ಲಿ ಹಿಂದು-ಮುಸಲ್ಮಾನರಿಗ ಸರಿಯಾಗಿಯೇ ಪ್ರಾತಿನಿಧ್ಯವಿರಬೇಕು, ಇವರೊಡನಯೆ ಹರಿಜನ, ಶೀಖ, ಕ್ರಿಶ್ಚಿಯನರಿಗೂ ಬೇರೆ ಸ್ಥಳಗಳಿರತಕ್ಕುದು (೩) ಅತ್ಯವಶ್ಯವೆನಿಸಿದಾಗ ಮಾತ್ರ ವ್ಹಾಯಿಸ್‌ರಾಯನು ತನ್ನ ವಿಶೇಷಾಧಿಕಾರ(ವ್ಹೆಟೋ)ವನ್ನು ಉಪಯೋಗಿಸಬೇಕು (೪) ಈ ನಡುಗಾಲಸರಕಾರವು ಜಪಾನೀ ಯುದ್ಧಕ್ಕೆ ಪ್ರತಿಕಾರ ಮಾಡಬೇಕು, ಮತ್ತು ಭಾರತದ ಭಾವಿ ಸೂಕ್ತರಾಜ್ಯಘಟನೆಯನ್ನು ಸಿದ್ಧಪಡಿಸಿ ಬಳಕೆಯಲ್ಲಿ ತರಬೇಕು

**ಸಿಮ್ಲಾ ಪರಿಷತ್ತು** —(೧೯೪೫ ಜೂನ್ ೨೫) ಈ ಯೋಜನೆಯ ಬಗೆಗೆ ವೆವೆಲ್ಲರು ಇಂಗ್ಲಂಡಿಗ ಹೋಗಿ, ಪಾರ್ಲಮೆಂಟಿನ ಸದಸ್ಯರೊಡನ ತುಂಬಾ ವಿಚಾರವಿನಿಮಯ ಮಾಡಿದರು ಅದರಲ್ಲಿ ಯಶಸ್ಸು ಬರಲಿಲ್ಲ ಭಾರತಕ್ಕೆ ಮರಳಿ ಬಂದ ಮೇಲೆ ಅವರು ಎಲ್ಲ ಪಕ್ಷ-ಪಂಗಡಗಳ ಪ್ರತಿನಿಧಿಗಳ ಪರಿಷತ್ತನ್ನು ಸಿಮ್ಲಾದಲ್ಲಿ ಕೂಡಿಸಿದರು ಸುಮಾರು ಮೂರು ವಾರಗಳ ವರೆಗೆ ಚರ್ಚೆ ನಡೆಯಿತು, ಸುಮ್ಮನೆ ವೇಳೆ-ಶ್ರಮಗಳ ವ್ಯರ್ಥವ್ಯಯವಾಯಿತು ೩೩ ಕೋಟಿ ಹಿಂದುಗಳೂ ೯ ಕೋಟಿ ಮುಸಲ್ಮಾನರೂ ಇರುವಾಗ, ಇಬ್ಬರಿಗೂ ಸಮನಾಗಿಯೇ ಪ್ರಾತಿನಿಧ್ಯವನ್ನು ಕೊಡುವ ಯೋಜನಯು ಮೂರ್ಖತನದ್ದೆಂಬುದು ಯಾರಿಗೂ ತೋರುವಂತಿದೆ ಬ್ಯಾರಿಸ್ಟರ್ ಜಿನ್ನಾ ಅವರು ಸಮಪ್ರಾತಿನಿಧ್ಯ ತತ್ತ್ವಕ್ಕೆ ಅಂಟಿಕೊಂಡೇ ಬಿಟ್ಟರು ಉಳಿದವರು ಇದನ್ನು ಒಪ್ಪಿಕೊಳ್ಳಲಿಲ್ಲ ಭಾರತದ ಭಾವಿ 'ರಾಜ್ಯಘಟನೆ'ಯನ್ನು ಕುರಿತು ಒಬ್ಬ ಜಿನ್ನಾರವರ ಮೇಲೆಯೇ ಅವಲಂಬಿಸಿದುದು, ವ್ಹಾಯಿಸ್‌ರಾಯನ ಸಂಕುಚಿತ ಮನೋವೃತ್ತಿಯನ್ನು ತೋರಿಸುವಂತಾಯಿತು

**ಜಪಾನಿನ ಸೋಲು** — ಜರ್ಮನಿಯ ಜಂಬವಡಗಿ ಯುರೋಪದಲ್ಲಿ ಮಹಾಯುದ್ಧವು ಮುಕ್ತಾಯವಾಗಿದ್ದರೂ, ಜಪಾನವು ತನ್ನ ಸಾಹಸವನ್ನು ಇನ್ನೂ ಸಾಗಿಸಿತ್ತು ೧೯೪೪ರಲ್ಲಿ ಇಂಫಾಲ, ಕೋಹಿಮಾ ಯುದ್ಧಗಳಲ್ಲಿ ಮಿತ್ರರಾಷ್ಟ್ರಗಳು ಜಪಾನರನ್ನು ಸೋಲಿಸಿ ಅವರನ್ನು ಬೆನ್ನಟ್ಟಿದುವು. ಆ ಮೇಲೆ ಬ್ರಹ್ಮದೇಶ, ಮಲಯಾ, ಈಸ್ಟ್ ಇಂಡೀಜ಼ಗಳಲ್ಲಿ ಜಪಾನರನ್ನು ಸೋಲಿಸಿದುವು ಇಷ್ಟಾದರೂ ಜರ್ಮನಿಯಂತೆ ಜಪಾನು ಶರಣುಬರಲಿಲ್ಲ ಅದರಿಂದ ೧೯೪೫ ಅಗಸ್ಟ ೬ನೆಯ ದಿನಾಂಕದಂದು, ಹಿರೋಶಿಮದ ಮೇಲೆ ಹಾಗೂ

೯ನೆಯ ದಿನಾಂಕದಂದು ನಾಗಸಾಕಿಯ ಮೇಲೆ ಅಮೇರಿಕೆ ಅಣುಬಾಂಬುಗಳನ್ನು ಚೆಲ್ಲಿತು. ಈ ನೂತನ ಸಂಹಾರಕ ಅಸ್ತ್ರಗಳಿಂದ ಜಪಾನು ಜರ್ಜರಿತವಾಯಿತು. ನಾಡು ಕಂಗಾಲಾಯಿತು. ತಮ್ಮ ಚಕ್ರವರ್ತಿಯ ಪ್ರತಿಷ್ಠೆಯನ್ನು ಕಾಯಬೇಕು ಎಂಬ ಒಂದೇ ಒಂದು ಕರಾರಿನಿಂದ ಜಪಾನರು, ಆಗಸ್ಟ್ ೧೦ನೆಯ ದಿನಾಂಕದಂದು ಮಿತ್ರ-ರಾಷ್ಟ್ರಗಳಿಗೆ ಶರಣಾಗತರಾದರು. ಇಲ್ಲಿಗೆ ಜಾಗತಿಕ ಮಹಾ ಯುದ್ಧ ಪರಿಸಮಾಪ್ತಿಗೊಂಡಿತು.

**ಸಂಯುಕ್ತ ರಾಷ್ಟ್ರಸಂಘ** – ಮೊದಲನೆ ಮಹಾಯುದ್ಧದ ತರುವಾಯದಂತೆ ಈಗಲೂ, ಯುದ್ಧದಿಂದ ಬೇಸತ್ತ ಜನತೆಯು ಶಾಶ್ವತ ಶಾಂತಿಬೇಕೆಂದು ಹಂಬಲಿಸುತ್ತಿತ್ತು. ಇದನ್ನರಿತ ನಾಯಕರು 'ರಾಷ್ಟ್ರಸಂಘ' ಎಂಬ ವಿಶ್ವಸಂಸ್ಥೆಯನ್ನು ನಿರ್ಮಿಸಿಕೊಂಡರು. ಇದು ಅಮೇರಿಕ, ಇಂಗ್ಲಂಡ, ರಶಿಯಾ, ಫ್ರಾನ್ಸ, ಚೀನಾಗಳ ಮುಂದಾಳುತನದಲ್ಲಿ ಸ್ಥಾಪಿಸಲ್ಪಟ್ಟಿತು. ಇದರ ಮುಖ್ಯ ಕಚೇರಿಯು ಅಮೇರಿಕೆಯ ನ್ಯೂಯಾರ್ಕ ನಗರದಲ್ಲಿದೆ. ಈ ರಾಷ್ಟ್ರ-ಸಂಘದಲ್ಲಿ ಹಿರಿಯ ಭದ್ರತಾ ಸಮಿತಿಯೊಂದಿದೆ. ಇದು ವಾದ-ವಿವಾದಗಳನ್ನು ಶಾಂತಿಯುತ ಬಗೆಹರಿಸುವದು, ಶಾಂತಿಗೆ ಧಕ್ಕೆಯನ್ನು ತರುವ ರಾಷ್ಟ್ರವನ್ನು ತಡೆಯುವದು ಮುಂತಾದವು ಭದ್ರತಾ-ಮಂಡಳದ ಅಧಿಕಾರದ ಕೆಲಸಗಳು. ಇದರ ಜೊತೆಗೆ ಶಿಕ್ಷಣ, ವಿಜ್ಞಾನ, ಉದ್ಯೋಗ—ಇವುಗಳ ಬೆಳವಣಿಗೆಗಾಗಿಯೂ ಸಮಿತಿಗಳಿವೆ. ಜಗತ್ತಿನಲ್ಲಿ ಯುದ್ಧವನ್ನು ತಡೆದು ಶಾಂತಿಯು ನೆಲೆಗೊಳ್ಳುವಂತೆ ಮಾಡುವದು ಮತ್ತು ಅನ್ನ-ಬಟ್ಟೆಗಳ ಕೊರತೆಯನ್ನೂ ದಾಸ್ಯವನ್ನೂ ತಪ್ಪಿಸುವದು—ಇವು ರಾಷ್ಟ್ರಸಂಘದ ಧ್ಯೇಯಗಳು.

## ಅಭ್ಯಾಸನಗಳು

೧ ಕೆಳಗಿನ ಪ್ರಶ್ನೆಗಳಿಗೆ ಒಂದೊಂದೇ ಮಾತಿನಲ್ಲಿ ಉತ್ತರ ಕೊಡಿರಿ.

(ಅ) ಎರಡನೆಯ ಮಹಾಯುದ್ಧವು ಯಾಕೆ ಪ್ರಾರಂಭವಾಯಿತು?

(ಆ) ಇದರಲ್ಲಿ ಕಾಂಗ್ರೆಸ್ಸು ಬ್ರಿಟಿಶ್ ಸರಕಾರವನ್ನು ಯಾಕೆ ವಿರೋಧಿಸಿತು?

(ಇ) ಕ್ರಿಪ್ಸನು ಸಂಧಾನಕ್ಕಾಗಿ ಏಕೆ ಬಂದನು? ಅದರ ಪರಿಣಾಮವೇನಾಯಿತು?

(ಈ) ಸರ್ ಸಪ್ರು ಅವರು ಸರ್ವಪಕ್ಷೀಯ ಪರಿಷತ್ತನ್ನು ಯಾಕೆ ಕರೆದರು?

(ಉ) ಜಪಾನು ಜರ್ಜರಿತವಾದುದು ಏತರಿಂದ?

೨ ಕೆಳಗೆ ಕೊಟ್ಟವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.

(ಅ) ಅಟಲಾಂಟಿಕ್ ಘೋಷಣೆ (ಆ) ಚಲೇಜಾವ್ ಚಳವಳಿ.

(ಇ) ವೇವೆಲ್ ಯೋಜನೆ. (ಈ) ಸಂಯುಕ್ತ ರಾಷ್ಟ್ರಸಂಘ

೩ ಕೆಳಗೆ ಕೊಟ್ಟ ಇಸವಿಗಳನ್ನೂ ಘಟನೆಗಳನ್ನೂ ಸರಿಯಾಗಿ ಹೊಂದಿಸಿರಿ

| | |
|---|---|
| ೧೯೩೯ | ಜರ್ಮನಿಯ ಶರಣಾಗತಿ |
| ೧೯೪೧ | ಹಿರೋಶಿಮಾದ ಮೇಲೆ ಅಣುಬಾಂಬು |
| ೧೯೪೨ | ಸ್ಟಾಲಿನ್‌ಗ್ರಾಡದಲ್ಲಿ ಜರ್ಮನಿಯ ಪರಾಭವ |
| ೧೯೪೩ | ೨ನೆಯ �ಾಗತಿಕ ಯುದ್ಧದ ಪ್ರಾರಂಭ |
| ೧೯೪೫ ಮೇ ೩ | ಅಟಲಾಂಟಿಕ್ ಘೋಷಣೆ |
| ೧೯೪೫ ಆಗಸ್ಟ್ ೬ | ಚಲೇಜಾವ್ ಚಳವಳಿ |

---

# ೨೨ ಹಿಂದುಸ್ತಾನಕ್ಕೆ ಸ್ವಾತಂತ್ರ್ಯ

## ಭಾರತ ಮತ್ತು ಪಾಕಿಸ್ತಾನಗಳ ರಚನೆ

**ಶಾಂತವಾತಾವರಣ** —ವೆವೆಲ್ಲರು ಇಂಗ್ಲಂಡಿನಿಂದ ಮರಳಿಬಂದ ಮೇಲೆ ಎಲ್ಲ ರಾಜಕೀಯ ಕೈದಿಗಳ ಬಿಡುಗಡೆಯಾಯಿತು ತಮ್ಮ ಯೋಜನೆಗೆ ಯಶಸ್ಸನ್ನು ಅಪೇಕ್ಷಿಸಿ ವೈಸ್‌ರಾಯರು ಶಾಸನಮಂಡಲಗಳ ಹೊಸ ಚುನಾವಣೆಯ ಆಜ್ಞೆಯನ್ನು ಹೊರಡಿಸಿದರು ಇಷ್ಟರಲ್ಲಿ ಇಂಗ್ಲಂಡಿನಲ್ಲಿ ಕೂಲಿಕಾರರ ಪಕ್ಷವು ಅಧಿಕಾರಕ್ಕೆ ಬಂದಿತ್ತು ಕನ್‌ಸರ್ವೇಟಿವ್ ಪಕ್ಷದ ನಾಯಕ—ಸಾಮ್ರಾಜ್ಯವಾದಿ—ಚರ್ಚಿಲರಿಗೆ ಸೋಲಾಯಿತು ಮುಖ್ಯಮಂತ್ರಿ ಆಟ್ಲಿಯವರು ಹಿಂದುಸ್ತಾನಕ್ಕೆ ಸ್ವಾತಂತ್ರ್ಯವನ್ನು ಘೋಷಿಸಿದರು ಭಾರತೀಯರು ಒಮ್ಮತದಿಂದ ನಿರ್ಣಯಿಸಿದ ಘಟನೆಯನ್ನೇ ತಾವು ಒಪ್ಪುವವೆಂದರು, ಅಲ್ಲದೆ ಭಾರತದಲ್ಲಿ ಎಲ್ಲರೊಡನೆ ಚರ್ಚಿಸಿ ಸೂಚನೆಗಳನ್ನು ಕೊಡಲು ಇಂಗ್ಲಂಡಿನ ಮೂವರು ಮಂತ್ರಿಗಳ ಒಂದು ಶಿಷ್ಟಮಂಡಲವನ್ನು ಕಳುಹಿದರು ಭಾರತದಲ್ಲಿ ಆಯ್ಕೆಯಾಗಿ, ಮತ್ತೆ ಮೊದಲಿನಂತೆಯೆ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಪಕ್ಷಗಳ ಮಂತ್ರಿಮಂಡಲಗಳು ಪ್ರಾಂತದಲ್ಲಿ ಅಧಿಕಾರಕ್ಕೆ ಬಂದುವು (೧೯೪೬) ಈ ಮುಂಚೆಯೆ ಮಧ್ಯವರ್ತಿ ಶಾಸನಮಂಡಲದ ಆಯ್ಕೆಯಾಗಿ ಅಲ್ಲಿಯೂ ಕಾಂಗ್ರೆಸು ಬಹುಮತದ ವಿರೋಧಿಪಕ್ಷವಾಗಿತ್ತು.

**ಭಾರತಕ್ಕೆ ಬ್ರಿಟಿಶ್ ಮಂತ್ರಿಗಳ ಆಗಮನ** —ಪಾರ್ಲಮೆಂಟಿನ ಆದೇಶದಂತೆ ಲಾರ್ಡ್ ಪೆಥಿಕ್ ಲಾರೆನ್ಸ್, ಸರ್ ಸ್ಟ್ರಾಫರ್ಡ್ ಕ್ರಿಪ್ಸ್, ಸರ್ ಅಲೆಕ್ಝಾಂಡರ್ ಈ ಮೂವರ ಶಿಷ್ಟಮಂಡಲ, ೧೯೪೬ನೆಯ ಮಾರ್ಚ್ ತಿಂಗಳ ೨೩ರಂದು ಭಾರತಕ್ಕೆ ಬಂದಿತು ಅವರು ಇತ್ತ ಹೊರಟಕೂಡಲೇ ‘ಭಾರತಕ್ಕೆ ಶಕ್ಯವಿದ್ದಷ್ಟು ತೀವ್ರ ಸಂಪೂರ್ಣಸ್ವಾತಂತ್ರ್ಯವನ್ನು ಕೊಡುವ ಬಗೆಗೆ ಸರ್ವ

ಪ್ರಯತ್ನ ಮಾಡಲು ಈ ಶಿಷ್ಟಮಂಡಲವು ಸಾಗುತ್ತಿದೆ' ಎಂದು ಮುಖ್ಯ ಮಂತ್ರಿ ಆಟ್ಲಿ ಪ್ರಸಿದ್ಧಮಾಡಿದರು

**ಸರ್ವಪಕ್ಷೀಯ ಪರಿಷತ್ತು**—ತ್ರಿಮಂತ್ರಿಗಳು ಭಾರತದಲ್ಲಿಯ ಬೇರೆಬೇರೆ ಪಕ್ಷದ ಮುಂದಾಳುಗಳನ್ನು ಕರೆಸಿ ಮಾತನಾಡಿದರು, ಎಲ್ಲರ ಅಭಿಪ್ರಾಯ ಗಳನ್ನು ತಿಳಿದುಕೊಂಡ ಮೇಲೆ ಸರ್ವಸಾಮಾನ್ಯ ನಿರ್ಣಯಕ್ಕೆ ಬರಬೇಕೆಂದು, ೧೯೪೬ನೆಯ ಮೇ ೫ನೆಯ ದಿನಾಂಕದಂದು ಸರ್ವಪಕ್ಷೀಯ ಪರಿಷತ್ತನ್ನು ಕರೆದರು ಅದರಲ್ಲಿ ಮುಖ್ಯರಾದವರು ಬ್ರಿಟಿಶ್ ತ್ರಿಮಂತ್ರಿಗಳು, ವ್ಹಾಯಿಸ್ ರಾಯ್, ಕಾಂಗ್ರಸಿನ ಪರವಾಗಿ ಪಂಡಿತ ನೆಹರು, ಸರದಾರ್ ಪಟೇಲ, ಮೌ ಆಝಾದ್, ಖಾನ್ ಅಬ್ದುಲ್ ಗಫರಖಾನರು ಲೀಗಿನ ಪರವಾಗಿ ಬ್ಯಾ ಜಿನ್ನಾ, ಲಿಯಾಕತ್ ಅಲಿಖಾನ್, ಅಬ್ದುರ್ ರಾಬ್‌ನಿಸ್ತರ ಮತ್ತು ನವಾಬ್ ಮಹಮ್ಮದರು ಆ ಚರ್ಚೆಯಲ್ಲಿಯ ಪ್ರಮುಖವಿಷಯಗಳೆಂದರೆ (೧) ಭಾರತದಲ್ಲಿ ಸಂಘರಾಜ್ಯ ನಿರ್ಮಾಣವಾಗಬೇಕು ಮತ್ತು ಮಧ್ಯವರ್ತಿ ಸರಕಾರದ ಕಡಗೆ ಸಾರಿಗೆ-ಸಂಪರ್ಕ ಮತ್ತು ಸಂರಕ್ಷಣ ಖಾತಗಳಿರಬೇಕು (೨) ದೇಶದಲ್ಲಿ ಹಿಂದುಗಳು ಮತ್ತು ಮುಸಲ್ಮಾನರು ಬಹುಸಂಖ್ಯಾಕರಾಗಿದ್ದ ಭಾಗಗಳನ್ನು ಬೇರೆ ಬೇರೆ ಪ್ರಾಂತಗಳನ್ನಾಗಿ ರಚಿಸಬೇಕು ಈ ಪರಿಷತ್ತು ನಿರುಪಯೋಗಿಯಾಯಿತು.

**ಶಿಷ್ಟಮಂಡಲದ ಯೋಜನೆ**—ಆ ಮೇಲೆ ವ್ಹಾಯಿಸ್‌ರಾಯರೂ ತ್ರಿಮೂರ್ತಿಗಳೂ ಕೂಡಿ ಒಂದು ಹೊಸ ಯೋಜನೆಯನ್ನು ಹುಲುಬಿಸಿದರು (೧) ಭಾರತದ ಸ್ಥಿರವಾದ ಘಟನೆ ಸಿದ್ಧವಾಗುವವರೆಗೆ ಮಧ್ಯಕಾಲದ ಬಗೆಗೆ ಸುಗ್ಗಿಯ ಸರಕಾರ (ಇಂಟೆರಿಮ್ ಗವ್ಹರ್ನಮೆಂಟ = ನಡುಗಾಲ ಸರಕಾರ) ಸ್ಥಾಪಿತವಾಗಬೇಕು, (೨) ಭಾರತವು ಅಖಂಡವಾಗಿಯೆ ಉಳಿಯಬೇಕು ಏಕೆಂದರೆ ಆರ್ಥಿಕ—ಸೈನಿಕರಾಜಕಾರಣಗಳ ದೃಷ್ಟಿಯಿಂದ ಪಾಕಿಸ್ತಾನದ ಯೋಜನೆಯು ಅವ್ಯವಹಾರ್ಯವಿದ (೩) ಮಧ್ಯವರ್ತಿ ಸರಕಾರದ ಕಡೆಗೆ ಸಂರಕ್ಷಣೆ, ಸಂಪರ್ಕ-ಸಾರಿಗೆಯ ವಿಭಾಗಗಳಿರಬೇಕು ಉಳಿದುವುಗಳು ಪ್ರಾಂತಿಕ ಸರಕಾರಗಳ ಕಡೆಗೆ ಉಳಿಯಬೇಕು (೪) ಪ್ರಾಂತರಚನೆಯಲ್ಲಿ **ಅ, ಬ, ಕ** ಎಂದು ಮೂರು ಭಾಗಗಳು **ಅ** ಭಾಗದಲ್ಲಿ ಮುಂಬಯಿ, ಮದ್ರಾಸ, ಸಂಯುಕ್ತಪ್ರಾಂತ, ಬಿಹಾರ, ಮಧ್ಯಪ್ರಾಂತ ಮತ್ತು ಓಡಿಸಾ, **ಬ** ಭಾಗದಲ್ಲಿ ಪಂಜಾಬ, ವಾಯವ್ಯಸೀಮೆ, ಸಿಂಧ, ಕ ಗುಂಪಿನಲ್ಲಿ ಬಂಗಾಲ-ಆಸಾಮಗಳು, (೫) ರಾಜ್ಯಘಟನೆಯನ್ನು ಸಿದ್ಧಪಡಿಸುವುದಕ್ಕೆ ಪ್ರತಿ ೧೦ ಲಕ್ಷಕ್ಕೆ ಒಬ್ಬ ಪ್ರತಿನಿಧಿಯಂತೆ, ಪ್ರಾಂತಿಕ ಮಂಡಲಗಳೇ ಅವರನ್ನು ಆರಿಸ ಬೇಕು ಅವರೆಲ್ಲ ಘಟನಾಸಮಿತಿಯನ್ನು ಮಾಡಿಕೊಳ್ಳಬೇಕು ಇದರಂತೆ

ಆ ಯೋಜನೆಯಲ್ಲಿ ನಂಸ್ಥಾನಗಳ ಸಂಬಂಧ ಮತ್ತು ಆಡಳಿತ ಇವುಗಳ ವಿಷಯವಾಗಿಯೂ ಕೆಲವು ನೂಚನೆಗಳಿದ್ದುವು ಅವೆಲ್ಲವುಗಳ ಯಥಾ ಯೋಗ್ಯ ವಿಚಾರ ಮಾಡುವುದಕ್ಕೂ ಹಿಂದೀಯರಿಗೆ ಅಧಿಕಾರವನ್ನು ಕೊಡ ಲಾಯಿತು

**ನಡುಗಾಲ ಸರಕಾರದ ಸಂಕಟಗಳು** – ಶಿಷ್ಟಮಂಡಲದ ಯೋಜನೆಯಂತೆ ನಡುಗಾಲಸರಕಾರವನ್ನು ಸ್ಥಾಪಿಸಲು ವ್ಹಾಯಿಸ್‌ರಾಯರು ಕಾಂಗ್ರೆಸಿಗರನ್ನೂ ಲೀಗಿನವರನ್ನೂ ಕರೆದರು, ಆದರೆ ಮೊದ-ಮೊದಲು ಕಾಂಗ್ರೆಸಿಗರು ಒಪ್ಪಲಿಲ್ಲ ಲೀಗಿನವರು ಮಾತ್ರ ಮುಂದೆ ಬಂದರು, ಆದರೆ ಕಾಂಗ್ರಸನ್ನು ಬಿಟ್ಟು ಸರಕಾರ ವನ್ನು ಸ್ಥಾಪಿಸಲು ಸಾಧ್ಯವಿರಲಿಲ್ಲ, ಆದ್ದರಿಂದ ಕಾಂಗ್ರಸಿನವರು ಕೇಳಿದ



ಮೌಂಟಬಟನ್ನರಿಂದ ಜವಾಹರಲಾಲರು ರಾಜ್ಯಸೂತ್ರವನ್ನು ತೆಗೆದುಕೊಳ್ಳುವುದು

ಆಶ್ವಾಸನೆಯನ್ನು ಕೊಡಮಾಡಿ ಮತ್ತೆ ವ್ಹಾಯಿಸರಾಯರು ಅವರನ್ನು ಆಮಂತ್ರಿಸಿದರು, ಕಾಂಗ್ರೆಸಿನವರು ಒಪ್ಪಿಕೊಂಡರು ಲೀಗಿನವರ ಸಹ-ಕಾರವನ್ನು ಕೋರಿದರು, ಆದರೆ ಅವರು ಆ ಸರಕಾರದಲ್ಲಿ ಸಮಪ್ರಾತಿ-ನಿಧ್ಯವನ್ನು ಬೇಡಿದರು ಲೀಗಿನ ಸಂಖ್ಯಾಪ್ರಮಾಣಕ್ಕೆ ಸಲ್ಲದ ಈ ಅವ್ಯವಹಾರ್ಯ ಬೇಡಿಕೆಯನ್ನು ಕಾಂಗ್ರೆಸು ಖಂಡತುಂಡವಾಗಿ ಅಲ್ಲಗಳೆಯಿತು ವ್ಹಾಯಿಸ್ ರಾಯರೂ ಜಿನ್ನಾರ ಮನವೊಲಿಸಿ ಬೇಸತ್ತರು ಕಡೆಗೆ ನಡುಗಾಲ ಸರಕಾರ ವನ್ನು ರಚಿಸಲು ಕಾಂಗ್ರೆಸಿನ ಪರವಾಗಿ ಪಂ ಜವಾಹರಲಾಲರಿಗೇ ವಿನಂತಿ ಮಾಡಿಕೊಂಡರು ಅದರಿಂದ ರಾಷ್ಟ್ರೀಯವೃತ್ತಿಯ ಕೆಲವು ಮುಸಲ್ಮಾನರನ್ನೂ

ಹರಿಜನರನ್ನೂ ಒಳಗೊಂಡು, ಸಪ್ಟಂಬರ್ ೨ನಯ ದಿನಾಂಕ, ಪಂಡಿತ ನೆಹರು ಅವರು ಸರಕಾರವನ್ನು ಸ್ಥಾಪಿಸಿದರು ಈಗ ಲೀಗಿನವರು ಕಣ್ಣು ತೆರೆದರು ಮುಂದ ವ್ಹಾಯಿಸ್‌ರಾಯರ ವಿನಂತಿಯ ಮೇರೆಗ ಲೀಗಿನವರನ್ನು ಹೊಸ ಸರಕಾರದಲ್ಲಿ ಸೇರಿಸಿಕೊಳ್ಳಲಾಯಿತು

**ಘಟನಾಸಮಿತಿಗೆ ತಡೆ** — ನಿಯಮಿತವಾದಂತ ಘಟನಾಸಮಿತಿಯು ಕೂಡಿತು, ಆದರ ಆಗಿನ ಕೇಂದ್ರಮಂತ್ರಿಮಂಡಲದಲ್ಲಿ ಮುಸ್ಲಿಂಲೀಗು ದುರುದ್ದೇಶದಿಂದ ಸೇರಿಕೊಂಡಿತ್ತು ಅದು ಪಾಕಿಸ್ತಾನದ ಬೇಡಿಕೆಯನ್ನು ಬಿಡಲು ಸಿದ್ಧವಿರಲಿಲ್ಲ ಆದ್ದರಿಂದ ಇಡಿಯ ಹಿಂದುಸ್ತಾನವು ಒಂದೇ ದೇಶ ಎಂದು ಅದಕ್ಕಾಗಿ ಘಟನಯನ್ನು ತಯಾರಿಸುವ ಘಟನಾಸಮಿತಿಗ ಲೀಗು ಬಹಿಷ್ಕಾರವನ್ನು ಹಾಕಿತು, ಆದುದರಿಂದ ಸ್ವಾತಂತ್ರ್ಯದ ಉದ್ದೇಶಘೋಷಣೆಯನ್ನಷ್ಟೇ ಸ್ವೀಕರಿಸಿ ಘಟನಾಸಮಿತಿಯು ಮುಂದುವರಿಸಲ್ಪಟ್ಟಿತು ಮುಸಲ್ಮಾನರು ಬಹುಸಂಖ್ಯಾಕರಾಗಿರುವ ಸಿಂಧ, ಪಂಜಾಬ, ಬಂಗಾಲ, ವಾಯವ್ಯ ಪ್ರಾಂತ ಮೊದಲಾದುವನ್ನು ಒಂದುಗೂಡಿಸಿ ಪಾಕಿಸ್ತಾನವನ್ನು ಮಾಡಲೇಬೇಕೆಂದು ಬ್ಯಾ ಜಿನ್ನಾ ಅವರು ದುರಾಗ್ರಹಹೂಡಿದರು ಜಾತೀಯ ತತ್ತ್ವದ ಮೇಲೆ ಜನಸಂಖ್ಯೆಯ ದೃಷ್ಟಿಯಿಂದ ದೇಶವನ್ನು ವಿಭಾಗ ಮಾಡುವುದೇ ಆದಲ್ಲಿ, ಪಂಜಾಬದಲ್ಲಿ ಹಿಂದೂ ಮತ್ತು ಶೀಖ ಜನರಿರುವ ಪೂರ್ವಭಾಗವನ್ನು ಪಂಜಾಬದಿಂದಲೂ, ಬಂಗಾಲದಲ್ಲಿ ಹಿಂದುಗಳೇ ವಿಶೇಷವಾಗಿರುವ ಪಶ್ಚಿಮ ಭಾಗವನ್ನು ಬಂಗಾಲದಿಂದಲೂ ಬೇರೆ ಮಾಡಲೇಬೇಕೆಂದು ಕಾಂಗ್ರೆಸಿಗರು ಪ್ರತಿಪಾದಿಸಿದರು

**ಬ್ರಿಟಿಶ ಮುಖ್ಯಮಂತ್ರಿಗಳ ಶ್ವೇತಪತ್ರ** — (೧೯೪೭ನಯ ಫೆಬ್ರುವರಿ ೨೦) ಘಟನಾಸಮಿತಿಯನ್ನು ಬಹಿಷ್ಕರಿಸಿದುದರಿಂದ, ಲೀಗಕ್ಕೆ ಸರಕಾರದಲ್ಲಿ ಸ್ಥಾನವಿರಲಿಲ್ಲ ಆದರೆ ಲೀಗ ಮಂತ್ರಿಗಳು ನಡುಗಾಲಸರಕಾರದಿಂದ ಹೊರಬೀಳಲು ಸಿದ್ಧರಾಗಲಿಲ್ಲ ಮಂತ್ರಿಮಂಡಲದಲ್ಲಿ ಒಮ್ಮತವಿಲ್ಲದೆ ಸರಕಾರದ ಕಾರ್ಯವು ಸುಗಮವಾಗಿ ಸಾಗುವಂತಿರಲಿಲ್ಲ ಮೇಲಾಗಿ ಲೀಗ್ ಮಂತ್ರಿಯ ಕಡೆಗೆ ಆರ್ಧಿಕಅಧಿಕಾರವಿತ್ತು ಅದೊಂದು ಅತ್ಯಂತ ಹೊಣೆಗಾರಿಕೆಯ ಸ್ಥಳ ಲೀಗಿನವರಿಗೆ ಮಂತ್ರಿಮಂಡಲದಲ್ಲಿ ಸ್ಥಳಗಳನ್ನು ಕೊಡಿಸಿದ ವ್ಹಾಯಿಸ್‌ರಾಯನಿಗೆ, ಈಗ ಅವರನ್ನು ಹೊರಗೆ ಹಾಕಲಿಕ್ಕೆ ಸಾಧ್ಯವಾಗಲಿಲ್ಲ. ಹೀಗಾಗಿ ಈ ಪ್ರಕರಣವು ಬ್ರಿಟಿಶ ಮಂತ್ರಿಮಂಡಲದ ಕಡೆಗೆ ಕೊನೆಯ ನಿರ್ಣಯಕ್ಕಾಗಿ ಹೋಯಿತು ವ್ಹಾಯಿಸ್‌ರಾಯನೂ ಇಂಗ್ಲಂಡಿಗೆ ತೆರಳಿದನು ಈತನಿಂದಾದ ತಪ್ಪು ಬ್ರಿಟಿಶ ಸರಕಾರಕ್ಕೆ ಕಂಡುಬಂದಿತು ಲೀಗಿನ ಹಟಮಾರಿತನಕ್ಕೆ

ಬೇಸತ್ತು ಮುಖ್ಯ ಮಂತ್ರಿ ಆಟ್ಲಿಯವರು, ಫೆಬ್ರುವರಿ ೨೦ರಂದು ಒಂದು ಶ್ವೇತಪತ್ರವನ್ನು ಹೊರಡಿಸಿದರು

ಅದರಲ್ಲಿ "ಭಾರತದ ಈಗಿನ ಪರಿಸ್ಥಿತಿ ಬಹಳ ಬಿಕ್ಕಟ್ಟಿನದಾಗಿದೆ ಇದನ್ನು ಹೀಗಯೇ ಇರಗೊಡುವಂತಿಲ್ಲ, ಅದು ಇಷ್ಟವೂ ಅಲ್ಲ ಅದರಿಂದ ೧೯೪೮-ನೆಯ ಜೂನದೊಳಗಾಗಿ ಹಿಂದೀಯರಿಗೆ ಭಾರತದ ಸಂಪೂರ್ಣ ಅಧಿಕಾರವನ್ನು ಒಪ್ಪಿಸಲಿದ್ದೇವೆ, ಮತ್ತು ಅದರ ಸಿದ್ಧತೆಯನ್ನು ಮಾಡುತ್ತಲಿದ್ದೇವೆಂಬುದನ್ನು ಸ್ಪಷ್ಟಮಾಡಬಯಸುತ್ತೇವೆ ಹಿಂದೀ ಘಟನಾಸಮಿತಿಯು ಸರ್ವಸಮ್ಮತಘಟನೆಯನ್ನು ಸಿದ್ಧಮಾಡಲಿಲ್ಲವೆಂದರೆ, ಭಾರತೀಯರ ಹಿತದೃಷ್ಟಿಯಿಂದ, ಯಾರ ಕೈಯಲ್ಲಿ ನಾವು ಅಧಿಕಾರವನ್ನು ಕೊಡಬೇಕೆಂಬುದನ್ನು ಮೇಲ್ಕಂಡ ಅವಧಿಯೊಳಗಾಗಿ, ನಾವೇ ನಿರ್ಧರಿಸುವೆವು ೧೯೪೭ರಲ್ಲಿ ಲಾರ್ಡ್ ಲೂಯಿ ಮೌಂಟಬಟನ್ ಅವರು ವ್ಹಾಯಿಸರಾಯರಾಗುವರು" ಎಂದು ಪ್ರಕಟಿಸಲಾಗಿತ್ತು

**ತಿಳಿಯದ ತೊಡಕು** – ಭಾರತದ ರಾಜಕೀಯ ಬಿಕ್ಕಟ್ಟಿಗೆ ಈ ಘೋಷಣೆಯು ಪರಿಹಾರವನಿಸಲಿಲ್ಲ, ಏಕೆಂದರೆ ಲೀಗಿನ ಪಾಕಿಸ್ತಾನ ಬೇಡಿಕೆಯ ಬಗೆಗೆ ಯಾವ ಸ್ಪಷ್ಟ ಅಭಿಪ್ರಾಯವೂ ಇರಲಿಲ್ಲ ಇದರಿಂದ ಮುಸ್ಲಿಂ ಲೀಗ ಮತ್ತಿಷ್ಟು ಹಟಕ್ಕ ಬೀಳಬಹುದಿತ್ತು ಆದ್ದರಿಂದ, ಭಾರತಕ್ಕೆ ಅಧಿಕಾರವನ್ನು ಒಪ್ಪಿಸುವಾಗ ಅದನ್ನು ಸ್ವೀಕರಿಸುವ ಬಲಿಷ್ಠ ಸಂಸ್ಥೆಯನ್ನು ಸೃಷ್ಟಿಸುವುದು ಹೇಗೆ?—ಎಂದು ಕಾಂಗ್ರೆಸು ತಿಳಿಯದ ತೊಡಕಿನಲ್ಲಿ ಬಿದ್ದಿತು



ಮೌಂಟಬಟನ್ನರು

**ಲಾರ್ಡ್ ಲೂಯಿ ಮೌಂಟಬೆಟನ್** —(೧೯೪೭-೧೯೪೮) ಈ ಪ್ರಕಟನಯ ಮೇರೆಗೆ ಲಾರ್ಡ್ ವವಲ್ಲರ ಆಳಿಕೆ ಮುಗಿಯಿತು ಲಾರ್ಡ್ ಲೂಯಿ ಮೌಂಟ್‌ಬಟನ್ನರು ೧೯೪೭ನೆಯ ಮಾರ್ಚ್ ತಿಂಗಳ ೨೪ನೆಯ ದಿನಾಂಕದಂದು ವ್ಹಾಯಿಸ್‌ರಾಯ್, ಅಧಿಕಾರವನ್ನು ಸ್ವೀಕರಿಸಿ

ದರು ಇವರು ರಾಜಮನೆತನಕ್ಕೆ ಸಂಬಂಧಿಸಿದವರು ನುರಿತ ಸೇನಾಪತಿಗಳು ಸಂಧಾನ ವಿದ್ಯೆಯಲ್ಲಿ ಕುಶಲರು, ತೀವ್ರ ಮುಂಧೋರಣೆಗಳು ಭಾರತದ ಬಿಕ್ಕಟನ್ನು ಬಿಡಿಸಲು ಸರ್ವ ರೀತಿಯಿಂದಲೂ ಇವರು ಯೋಗ್ಯರಾಗಿದ್ದರೆಂದು ಹೇಳಬಹುದು

## ಸ್ವತಂತ್ರ ಭಾರತದ ಸಿದ್ಧತೆ

**ಮುತ್ಸದ್ದಿಯಾದ ಮೌಂಟ್‌ಬೆಟನ್ನರು** — ಮೌಂಟ್‌ಬೆಟನ್ನರು ಉಳಿದ ವ್ಹಾಯಿಸ್‌ರಾಯರಂತೆ ಕೆಲವು ಕಾಲವನ್ನಾದರೂ ಶಾಂತಿಯಿಂದ ಕಳೆಯುವಂತಿರಲಿಲ್ಲ ಅಧಿಕಾರವನ್ನು ಸ್ವೀಕರಿಸುತ್ತಲೇ ಭಾರತೀಯ ರಾಜಕಾರಣದ ತೊಡಕನ್ನು ಅವರು ಬಿಡಿಸಬೇಕಾಯಿತು ಅದಕ್ಕಾಗಿ ಕಾಂಗ್ರೆಸ್ ಮತ್ತು ಲೀಗ ಮುಂದಾಳುಗಳನ್ನು ಬೇರೆಬೇರೆಯಾಗಿ ಕರೆದು, ಎಲ್ಲರ ಅಂತರಂಗವನ್ನೂ ತಿಳಿದುಕೊಂಡರು ಆ ಮೇಲೆ ತಾವೇ ಒಂದು ಯೋಜನೆಯನ್ನು ಮಾಡಿ, ಒಪ್ಪಿಗಯ ಸಲುವಾಗಿ ಪಾರ್ಲಮೆಂಟಿಗ ಕಳಿಸಿದರು, ಅಲ್ಲದೆ ವಿಚಾರವಿನಿಮಯದ ಸಲುವಾಗಿ ತಾವೇ ಅಲ್ಲಿಗೆ ಹೋದರು ಅಲ್ಲಿಂದ ತಿರುಗಿ ಬರುವಾಗಲೇ ಹೊಸದೊಂದು ಯೋಜನೆಯನ್ನು ತಂದು ಜೂನ್ ೨ನಯ ದಿನಾಂಕದಂದು ಪ್ರಸಿದ್ಧ ಮಾಡಿದರು ಅದರಲ್ಲಿಯ ಮುಖ್ಯ ಮಾತುಗಳು— (೧) ೧೯೪೬ರಲ್ಲಿ ತ್ರಿಮಂತ್ರಿಗಳು ಯೋಜಿಸಿದಂತೆ ಭಾರತಕ್ಕೆ ಸರ್ವಸಾಮಾನ್ಯವಾದ ಘಟನೆ ಸಿದ್ಧವಾಗುವುದು ಶಕ್ಯವಾಗಿ ತೋರುವುದಿಲ್ಲ (೨) ಈಗಿರುವ ಘಟನಾಸಮಿತಿಯು, ತನ್ನ ಕಾರ್ಯವನ್ನು ಮುಂದುವರಿಸಬೇಕು ಇದಕ್ಕೆ ಒಪ್ಪಿಗೆ ಇಲ್ಲದವರು ಬೇರೊಂದು ಘಟನಾಸಮಿತಿಯನ್ನು ನಿರ್ಮಿಸಿ, ತಮ್ಮ ಶಾಸನಗಳನ್ನು ಸಿದ್ಧಪಡಿಸಿಕೊಳ್ಳಬೇಕು ಮುಂದೆ ಬ್ರಿಟಿಶ ಸರಕಾರವು ಅಧಿಕಾರವನ್ನು ಒಪ್ಪಿಸುವಾಗ ಅದನ್ನು ಯಾರ ಕಡೆಗೆ ಹೇಗೆ ಹೇಗೆ ಕೊಡಬೇಕೆಂಬುದನ್ನು ವಿಚಾರಿಸುವುದು (೩) ಪಂಜಾಬ-ಬಂಗಾಲಗಳ ವಿಭಜನೆಯ ಬಗೆಗ ಅಲ್ಲಿಯ ಶಾಸನ ಸಭಾಸದಸ್ಯರು ವಿಶೇಷ ಸಭೆಯನ್ನು ಕೂಡಿಸಿ ನಿರ್ಣಯಿಸಬೇಕು ವಿಭಜನೆಯನ್ನು ಮಾಡುವುದೇ ಅವಶ್ಯವೆಂದಾದರೆ, ವ್ಹಾಯಿಸರಾಯರು ಗಡಿಸೀಮೆಯನ್ನು ನಿರ್ಣಯಿಸುವ ಬಗೆಗೆ ಸೀಮಾಸಮಿತಿಯನ್ನು ನಿಯಮಿಸುವರು (೪) ಶಕ್ಯವಿದ್ದಷ್ಟು ತೀವ್ರ ಭಾರತದ ಸಂಪೂರ್ಣ ಸ್ವಾತಂತ್ರ್ಯವನ್ನು ಹಿಂದೀಯರಿಗೆ ಒಪ್ಪಿಸುವ ವಿಚಾರವು ಈ ಸಲದ ಪಾರ್ಲಮೆಂಟ ಅಧಿವೇಶನದಲ್ಲಿ ನಡೆಯುವುದು ಅದನ್ನು ಒಂದೇ ಸರಕಾರಕ್ಕೆ ಕೊಡಬೇಕೋ, ಇಬ್ಬರಿಗೆ ಹಂಚಬೇಕೋ ಎಂಬುದೂ ಆಗಲೇ

ನಿರ್ಣಯವಾಗುವುದು ಇದರೊಡನೆ ಸಿಂಧ ಸಿಲ್ಹೆಟ್ ಜಿಲ್ಲೆ, ಹಾಗೂ ಸಂಸ್ಥಾನಗಳಿಗೆ ಸಂಬಂಧಿಸಿದ ವಿಷಯಗಳೂ ಅದರಲ್ಲಿವೆ

**ಇಕ್ಕಡೆಗಳಿಂದಲೂ ಒಪ್ಪಿಗೆ** — ಈ ವಿಚಾರಗಳನ್ನೆಲ್ಲ ನೋಡಿದರೆ, ಪಾಕಿಸ್ತಾನದ ನಿರ್ಮಾಣಕ್ಕೆ ಪ್ರೋತ್ಸಾಹ ಸಿಕ್ಕಿತೆಂಬುದು ಮೇಲೆಯೇ ಕಾಣುತ್ತದ ಲೀಗು ಇದನ್ನು ಒಮ್ಮೆಲೇ ಒಪ್ಪಿತು ಅನಿವಾರ್ಯವೆಂದು ಕಾಂಗ್ರೆಸಿಗರೂ ಸಮ್ಮತಿಸಿದರು ಅಂತೂ ವ್ಹಾಯಿಸರಾಯನಿಗ ಇಕ್ಕಡೆಗಳಿಂದಲೂ ಒಪ್ಪಿಗ ಸಿಕ್ಕಿತು ಆ ಮೇಲೆ ಪಂಜಾಬ-ಬಂಗಾಲಗಳನ್ನು ಒಡೆಯಬೇಕೆಂದು ಶಾಸನ ಸಭಾಸದಸ್ಯರ ನಿರ್ಣಯವಾಯಿತು

ಭಾರತ
(೧೫ ಆಗಸ್ಟ ೧೯೪೭)
ಹಿಂದುಸ್ತಾನ
ಪಾಕಿಸ್ತಾನ

**ಹಿಂದುಸ್ತಾನ ಮತ್ತು ಪಾಕಿಸ್ತಾನ** — ಈ ಎಲ್ಲ ವಿಚಾರ ವಿನಿಮಯಗಳಿಂದ, ಬಲೂಚಿಸ್ತಾನ, ವಾಯವ್ಯಗಡಿಸೀಮೆ, ಪಶ್ಚಿಮಪಂಜಾಬ, ಸಿಂಧಪ್ರಾಂತಗಳೂ, ಪೂರ್ವಬಂಗಾಲವೂ ಕೂಡಿ ಪಾಕಿಸ್ತಾನದ ರಾಜ್ಯವಾಯಿತು, ಪೂರ್ವಪಂಜಾಬ, ಪಶ್ಚಿಮಬಂಗಾಲ ಹಾಗೂ ಉಳಿದೆಲ್ಲ ಬ್ರಿಟಿಶರ ಹಿಂದುಸ್ತಾನವೂ ಕೂಡಿ ಹಿಂದುಸ್ತಾನದ ರಾಜ್ಯವಾಯಿತು

**ಹಿಂದೀ ಸ್ವಾತಂತ್ರ್ಯಶಾಸನ**—ಹಿಂದುಸ್ತಾನದ ವಿಭಜನೆಯ ವಿಚಾರವನ್ನು ಮುಖ್ಯಮಂತ್ರಿ ಆ್ಯಟ್ಲಿ ಅವರು, ಜುಲೈ ೪ನೆಯ ದಿನಾಂಕಕ್ಕೆ ಪಾರ್ಲಮೆಂಟಿನಲ್ಲಿಟ್ಟರು, ಮತ್ತು ೧೯೩೫ರ ಸುಧಾರಣೆಯಲ್ಲಿ ಯುಕ್ತಕಂಡ ಮಾರ್ಪಾಡುಗಳನ್ನು ಮಾಡಬೇಕೆಂದೂ ಸಭೆಯಲ್ಲಿ ಕೇಳಿಕೊಂಡರು ವಿಶೇಷವಾದ ವಿವಾದವಿಲ್ಲದೆ 'ಹಿಂದೀಸ್ವಾತಂತ್ರ್ಯಶಾಸನವು' ಎಲ್ಲರ ಒಪ್ಪಿಗೆಯನ್ನು ಪಡೆಯಿತು ಜುಲೈ ೧೮ರಂದು ಬ್ರಿಟನದ ಬಾದಶಹನೂ ಅಂಕಿತವನ್ನಿಟ್ಟನು ಈ ಶಾಸನದಿಂದ ಭರತಖಂಡದ ಇಬ್ಭಾಗವಾಯಿತು ಪಾಕಿಸ್ತಾನ, ಹಿಂದುಸ್ತಾನಗಳು ನೆರೆಯ ಸ್ವತಂತ್ರರಾಷ್ಟ್ರಗಳಾದುವು

**ಪಾಕಿಸ್ತಾನದ ಕಲ್ಪನೆ**—'ಪಾಕಿಸ್ತಾನ' ಎಂಬ ಶಬ್ದವನ್ನು ಮೊದಲು ಪ್ರಚಾರದಲ್ಲಿ ತಂದವರು ಸರ್ ಮಹಮ್ಮದ ಇಕ್ಬಾಲ್ ಎಂಬ ಕವಿಯು ಪಂಜಾಬ, ಅಫಗಾನಿಸ್ತಾನ, ಕಾಶ್ಮೀರ ಮತ್ತು ಬಲೂಚಿಸ್ತಾನ್ ಈ ನಾಲ್ಕರಲ್ಲಿ ಮೂರರ (ಇಂಗ್ಲಿಷದಲ್ಲಿ) ಮೊದಲನೆಯ ಅಕ್ಷರವನ್ನು ಬಲೂಚಿಸ್ತಾನದ 'ಸ್ತಾನ'ವನ್ನೂ ಸೇರಿಸಿ ಈ ಶಬ್ದ ಹುಟ್ಟಿತಂತೆ ಈ ಪ್ರಾಂತಗಳಲ್ಲಿ ಮುಸಲ್ಮಾನರೇ ಬಹುಸಂಖ್ಯಾಕರು ಆದುದರಿಂದ ಪಾಕಿಸ್ತಾನ ಎಂದರೆ ಮುಸಲ್ಮಾನರ ದೇಶ ಎಂದು ಅರ್ಥಬಂದಿತು ೧೮೫೭ರ ತರುವಾಯ ಮೊಗಲರನ್ನು ಮತ್ತೆ ಸಿಂಹಾಸನದಲ್ಲಿ ತರುವ ಆಶೆ ಮುಸಲ್ಮಾನರಿಗೆ ಇದೆ—ಎಂದು ಬ್ರಿಟಿಶರಿಗೆ ಸಂಶಯವಿದ್ದಿತು ಅದಕ್ಕಾಗಿ ಹೆಚ್ಚಾಗಿ ಹಿಂದುಗಳಿಗೆಯೆ ಮೊದಲು ಅಧಿಕಾರಸ್ಥಾನಗಳು ದೊರೆತುವು ಇದಲ್ಲದ ಶಿಕ್ಷಣದಲ್ಲಿ ಮುಸಲ್ಮಾನರು ಮುಂದುವರೆಯಲಿಲ್ಲ ೧೮೭೫ರಲ್ಲಿ ಸರ್ ಸೈಯದ ಅಹಮದಖಾನರು ಅಲಿಗಡದಲ್ಲಿ ಮುಸ್ಲಿಮರಿಗಾಗಿಯೇ ಒಂದು ಕಾಲೇಜನ್ನು ತೆರೆದರು ಇದು ಮುಂದೆ ಮುಸ್ಲಿಂ ವಿಶ್ವವಿದ್ಯಾಲಯವಾಗಿ ಪರಿಣಮಿಸಿತು, ಆದರೂ, ಮುಸ್ಲಿಮರು ಮೊದ-ಮೊದಲು ಪಾಶ್ಚಾತ್ಯರೀತಿಯ ವಿದ್ಯಾರ್ಜನೆಗೆ ಅಷ್ಟು ಮನ್ನಣೆ ಕೊಡಲಿಲ್ಲ ಮುಂದೆ ಕಾಂಗ್ರೆಸಿನ ಸ್ಥಾಪನೆಯಾಯಿತು ಅಲ್ಲಿ ಹಿಂದುಗಳೇ ಹೆಚ್ಚಾಗಿದ್ದರು ಆದಕ್ಕಾಗಿ ಬ್ರಿಟಿಶರು ಹಿಂದುಗಳನ್ನು ಬಿಟ್ಟು ಮುಸಲ್ಮಾನರಿಗೆ ಪ್ರೋತ್ಸಾಹವನ್ನು ಕೊಡತೊಡಗಿದರು ಮೋರ್ಲೆ-ಮಿಂಟೋ ಸುಧಾರಣೆಗಳಲ್ಲಿ ಮುಸಲ್ಮಾನರನ್ನು ಹಿಂದುಗಳಿಂದ ಪ್ರತ್ಯೇಕಿಸುವುದಕ್ಕಾಗಿ, ಪ್ರತ್ಯೇಕ ಮತದಾರಸಂಘಗಳು ದೊರೆತುವು ಬಹುಸಂಖ್ಯಾಕರು ಹಿಂದುಗಳಿರುವಾಗ ಪ್ರತ್ಯೇಕ ಮತದಾರಸಂಘವಿಲ್ಲದ ತಾವು ಆರಿಸಿಬರುವುದೇ ಶಕ್ಯವಿಲ್ಲ ಎಂದು ಮುಸಲ್ಮಾನರು ತಿಳಿದರು 'ಪ್ರತ್ಯೇಕ ಮತದಾರ ಸಂಘವು ರಾಷ್ಟ್ರದ ಐಕ್ಯತೆಗೆ ಘಾತುಕ, ಅದು ಬೇಡ' ಎನ್ನುವ ಹಿಂದುಗಳ ಮೇಲೆ ಇವರಿಗೆ ಸಂಶಯ ಹುಟ್ಟಿತು

ಈ ವಾತಾವರಣದಲ್ಲಿ ಬ್ಯಾರಿಸ್ಟರ ಜಿನ್ನಾ ಅವರು ಮುಸ್ಲಿಂ ಲೀಗದ ಅಧ್ಯಕ್ಷರಾದರು ಲಖನೌದಲ್ಲಿ ಮತ್ತು ಖಿಲಾಫತ್ ಚಳವಳದಲ್ಲಿ ಹಿಂದು-ಮುಸಲ್ಮಾನರಲ್ಲಿ ಐಕ್ಯವಾಗಿದ್ದರೂ ಅದು ಸ್ಥಿರವಾಗಿ ಉಳಿಯಲಿಲ್ಲ ‹ಹಿಂದು-ಗಳಿಂದ ಮುಸಲ್ಮಾನರಿಗೆ ಹಿತವಿಲ್ಲ, ಹಿಂದುಗಳು ಬಹುಸಂಖ್ಯಾಕರಾದಲ್ಲಿ ಮುಸಲ್ಮಾನರಿಗೆ ನ್ಯಾಯವು ದೊರೆಯುವುದಿಲ್ಲ, ಇದಲ್ಲದೆ ಎರಡೂ ಧರ್ಮಗಳು ಪರಸ್ಪರ ವಿರುದ್ಧವಾಗಿವೆ ಆದುದರಿಂದ ಸಿಂಧ, ಪಂಜಾಬ, ವಾಯವ್ಯಪ್ರಾಂತ ಮತ್ತು ಬಂಗಾಲ (ಮುಸಲ್ಮಾನರ ಸಂಖ್ಯೆ ಇಲ್ಲಿ ಹೆಚ್ಚು) ಇವು ಪ್ರತ್ಯೇಕ ರಾಷ್ಟ್ರವಾಗಬೇಕು' ಎಂದು ೧೯೪೦ರಲ್ಲಿ ಮುಸ್ಲಿಂ ಲೀಗದ ಅಧ್ಯಕ್ಷರಾದ ಬ್ಯಾ ಜಿನ್ನಾ ಅವರು ಘೋಷಿಸಿದರು ಈ ಮಾತನ್ನು ಅವರು ಕೊನೆಯ ವರೆಗೂ ಬಿಟ್ಟುಕೊಡಲಿಲ್ಲ ‹ಬ್ರಿಟಿಶರು ಹೋಗುವರು, ಆದ್ದರಿಂದ ಬಹುಸಂಖ್ಯಾಕ ಹಿಂದುಗಳದೇ ರಾಜ್ಯವಾಗುವುದು ಅದಕ್ಕಾಗಿ ಬ್ರಿಟಿಶರು ಪ್ರತ್ಯೇಕ ಪಾಕಿಸ್ತಾನವನ್ನು ಮನ್ನಿಸಿಯೆ ಹೋಗಬೇಕು' ಎಂದು ಹೇಳಿದರು ಅವರು ಹೇಳಿದಂತೆಯೆ ಕೊನೆಗೆ ದೇಶವು ಇಬ್ಭಾಗವಾಯಿತು



ಬ್ಯಾರಿಸ್ಟರ್ ಜಿನ್ನಾ

**ಹಿಂದೀ ಸ್ವಾತಂತ್ರ್ಯಶಾಸನದಲ್ಲಿ ಮಹತ್ತ್ವದ ಮುದ್ದೆಗಳು** – ಈ ಹೊತ್ತಿಗೆ ಬ್ರಿಟನದಲ್ಲಿ ಆರ್ಥಿಕಗಂಡಾಂತರ ಅಧಿಕವಾಗಿತ್ತು, ಅದನ್ನು ಸುಧಾರಿಸಿಕೊಳ್ಳುವುದೂ ಅವರಿಗೆ ಅವಶ್ಯವಾಗಿತ್ತು ಲಾರ್ಡ್ ಮೌಂಟಬಟನ್ನರಿಗಂತೂ ಈ ಹಿಂದುಸ್ತಾನ, ಪಾಕಿಸ್ತಾನ ತಂಟಯು ತಲೆಬೇಸರನ್ನಿಟ್ಟಿದ್ದಿತು 'ಮುಂದೆ ಹೋಗಬಹುದಾದ ಪೀಡೆ ಇಂದೇ ಹೋಗಲಿ, ಈಗಲೇ ಹೋಗಲಿ' ಎನ್ನುವ ಮಟ್ಟಿಗೂ ಅವರು ತಲೆಕೆಡಿಸಿಕೊಂಡಿದ್ದರು, ಅಲ್ಲದೆ, ಪಾಕಿಸ್ತಾನ, ಹಿಂದುಸ್ತಾನ—ಎಂಬ ಎರಡು ಬೇಡಿಕೆಗಳನ್ನೂ ಈಡೇರಿಸಿದರ, ಎರಡು ರಾಷ್ಟ್ರಗಳೂ ಬ್ರಿಟಿಶರ ಸಖ್ಯವನ್ನು ಉಳಿಸಿ ಬೆಳೆಸುವುವು ಎಂಬ ನಂಬಿಕೆ ಇತ್ತು ಅವರಿಗೆ ಆದ್ದರಿಂದ ಶಕ್ಯವಿದ್ದಷ್ಟು ತೀವ್ರವಾಗಿ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವುದು ಒಳಿತೆಂದು ಬ್ರಿಟಿಶ ಪಾರ್ಲಮೆಂಟಿಗೆ ತಿಳಿಸಿದ್ದರು ಅದು ಅವರಿಗೆ ಸೂಕ್ತವೂ ಕಂಡಿರಬೇಕು, ಅದರಿಂದ ೧೯೪೮-ನೆಯ ಇಸವಿಗಿಂತ ಮೊದಲೇ ಸ್ವರಾಜ್ಯಕೊಡಲು ಸಿದ್ಧರಾದರು, ಅದನ್ನೇ ಹಿಂದು

ಸ್ಥಾನದ ಸ್ವಾತಂತ್ರ್ಯಶಾಸನದಲ್ಲಿ ಕಾಣಿಸಿದರು ಅದರಲ್ಲಿಯ ಮಹತ್ತ್ವದ ಮುದ್ದೆಗಳೆಂದರೆ —(೧) ೧೯೪೭ನೆಯ ಅಗಸ್ಟ್ ೧೫ರಿಂದ ಬ್ರಿಟಿಶ ಹಿಂದುಸ್ಥಾನದಲ್ಲಿ **ಹಿಂದುಸ್ಥಾನ** ಮತ್ತು **ಪಾಕಿಸ್ತಾನ** ಎಂದು ಎರಡು ಸ್ವತಂತ್ರರಾಜ್ಯಗಳಾಗುವುವು (೨) ಎರಡೂ ರಾಷ್ಟ್ರಗಳ ಮೇಲೆ ಗವ್ಹರ್ನರ್ ಜನರಲ್ ಇರುವನು, ಅವರನ್ನು ಇಂಗ್ಲಂಡಿನ ಅರಸನೇ ನಿಯಮಿಸುವನು (೩) ಎರಡೂ ರಾಷ್ಟ್ರಗಳ ವಿಧಿಮಂಡಲಗಳ ನಿರ್ಣಯಕ್ಕೆ ಬಾದಶಹರ ಪರವಾಗಿ ಗವ್ಹರ್ನರ ಜನರಲ್ಲನೇ ಅಂಕಿತವನ್ನಿಡುವರು ೧೫ನೆಯ ದಿನಾಂಕದ ತರುವಾಯ, ಬ್ರಿಟಿಶಪಾರ್ಲಮೆಂಟ್ ಮಾಡಿದ ಕಾಯಿದೆಯು, ಶಾಸನಮಂಡಲದ ಒಪ್ಪಿಗೆಯ ಹೊರತು ಯಾವ ರಾಷ್ಟ್ರಕ್ಕೂ ಅನ್ವಯಿಸುವುದಿಲ್ಲ (೪) ಆ ದಿನಾಂಕದಿಂದ ಇಂಗ್ಲಂಡಿನ ಅರಸು 'ಹಿಂದುಸ್ಥಾನದ ಬಾದಶಹ' ಎಂಬ ಪದವಿಯನ್ನು ಬಿಟ್ಟುಬಿಡುವನು (೫) ಆ ದಿನಾಂಕದಿಂದ ಬ್ರಿಟಿಶರಿಗೂ, ಸಂಸ್ಥಾನಿಕರಿಗೂ ಸಂಬಂಧ ಉಳಿಯುವುದಿಲ್ಲ (೬) ಎರಡೂ ರಾಷ್ಟ್ರಗಳಲ್ಲಿ ಸ್ಥಾಪಿತವಾದ ಘಟನಾಸಮಿತಿಯೇ ಭಾವೀ ರಾಜ್ಯಗಳ ಘಟನಗಳನ್ನು ಸಿದ್ಧಪಡಿಸಲು ಸರ್ವಸ್ವಾತಂತ್ರ್ಯವುಳ್ಳದಾಗಿದೆ ಅದು ಸಿದ್ಧವಾಗುವ ವರೆಗೆ, ೧೯೩೫ನೆಯ ಸುಧಾರಣಾನಿಯಮಗಳೇ ಬಳಿಕೆಯಲ್ಲಿರುವುವು (೭) ಸೈನ್ಯ, ಸಾಗಾಟದ ಸಾಧನ, ಶಸ್ತ್ರಾಸ್ತ್ರಸಂಗ್ರಹ ಮೊದಲಾದುವುಗಳನ್ನು ಎರಡೂ ರಾಷ್ಟ್ರಗಳಿಗೆ ವ್ಹಾಯಿಸರಾಯನೇ ಹಂಚಿಕೊಡಬೇಕು (೮) ಸಿವ್ಹಿಲ್ ಸರ್ವಿಸಿನಲ್ಲಿರುವವರ ಸ್ಥಾನ-ಮಾನಗಳು ಎಂದಿನಂತೆ ಮುಂದೆಯೂ ಸಾಗಬೇಕು ಇದರಂತೆಯೇ ಶಾಸನಗಳ ಬದಲಾವಣೆಗಳ ವಿಚಾರಗಳಲ್ಲಿ ವ್ಹಾಯಿಸರಾಯನಿಗೆ ಕೆಲವು ಅಧಿಕಾರಗಳನ್ನು ಕೊಡಲಾಗಿತ್ತು ಕಾಂಗ್ರೆಸದ ಅನುಮತಿಯಿಂದ ಮೌಂಟ್‌ಬೆಟನ್ನರೇ ಭಾರತಕ್ಕೆ ಗವ್ಹರ್ನರ್ ಜನರಲರಾಗಿ ಉಳಿದರು ಸ್ವತಂತ್ರ ಹಿಂದುಸ್ಥಾನಕ್ಕೆ ಮೊದಲನೆಯ ಗವ್ಹರ್ನರ್ ಜನರಲ್ ಮತ್ತು ಬ್ರಿಟಿಶರ ಆಳಿಕೆಯಲ್ಲಿ ಹಿಂದುಸ್ಥಾನದ ಕೊನೆಯ ಗವ್ಹರ್ನರ್ ಜನರಲ್— ಈ ಎರಡೂ ಗೌರವಗಳು ಇವರಿಗೆ ಸಲ್ಲುತ್ತವೆ, ಪಾಕಿಸ್ತಾನಕ್ಕೆ ಬ್ಯಾ. ಜಿನ್ನಾ ಅವರನ್ನು ಗವ್ಹರ್ನರ್ ಜನರಲ್ ಎಂದು ನೇಮಿಸಲಾಯಿತು ಈ ಘೋಷಣೆಯನ್ನು ಪಾಕಿಸ್ತಾನ-ಹಿಂದುಸ್ಥಾನಗಳೆರಡೂ ಒಪ್ಪಿದುವು

**ಅಗಸ್ಟ್ ಹದಿನೈದು**—೧೯೪೭ನೆಯ ಅಗಸ್ಟ ೧೫ನೆಯ ದಿನಾಂಕವು ಭಾರತದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಬಹುದಾದ ಸುವರ್ಣ ಸಮಯವದು! ಬ್ರಿಟಿಶ ಮುಖ್ಯಮಂತ್ರಿಯ ಆದೇಶದಂತೆ ಆ ಶುಭಸಮಯದಲ್ಲಿಯೇ—ಎಂದರೆ ೧೪ನೆಯ ದಿನಾಂಕ ಸರಿರಾತ್ರಿ (೧೨ ಘಂಟೆ) ಸರಿದು ೧೫ನೆಯ ದಿನಾಂಕ ಆರಂಭವಾಗುತ್ತಲೇ, ಬ್ರಿಟಿಶರ

ಧ್ವಜವನ್ನಿಳಿಸಿ ಅದರ ಸ್ಥಾನದಲ್ಲಿ ಭಾರತೀಯ ಸ್ವಾತಂತ್ರ್ಯದ ಪತಾಕೆಯು ಹಾರಿತು!

## ಅಭ್ಯಾಸನಗಳು

೧ ಕಳಗಿನ ಪ್ರಶ್ನೆಗಳಿಗ ಸಂಕ್ಷಿಪ್ತ ಉತ್ತರ ಕೊಡಿರಿ

(ಅ) ಹಿಂದುಸ್ತಾನಕ್ಕೆ ಸ್ವಾತಂತ್ರ್ಯವನ್ನು ಘೋಷಿಸಿದ ಬ್ರಿಟಿಶ್ ಮುಖ್ಯ-ಮಂತ್ರಿ ಯಾರು?

(ಆ) ಭಾರತಕ್ಕ ೧೯೪೬ರಲ್ಲಿ ಬಂದ ಬ್ರಿಟಿಶ್ ಶಿಷ್ಟಮಂಡಲದಲ್ಲ ಯಾವ ಯಾವ ಮಂತ್ರಿಗಳು ಇದ್ದರು?

(ಇ) ನಡುಗಾಲಸರಕಾರದ ರಚನೆಯಲ್ಲಿ ಯಾವ ತೊಂದರೆ ಇತ್ತು?

(ಈ) ಘಟನಾಸಮಿತಿಗೆ ಯಾರಿಂದ ತಡೆಯಾಯಿತು? ಹೇಗೆ?

(ಉ) ಮೌಂಟ್ ಬ್ಯಾಟನ್ನರ ಯೋಜನೆಗೆ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗುಗಳಿಂದ ಯಾಕ ಒಪ್ಪಿಗೆ ದೊರಯಿತು?

(ಊ) ಇದರಿಂದ ಭಾರತದ ಮೇಲ ಯಾವ ಪರಿಣಾಮವಾಯಿತು?

೨ ಹಿಂದೀ ಸ್ವಾತಂತ್ರ್ಯಶಾಸನದ ಮಹತ್ವದ ಮುದ್ದೆಗಳನ್ನು ವಿವರಿಸಿರಿ

೩ ಪಾಕಿಸ್ತಾನದ ರಚನಯಲ್ಲಿ ಭಾಗವಿದ್ದ ಪ್ರಮುಖ ಮುಸಲ್ಮಾನ್ ವ್ಯಕ್ತಿಗಳು ಯಾರು ಯಾರು?

೪ ಕೆಳಗಿನ ಇಸವಿಗಳ ಮಹತ್ತ್ವವನ್ನು ಹೇಳಿರಿ ೧೮೭೨, ೧೯೪೦, ೧೯೪೭ ಅಗಸ್ಟ್ ೧೫,

---

## ೨೩ ಸರ್ವತಂತ್ರ ಸ್ವತಂತ್ರಭಾರತ

**ಚಕ್ರವರ್ತಿ ರಾಜಗೋಪಾಲಾಚಾರಿಯವರು** – ಮೌಂಟ್‌ಬ್ಯಾಟನರ ತರುವಾಯ "ರಾಜಾಜಿ"ಯವರು ಗವ್ಹರ್ನರ್ ಜನರಲರಾದರು ಮಹಾತ್ಮರ ಹಿರಿಯ ಶಿಷ್ಯರು ಇವರು ಮೇಧಾವಿಗಳು, ಮುತ್ಸದ್ದಿಗಳು, ಮಾತುಗಾರರು. ಮಹಾತ್ಮಾ ಗಾಂಧಿಯವರೊಂದಿಗೆ ಇವರು ದಕ್ಷಿಣ ಆಫ್ರಿಕೆಯಲ್ಲಿದ್ದು ಕಾರ್ಯಮಾಡಿದವರು

**ಘಟನಾಸಮಿತಿ** — ಈ ತರುವಾಯ ಘಟನಾಸಮಿತಿಯ ಕಾರ್ಯವು ಸರಾಗವಾಗಿ ಸಾಗಿತು ಮಹಾತ್ಮಾ ಗಾಂಧಿಯವರ ಇನ್ನೊಬ್ಬ ಶ್ರೇಷ್ಠ ಮತ್ತು ಪ್ರಿಯ ಶಿಷ್ಯರಾದ ಬಾಬು ರಾಜೇಂದ್ರಪ್ರಸಾದರು ಘಟನಾ ಸಮಿತಿಯ ಅಧ್ಯಕ್ಷರಾಗಿದ್ದರು ಡಾಕ್ಟರ್ ಅಂಬೇಡಕರ, ಶ್ರೀ ಅಲ್ಲಾದಿ ಕೃಷ್ಣಸ್ವಾಮಿ ಅಯ್ಯರ್, ಶ್ರೀ ಮುನಶಿ, ಶ್ರೀ ಗೋಪಾಲಸ್ವಾಮಿ ಅಯ್ಯಂಗಾರ್ ಮೊದಲಾದ ಹೆಸರಾಂತ ಕಾಯಿದ ತಜ್ಞರ ಉಪಸಮಿತಿಯು, ಘಟನೆಯ ಕರಡನ್ನು ಸಿದ್ಧಗೊಳಿಸಿತು ಘಟನಾಸಮಿತಿಯು ಸುಮಾರು



ಚಕ್ರವರ್ತಿ ರಾಜಗೋಪಾಲಾಚಾರಿಯವರು

೨ ವರ್ಷ ಚರ್ಚೆಮಾಡಿ, ೧೯೪೯ರ ನವ್ಹಂಬರ್ ೨೬ರಂದು ಹೊಸ ಘಟನೆಯನ್ನು ಸ್ವೀಕರಿಸಿತು

**ಹೊಸ ಹಿಂದುಸ್ತಾನ** – ಹೊಸಘಟನೆಯನ್ನು ಸ್ವೀಕರಿಸುವ ಮುಂಚೆಯೆ ಹಿಂದುಸ್ತಾನವೂ ಹೊಸತೇ ಆಗಿತ್ತು. ಬ್ರಿಟಿಶರು ಅಧಿಕಾರವನ್ನು ಬಿಟ್ಟುಕೊಟ್ಟಾಗ ದೇಶದ ವಿಚ್ಛೇದನೆಯಾಗಿತ್ತು ಈ ವಿಚ್ಛೇದನೆಯ ನಿಮಿತ್ತ ಪಂಜಾಬ-ಬಂಗಾಲಪ್ರಾಂತಗಳಲ್ಲಿ ಅತ್ತಿಂದಿತ್ತ ಹಿಂದುಗಳು, ಇತ್ತಿಂದತ್ತ ಮುಸಲ್ಮಾನರು—ಧಾವಿಸಿ ಅಶಾಂತಿಗಳು ಎದ್ದಿದ್ದುವು ಇದಲ್ಲದೆ ದೇಶದಲ್ಲಿ ೬೦೦ಕ್ಕೆ ಮಿಕ್ಕಿದ ಸಂಸ್ಥಾನಗಳೂ ಸ್ವತಂತ್ರವಾಗಿದ್ದವು ಈ ಪರಿಸ್ಥಿತಿಯಲ್ಲಿ ದೇಶವನ್ನು ಬಿಗುವಿನಿಂದ ಹಿಡಿದಿಟ್ಟು, ಒಂದುಗೂಡಿಸುವುದು ಮುಖ್ಯವಾಗಿತ್ತು ಈ ದುಸ್ಸಾಧ್ಯ ಕೆಲಸವನ್ನು ಸರದಾರ್ ವಲ್ಲಭಭಾಯಿ ಪಟೇಲರು ಸಾಧ್ಯವನ್ನಾಗಿ ಮಾಡಿದ್ದರು

**ಸಂಸ್ಥಾನಗಳ ಸಮೀಕರಣ** – ಬ್ರಿಟಿಶರಿದ್ದಾಗ ಈ ಸಂಸ್ಥಾನಗಳು ಬ್ರಿಟಿಶರ ಆಳಿಕೆಯ ಆಧಾರಸ್ತಂಭಗಳಾಗಿದ್ದುವು ೧೯೩೫ರ ಕಾಯದೆಯಿಂದ ಇವು, ಪ್ರಾಂತಗಳಂತೆ ತಮ್ಮ ಆಡಳಿತಕ್ಕೆ ತಾವು ಸ್ವತಂತ್ರವಾಗಿದ್ದವು ಅನೇಕ ಸಂಸ್ಥಾನಗಳು ಹಿಂದುಳಿದಿದ್ದವು ಅಲ್ಲಿ ರಾಜನು ನಿರಂಕುಶನು, ಪ್ರಜೆಗಳು ಅವನ ದಾಸರು! ಸರದಾರ್ ಪಟೇಲರು ಸಣ್ಣ ಸಣ್ಣ ಸಂಸ್ಥಾನಗಳನ್ನು ವಿಲೀನಗೊಳಿಸಿದರು (ಕರಗಿಸಿಬಿಟ್ಟರು) ತುಸು ದೊಡ್ಡವಿದ್ದುವನ್ನು ನಾಲ್ಕಾರು ಒಂದೆಡೆ ಸೇರಿಸಿ ಒಂದು ಕೂಟವನ್ನು ಮಾಡಿದರು. ಮೈಸೂರಂತಹ ವನ್ನು ಪ್ರಾಂತಕ್ಕೆ ಸಮಮಾಡಿದರು ಅಂತೂ ಭಾರತವು ಒಂದು ರಾಷ್ಟ್ರ ವಾಯಿತು ಹೈದರಾಬಾದಿನಲ್ಲಿ ಮಾತ್ರ ಅಲ್ಪಸಂಖ್ಯಾಕರಾಗಿದ್ದರೂ ಅಧಿಕಾರ ವುಳ್ಳವರಾದ್ದರಿಂದ ಮುಸಲ್ಮಾನರು, ತಮ್ಮದೊಂದು ಸ್ವತಂತ್ರರಾಷ್ಟ್ರವೆನ್ನುತ್ತ ತುಸುತೊಂದರೆ ಕೊಟ್ಟರು ೧೯೪೮ ಸಪ್ಟೆಂಬರಿನಲ್ಲಿ ಹೈದರಾಬಾದಿನ ಮೇಲೆ ದಂಡಕ್ರಮ (ಪೋಲೀಸ ಆ್ಯಕ್ಶನ್) ತೆಗೆದುಕೊಂಡರು ಹೈದರಾಬಾದು ಭಾರತದಲ್ಲಿ ಸೇರಿತು ಕಾಶ್ಮೀರವು ಭಾರತದಲ್ಲಿ ಸೇರಿದ್ದರೂ, ಪಾಕಿಸ್ತಾನವು ಅದರ ಬಗ್ಗೆ ತಂಟೆಯನ್ನು ನಡೆಸಿದ ಯುಕ್ತರಾಷ್ಟ್ರದೆದುರು ಈ ತಂಟೆಯು ವಿಚಾರ ನಡೆದಿದ



ಸರದಾರ್ ವಲ್ಲಭಭಾಯಿ ಪಟೇಲ

**ಸರದಾರ್ ವಲ್ಲಭಭಾಯಿ** — ಬಾರಡೂಲಿಯ ಕರನಿರಾಕರಣೆಯ ಸತ್ಯಾಗ್ರಹದಲ್ಲಿ ವಲ್ಲಭಭಾಯಿ ಪಟೇಲರಿಗೆ ಮಹಾತ್ಮರಿಂದ 'ಸರದಾರ್' ಎಂಬ ಬಿರುದು ಸಿಕ್ಕಿತು ಬಡತನದಲ್ಲಿ ಬೆಳದು, ಬುದ್ಧಿವಂತಿಕೆಯಿಂದ ಮತ್ತು ಧೈರ್ಯದಿಂದ ಮುಂದೆ ಬಂದವರು ವಲ್ಲಭಭಾಯಿಯವರು ಮೊದಲಿನಿಂದಲೂ ಕರ್ತವ್ಯನಿಷ್ಠರರು ಕೋರ್ಟಿನಲ್ಲಿ ಖಟ್ಲೆಯನ್ನು ಕುರಿತು ವಾದಿಸುವಾಗ, ಹೆಂಡತಿ ಸತ್ತಳೆಂದು ಬಂದ ತಂತಿಯನ್ನು ಕಿಸೆಯಲ್ಲಿ ಹಾಕಿಕೊಂಡು, ವಾದವನ್ನು ಮುಂದೆ ಸಾಗಿಸಿದವರು! ಹಿಡಿದ ಕೆಲಸವನ್ನು ಕೊನೆಗಾಣಿಸುವ ಹಟ ಅವರದು. ಸ್ವತಂತ್ರ ಅಧಿಕಾರವು ಕೈಗೆ ಬಂದಾಗ ಪೋಲೀಸ ಮತ್ತು ಸಂಸ್ಥಾನ ಎರಡೂ ಖಾತೆ

ಗಳು ಇವರ ಕೈಯಲ್ಲಿದ್ದುವು ಆಗಿನ ವಿಷಮ ಪರಿಸ್ಥಿತಿಯಲ್ಲಿ ದೇಶದಲ್ಲಿ ಶಾಂತಿಯನ್ನು ಕಾಯ್ದುಕೊಂಡರು, ಮತ್ತು ಸಂಸ್ಥಾನಗಳನ್ನೆಲ್ಲ ದೇಶದಲ್ಲಿ ಸೇರಿಸಿಕೊಂಡರು ದೇಶಸೇವೆಯಲ್ಲಿಯೇ ತಮ್ಮ ದೇಹವನ್ನು ಸವೆಸಿ ೧೯೫೦ ಡಿಸಂಬರ್ ೧೫ರಂದು ಸರದಾರರು ಕಾಲವಾದರು ಇವರ ತರುವಾಯ ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರು ಉಪಪ್ರಧಾನ ಮಂತ್ರಿಗಳಾಗಿ, ೮ ಖಾತೆಗಳನ್ನು ವಹಿಸಿಕೊಂಡರು ರಾಜೇಂದ್ರ ಪ್ರಸಾದರೇ ರಾಷ್ಟ್ರ-ಪತಿಗಳಾದರು

**ಹೊಸ ಘಟನೆ** – ಹೊಸ ಘಟನೆಯು ಮೇಲೆ ಹೇಳಿದ ಹೊಸ ಹಿಂದು-ಸ್ತಾನದಲ್ಲಿ ಜನವರಿ ೨೬, ೧೯೫೦ರಂದು ಜಾರಿಯಲ್ಲಿ ಬಂದಿತು ಈ ಘಟನೆಯ ಪ್ರಕಾರ, ಮೊದಲಿನ ಪ್ರಾಂತಗಳೂ ಸಂಸ್ಥಾನಗಳೂ ಸೇರಿ ಒಂದು ಒಕ್ಕೂಟವಾಯಿತು. ಈ ಒಕ್ಕೂಟಭಾರತವು ಸರ್ವತಂತ್ರ ಪ್ರಜಾಪ್ರಭುತ್ವದ ಗಣರಾಜ್ಯವಾಗಿದೆ ಎಂದರೆ ಈಗ ರಾಜನಿಲ್ಲ, ಪ್ರಜೆಗಳಿಂದ ಆರಿಸಲ್ಪಟ್ಟ ಶಾಸನಮಂಡಲಗಳಿಗೇ ಎಲ್ಲ ಅಧಿಕಾರಗಳಿವೆ ಪ್ರಾಂತದಲ್ಲೂ ಒಕ್ಕೂಟದಲ್ಲೂ ಹೊಣೆಗಾರ ಸರಕಾರವಿದೆ ಒಕ್ಕೂಟಭಾರತಕ್ಕೆ ಮುಂಚಿನ ಗವರ್ನರ್ ಜನರಲನ ಬದಲು ಒಬ್ಬ ರಾಷ್ಟ್ರಪತಿಯಿದ್ದಾನೆ ಇವನನ್ನು, ಎಲ್ಲ ಶಾಸನ-ಮಂಡಲಗಳ ಸದಸ್ಯರು ಕೂಡಿ ಆರಿಸುವರು ಈ ರಾಷ್ಟ್ರಾಧ್ಯಕ್ಷನು ಪ್ರಾಂತದ ಗವರ್ನರನನ್ನು ನಿಯಮಿಸುವನು ಸಂಸ್ಥಾನಭಾಗದಲ್ಲಿ ಮಾತ್ರ ಗವ್ಹರ್ನರನ ಬದಲು ರಾಜಪ್ರಮುಖನಿರುವನು ಮಿಕ್ಕ ಎಲ್ಲ ವಿಷಯಗಳಲ್ಲಿ ಪ್ರಾಂತ ಮತ್ತು ಸಂಸ್ಥಾನಭಾಗಗಳಲ್ಲಿ ಭೇದವಿಲ್ಲ ಒಕ್ಕೂಟದಲ್ಲಿಯೂ ಹೊಣೆಗಾರ ಮಂತ್ರಿಮಂಡಲವಿರುವದು ಆಡಳಿತದಲ್ಲಿ ತಂತಮ್ಮ ಒಳಆಡಳಿತದ ಮಟ್ಟಿಗೆ ಪ್ರಾಂತಗಳು ಸ್ವಾಯತ್ತವಾಗಿವೆ ಇಡಿಯ ದೇಶಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಮೇಲೆ ಒಕ್ಕೂಟಕ್ಕೆ ಅಧಿಕಾರವಿದೆ ಕೆಲವು ವಿಷಯಗಳ ಬಗ್ಗೆ ಶಾಸನ ರಚಿಸಲು ಒಕ್ಕೂಟ ಮತ್ತು ಪ್ರಾಂತ ಎರಡಕ್ಕೂ ಸಮನಾದ ಅಧಿಕಾರವಿದೆ, ಆದರ ಗಂಡಾಂತರ ಸಮಯದಲ್ಲಿ ಒಕ್ಕೂಟವೇ ಎಲ್ಲ ಅಧಿಕಾರವನ್ನು ವಹಿಸಬಲ್ಲದು

**ಭಾರತದ ಸ್ಥಾನ-ಮಾನ** – ಹೊಸ ಘಟನೆ ಬರುವ ಮೊದಲು ಭಾರತಕ್ಕೆ ಇಂಗ್ಲಂಡಿನ ಅರಸನೆ ಅರಸನಾಗಿದ್ದನು ಹೊಸ ಘಟನೆಯಲ್ಲಿ ಭಾರತವು ಗಣರಾಜ್ಯ (ರಿಪಬ್ಲಿಕ್) ವಾಯಿತು, ಅರಸನ ಸ್ಥಾನ ಹೋಯಿತು ಆದ್ದರಿಂದ, ಗಣರಾಜ್ಯವಾದ ಮೇಲೆ ಭಾರತ-ಬ್ರಿಟನುಗಳ ಸಂಬಂಧವು ಹೇಗಿರಬೇಕು ಎಂಬುದೊಂದು ಪ್ರಶ್ನೆಯಾಯಿತು ಭಾರತದ ಮುಖ್ಯಮಂತ್ರಿಯಾದ ಪಂಡಿತ ಜವಾಹರಲಾಲರು ಲಂಡನಿನಲ್ಲಿ ವಸಾಹತು ಮಂತ್ರಿಗಳ ಸಭೆಗೆ ಹೋಗಿ,

ಒಳ್ಳೇ ಮುತ್ಸದ್ದಿತನದಿಂದ, ಭಾರತವು ಗಣರಾಜ್ಯವಾಗಿ ವಸಾಹತು ಸಂಘ (ಕಾಮನ್‌ವೆಲ್ತ)ದಲ್ಲಿ ಉಳಿಯುವಂತೆಯೂ ಅನುಕೂಲತೆ ಮಾಡಿಕೊಂಡರು ಇದರ ಮೇರೆಗೆ ಬ್ರಿಟಿಶ್ ಅರಸನನ್ನು 'ಒಕ್ಕಟ್ಟಿನ ಕಾಮನ್‌ವೆಲ್ಥ' ಎಂಬ ಸ್ವತಂತ್ರ ರಾಷ್ಟ್ರಸಮೂಹದ ಚಿಹ್ನೆಯೆಂಬುದಾಗಿ ಮಾತ್ರ ಭಾರತವು ಒಪ್ಪಿಕೊಂಡಿದೆ ಇಂತಹ ಮುತ್ಸದ್ದಿತನದಿಂದ ಪರದೇಶಗಳಲ್ಲಿ ಭಾರತದ ಗೌರವವು ಹೆಚ್ಚಿತು

**ಪಂಡಿತ ಜವಾಹರಲಾಲರು** – ೧೯೪೭ರಿಂದಲೂ ಭಾರತದ ಮುಖ್ಯಮಂತ್ರಿಯಾಗಿರುವ ಪಂಡಿತ ಜವಾಹರರು, ರಾಜಕಾರಣದಲ್ಲಿ 'ಮಹಾತ್ಮರ ವಾರಸದಾರರು' ಎಂದು ಹೆಸರಾಗಿದ್ದಾರೆ ಮಹಾತ್ಮರ ತರುವಾಯ ಅತ್ಯಂತ ಜನಪ್ರಿಯ ಮುಂದಾಳು ಎಂದರೆ ಇವರೆ! ಧನವಂತ ತಂದೆಯ ಒಬ್ಬನೆ ಮಗನಾದ ಇವರು, ಎಲ್ಲ ಶಿಕ್ಷಣವನ್ನು ಇಂಗ್ಲಂಡಿನಲ್ಲಿಯೆ ಮುಗಿಸಿ, ಬ್ಯಾರಿಸ್ಟರರಾಗಿ ಬಂದರು ೧೯೨೦ರಲ್ಲಿ ಮಹಾತ್ಮರನ್ನು ಹಿಂಬಾಲಿಸಿ, ಎಲ್ಲವನ್ನೂ ತ್ಯಾಗಮಾಡಿದರು ಜಗತ್ತಿನ ಇತಿಹಾಸವನ್ನು ಚೆನ್ನಾಗಿ ಅರಿತವರು ವಿದೇಶರಾಜಕಾರಣದಲ್ಲಿ ಹೆಸರನ್ನು ಗಳಿಸಿದವರು ಇಂತಹ ಹಿರಿಯತನದಲ್ಲಿ ಭಾರತವು, ಜಗತ್ತಿನ ರಾಷ್ಟ್ರಗಳಲ್ಲಿಯೆ ಗಣ್ಯವಾಗಿ ನಿಂತಿದೆ ಏಶಿಯಾಖಂಡದ ರಾಷ್ಟ್ರಗಳಿಗೆ ಮಾರ್ಗದರ್ಶಕವಾಗಿದೆ ಭಾರತಕ್ಕೆ ಸ್ವಾತಂತ್ರ್ಯವನ್ನಿತ್ತಂತೆಯೆ ಬ್ರಿಟಿಶರು ಅದೇ ಕಾಲದಲ್ಲಿ ಬ್ರಹ್ಮದೇಶ-ಸಿಂಹಳಗಳನ್ನೂ ಬಿಟ್ಟು ತೆರಳಿದರು ಡಚ್ಚರು ಇಂಡೋನೇಸಿಯದ ಮೇಲಿನ ಹಿಡಿತವನ್ನು ಬಿಟ್ಟುಕೊಟ್ಟರು ಈ ಎಲ್ಲ ರಾಷ್ಟ್ರಗಳಿಗೂ ಭಾರತವೇ ಮೇಲುಪಂಕ್ತಿ ಆಯಿತು



ಪಂಡಿತ ಜವಾಹರಲಾಲರು

**ಸ್ವಾತಂತ್ರ್ಯದ ಆಹುತಿ** — ಪಂಡಿತ ಜವಾಹರ, ಸರದಾರ್ ವಲ್ಲಭಭಾಯಿ, ಬಾಬು ರಾಜೇಂದ್ರ ಪ್ರಸಾದ ಇವರೆಲ್ಲರೂ, ಮಹಾತ್ಮರ ಮುಂದಾಳುತನದಲ್ಲಿಯೆ ಧೈರ್ಯದಿಂದ ದೇಶದ ಅಧಿಕಾರವನ್ನು ವಹಿಸಿದರು ವಿಚ್ಛೇದನೆಯಿಂದ ಭಾರತ, ಪಾಕಿಸ್ತಾನಗಳಲ್ಲಿ ಮತದ್ವೇಷವು ಹೆಚ್ಚಿತು. ಪ್ರಾರಂಭ

ದಲ್ಲಿ ಲಕ್ಷಾವಧಿ ಜನರು ಕೊಲೆ-ಸುಲಿಗೆಗಳಿಗೆ ಆಹುತಿಯಾದರು ಹಿಂದು-ಮುಸಲ್ಮಾನರ ಐಕ್ಯಕ್ಕಾಗಿ ಅನೇಕ ಸಲ ಆಮರಣ ಉಪವಾಸವನ್ನು ಕೈಕೊಂಡ ಮಹಾತ್ಮರು, ಭಾರತ-ಪಾಕಿಸ್ತಾನಗಳ ಸ್ನೇಹಕ್ಕಾಗಿ ಒಂದೇ ಸಮನೆ ಹೆಣಗಾಡುತ್ತಿದ್ದರು ಬಂಗಾಲದಲ್ಲಿ ಗಲಭೆ ಎದ್ದಾಗ ಕಾಲುನಡಿಗೆಯಿಂದ ಹಳ್ಳಿಯಿಂದ ಹಳ್ಳಿಗೆ ಸಂಚಾರಮಾಡಿ ಶಾಂತಿಯನ್ನು ಸ್ಥಾಪಿಸಿದರು ಆದರೆ ಪಾಕಿಸ್ತಾನದಲ್ಲಿ ಕೊಲೆ-ಸುಲಿಗೆಗೆ ಆಹುತಿಯಾಗಿ ಎಲ್ಲವನ್ನೂ ಕಳೆದು ಕೊಂಡ ಕೆಲವು ಹಿಂದುನಿರಾಶ್ರಿತರಿಗೆ ಮಹಾತ್ಮರ ಉದಾತ್ತ ತತ್ತ್ವವು ಒಪ್ಪಿಗೆಯಾಗಲಿಲ್ಲ ಅವರು ಬಹಿರಂಗವಾಗಿಯೇ ಮಹಾತ್ಮರನ್ನು ವಿರೋಧಿಸ ಹತ್ತಿದರು ೧೯೪೮ರ ಜನವರಿ ೩೦ನೆಯ ಸಾಯಂಕಾಲ, ಪ್ರಾರ್ಥನಾಸಭೆಯಲ್ಲಿ ದಿಲ್ಲಿಯ ಬಿರ್ಲಾಭವನದ ಎದುರಿನಲ್ಲಿ, ತಲೆತಿರುಕ ತರುಣನೊಬ್ಬನು ಮಹಾತ್ಮರ ಮೇಲೆ ಗುಂಡನ್ನು ಹಾರಿಸಿದನು ಪಂಡಿತ ಜವಾಹರರು ಹೇಳಿದಂತೆ "ಅಂದು ಜಗತ್ತಿನ ಜ್ಯೋತಿ ನಂದಿತು "

**ಸ್ವತಂತ್ರಭಾರತ ಅಮರ ರಹೇ** – ರಾಷ್ಟ್ರಪಿತನ ಮರಣದಿಂದ ಕೆಲಕಾಲ ದೇಶವು ಅನಾಥವಾದಂತಾಯಿತು, ಆದರೆ ಹಿರಿಯ ಮುಂದಾಳುಗಳು ಧೈರ್ಯದಿಂದ ಮುಂದೆ ಸಾಗಿದರು ಭಾರತದ ಜನಾಂಗವನ್ನು ಶಾಂತಗೊಳಿಸಿದರು ಹೊಸ ಘಟನೆಯು ಸಿದ್ಧವಾಯಿತು ೧೯೫೦ರ ಜನವರಿ ೨೬ಕ್ಕೆ ಹೊಸ ಘಟನೆಯು ಜಾರಿಯಲ್ಲಿ ಬಂದಿತು ಬಾಬು ರಾಜೇಂದ್ರಪ್ರಸಾದರು ನಮ್ಮ ಮೊದಲನೆಯ ಅಧ್ಯಕ್ಷರಾದರು ಅತ್ಯಂತ ವಿಜೃಂಭಣೆಯ ದರಬಾರದಲ್ಲಿ, ಕೊನೆಯ ಗವ್ಹರ್ನರ ಜನರಲರಾದ ರಾಜಾಜಿಯವರು ,ಬಾಬು ರಾಜೇಂದ್ರರಿಗೆ ಅಧಿಕಾರವನ್ನು ಒಪ್ಪಿಸಿ, ಭಾರತವು ಸರ್ವತಂತ್ರ ಪ್ರಜಾ-ಪ್ರಭುತ್ವ'ದ ಗಣರಾಜ್ಯವೆಂದು ಸಾರಿದರು



ಬಾಬು ರಾಜೇಂದ್ರ ಪ್ರಸಾದರು

---

# ೨೪ ಭಾರತದ ರಾಜ್ಯಘಟನೆ

**ಒಕ್ಕೂಟ ಭಾರತ** — ೧೯೫೦ರ ಜನೆವರಿ ೨೬ರಂದು ಹೊಸ ರಾಜ್ಯಘಟನ ಜಾರಿಯಲ್ಲಿ ಬಂದಿತು ಈ ಘಟನೆಯ ಮೊದಲನೆಯ ಕಲಮಿನಲ್ಲಿಯೆ ದೇಶದ ಹೆಸರು "ಇಂಡಿಯ" ಇಲ್ಲವೆ 'ಭಾರತ" ಎಂದೂ, ಈ ಭಾರತವು ಘಟಕಪ್ರಾಂತಗಳ ಒಕ್ಕೂಟವಾಗಿರಬೇಕೆಂದೂ ಹೇಳಿದೆ ಈ ಘಟಕ




ಗಳೆಂದರೆ (೧) ಮೊದಲಿನ ಬ್ರಿಟಿಶ ಇಂಡಿಯ ಪ್ರಾಂತಗಳು (೨) ಮೊದಲಿನ ದೇಶೀಯ ಸಂಸ್ಥಾನಗಳು, ಮತ್ತು (೩) ಮೊದಲು ನೇರವಾಗಿ ಕೇಂದ್ರದ ಆಧಿಪತ್ಯಕ್ಕೆ ಒಳಪಟ್ಟ ಕೊಡಗು, ಅಜಮೀರ, ದಿಲ್ಲಿ, ಮೇವಾಡ ಮತ್ತು ಕೆಲವು ಗುಡ್ಡಗಾಡು ಪ್ರದೇಶಗಳು ಒಕ್ಕೂಟವೆಂಬುದು ಸ್ವತಂತ್ರ ಘಟಕಗಳನ್ನು ಕೂಡಿಸಿ ಮಾಡಿದ ಹೊಸ ರಚನೆ ದೇಶದಲ್ಲೆಲ್ಲ ಪ್ರತಿಯೊಬ್ಬನಿಗೂ

ಅಷ್ಟೇ ಸ್ವಾತಂತ್ರ್ಯ, ಹಕ್ಕುಬಾಧ್ಯತೆ, ಹೊಣೆಗಾರಿಕೆಗಳಿರಬೇಕು, ಸನ್ನುದ್ವ ತ ಒಂದಾಗಿ ದೊಡ್ಡದಾಗಿ ಉಳಿಯಬೇಕೆಂಬುದೇ ಒಕ್ಕೂಟದ ಉದ್ದೇಶ

**ಘಟಕಗಳ ವರ್ಗೀಕರಣ** — (೧) ಪರಿಶಿಷ್ಟ (ಅ)ದಲ್ಲಿ ಈ ಘಟಕಗಳನ್ನು ಕಾಣಿಸಿದೆ —

| | | | |
|---|---|---|---|
| ೧ | ಆಸಾಮು | ೬ | ಒಡಿಸಾ |
| ೨ | ಬಿಹಾರ | ೭ | ಪಂಜಾಬ |
| ೩ | ಮುಂಬಯಿ | ೮ | ಸಂಯುಕ್ತ ಪ್ರಾಂತ (ಇದನ್ನು 'ಉತ್ತರ ಪ್ರದೇಶ' ಎಂದು ಕರೆಯಲಾಗಿದೆ) |
| ೪ | ಮಧ್ಯಪ್ರದೇಶ (ಮೊದಲಿನ ಮಧ್ಯ ಪ್ರಾಂತ) | | |
| ೫ | ಮದ್ರಾಸ | ೯ | ಪಶ್ಚಿಮ ಬಂಗಾಲ |

ಇವು ಸ್ವಾತಂತ್ರ್ಯಕ್ಕೆ ಮೊದಲು ಬ್ರಿಟಿಶ ಹಿಂದುಸ್ಥಾನದ ಪ್ರಾಂತಗಳಾಗಿದ್ದುವು (೨) ಪರಿಶಿಷ್ಟ (ಬ)ದಲ್ಲಿ ಈ ಘಟಕಗಳನ್ನು ಕಾಣಿಸಿದೆ

| | | | |
|---|---|---|---|
| ೧ | ಹೈದರಾಬಾದ್ | ೬ | ರಾಜಸ್ಥಾನ |
| ೨ | ಜಮ್ಮು ಮತ್ತು ಕಾಶ್ಮೀರ | ೭ | ಸೌರಾಷ್ಟ್ರ |
| ೩ | ಮಧ್ಯಭಾರತ | ೮ | ತ್ರಾವಣಕೋರ ಕೋಚೀನ |
| ೪ | ಮೈಸೂರು | ೯ | ವಿಂಧ್ಯ ಪ್ರದೇಶ |
| ೫ | ಪತಿಯಾಲಾ ಮತ್ತು ಪೂರ್ವ-ಪಂಜಾಬ ಸಂಸ್ಥಾನಗಳ ಕೂಟ | | |

ಸ್ವಾತಂತ್ರ್ಯಕ್ಕಿಂತ ಮೊದಲು ಇವೆಲ್ಲ ದೇಶೀಯ ಸಂಸ್ಥಾನಗಳಿದ್ದುವು (೩) ಪರಿಶಿಷ್ಟ (ಕ)ದಲ್ಲಿಯ ಘಟಕಗಳು —

| | | | |
|---|---|---|---|
| ೧ | ಅಜಮೀರ | ೬ | ದಿಲ್ಲಿ |
| ೨ | ಭೋಪಾಲ | ೭ | ಹಿಮಾಚಲ ಪ್ರದೇಶ |
| ೩. | ಬಿಲಾಸಪುರ | ೮ | ಕಚ್ಛ |
| ೪ | ಕೂಚ್ ಬಿಹಾರ | ೯ | ಮಣಿಪುರ |
| ೫. | ಕೊಡಗು | ೧೦ | ತ್ರಿಪುರ |

ಇವು ಒಕ್ಕೂಟ (ಮಧ್ಯವರ್ತಿ) ಸರಕಾರದ ಆಡಳಿತಕ್ಕೆ ಒಳಪಟ್ಟಿವೆ

(೪) ಪರಿಶಿಷ್ಟ (ಡ)ದಲ್ಲಿಯ ಘಟಕಗಳು —

ಅಂದಮಾನ ಮತ್ತು ನಿಕೋಬಾರ ನಡುಗಡ್ಡೆಗಳು

ಈ ನಾಲ್ಕು ವರ್ಗಗಳಲ್ಲಿ ಮೊದಲಿನ ಎರಡರಲ್ಲಿಯ ಘಟಕಗಳು ಒಳ-ಆಡಳಿತದಲ್ಲಿ ಸ್ವಾಯತ್ತವಾಗಿವೆ

**ಮೂಲಭೂತ ಹಕ್ಕುಗಳು** — ಈ ಘಟನೆಯು ನಾಗರಿಕನ ಕೆಲವು ಮೂಲಭೂತ ಹಕ್ಕುಗಳನ್ನು ಮನ್ನಿಸಿದೆ ಘಟನೆ ಮನ್ನಿಸಿದ ಈ ಹಕ್ಕುಗಳನ್ನು ಕಸಿದುಕೊಳ್ಳುವ, ಕಡಿಮೆ ಮಾಡುವ ಅಥವಾ ತಡೆಹಿಡಿಯುವ ಅಧಿಕಾರ ಸರಕಾರಕ್ಕೆ ಕೂಡ ಇಲ್ಲ ಈ ಹಕ್ಕುಗಳು ಪ್ರಜಾಪ್ರಭುತ್ವಕ್ಕೆಯೆ ಮೂಲಭೂತವಾಗಿವೆ ಆದ್ದರಿಂದ ಇವಕ್ಕೆ 'ಮೂಲಭೂತ ಹಕ್ಕು' ಎಂದು ಹೆಸರು ಈ ಹಕ್ಕುಗಳಿಗೆ ವಿರುದ್ಧವಾಗಿದ್ದ ಮತ್ತು ಸದ್ಯ ರೂಢಿಯಲ್ಲಿದ್ದ ಎಲ್ಲ ಕಾಯದೆಗಳು, ಮತ್ತು ಇದರಂತೆ ಮುಂದೆ ಮಾಡಬಹುದಾದ ಕಾಯದೆಗಳು ರದ್ದುಗೊಳಿಸಲ್ಪಟ್ಟಂತ ತಿಳಿಯತಕ್ಕದ್ದೆಂದು ಹೇಳಲಾಗಿದ ಈ ಹಕ್ಕುಗಳು ಯಾವವೆಂದರ —

**(ಅ) ಸರಿಸಮಾನತೆಯ ಹಕ್ಕು** — ಎಂದರೆ ಜಾತಿ-ಮತ-ಪಂಥ, ಸಿರಿವಂತಿಕೆ-ದಾರಿದ್ರ್ಯ, ಶಿಕ್ಷಣ-ಅಶಿಕ್ಷಣ, ಮುಂತಾದ ಯಾವ ಕಾರಣಗಳಿಗಾಗಿಯೂ ಒಬ್ಬ ನಾಗರಿಕನು ಇನ್ನೊಬ್ಬ ನಾಗರಿಕನಿಗಿಂತ ಶ್ರೇಷ್ಠ ಇಲ್ಲವೆ ಕನಿಷ್ಠನಲ್ಲ ಈ ಸ್ವಾತಂತ್ರ್ಯದಿಂದ ಪ್ರತಿಯೊಬ್ಬನಿಗೂ ಸಮಾಜಜೀವನದಲ್ಲಿ ಸಮಾನವಾದ ಅವಕಾಶವಿದ ಇದೇ ಕಾರಣಕ್ಕಾಗಿ ಅಸ್ಪೃಶ್ಯತ ಎಂಬುದು ಅಪರಾಧವೆಂದು ಘಟನೆಯಲ್ಲಿಯೆ ಸಾರಲಾಗಿದೆ

**(ಆ) ವ್ಯಕ್ತಿಸ್ವಾತಂತ್ರ್ಯ** — ಪ್ರತಿಯೊಬ್ಬ ನಾಗರಿಕನಿಗೆ ವಿಚಾರಪ್ರಕಟಣ, ಸಂಘನಿರ್ಮಾಣ, ಸಂಚಾರ, ನಿವಾಸ, ವ್ಯವಸಾಯ, ಮತ್ತು ಆಸ್ತಿ-ಸಂಪಾದನೆ ಇವುಗಳಲ್ಲಿ ಸ್ವಾತಂತ್ರ್ಯವಿದೆ, ಆದರೆ 'ಸಾರ್ವಜನಿಕ ಸುರಕ್ಷಿತತ" ಗಾಗಿ 'ಸಮಂಜಸವಾದ ನಿಯಂತ್ರಣ"ಗಳನ್ನು ಹೇರಲು ಸರಕಾರಕ್ಕೆ ಅಧಿಕಾರವಿದೆ

**(ಇ) ಧಾರ್ಮಿಕ ಸ್ವಾತಂತ್ರ್ಯ** — ಪ್ರತಿಯೊಬ್ಬ ನಾಗರಿಕನಿಗೂ ತನ್ನ ಮನಸ್ಸಿಗೆ ಒಪ್ಪಿಗೆಯಾದ ಧರ್ಮವನ್ನು ಆಚರಿಸುವ ಹಕ್ಕು ಇದೆ, ಆದರೆ ತನ್ನ ಆಚರಣೆಯಿಂದ ಅನ್ಯರಿಗ ನೋವು ಆಗದಂತ ನೋಡಿಕೊಳ್ಳಬೇಕು.

**(ಈ) ಸಂಸ್ಕೃತಿ ಮತ್ತು ಶಿಕ್ಷಣಗಳ ಹಕ್ಕು** — ನಾಗರಿಕರ ಯಾವದೊಂದು ಗುಂಪಿಗೆ ಪ್ರತ್ಯೇಕವಾದ ಸಂಸ್ಕೃತಿ, ಭಾಷೆ ಅಥವಾ ಲಿಪಿ ಇದ್ದರ ಅದನ್ನು ಉಳಿಸಿ ಬೆಳೆಸಿಕೊಳ್ಳುವ ಸ್ವಾತಂತ್ರ್ಯವು ಆ ಗುಂಪಿಗೆ ಇದ ಅಲ್ಲದೆ ಅವರು ತಮ್ಮ ಸ್ವಂತ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ನಡೆಸಲೂ ಹಕ್ಕು ಇದೆ

**(ಉ) ಆಸ್ತಿಗೆ ಸಂಬಂಧಿಸಿದ ಹಕ್ಕು** — ನ್ಯಾಯಬದ್ಧವಾಗಿ ಆಸ್ತಿಯನ್ನು ದೊರಕಿಸಲು, ಉಳಿಸಿ ಬೆಳೆಸಿಕೊಳ್ಳಲು ನಾಗರಿಕನಿಗೆ ಹಕ್ಕು ಇದೆ ಮನುಷ್ಯರ ಮಾರಾಟ, ಪುಕ್ಕಟೆಯ ಚಾಕರಿ, ನಿರ್ಬಂಧದ ಸೇವೆ ಇವುಗಳನ್ನು ನಿಷೇಧಿಸಲಾಗಿದೆ

**ಹಕ್ಕುಗಳ ರಕ್ಷಣೆ** — ಈ ಹಕ್ಕುಗಳಿಗೆಲ್ಲ ವರಿಷ್ಠ ನ್ಯಾಯಾಸ್ಥಾನದ ರಕ್ಷಣೆ ಇದೆ ಒಂದು ವೇಳೆ ಸರಕಾರವೇ– ನಮ್ಮ ಸರಕಾರವೇ ನಮ್ಮ ಸ್ವಾತಂತ್ರ್ಯವನ್ನು ಕಸಿದುಕೊಂಡರೂ, ಆ ಸರಕಾರದ ವಿರುದ್ಧ ವರಿಷ್ಠ ನ್ಯಾಯಾಸನದೆದುರು ವ್ಯಾಜ್ಯಹೂಡಿ ನ್ಯಾಯಾಲಯದಲ್ಲಿ ವಾದಿಸಿ, ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ಅಧಿಕಾರ ನಮಗಿದೆ

**ಆಡಳಿತದ ಅಂಗಗಳು** — ದೇಶದಲ್ಲಿ ಸುವ್ಯವಸ್ಥಿತ ಆಡಳಿತವು ನೆಲಸಬೇಕಾದರೆ, ಕೆಲವು ನಿಯಮಗಳು ಅಗತ್ಯ ಆ ನಿಯಮಗಳನ್ನು ಮಾಡುವವರು ಯಾರು? ಎಲ್ಲರೂ ಮಾಡಬೇಕೆಂಬುದು ಅವ್ಯವಹಾರ್ಯ ಆದ್ದರಿಂದ ಜನರಿಂದ ಚುನಾಯಿತವಾದ ಬಹುಮತದ ಪಕ್ಷವು ಅಧಿಕಾರ ಸ್ವೀಕರಿಸುವುದು ಚುನಾಯಿತ ಸದಸ್ಯರು ಕಾಯದೆಗಳನ್ನು ಮಾಡುವರು ಇದು ಶಾಸನಾಂಗ ಈ ಕಾಯದೆಗಳನ್ನು ಕಾರ್ಯರೂಪದಲ್ಲಿ ತರುವುದು



ದಿಲ್ಲಿಯ ಎಸ್ಸೆಂಬ್ಲಿಕಟ್ಟಡ

ಕಾರ್ಯವಾಹಕ ಮಂಡಲ ಇದು ಕಾರ್ಯಾಂಗ ಇನ್ನು ಈ ಕಾಯದೆಗಳನ್ನು ಮೀರಿ ನಡೆವವರನ್ನು ಶಿಕ್ಷಿಸಲು ನ್ಯಾಯಾಂಗವಿದೆ ನ್ಯಾಯವು ನಿಷ್ಪಕ್ಷಪಾತವಾಗುವಂತೆ, ಅದರ ಮೇಲೆ ಕಾರ್ಯಾಂಗದ ಒತ್ತಾಯವಾಗದಂತೆ, ನ್ಯಾಯಾಂಗಕ್ಕೆ ಸಾಕಷ್ಟು ಸ್ವಾತಂತ್ರ್ಯವನ್ನು ಕೊಡಲಾಗಿದೆ ಕಾರ್ಯಾಂಗವು ಸರಕಾರದ ಬೊಕ್ಕಸವನ್ನು ದುರುಪಯೋಗ ಮಾಡಿಕೊಳ್ಳದಂತೆ, ಅದರ ಲೆಕ್ಕತಪಾಸಿಗರು ಬೇರೆ ಇದ್ದಾರೆ ಈ ಎಲ್ಲ ಅಂಗಗಳ ಹೊಣೆಗಾರಿಕೆಯ ಕೆಲಸದಿಂದ ದೇಶವು ಊರ್ಜಿತವಾಗುವುದು

**ಒಕ್ಕೂಟ ಸರಕಾರ** — ಇಡಿಯ ಭಾರತದ ಒಕ್ಕೂಟಕ್ಕೆ ಒಬ್ಬ ರಾಷ್ಟ್ರಾಧ್ಯಕ್ಷನಿರುವನು ಒಕ್ಕೂಟದ ಶಾಸನಸಭೆಯಲ್ಲಿ ಎರಡು ಮನೆಗಳಿವೆ (೧) **ಲೋಕಸಭೆ** (ಕೆಳಮನೆ) ಇಡಿಯ ಭಾರತದ ನಾಗರಿಕರು ತಂತಮ್ಮ ಮತದಾರ ಸಂಘದಿಂದ ಈ ಕೆಳಮನೆಗೆ ಸದಸ್ಯರನ್ನು ಆರಿಸುವರು ಒಟ್ಟು ಸದಸ್ಯರ ಸಂಖ್ಯೆ ೫೦೦ಕ್ಕಿಂತ ಹೆಚ್ಚಿರಬಾರದು ಜನಸಂಖ್ಯೆಯ ಪ್ರತಿ ೫ರಿಂದ ೭॥ ಲಕ್ಷಕ್ಕೆ ಒಬ್ಬ ಸಭಾಸದನು ಆರಿಸಿ ಬರಬೇಕು (೨) **ರಾಜ್ಯಸಭೆ** ಇದಕ್ಕೆ ಪ್ರಾಂತ ಪ್ರತಿನಿಧಿಸಭೆ ಎಂಬ ಹೆಸರೂ ಇದೆ ಇದರ ಸದಸ್ಯರನ್ನು ಪ್ರತಿಯೊಂದು ಪ್ರಾಂತದ ಶಾಸನಮಂಡಲದ ಸದಸ್ಯರು ಆರಿಸುವರು ಒಂದೊಂದು ಪ್ರಾಂತಕ್ಕೆ ಇಷ್ಟು ಸದಸ್ಯರು ಎಂದು ಪ್ರಮಾಣವನ್ನು ಗೊತ್ತುಮಾಡಲಾಗಿದೆ ಒಟ್ಟು ಆರಿಸಿಬಂದ ಸದಸ್ಯರ ಸಂಖ್ಯೆ ೨೦೫, ಇವರಲ್ಲದೆ ಸಾಹಿತ್ಯ-ವಿಜ್ಞಾನ-ಕಲೆಗಳಲ್ಲಿ ಹೆಸರಾದ ೧೨ ಜನರನ್ನು ರಾಷ್ಟ್ರಾಧ್ಯಕ್ಷನು ರಾಜ್ಯಸಭೆಗೆ ತಾನಾಗಿಯೇ ನಿಯಮಿಸುವನು ಮೇಲ್ಮನೆಯ ಸದಸ್ಯನಾಗಬಯಸುವವನು ಮುವ್ವತ್ತಕ್ಕೆ ಕಡಿಮೆಯಿಲ್ಲದಷ್ಟು ವಯಸ್ಸಿನವನೂ, ಕೆಳಮನೆಯ ಸದಸ್ಯನಾಗಬಯಸುವವನು ೨೫ಕ್ಕೆ ಕಡಿಮೆಯಲ್ಲದ ವಯಸ್ಸಿನವನೂ ಇರತಕ್ಕದ್ದು ಸಾಮಾನ್ಯವಾಗಿ ಯಾವದೇ ಮಸೂದೆಯು ಮೇಲ್ಮನೆ ಅಥವಾ ಕೆಳಮನೆಯಲ್ಲಿ ಮಂಡಿಸಲ್ಪಡಬಹುದು, ಆದರೆ ಹಣಕಾಸಿನ ಎಂದರೆ ಆರ್ಥಿಕ ಮಸೂದಯು ಮಾತ್ರ ಕೆಳಮನೆಯಲ್ಲಿಯೇ ಮಂಡಿಸಲ್ಪಡತಕ್ಕದ್ದು ಕೆಳಮನೆಗೆ ಮತ್ತು ಮೇಲ್ಮನೆಗೆ **ಆರಿಸಿಬಂದ** ಸದಸ್ಯರು ಮತ್ತು ಪ್ರಾಂತಗಳಲ್ಲಿಯ ಕೆಳಮನೆಗೆ **ಆರಿಸಿಬಂದ** ಸದಸ್ಯರು ಕೂಡಿ ರಾಷ್ಟ್ರಾಧ್ಯಕ್ಷನನ್ನು ಆರಿಸುವರು ಒಕ್ಕೂಟದ ಕೆಳಮನೆಗೆ ಪ್ರತಿ ಅಯ್ದು ವರ್ಷಗಳಿಗೊಮ್ಮೆ ಚುನಾವಣೆಯಾಗತಕ್ಕದ್ದು, ಮೇಲ್ಮನೆಯಲ್ಲಿ ಪ್ರತಿ ಎರಡು ವರ್ಷಕ್ಕೆ ⅓ದಷ್ಟು ಸದಸ್ಯರು ನಿವೃತ್ತರಾಗತಕ್ಕದ್ದು ೨೧ ವರ್ಷ ವಯಸ್ಸಿನ ಪ್ರತಿ ಪ್ರಜೆಗೂ, ಹೆಣ್ಣು ಗಂಡು ಎಂಬ ಭೇದವಿಲ್ಲದೆ, ಮತವನ್ನು ಕೊಟ್ಟು ಪ್ರತಿನಿಧಿಯನ್ನು ಆರಿಸುವ ಹಕ್ಕಿದೆ ಹರಿಜನರ ಏಳ್ಗೆಗಾಗಿಯೂ, ಗುಡ್ಡಗಾಡಿನ ಜನರ ಅಭಿವೃದ್ಧಿಗಾಗಿಯೂ ಪ್ರತ್ಯೇಕ ಶಾಸನಗಳನ್ನು ಮಾಡಲಾಗಿದೆ

**ಮಂತ್ರಿಮಂಡಲ** — ಒಕ್ಕೂಟದಲ್ಲಿ ಒಬ್ಬ ಪ್ರಧಾನಮಂತ್ರಿ ಮತ್ತು ಉಳಿದ ಮಂತ್ರಿಗಳ ಒಂದು ಮಂತ್ರಿಮಂಡಲವು ಇರತಕ್ಕದ್ದು ಇದು ಶಾಸನಸಭೆಗೆ ಹೊಣೆಗಾರವಾಗಿರತಕ್ಕದ್ದು ಪ್ರಜಾಪ್ರತಿನಿಧಿ ಸಭೆಯು ಒಬ್ಬ ಮಂತ್ರಿಯ ಬಗ್ಗೆ ಅವಿಶ್ವಾಸದ ಗೊತ್ತುವಳಿಯನ್ನು ಸ್ವೀಕರಿಸಿದರೆ, ಇಡಿಯ ಮಂತ್ರಿಮಂಡಲವೆ ರಾಜೀನಾಮೆಯನ್ನು ಕೊಡಬೇಕಾಗುವುದು ಪ್ರಧಾನ-ಮಂತ್ರಿಯು ರಾಜೀನಾಮೆ ಕೊಟ್ಟರೆ, ಇಡಿಯ ಮಂತ್ರಿಮಂಡಲವು ರಾಜೀನಾಮೆ

ಕೊಟ್ಟಂತೆ, ಆದರೆ ಬೇರೆ ಯಾವನೇ ಮಂತ್ರಿಯು ರಾಜೀನಾಮೆ ಕೊಟ್ಟರೆ, ಅದರಿಂದ ಮಂತ್ರಿಮಂಡಲದ ಅಸ್ತಿತ್ವಕ್ಕೆ ಧಕ್ಕೆ ಇಲ್ಲ ಪಂಡಿತ ಜವಾಹರ-ಲಾಲ ನೆಹರು ಅವರು ಸದ್ಯ ಮುಖ್ಯ ಮಂತ್ರಿಗಳಾಗಿದ್ದಾರೆ

**ಪ್ರಾಂತ ಸರಕಾರಗಳು** — ಘಟಕ ಪ್ರಾಂತಗಳಲ್ಲಿ (ಅ) ವರ್ಗದಲ್ಲಿ ಒಬ್ಬ ಗವ್ಹರ್ನರನಿರುವನು, ರಾಷ್ಟ್ರಾಧ್ಯಕ್ಷನೇ ಗವ್ಹರ್ನರನನ್ನು ನಿಯಮಿಸುವನು. (ಬ) ವರ್ಗದ ಘಟಕಗಳಲ್ಲಿ ಒಬ್ಬ ರಾಜಪ್ರಮುಖನಿರುವನು, ಆದರೆ ಎರಡೂ ವರ್ಗಗಳಲ್ಲಿ ಒಂದೇ ತರದ ಹೊಣೆಗಾರ ಮಂತ್ರಿಮಂಡಲವಿರುವುದು ಕೆಲವು ಘಟಕಗಳ ಶಾಸನಮಂಡಲಗಳಲ್ಲಿ ಕೆಳಮನೆ, ಮೇಲ್ಮನೆ ಎರಡು ಇರುವುವು ಆ ಘಟಕಗಳು ಯಾವುವೆಂದರೆ —

೧ (ಅ) ವರ್ಗದಲ್ಲಿ —ಬಿಹಾರ, ಮುಂಬಯಿ, ಮದ್ರಾಸ, ಪಂಜಾಬ, ಸಂಯುಕ್ತಪ್ರಾಂತ (ಉತ್ತರ ಪ್ರದೇಶ) ಮತ್ತು ಪಶ್ಚಿಮ ಬಂಗಾಲ

೨ (ಬ) ವರ್ಗದಲ್ಲಿ —ಮೈಸೂರು

**ಅಧಿಕಾರದ ವರ್ಗೀಕರಣ** — ಘಟಕಗಳು ಸಾಮಾನ್ಯವಾಗಿ ಒಳಆಡಳಿತದಲ್ಲಿ ಸ್ವತಂತ್ರವಾಗಿವೆ, ಆದರೆ ರೈಲುದಾರಿ, ಸಾರಿಗೆ-ಸಂಪರ್ಕ, ಉತ್ಪನ್ನ ಕರ, ಅಂಚೆ ಮತ್ತು ತಂತಿ ಮುಂತಾದ ಕೆಲವುಗಳ ಬಗ್ಗೆ, ಎಲ್ಲ ಅಧಿಕಾರವೂ ಒಕ್ಕೂಟಕ್ಕೇ ಸೇರಿದೆ ಅಧಿಕಾರದ ಬಗ್ಗೆ ಘಟನೆಯಲ್ಲಿ ಮೂರು ವರ್ಗಗಳಿವೆ, (೧) ಪೂರ್ತಿಯಾಗಿ ಒಕ್ಕೂಟಸರಕಾರದ ಅಧಿಕಾರದಲ್ಲಿದ್ದ ವಿಷಯಗಳ ಪಟ್ಟಿ, (೨) ಪೂರ್ತಿಯಾಗಿ ಘಟಕಗಳ ಅಧಿಕಾರದಲ್ಲಿದ್ದ ವಿಷಯಗಳ ಪಟ್ಟಿ, ಮತ್ತು (೩) ಒಕ್ಕೂಟ ಮತ್ತು ಘಟಕ ಎರಡಕ್ಕೂ ಕೂಡಿ ಅಧಿಕಾರವಿದ್ದ ವಿಷಯಗಳ ಪಟ್ಟಿ ಸಾಮಾನ್ಯವಾಗಿ ಒಕ್ಕೂಟದ ಅಧಿಕಾರವೆ ಎಲ್ಲಕ್ಕಿಂತ ಹೆಚ್ಚಿನದು

**ನ್ಯಾಯಖಾತೆ** — ಘಟಕಗಳಲ್ಲಿ ಹೈಕೋರ್ಟುಗಳಿದ್ದಂತೆ, ಅವೆಲ್ಲವುಗಳ ಮೇಲೆ ಒಕ್ಕೂಟದಲ್ಲಿ ಸುಪ್ರೀಂ ಕೋರ್ಟು ಒಂದಿದೆ ಸುಪ್ರೀಂ ಕೋರ್ಟಿನ ನ್ಯಾಯಾಧೀಶರನ್ನು ರಾಷ್ಟ್ರಾಧ್ಯಕ್ಷನು ನಿಯಮಿಸುವನು, ಆದರೆ ಅವರನ್ನು ತೆಗೆದುಹಾಕುವುದಕ್ಕೆ ನಿಯಮ-ನಿರ್ಬಂಧಗಳು ಬಹಳ ಇವೆ ಆದ್ದರಿಂದ ನ್ಯಾಯಾಧೀಶರು ಭಿಡೆ-ಮುರವತ್ತುಗಳಿಗೆ ಒಳಗಾಗುವ ಅಂಜಿಕೆ ಇಲ್ಲ ಈ ಸುಪ್ರೀಂ ಕೋರ್ಟಿಗೆ (ವರಿಷ್ಠ ನ್ಯಾಯಾಲಯಕ್ಕೆ) ಘಟಕ-ಘಟಕಗಳ, ಘಟಕ-ಒಕ್ಕೂಟಗಳ ಜಗಳಗಳನ್ನು ತೀರಿಸುವ ಅಧಿಕಾರವಿದ

ಈ ಘಟನೆಯನ್ವಯ, ಅತಿಪುರಾತನವೂ ಅತಿ ನವೀನವೂ ಆದ ನಮ್ಮ ಭಾರತವು, ದಿನೇ ದಿನೇ ತನ್ನ ೩೬ ಕೋಟಿ ಪ್ರಜೆಗಳ ಸತತವಾದ ದೇಶಸೇವೆ

ಯಿಂದ ಸುಖ-ಸಂಪತ್ತುಗಳನ್ನು ಅಭಿವೃದ್ಧಿಗೊಳಿಸುತ್ತ, ಜಗತ್ತಿಗೆ ಕಣ್ಣಾಗಿ ಬೆಳಗಲಿ!

## ಅಭ್ಯಸನಗಳು

೧ ಭಾರತದ ಒಕ್ಕೂಟದಲ್ಲಿ ಯಾವ ಯಾವ ಘಟಕಗಳನ್ನು ಮಾಡಲಾಗಿದೆ? ಅವು ಮೊದಲು ಏನಿದ್ದುವು?

೨ ಪ್ರಾಂತ ಸರಕಾರಗಳ ಮುಖ್ಯ ವೈಶಿಷ್ಟ್ಯಗಳೇನು?

೩ ಅಧಿಕಾರಗಳ ವರ್ಗೀಕರಣಗಳನ್ನು ಹೇಗೆ ಮಾಡಲಾಗಿದೆ?

೪ ಕಳಗಿನವುಗಳ ಬಗಗೆ ಟಿಪ್ಪಣಿ ಬರೆಯಿರಿ
(ಅ) ಲೋಕಸಭೆ (ಆ) ಸುಪ್ರೀಂ ಕೋರ್ಟು (ಇ) ಮೂಲಭೂತ ಹಕ್ಕುಗಳು (ಈ) ಆಡಳಿತದ ಅಂಗಗಳು

ಜಯಹಿಂದ್

